# BHÁRATA MAHILA

OR

# THE HINDOO LADY.

TRANSLATED

BY

B. VENCATACHAR,

AUTHOR OF

THE COMEDY OF ERRORS, SAKUNTALA,

&c., &c., &c.

*IN CANARESE.*

---



---

Bangalore:

PRINTED BY RICHMOND F. HAYES,

AT THE DAILY POST AND EXAMINER PRESS.

1884.

# WORKS BY THE SAME AUTHOR.

---

Comedy of Errors.
Sakuntala.
Sita Vanavása, or the exile of Sita. (In the Press.)

ಶ್ರೀ

# ಭಾರತ ಮಹಿಳಾ.

---

ಭ್ರಾಂತಿವಿಳಾಸ, ಶಕುಂತಳಾ, ಮುಂತಾದ ಗ್ರಂಥಗಳ

ಪ್ರಣೇತರಾದ,

ಬಿ. ವೆಂಕಟಾಚಾರ್ಯರಿಂದ ಭಾಷಾಂತರ ಮಾಡಲ್ಪಟ್ಟದ್ದು.

---

ತಂಸಂತಶ್ಶ್ರೋತುಮರ್ಹಂತಿ ಸದಸದ್ವ್ಯಕ್ತಿಹೇತವಃ ।
ಹೇಮ್ನಸ್ಸಂ ಲಕ್ಷ್ಯತೇಹ್ಯಗ್ನೌ ವಿಶುದ್ಧಿಶ್ಶ್ಯಾಮಿಕಾಪಿವಾ ॥

---

ಬೆಂಗಳೂರು, ಯಕ್ಸಾಮಿನರ್, ಮತ್ತು ಡೈಲಿ ಪೋಸ್ಟ್ ಪ್ರೆಸ್ಸಿನಲ್ಲಿ, ಅಚ್ಚು
ಹಾಕಲ್ಪಟ್ಟಿತು.

# ಶುದ್ಧಪತ್ರಿಕೆ.

| | ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|---|
| Preface | ೫ | ಕೆಳಗಿನಿಂದ ೩ | Fereign | Foreign |
| ಡಿಟೊ | ೬ | ೧೭ | Are | —are |
| ವಿಜ್ಞಾಪನಾ | ೭ | ಕೆಳಗಿನಿಂದ ೬ | ಪ್ರಯತ್ನಿಸಲ | ಪ್ರಯತ್ನಿಸಲ್ಪ |
| ಡಿಟೊ | ೧೦ | ೧೭ | ವೇಶಾ | ವೇಷಾ |
| | ೨ | ೧೭ | ಸ್ಮಶಾನ | ಶ್ಮಶಾನ |
| | ಡಿಟೊ | ೧೯ | ಸ್ಮಶಾನ | ಶ್ಮಶಾನ |
| | ೬ | ೨ | ಪವೃತ್ತಿಯೆ: | ಪ್ರವೃತ್ತಿಯೋ |
| | ೮ | ಕೆಳಗಿನಿಂದ ೪ | ಆಪತ್ಯ | ಅಪತ್ಯ |
| | ೧೦ | ಕೆಳಗಿನಿಂದ ೩ | ಭಾಗಲ್ಲಿದ | ಭಾಗದಲ್ಲಿ |
| | ೧೫ | ಕೆಳಗಿನಿಂದ ೧ | ಶತಕದಲ್ಲಿ | ಶಕದಲ್ಲಿ |
| | ೧೬ | ಕೆಳಗಿನಿಂದ ೯ | ಪುಂಸ್ತ್ರಿ | ಪುಂಸ್ತ್ರೀ |
| | ೧೭ | ೧೨ | ವಸಾ | ವಸ್ತ್ರಾ |
| | ೨೦ | ೧೪ | ಇಷ | ಇಷ್ಟ |
| | ೨೧ | ೨ | ಹೇಳಿದಿಯುಷ್ಟೆ | ಹೇಳಿದೆಯುಷ್ಟೆ |
| | ಡಿಟೊ | ೬ | ಗಹ | ಗೃಹ |
| | ೩೩ | ೫ | ತನಿಗೆ | ತನಗೆ |
| | ೩೭ | ೨ | ಬಲಿವ್ಯಪೇಕ್ಷಾಸು | ಕಲಿವ್ಯಪೇಕ್ಷಾಸು |
| | ಡಿಟೊ | ೩ | ಧರ್ಮವ್ಯಪೇಕ್ಷಿತಾಸು | ಧರ್ಮವ್ಯಪೇಕ್ಷಾಸು |
| | ೪೨ | ೧ | ತನಿಗೋಸ್ಕರ | ತನಗೋಸ್ಕರ |
| | ೪೩ | ಕೆಳಗಿನಿಂದ ೨ | ಶಂಶೆ | ಶಂಸೆ |
| | ೪೬ | ಕೆಳಗಿನಿಂದ ೯ | ಮಾಕೊಳ್ಳ | ಮಾಡಿಕೊಳ್ಳ |
| | ೮೧ | ಕೆಳಗಿನಿಂದ ೩ | ಮಹಿಷಿ | ಮಹಿಷೀ |
| | ೮೨ | ೨ | ದ್ರಾಪದಿಯನ್ನು | ದ್ರೌಪದಿಯನ್ನೂ |
| | ೯೫ | ಕೆಳಗಿನಿಂದ ೧ | ರದಲ್ಲಿದು | ರದಲ್ಲಿದ್ದ |
| | ೯೯ | ಕೆಳಗಿನಿಂದ ೯ | ಪರಿಶುದ | ಪರಿಶುದ್ಧ |
| | ೯೯ | ಡಿಟೊ ೨ | ನಿಷ್ಪ | ನಿಷ್ಫ |

# PREFACE.

This book is a translation of a Bengali Prize Essay by Sri Hara Prasad Sastry, M. A. His Highness the Maharajah Holkar of Indore awarded the Prize.

The subject treated of in the Essay comprises the duties of Hindu women as inculcated in the Sacred Books of India and as exemplified in the ideals of Feminine Virtue portrayed by our Greatest Poets. The scholarly attainments of the learned Sastry in the Sanscrit Language, his deep researches in its classical literature, his felicity of language combined with the telling and artistic arrangement displayed in the work, and the undoubted usefulness of such a work in our own Vernacular are facts which have induced me to undertake the present publication.

I venture to place before the indulgent Public this small volume as a token of my sincere solicitude for ameliorating the present condition of our women. In this direction much has already been done in several parts of India both by Native Gentlemen and by Foreign Philogynists, whose undertakings have been generally successful. If the attempt has failed in any instance, it is my humble opinion that the failure was owing to a desire, which I believe prevails to some extent, to cast that tenacious Hindu Feminine mind in Foreign moulds. The strong conservative stamp on a Hindu woman's mind, a Hindu alone can read. Our women are uncompromising Optimists, with a

glorious history to look back to. Their ideal of perfection is embodied in those splendid traditions, which mothers sing or relate to infant daughters, who with rapt attention take in every word and even the look and gesture that accompany it. Engraved on the mind, in indelible characters, the glowing accounts of India's *ancient ladies* are incessantly at work, or at least capable of being so, and if skilfully directed, become active agents in shaping our girls into good Mothers, Wives, Sisters, and Friends. To know what apparel to wear and how to wear it, with what ornaments to bedeck their persons, and in short to know what to do and how to behave, our women do not consult a Ladies' Magazine of Fashion, or a Hand-Book of Etiquette of Modern Society. In all cases the appeal is to tradition. What did Damayanti do when deserted by her lord? How did Sita withstand the improper overtures of Ravana? How did Draupadi carry on the duties of a hostess? Are questions which a Hindu lady asks herself not failing to obtain appropriate suggestions for doing or for refraining from doing. Here is the secret of success in Female Education in India. Provide a girl with models of conduct drawn from sources which she instinctively holds in veneration and leave her alone. A Hindu girl's mind is beautifully plastic and bends to beneficent influences. Throughout the length and breadth of India, every husband who is blessed with a good wife, every son with a good mother, and every brother with a good sister, all owe a debt of gratitude to the overpowering influence of tradition in forming the character of India's daughters; and whosoever contributes to strengthen and skilfully direct this influence has a great claim upon our esteem.

If this little book should prove in any way to be the means of widening our present knowledge of women's duties and women's rights and eventually of re-instating

our women in the proper position, which they held in the palmy days of India, I shall consider myself amply rewarded.

My acknowledgements are due to my friend Mr. G. Gundappa for his great help to me in getting up this work.

B. VENCATACHAR.

SHIMOGA, *4th March* 1884.

---

# ವಿಜ್ಞಾಪನಾ.

ಈ ಪುಸ್ತಕವು ಕಲಿಕಾತಾಸ್ಥ ಪಂಡಿತ ಶ್ರೀಹರ ಪ್ರಸಾದ ಶಾಸ್ತ್ರಿ M. A. ಯವರಿಂದ ವಂಗ ಭಾಷೆಯಲ್ಲಿ ಪ್ರಣೀತವಾದದ್ದು. ಇದಕ್ಕೆ ಇಂದೋರ ಹೋಲ್ಕರ್ ಮಹಾರಾಜರವರು ಶ್ಲಾಘನಾ ಪುರಸ್ಸರ ಪಾರಿತೋಷಕ ಪ್ರದಾನವನ್ನು ಮಾಡಿರುತ್ತಾರೆ. ಈ ಗ್ರಂಥದ ಉತ್ಕರ್ಷತೆಯನ್ನು ನೋಡಿ ನಾನು ಕನ್ನಡದಲ್ಲಿ ಭಾಷಾಂತರವಮಾಡಲುದ್ಯಮಿಸಿದೆನು.

ಈ ಗ್ರಂಥದಲ್ಲಿ ಸ್ಮೃತಿ ಪುರಾಣಗಳಲ್ಲಿ ಉಕ್ತವಾಗಿರುವಂತೆಯೂ, ಮತ್ತು ನಮ್ಮ ದೇಶದ ಕವಿ ಕುಲಗುರುಗಳಾದ ಕಾಳಿದಾಸ ಪ್ರಭೃತಿಗಳ ಗ್ರಂಥಗಳಲ್ಲಿ ಚಿತ್ರಿಸಲ್ಪಟ್ಟಿರುವ ರಮಣೀ ಶಿರೋಮಣಿಗಳ ಆಚರಣೆಯಿಂದ ವ್ಯಕ್ತ ಪಟ್ಟಿರುವಂತೆಯೂ, ಸ್ತ್ರೀಧರ್ಮವು ವಿವರಿಸಲ್ಪಟ್ಟಿರುತ್ತದೆ.

ಶ್ರೀಹರ ಪ್ರಸಾದ ಶಾಸ್ತ್ರಿಗಳ ಅದ್ಭುತವಾದ ಸಂಸ್ಕೃತಭಾಷಾ ಪ್ರವೀಣತೆಯೂ, ಅವರು, ಪೂರ್ವ ಗ್ರಂಥಾವಲೋಕನದಿಂದ ಮಾಡಿರುವ ತತ್ವಾನುಸಂಧಾನವೂ, ಅವರ ಕೋಮಲ ತರವಾದ ವಾಗ್ವೈಖರೀ ವಿಭವವೂ ಮತ್ತು ಅವರ ಗ್ರಂಥದಲ್ಲಿ ಓದಿದ ಮಾತ್ರದಿಂದಲೇ ಹೃದಯಂಗಮವಾಗುವಂತೆ ಬರದಿರುವ ವಕ್ಕಣೆಯೂ, ಅವರ ಗ್ರಂಥವನ್ನು ನಮ್ಮ ದೇಶ ಭಾಷೆಯಲ್ಲಿ ಪ್ರಚಾರ ಮಾಡುವಣದರಿಂದುಂಟಾಗುವ ನಿಸ್ಸಂದೇಹವಾದ ಪ್ರಯೋಜನವೂ, ಇವುಗಳೇ ಈ ಗ್ರಂಥವನ್ನು ಭಾಷಾಂತರ ಪಡಿಸುವದರಲ್ಲಿ ನನಗೆ ಪ್ರೇರೇಪಿಸಿದವು.

ನಮ್ಮ ದೇಶದ ಸ್ತ್ರೀಯರಿಗೆ ತಿಳುವಳಿಕೆಯುಂಟಾಗಿ ಕಲ್ಯಾಣವಾಗಬೇಕೆಂಬದೇ ನನ್ನ ನಿಜವಾದ ಆಶಾ ಸೂಚಕವಾಗಿ ಈ ಗ್ರಂಥವನ್ನು ಸಹೃದಯರ ಅವಲೋಕನಕ್ಕೋಸ್ಕರ ಪ್ರಚುರ ಪಡಿಸಿರುತ್ತೇನೆ. ನಮ್ಮ ಹೆಂಗಸರ ಕಲ್ಯಾಣಾಭಿವೃದ್ಧಿ ವಿಚಾರದಲ್ಲಿ ಅನೇಕ ಸ್ಥಳಗಳಲ್ಲಿ ದೇಶ ಹಿತೈಷಿಗಳಾದ ದೊಡ್ಡ ಮನುಷ್ಯರಿಂದಲೂ, ಸ್ತ್ರೀ ಹಿತೈಷಿಗಳಾದ ಅನ್ಯ ದೇಶೀಯರಿಂದಲೂ, ಬಹಳ ಮಟ್ಟಿಗೆ ಪ್ರಯತ್ನಿಸಲಟ್ಟು, ಅವರ ಪ್ರಯತ್ನಗಳು ಪ್ರಾಯಃ ಸಫಲವನ್ನು ಹೊಂದಿರುತ್ತವೆ. ಆದರೆ ಕೆಲವು ಸ್ಥಳಗಳಲ್ಲಿ ಈ ಪ್ರಯತ್ನಗಳು ವಿಫಲವಾಗಿರುವದಕ್ಕೆ, ನಮ್ಮ ಪುರಾತನಾನುಗತವಾದ ಮಾರ್ಗದಲ್ಲಿ ಸಂಸಕ್ತ ಮನಸ್ಕರಾಗಿರುವ ಸ್ತ್ರೀಯರಿಗೆ ಅನ್ಯದೇಶದವರ ರೀತಿಯನ್ನವಲಂಬಿಸಿ ತಿಳುವಳಿಕೆಯನ್ನುಂಟು ಮಾಡಬೇಕೆಂಬ ಪ್ರಯತ್ನವೇ ಕಾರಣವಾಗಿರುತ್ತೆಂದು ತೋರುತ್ತೆ. ನೂತನ ಪದ್ಧತಿಗೆ ಸುತರಾಂ ಒಳಪಡದ ಹಿಂದೂ

ಹೆಂಗಸರ ಸ್ವಭಾವವನ್ನು ತಿಳಿಯುವದು ಹಿಂದೂ ಆದವಗೆ ಸಾಧ್ಯವೇ ಹೊರತು
ಇತರರಿಗೆ ಸಾಧ್ಯವಲ್ಲವು. ನಮ್ಮ ಹೆಂಗಸರು ಪರಂಪರಾನುಗತವಾಗಿ ಬಂದ ಪ್ರಕೃ
ತ ಸ್ಥಿತಿಯೇ ಸರ್ವ ಮಂಗಳದಾಯಕವಾದ್ದೆಂದು ಹೇಳುವ ಸಂಪ್ರದಾಯದವರಾಗಿ
ದ್ದಾರೆ. ಅವರಿಗೆ ಆದರ್ಶಸ್ವರೂಪವಾಗಿರುವ ಪೂರ್ವ ಭಾರತ ಮಹಿಳೆಯರ ಚ
ರಿತ್ರೆಯಾದರೋ ಅತ್ಯುತ್ಕೃಷ್ಟವಾದದ್ದಾಗಿದೆ. ಅದು ಅವರ ಶೈಶವಾವಸ್ಥೆಯಿಂ
ದಲೂ ಮನೆಯಲ್ಲಿ ತಾಯಿ ಯಾದವಳಿಂದ ಪ್ರತಿಕ್ಷಣದಲ್ಲಿಯೂ ಚರ್ವಿತ ಚರ್ವ
ಣವಾಗಿ ಅವರ ಮನದಲ್ಲಿ ನೆಟ್ಟುಹೋಗಿದೆ. ಈ ರೀತಿಯಾಗಿ ಚಿರಸ್ಥಾಯಿಯಾ
ಗಿ ಮನದಲ್ಲಿ ಅಂಕಿತವಾದ ನಾರೀ ಶ್ರೇಷ್ಠರ ಚರಿತ್ರೆಯು ಸರ್ವದಾ ಅವರ ನಡವಳಿತೆ
ಯಲ್ಲಿ ಗೋಚರವಾಗುತಲಿದೆ, ಅಥವಾ ಗೋಚರವಾಗಲು ಸಾಧ್ಯವಾಗಿದೆ. ಇದ
ನ್ನು ಸದ್ವ್ಯವಹಾರದಿಂದ ವಿನಿಯೋಗ ಪಡಿಸಿದರೆ, ಅದರಿಂದಲೇ ನಮ್ಮ ಮಕ್ಕಳು
ನೀತಿ ಮಾರ್ಗದಲ್ಲಿ ಪ್ರವೃತ್ತರಾಗಿ ಕುಲಧರ್ಮ ಪತ್ನಿಗಳಾಗಿಯೂ, ಭ್ರಾತೃ ವತ್ಸ
ಲರಾದ ಭಗಿನೀಗಳಾಗಿಯೂ, ಪುತ್ರವತ್ಸಲರಾದ ಮಾತೃಗಳಾಗಿಯೂ, ಪತಿ ಭಕ್ತಿ
ಯುಳ್ಳ ಪ್ರಿಯಸಖಿಗಳಾಗಿಯೂ ಪರಿಣಮಿಸುವರು. ನಮ್ಮ ಸರಳ ಹೃದಯರಾದ
ಹೆಂಗಸರು ಯಾವ್ಯಾವ ವಸನ ಭೂಷಣಗಳನ್ನು ಧರಿಸಬೇಕೋ, ಯಾವ್ಯಾವ ಆ
ಭರಣಗಳಿಂದ ಅಲಂಕೃತರಾಗಬೇಕೋ, ಫಲತಃ ಏನೇನು ಮಾಡಬೇಕೋ, ಹ್ಯಾ
ಗ್ಯಾಗೆ ನಡೆದುಕೊಳ್ಳಬೇಕೋ, ಈ ಯೆಲ್ಲಾ ವಿಚಾರಗಳನ್ನು ತಿಳಿಯಲು, ಅನ್ಯ
ದೇಶದ ವಿಲಾಸ ಪ್ರಿಯರಾದ ಮನೋ ಮೋಹಿನೀ ಲಲನೆಗಳ ಹಾಗೆ ತಾತ್ಕಾಲಿಕ ವೇಶಾ
ಭೂಷಗಳ ಮಾಸಿಕ ಪತ್ರನನ್ನಾಗಲೀ, ಅಥವಾ ನವೀನರಸಿಕರ ಸಭ್ಯಸಮಾಜದ ಶಿಷ್ಟ
ನಿಷ್ಠತಾ ನಿಯಮಗಳ ಪುಸ್ತಕವನ್ನಾಗಲೀ ನೋಡಬೇಕಾದ್ದಿಲ್ಲವು. ಈ ವಿಚಾರ
ಗಳಲ್ಲೆಲ್ಲಾ ಹಿಂದೂ ಲಲನೆಯರು ಪೂರ್ವ ಪುರಂಧ್ರಿಗಳ ಆಚರಣೆಗಳನ್ನೇ ಕುರಿಯು
ವರು. ದಮಯಂತಿಯು ಪತಿ ವಿರಹದಲ್ಲಿ ಹ್ಯಾಗೆ ನಡದುಕೊಂಡಳು? ಸೀತಾದೇವಿ
ಯು ದುಷ್ಟನಾದ ರಾವಣನ ದುರಾಚರಣೆಯನ್ನು ಯಾವ ಪ್ರಕಾರವಾಗಿ ನಿರಾಕರಿಸಿ
ದಳು? ದ್ರೌಪದಿಯು ಯಾವ ರೀತಿಯಾಗಿ ಅತಿಥಿ ಸೇವಾ ಕಾರ್ಯ ನಿರ್ವಾಹವನ್ನು
ಮಾಡಿದಳು? ಎಂಬ ಇವೇ ಮುಂತಾದ ಪ್ರಶ್ನೆಗಳನ್ನು ನಮ್ಮ ಹೆಂಗಸರು ಅನೇಕ ಸ
ಮಯಗಳಲ್ಲಿ ತಮ್ಮೊಳಗೆ ತಾವೇ ಕೇಳಿಕೊಳ್ಳುತ್ತಾ, ತಪ್ಪದೇ ಬರುವ ತಕ್ಕ ಪ
ರಾಮರ್ಶಗಳನ್ನನುಸರಿಸಿ ಪ್ರವೃತ್ತಿಸುವರು. ಸ್ತ್ರೀಯರನ್ನು ಸುಶಿಕ್ಷಿತರನ್ನಾಗಿ
ಮಾಡಬೇಕೆಂಬ ನಮ್ಮ ಇಷ್ಟ ಸಿದ್ಧಿಗೆ ಇದೇ ರಹಸ್ಯವು. ಬಾಲಕಳಿಗೆ ಅವಳು
ಸ್ವಭಾವತಃ ಜನ್ಮಾರಭ್ಯ ಭಕ್ತಿ ಪುರಸ್ಸರವಾಗಿ ಸನ್ಮಾನ ಮಾಡಿಕೊಂಡಿರುವ ಸದ್ಗು
ಣ ವಿಶಿಷ್ಟರಾದ ನಾರೀಯರ ಚರಿತ್ರೆಗಳಿಂದ ಉದಾಹರಣೆಗಳನ್ನು ತೋರಿಸಿ ಕೊ
ಟ್ಟರೆ ಸಾಕಾಗಿರುತ್ತದೆ. ನಮ್ಮ ಹೆಣ್ಣು ಮಕ್ಕಳ ಮನೋ ಭಾವವು ಅತಿ ಕೋ

ಮೂಲವಾದದ್ದಾದ ಕಾರಣ, ಸದ್ವ್ಯವಹಾರದಿಂದ ಸನ್ಮಾರ್ಗಕ್ಕೆ ಸುಲಭವಾಗಿ ತಿರಿಗಿಸ ಬಹುದು. ಹಿಂದೂ ದೇಶದಲ್ಲಿ ಆಸೇತು ಹಿಮಾಚಲ ಪರ್ಯಂತವೂ ಪತಿ ಪ್ರಾಣಳಾದ ಪತ್ನಿಯನುಳ್ಳ ಪತಿಯೂ, ವಾತ್ಸಲ್ಯ ವಿಶಿಷ್ಟಳಾದ ಭಗಿನಿಯನುಳ್ಳ ಸಹೋದರನೂ, ಅಪತ್ಯ ಸ್ನೇಹ ಭರಿತಳಾದ ಮಾತೆಯನುಳ್ಳ ಮಗನೂ, ಭಾರತ ಮಹಿಳೆಯರ ನಡತೆಯನ್ನು ತಿದ್ದು ಪಡಿಸುವ ಪೂರ್ವ ಇತಿಹಾಸ ಸಾಮರ್ಥ್ಯ ವಿಶೇಷಕ್ಕೆ ಕೃತಜ್ಞರಾಗಿರಬೇಕು. ಮತ್ತು ಈ ದೃಶ ಇತಿಹಾಸ ಪುರಾಣಗಳ ಪ್ರಭಾವವನ್ನು ಉದ್ದಿಷ್ಟ ಫಲಸಿದ್ಧಿಗೆ ತಕ್ಕಹಾಗೆ ಬಳೆಯ ಪಡಿಸುವದರಲ್ಲಿ ಕೌಶಲವನ್ನು ತೋರಿಸುವ ಮಹಾನುಭಾವರು ಬಹಳ ಸನ್ಮಾನನೀಯರಾಗಿರುವರು.

ಈ ಪುಸ್ತಕವು ಪ್ರಕೃತದಲ್ಲಿರುವ ಸ್ತ್ರೀಧರ್ಮ ವಿಷಯವಾದ ತಿಳುವಳಿಕೆಯನ್ನು ಅಭಿವೃದ್ಧಿ ಪಡಿಸಿ, ಭಾರತ ಮಹಿಳೆಯರನ್ನು ಕ್ರಮಶಃ ಅವರ ಉತ್ತಮವಾಗಿದ್ದ ಪೂರ್ವ ಸ್ಥಿತಿಗೆ ತರುವದರಲ್ಲಿ ಸ್ವಲ್ಪಮಟ್ಟಿಗಾದರೂ ಸಾಧಕವಾಗುವದಾದರೆ ನನ್ನ ಶ್ರಮವು ಸಾರ್ಥಕವೆಂದು ತಿಳಿಯುವೆನು.

ಈ ಗ್ರಂಥವನ್ನು ಬರಿಯುವದರಲ್ಲಿ ನನಗೆ ವಿಶೇಷ ಸಹಾಯವನ್ನು ಮಾಡಿದ ಮ|| ರಾ|| ಜಿ. ಗುಂಡಪ್ಪನವರಿಗೆ ನಾನು ಬಹಳ ಕೃತಜ್ಞನಾಗಿದ್ದೇನೆ—ಇತಿ,

ಶಿವಮೊಗ್ಗಾ
೪ 3 ೮೪.

ಬಿ. ವೆಂಕಟಾಚಾರ್ಯ.



ಶ್ರೀ

# ಭಾರತಮಹಿಳಾ.

## ಪ್ರಥಮ ಅಧ್ಯಾಯವು.

ಪೂರ್ವಕಾಲದ ಭಾರತ ವರ್ಷ ನಿವಾಸಿಗಳ ಬುದ್ಧಿ ವೃತ್ತಿ.

ಪೂರ್ವಕಾಲದಲ್ಲಿ ಭಾರತ ವರ್ಷದಲ್ಲಿ ನಾನಾ ವಿಧವಾದ ವಿದ್ಯೆಗಳು ಬಹಳಮಟ್ಟಿಗೆ ಪ್ರಚುರವಾಗಿದ್ದವು. ಮತ್ತು ಅವುಗಳನ್ನು ಕುರಿತು ಅನೇಕ ವಿಧವಾದ ಚರ್ಚೆಯೂ ನಡಿಯುತಲಿತ್ತು. ಆರ್ಯ ಪಂಡಿತರು ಅನೇಕ ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದರು. ಗಣಿತ ಶಾಸ್ತ್ರವು ಅನಾದಿಯಾಗಿ ಭಾರತವರ್ಷದಲ್ಲಿಯೇ ಪ್ರಾಚುರ್ಯವಾಗಿ ಅತ್ಯುನ್ನತಿಯನ್ನು ಹೊಂದಿತ್ತು. ಭಾರತವರ್ಷ ನಿವಾಸಿಗಳ ದರ್ಶನ ಶಾಸ್ತ್ರವು ಯೂರೋಪ್ ದೇಶದವರ ದರ್ಶನ ಶಾಸ್ತ್ರಕ್ಕಿಂತ ಯಾವ ಅಂಶದಲ್ಲಿಯೂ ಕಡಮೆಯಾಗಿಲ್ಲವು. ಯೂರೋಪ್ ಜನರು ಸಹಸ್ರ ವರ್ಷಗಳ ಪರ್ಯಂತ ಪರ್ಯಾಲೋಚಿಸಿ ಯಾವ್ಯಾವ ದುರೂಹವಾದ ತತ್ವಾರ್ಥಗಳನ್ನು ಕಂಡು ಹಿಡಿದಿರುತ್ತಾರೋ ಅವುಗಳನ್ನೆಲ್ಲಾ ನಮ್ಮ ಪ್ರಾಚೀನರಾದ ಋಷಿಗಳಿಂದಲೂ ಪಂಡಿತರುಗಳಿಂದಲೂ ರಚಿತವಾಗಿರುವ ಗ್ರಂಥಾವಳಿಗಳಲ್ಲಿ ಬಹಳ ಮಟ್ಟಿಗೆ ನೋಡಬಹುದು. ಯಾವ್ಯಾವ ಶಾಸ್ತ್ರ ವಿಚಾರಕ್ಕೆ ಅತ್ಯಂತ ಚಿಂತೆಯೇ ಪ್ರಯೋಜನವೋ, ಸೂಕ್ಷ್ಮವಾದ ಬುದ್ಧಿಯೇ ಪ್ರಯೋಜನವೋ, ಮತ್ತು ಬಹುಕಾಲವಾಗಿ ವ್ಯಾಪಕತೆಯನ್ನು ಹೊಂದಿರುವ ತಿಳುವಳಿಕೆಯೇ ಪ್ರಯೋಜನವೋ, ಆ ಸಕಲ ಶಾಸ್ತ್ರಗಳೂ ಭಾರತವರ್ಷದಲ್ಲಿ ಬಹಳ ಅಭಿವೃದ್ಧಿಯನ್ನುಂಟಾಗಿವೆ.

ಭಾರತನಿವಾಸಿಗಳ ಕಲ್ಪನಾಶಕ್ತಿ.

ಆರ್ಯ ಪಂಡಿತರು ಕೇವಲ ಬುದ್ಧಿವೃತ್ತಿಯನ್ನು ಮಾತ್ರ ಉಳ್ಳವರಾಗಿರಲಿಲ್ಲವು. ಅ

ವರ ಗ್ರಂಥ ನಿರ್ಮಾಣಶಕ್ತಿಯೂ ಬಹಳ ಅಭಿವೃದ್ಧಿಯನ್ನು ಹೊಂದಿತ್ತು. ಅವರ ಸಾಹಿತ್ಯವೇ ಒಂದು ರತ್ನಾಕರ ವಿಶೇಷವಾಗಿದೆ; ಅದರಲ್ಲಿ ಯಾವವಿಧವಾದ ರತ್ನವನ್ನು ಕೋರಿದರೂ ಲಭಿಸುವದು. ಸ್ವಭಾವಸಿದ್ಧ ಸಾಮಗ್ರಿಗಳಾದ ನದ ನದೀ ಪರ್ವತ ಕಂದರಗಳು; ಶಿಲ್ಪಿ ಸಾಮಗ್ರಿಗಳಾದ ಪ್ರಾಸಾದ ತಟಾಕ ಉಪವನಕ್ರೀಡಾ ಶೈಲಾದಿಗಳು; ಹೃದಯ ವಿದಾರಣವಾದ ಶೋಕರಸ ಪ್ರವಾಹವು; ಹೃದಯೋಲ್ಲಾಸಕರವಾದ ಆನಂದ ರಸ ಪ್ರವಾಹವು ಈ ಮುಂತಾದ ಸಕಲ ವಿಷಯಗಳನ್ನೂ ತಮ್ಮ ತಮ್ಮ ಕಲ್ಪನಾಶಕ್ತಿಯಲ್ಲಿ ತೋರಿಸಿರುವದಲ್ಲದೆ, ಆ ಯಲ್ಲಾ ವಿಷಯಗಳಲ್ಲಿಯೂ ಕೃತಕಾರ್ಯರಾಗಿರುವದನ್ನು ನೋಡಿದರೆ ಅತ್ಯಾಶ್ಚರ್ಯ ಪಡಬೇಕಾಗುತ್ತದೆ.

ಅವರ ಕವಿತ್ವಶಕ್ತಿಯ ಆಶ್ಚರ್ಯ ಪ್ರಭಾವವು.

ಆರ್ಯ ಕವಿಗಳು ಒಂದಾಶ್ಚರ್ಯವಾದ ಶಕ್ತಿಯನ್ನುಳ್ಳವರಾಗಿದ್ದರು; ಅದೇನಂದರೆ, ಅವರು ಒಂದು ಅಲ್ಪವಾದ ವಸ್ತುವನ್ನು ಅತಿರಮಣೀಯವಾಗಿ ತೋರುವ ಹಾಗೂ, ಅತಿಭಯಂಕರವಾದ ವಸ್ತುವನ್ನು ಚಿತ್ತಹಾರಣೀಯವಾಗುವಂತೆಯೂ ವರ್ಣನೆಯನ್ನು ಮಾಡಿರುವದನ್ನು ಓದಿದ ಮಾತ್ರದಿಂದಲೇ ಮನಸ್ಸಿಗೆ ಸಂತೋಷವನ್ನುಂಟುಮಾಡಿ ಸಂಪೂರ್ಣವಾಗಿ ತೃಪ್ತಿಯುಂಟುಮಾಡುತ್ತದೆ. ಹ್ಯಾಗಂದರೆ, ಸ್ಮಶಾನವು ಅತಿ ಭಯಂಕರವಾದ ಪದಾರ್ಥವಾದರೂ ಕವಿಗಳನೇಕರು ಆ ಸ್ಮಶಾನ ವರ್ಣನೆಯನ್ನುಮಾಡಿ ಓದುವವರಿಗೆ ಪ್ರೀತಿಯುಂಟಾಗುವ ಹಾಗೆ ಮಾಡಿರುತ್ತಾರೆ. ಹೀಗಿರುತ್ತಾ, ಅವರು ನಮಗೆ ಪ್ರೀತಿದಾಯಕವಾದ ಯಾವದಾದರೂ ಒಂದುತ್ಕೃಷ್ಟ ಪದಾರ್ಥವನ್ನು ವರ್ಣಿಸಿರುವದನ್ನು ನೋಡಿದರೆ ಅತ್ಯಂತ ಪ್ರೀತಿಯನ್ನುಂಟುಮಾಡುವದು ಏನಾಶ್ಚರ್ಯ? ಪ್ರಣಯವು ಮನುಷ್ಯನಿಗೆ ಒಂದಮೂಲ್ಯವಾದ ರತ್ನವು. ಆಪ್ರಣಯಕ್ಕೆ ಸ್ತ್ರೀಯು ಮುಖ್ಯ ಅಧಿಷ್ಠಾತ್ರಿಯಾಗಿರುತ್ತಾಳೆ, ಆದ್ದರಿಂದ ಎಲ್ಲಾ ದೇಶದಲ್ಲಿ ಎಲ್ಲಾ ಸಮಯದಲ್ಲಿಯೂ ಕವಿಗಳು ನಾರೀ ಚರಿತ್ರೆಯನ್ನೆ ವರ್ಣನೆಮಾ

ಡಿ ಮಾನವ ಮಂಡಲಿಗೆ ಆನಂದವನುಂಟುಮಾಡುವದಕ್ಕೆ ಪ್ರಯತ್ನ ಪಟ್ಟಿದ್ದಾರೆ.

ಆರ್ಯ ಕವಿಗಳಿಂದ ರಚಿತವಾದ ನಾರೀ ಚರಿತ್ರೆ.

ಆರ್ಯ ಕವಿಗಳು ತಮ್ಮ ತಮ್ಮ ಕಲ್ಪನಾಶಕ್ತಿಯಿಂದ ಸ್ತ್ರೀಯರ ನಡವಳಿತೆಯನ್ನು ಯಾವ್ಯಾವ ಪ್ರಕಾರವಾಗಿ ವರ್ಣನೆಯನ್ನು ಮಾಡಿದ್ದಾರೋ ಆರೀತಿಯಾಗಿ ಸಂಪೂರ್ಣ ಚರಿತ್ರೆಯನುಳ್ಳ ಹೆಂಗಸರು ಪ್ರಾಯಶಃ ಪ್ರಕೃತದಲ್ಲೆಲ್ಲಿಯೂ ಕಂಡು ಬರುವದಿಲ್ಲವು. ಮತ್ತು ಅವರು ನಾರಿಯನ್ನು ಕುರಿತು ರಚಿಸಿರುವ ಗ್ರಂಥಗಳಲ್ಲಿ ಕೆಲವನ್ನು ಓದಿದರೆ ಹೃದಯವು ಪ್ರೇಮರಸದಿಂದ ಆನಂದವನ್ನು ಹೊಂದುತ್ತದೆ; ಕೆಲವು ಗ್ರಂಥಗಳನ್ನು ಓದಿದರೆ ಹೃದಯವು ಶೋಕರಸ ಪ್ರವಿಷ್ಟವಾಗಿ ದ್ರವೀಭೂತವಾಗುತ್ತದೆ, ಮತ್ತೆ ಕೆಲ ರಮಣೀಯರ ಧರ್ಮ ಪರಾಯಣತೆಯನ್ನು ವರ್ಣಿಸಿರುವ ಗ್ರಂಥಾವಲೋಕನವನ್ನು ಮಾಡಿದರೆ ಮನಸ್ಸಿನಲ್ಲಿ ಧರ್ಮ ಭಾವ ವುಂಟಾಗುತ್ತದೆ. ಆದ್ದರಿಂದ ಆರ್ಯ ಕವಿ ರಚಿತ ಸಕಲ ಗ್ರಂಥಗಳೂ ಕೇವಲ ಆನಂದ ವುಂಟುಮಾಡುವವುಗಳಾಗಿವೆ. ಪ್ರಕೃತದಲ್ಲಿ ಆರ್ಯ ಕವಿಕಲ್ಪನೆಗಳಲ್ಲಿ ಉದಾಹೃತರಾಗಿರುವ ರಮಣೀಗಣ ಮಧ್ಯದಲ್ಲಿ ಸರ್ವೋತ್ಕೃಷ್ಟರು ಯಾರೆಂಬುವದನ್ನು ನಿರ್ಣಯ ಮಾಡುವಣ ವಾಗುತ್ತದೆ.

ಕಲ್ಪನಾಶಕ್ತಿಗುಂಟಾಗುವ ಪ್ರತಿ ಬಂಧಕಗಳು.

ಕವಿಗಳು ಗ್ರಂಥಗಳನ್ನು ಬರಿಯಲುದ್ಯುಕ್ತರಾಗಿ ಲೇಖನಿಯನ್ನು ಧಾರಣೆ ಮಾಡಿದಾಗ ಮೂರು ವಿಧವಾದ ಕಾರಣಗಳಿಂದ ಅವರಿಗೆ ಕಲ್ಪನಾಶಕ್ತಿಯು ಸರ್ವತೋಮುಖವಾಗಿ ಸ್ಫೂರ್ತಿಸುವದಕ್ಕವಕಾಶವಾಗುವದಿಲ್ಲ. ಅವು ಯಾವವಂದರೆ,—ಮೊದಲನೇದು—ಕವಿಗಳು ಕಾಲಾನುಗುಣ್ಯವಾದ ಅವಸ್ಥೆಗೆ ವಿರೋಧವಾಗಿ ಯಾವ ವಿಷಯವನ್ನು ವರ್ಣಿಸುವದಕ್ಕೂ ಸಂಕುಚಿತರಾಗುತ್ತಾರೆ; ಎರಡನೇದು—ಅವರು ಯಾವದೇಶವನ್ನು ವರ್ಣಿಸುವದಕ್ಕೆ ಪ್ರವೃತ್ತರಾಗುತ್ತಾರೋ ಆ ದೇಶೀಯರ ಪ್ರೀತಿಲಾಭಕ್ಕೋಸ್ಕರ ಅವರಿಗೆ ಅನುರಾಗವಿರುವದನ್ನ ವರ್ಣಿಸುವದರಲ್ಲಿ

ಯೇ ಪ್ರವೃತ್ತರಾಗಬೇಕೇ ಹೊರ್ತು ಧಾರಾಳವಾಗಿ ಕವಿತ್ವವನ್ನು ಮಾಡುವದಕ್ಕೆ ಮಾರ್ಗವಿಲ್ಲ; ಮೂರನೇದು,–ಕವಿಗಳ ನಿಜ ಸ್ವಭಾವವೇ ಕೆಲ ಕೆಲ ಸಮಯದಲ್ಲಿ ಅವರಿಗೆ ವಿರೋಧವಾಗುತ್ತದೆ. ಒಂದುವೇಳೆ ಜಾತೀಯವಾದ ಅಥವಾ ಸ್ವಭಾವಜನ್ಯವಾದ ವಿಘ್ನ ಘಟನೆಯಾಗದಿದ್ದರೂ ಸಾಮಾಜಿಕಾವಸ್ಥೆಯೇ ಮುಖ್ಯವಾದ ವಿಘ್ನವಾಗುವದು.

**ಸರ್ವೋತ್ಕೃಷ್ಟರಮಣೀಚರಿತ್ರೆಯ ವರ್ಣನೆಯು ಕಷ್ಟವಾದದ್ದು.**

ಕವಿಗಳಿಂದ ವರ್ಣಿತರಾದ ಹೆಂಗಸರ ನಡವಳಿತೆಯು ಸಾಮಾನ್ಯರಾದ ಹೆಂಗಸರ ನಡವಳಿತೆಗಿಂತಲೂ ಅಗತ್ಯವಾಗಿ ಉತ್ಕೃಷ್ಟತರವಾಗಿರುವದು; ಆದರೆ ಅವರು ಪೂರ್ವೋಕ್ತವಾದ ಮೂರುವಿಧ ಕಾರಣಗಳಿಗೆ ವಶರಾಗಿ ಗ್ರಂಥರಚನೆಯನ್ನು ಮಾಡಿರುವಣದರಿಂದ ಸರ್ವೋತ್ಕೃಷ್ಟ ರಮಣೀ ಚರಿತ್ರೆಯನ್ನು ಆಮೂಲಾಗ್ರವಾಗಿ ಚಿತ್ರಿಸುವದಕ್ಕೆ ಅವರಿಗೂ ಅಸಾಧ್ಯವಾಗಿರುತ್ತದೆ.

**ಸರ್ವೋತ್ಕೃಷ್ಟರಮಣಿಗೆ ಇರಬೇಕಾದ ಗುಣಗಳು.**

ಅತ್ಯಂತ ಗಂಭೀರವಾದ ಆಲೋಚನಾಶಕ್ತಿಯುಳ್ಳ ಒಬ್ಬ ಸತ್ಕವಿಯು ಪೂರ್ವೋಕ್ತ ತ್ರಿವಿಧಪ್ರತಿಬಂಧಕಗಳನ್ನು ನಿವಾರಣೆ ಮಾಡಿಕೊಂಡು ತನ್ನ ಅಸಾಧಾರಣವಾದ ಕವಿತ್ವ ಶಕ್ತಿಯಿಂದ ಅನನ್ಯಸಾಧಾರಣ ಗುಣ ವಿಶಿಷ್ಟಳಾದ ಯಾವ ರಮಣಿಯ ಚರಿತ್ರೆಯನ್ನು ವರ್ಣಿಸುವನೋ ಅಂತಾ ರಮಣಿಯೇ ನಾರೀಕುಲಕ್ಕೆ ಸರ್ವೋತ್ಕೃಷ್ಟವಾದ ರತ್ನ ಸ್ವರೂಪಳಾಗುವಳು; ಅವಳ ಚರಿತ್ರೆಯೇ ರಮಣೀ ಚರಿತ್ರೆಗಳಲ್ಲಿ ಉತ್ಕೃಷ್ಟತಮವಾಗುವದು; ಇಂತಾ ಸ್ತ್ರೀರತ್ನದ ಚರಿತ್ರೆಯೊಡನೆ ಇತರ ಕವಿಗಳು ವರ್ಣಿಸಿರುವ ಚರಿತ್ರೆಗಳನ್ನು ಜೊತೆ ಮಾಡಿ ನೋಡಿದರೆ ಅನೇಕ ಅಂಶಗಳಲ್ಲಿ ಅವು ನ್ಯೂನತೆಯನ್ನು ಹೊಂದುತ್ತವೆ. ಯಾವ ಕವಿಯೂ ಈ ಪರ್ಯಂತಕ್ಕೂ ಅಂತಾ ಸರ್ವೋತ್ಕೃಷ್ಟ ಸ್ತ್ರೀಯನ್ನು ವರ್ಣಿಸುವದಕ್ಕೆ ಶಕ್ತನಾಗಲಿಲ್ಲ; ಯಾವ ಕವಿಯೂ ಈ ಪರ್ಯಂತವೂ ಸಾಮಾಜಿಕ ಸಂಬಂಧವಾದ ನಿರ್ಬಂಧ

ದಿಂದ ಸಂಪೂರ್ಣವಾಗಿ ಬಿಡಗಡೆಯನ್ನು ಹೊಂದಿಲ್ಲ. ಆದರೆ, ಇಂತಾ ಸರ್ವೋತ್ಕೃಷ್ಟ ರಮಣಿಯ ವರ್ಣನೆಯು ಅತ್ಯಂತ ಕಷ್ಟವಾದರೂ, ಮತ್ತು ಯಾವ ಕವಿಯೂ ಇಂತಾ ರಮಣೀ ವರ್ಣನೆಯನ್ನು ಮಾಡಲಸಮರ್ಥನಾದಾಗ್ಯೂ ಯೋಚನಾ ಶಕ್ತಿಯಿಂದಲಾದರೂ ಅಂತವಳಿಗೆ ಇರಬೇಕಾದ ಗುಣಗಳನ್ನು ಚಿಂತಾಶೀಲನಾದ ಸತ್ಕವಿಯು ಅನುಭವತಃ ಮನಸ್ಸಿನಲ್ಲಿ ತಿಳಿಯುವನು; ಅಂತವಳ ಮನೋವೃತ್ತಿಗಳಲ್ಲಿ ಯಾವ್ಯಾವದು ವ್ಯಾಪಕತೆಯನ್ನು ಹೊಂದಿ ಪ್ರಕಾಶವಾಗಿರಬೇಕೋ, ಯಾವ್ಯಾವದು ನಿಸ್ತೇಜವಾಗಿ ಅಪ್ರಕಾಶವಾಗಿರಬೇಕೋ ಅವುಗಳನ್ನೆಲ್ಲಾ ಆಲೋಚಿಸಿದರೆ ಮನಸ್ಸಿನಿಂದ ತಿಳಿಯಬಹುದು.

ಮನುಷ್ಯನ ಮನೋವೃತ್ತಿಯ ವಿಭಾಗವು.

ಯೂರೋಪ್ ದೇಶದ ಪಂಡಿತರು ಮನುಷ್ಯನ ಮನೋವೃತ್ತಿಯನ್ನು ಮೂರು ಮುಖ್ಯ ಭಾಗಗಳಾಗಿ ವಿಂಗಡಿಸಿರುತ್ತಾರೆ; ಮೊದಲನೇದು,–ಬುದ್ಧಿವೃತ್ತಿ; ಎರಡನೇದು,–ಸ್ನೇಹಪ್ರವೃತ್ತಿ; ಮೂರನೇದು,–ಕರ್ಮನಿಷ್ಠತೆ ಅಥವಾ ಕರ್ಮಕ್ಷಮತೆ. ಯಾವ ಶಕ್ತಿಯಿಂದ ಗಣಿತ ಶಾಸ್ತ್ರವನ್ನೂ, ಪದಾರ್ಥಶಾಸ್ತ್ರವನ್ನೂ (Physics) ಅಭಿವೃದ್ಧಿಯನ್ನು ಹೊಂದಿಸಬಹುದೋ, ಯಾವ ಶಕ್ತಿಯಿಂದ ಮನುಷ್ಯನು ತಾನು ಮಾಡತಕ್ಕ ಕೆಲಸವನ್ನು ಚನ್ನಾಗಿ ತಿಳಿಯ ಬಹುದೋ, ಯಾವದರಿಂದ ಮಂತ್ರಿಗಳು ರಾಜ ಕಾರ್ಯಗಳನ್ನು ಪರ್ಯಾಲೋಚನೆ ಮಾಡ ಬಹುದೋ, ಸೇನಾಪತಿಗಳು ತಮ್ಮ ಸೇನೆಯನ್ನು ಕ್ರಮವಾಗಿ ಏರ್ಪಡಿಸಬಹುದೋ, ಶಾಸ್ತ್ರಕಾರರು ಶಾಸ್ತ್ರಗಳ ಗೂಢಾರ್ಥಗಳನ್ನು ನಿರ್ಣಯ ಮಾಡಲು ಪ್ರವೃತ್ತರಾಗ ಬಹುದೋ, ಅಂತಾ ಶಕ್ತಿಗೆ ಬುದ್ಧಿ ವೃತ್ತಿಯೆಂದು ಹೆಸರು. ಯಾವ ಶಕ್ತಿಯಿಂದ ನಾವು ಸಾಮಾಜಿಕಜನರ ಸಂಗಡ ಸದ್ಭಾವದಿಂದ ಒಳ್ಳೇ ನಡವಳಿಕೆಯೊಡನೆ ನಡದುಕೊಳ್ಳ ಬಹುದೋ, ಯಾತರಿಂದ ತಂದೆ ತಾಯಿಗಳಲ್ಲಿ ಭಕ್ತಿಯುಳ್ಳವರಾಗುತ್ತೇವೋ, ಪುತ್ರಾದಿಗಳಲ್ಲಿ ಸ್ನೇಹವುಳ್ಳವರಾಗುತ್ತೇವೋ, ಕಷ್ಟಪಡುವರಲ್ಲಿ ದಯೆಯುಳ್ಳವರಾಗುತ್ತೇವೋ, ಬಂಧು ವರ್ಗಗಳಲ್ಲಿ ವಿಶ್ವಾಸವುಳ್ಳವರಾಗು

ತ್ತೇವೋ, ಅಂತಾ ಶಕ್ತಿಗೆ ಸ್ನೇಹ ಪ್ರವೃತ್ತಿಯೆಂದು ಹೆಸರು. ಈ ಸ್ನೇಹ ಪವೃತ್ತಿಯೇ ಸುಖ ದುಃಖಕ್ಕೆ ಕಾರಣವಾದದ್ದು ; ಇದರಲ್ಲಿಯೇ ಮನುಷ್ಯನಿಗೆ ಇರತಕ್ಕ ಕೋಮಲ ಮಾನಸಿಕ ಭಾವವು ಅಂತರ್ಗತವಾಗಿರುತ್ತದೆ. ಕರ್ಮ ಕ್ಷಮತೆಯೆಂಬುವದು ನಮ್ಮ ಇಛ್ಛಾಶಕ್ತಿಗೆ ಮತ್ತೊಂದು ಹೆಸರು. ಕೇವಲ ಮಾನಸಿಕ ಇಛ್ಛಾ ಇದ್ದಮಾತ್ರಕ್ಕೇನೇ, ಕಾರ್ಯ ಕ್ಷಮತೆ ಇದ್ದ ಹಾಗೆ ಆಗುವದಿಲ್ಲ. ಯಾವ ಇಛ್ಛೆಯು ಕಾರ್ಯದಲ್ಲಿ ಪರಿಣಮಿಸುತ್ತದೋ, ಯಾವ ಇಛ್ಛಾಶಕ್ತಿಯಿಂದ ಜನರು ಕಷ್ಟಪಟ್ಟು ಸಾಹಸ ಕಾರ್ಯಗಳನ್ನು ಮಾಡಿ ತಮ್ಮ ಇಷ್ಟಾರ್ಥವನ್ನು ಹೊಂದುವದಕ್ಕೆ ಪ್ರವೃತ್ತರಾಗುವರೋ ಅದೇ ಕರ್ಮಕ್ಷಮತೆಯೆನ್ನಿಸಿಕೊಳ್ಳುವದು.

ಈ ವೃತ್ತಿತ್ರಯುವು ನಿರಂತರವಾಗಿ ಮನುಷ್ಯನ ಸ್ವಭಾವದಿಂದೊಡಗೂಡಿರುತ್ತದೆ. ಹ್ಯಾಗಂದರೆ,—ಕೇವಲ ಜ್ಞಾನಶೂನ್ಯರಾದ ಅತಿ ಮೂರ್ಖರಾಗಿರುವ ಸಾಂತಲ್ (Santhals) ಜನರಿಗೂ ಬುದ್ಧಿವೃತ್ತಿಯಿರುತ್ತದೆ ; ಮನುಷ್ಯರನ್ನು ತಿನ್ನುವ ಅಂಡ ಮಾನದ್ವೀಪ ನಿವಾಸಿಗಳಿಗೂ ಸ್ನೇಹಪ್ರವೃತ್ತಿ ಯಿರುತ್ತದೆ; ಜಡಪ್ರಾಯರಾಗಿರುವ ಆಫ್ರಿಕಾ ದೇಶದವರಿಗೂ ಕರ್ಮಕ್ಷಮತೆಯುಂಟು. ಆದರೆ ಇವರಿಗೆ ಇರುವ ಮನೋವೃತ್ತಿತ್ರಯುವು ಸಭ್ಯರಾದ ನಾಗಲೀಕತೆಯನ್ನು ಹೊಂದಿರುವ ಜನಾಂಗದವರಿಗೆ ಇರುವದಕ್ಕೆ ಸಮತೂಲನವಾದ್ದಲ್ಲವಾದಾಗ್ಯೂ ಪರಸ್ಪರ ಪರಿಮಾಣಗತ ಪ್ರಭೇದ ಮಾತ್ರವಾಗಿದೆ. ನಾವು ಈಶ್ವರನಲ್ಲಿ ವಿನಾ ಈ ವೃತ್ತಿತ್ರಯುದ ಯುಗ ಪತ್ಸಮುನ್ನತಿ ಮತ್ತು ಅತ್ಯುತ್ಕರ್ಷತೆಯನ್ನು ಮತ್ಯಾರಲ್ಲಿಯೂ ಆರೋಪಿಸುವದಕ್ಕೆ ಆಗುವದಿಲ್ಲ. ಆದರೆ ಈ ವೃತ್ತಿತ್ರಯುವೂ ಒಬ್ಬ ಮನುಷ್ಯನಲ್ಲಿ ಕೆಲವು ದೂರದವರಿಗೆ ಪ್ರಬಲವಾಗಿದ್ದು, ಅವುಗಳಲ್ಲಿ ಯಾವದಾದರೂ ಒಂದು ವೃತ್ತಿಯು ಸಾಧ್ಯವಾದಮಟ್ಟಿಗೆ ಉನ್ನತಿಯನ್ನುಂಟಾಗಿರಬಹುದೆಂದು ಹೇಳಬಹುದು.

ಕಾವ್ಯಲಿಖಿತ ಪುರುಷ ಚರಿತ್ರೆಯ ಉತ್ಕರ್ಷತೆ. ಯಾವಾಗ ನಾವು ಪುರುಷ ಚರಿತ್ರೆಗೆ ಆತ್ಯುತ್ಕರ್ಷತೆಯನ್ನು ಕಲ್ಪಿಸುತ್ತೇವೊ, ಆಗ ಪುರುಷನನ್ನು ಸಾಧ್ಯವಾದ ಮಟ್ಟಿಗೂ ಕರ್ಮ ಕ್ಷಮತೆ ಯುಳ್ಳವನಾಗಿ ವರ್ಣಿಸುತ್ತೇವೆ, ಅಲ್ಲದೆ ಅವನ ಬುದ್ಧಿವೃತ್ತಿಯನ್ನು ವಿಲಕ್ಷಣ ತೇಜಸ್ವಿಯನ್ನಾಗಿಮಾಡಿ, ಅವನ ಸ್ನೇಹ ಪ್ರವೃತ್ತಿಯನ್ನೂ ಸಂಪೂರ್ಣವಾಗಿ ಪ್ರಕಾಶವಾಗುವ ಹಾಗೆ ವರ್ಣಿಸುತ್ತೇವೆ. ಆದರೆ ಆ ಪುರುಷನು ಕರ್ತವ್ಯಕಾರ್ಯ ಸಂಪಾದನೆಗೋಸ್ಕರ ತನ್ನಲ್ಲಿ ಸಂಪೂರ್ಣವಾಗಿ ನೆಲೆಯಾಗಿದ್ದ ಸ್ನೇಹ ಪ್ರವೃತ್ತಿಯನ್ನು ಪರಿತ್ಯಜಿಸಲು ಸಮರ್ಥನಾದದ್ದೆ ಆದರೆ ಅವನನ್ನು ಅತ್ಯಂತ ಉತ್ತಮ ಪುರುಷನೆಂದು ಹೇಳುತ್ತೇವೆ; ರಾಮನು ಸೀತೆಯನ್ನು ಪರಿತ್ಯಜಿಸಿದನು, ಪರಶುರಾಮನು ಮಾತೃವಧೆಯನ್ನು ಮಾಡಿದನು, ಕರ್ಣನು ಪುತ್ರನನ್ನು ಹತ ಮಾಡಿದನು. ಈ ಮೂವ್ವರು ಸ್ನೇಹ ಪ್ರವೃತ್ತಿಯನ್ನು ಕರ್ಮಕ್ಷಮತೆಗೋಸ್ಕರ ಬಲಿಯನ್ನಾಗಿ ಕೊಟ್ಟು ಜಗದ್ವಿಖ್ಯಾತರಾಗಿ ಚಿರಸ್ಮರಣೀಯರಾಗಿರುತ್ತಾರೆ.

ತಾದೃಶನಾರೀ ಚರಿತ್ರೋತ್ಕರ್ಷತೆ. ಆದರೆ ನಾವು ಈ ರೀತಿಯಾದ ನಾರೀ ಚರಿತ್ರೆಯನ್ನು ಬರಿಯಲುದ್ಯಮಿಸಿದರೆ ಪುರುಷನ ಚರಿತ್ರೆಯನ್ನು ಸಂಪೂರ್ಣವಾಗಿ ವಿಪರೀತಮಾಡಿ ಬರಿಯುತ್ತೇವೆ. ಪುರುಷರಿಗೆ ಯಾವರೀತಿ ಕರ್ಮಕ್ಷಮತೆಯೇ ಸರ್ವಸ್ವವೋ, ಅದೇರೀತಿಯಾಗಿ ನಾರೀಯರಿಗೆ ಸ್ನೇಹ ಪ್ರವೃತ್ತಿಯು ಸರ್ವಸ್ವವಾದದ್ದು. ಅತಏವ ಸ್ತ್ರೀಯರ ಪ್ರಶಂಸೆಯಲ್ಲಿ ಅವರ ಸ್ನೇಹ ಪ್ರವೃತ್ತಿಯು ಸರ್ವ ಪ್ರಕಾರದಿಂದಲೂ ಸಮುನ್ನತಿ ಲಾಭವನ್ನುಂಟಾಗುವದು; ಪ್ರಣಯವು ಸ್ತ್ರೀಯರಿಗೆ ಜೀವನ ಸ್ವರೂಪವಾಗುವದು; ಪಿತೃ ಭಕ್ತಿ, ಮಾತೃ ಭಕ್ತಿ, ಆಪತ್ಯ ಸ್ನೇಹ, ಸಕಲ ಪ್ರಾಣಿಗಳಲ್ಲಿಯೂ ದಯೆ, ಈಶ್ವರ ಪರಾಯಣತೆಯೇ ಮುಂತಾದ ಸಕಲ ಕೋಮಲ ಸುಂದರವಾದ ಮನೋವಿಕಸನವನ್ನುಂಟುಮಾಡುವ ವೃತ್ತಿಗಳು ಸಂಪೂರ್ಣವಾಗಿ ಪ್ರಕಾಶವಾಗುವವು. ಬುದ್ಧಿವೃತ್ತಿ, ಕರ್ಮಕ್ಷಮತೆ ತಕ್ಕಮ

ಟ್ಟಿಗೆ ಇರಬೇಕಾದದ್ದು ಅವಶ್ಯಕವು; ಆದರೆ ಬುದ್ಧಿವೃತ್ತಿ ತೇಜಸ್ವಿನಿಯಾಗಿ ಕರ್ಮಕ್ಷಮತೆಯು ಅದಕ್ಕಿಂತ ಕಡಮೆಯಾದರೂ ಕ್ಷತಿ ಇಲ್ಲ. ನಾರಿಯರಿಗೆ ಕಷ್ಟ ಸಹಿಷ್ಣುತೆಯನ್ನು ಪ್ರಧಾನಗುಣವನ್ನಾಗಿ ಅನೇಕರು ವರ್ಣಿಸಿರುತ್ತಾರೆ. ಈಗಿನ ಯೂರೋಪಿಯನ್ ಪಂಡಿತರು ಸ್ತ್ರೀ ಪುರುಷರಿಬ್ಬರೂ ಸಂಪೂರ್ಣ ಸಮಾನ ಸತ್ವಾಧಿಕಾರಿಗಳಾದ್ದರಿಂದ ಸ್ತೈರಣೆಗಿಂತಲೂ ಕರ್ಮಕ್ಷಮತೆಯೇ ಅವರಿಗೆ ಅಧಿಕ ಪ್ರಯೋಜನವೆಂದು ಹೇಳುವರು. ಆದರೆ ಸ್ತ್ರೀಯು ಸ್ನೇಹ ಪ್ರವೃತ್ತಿಗೆ ವಶಳಾಗಿ ಪತಿ ನಿಮಿತ್ತ ಪಿತೃ ನಿಮಿತ್ತ ಮತ್ತು ಪರರುಪಕಾರನಿಮಿತ್ತವಾಗಿ ಅವಳು ನಾನಾ ವಿಧವಾದ ಮಾನಸಿಕ ಮತ್ತು ಶಾರೀರಕ ಕಷ್ಟಗಳನ್ನು ಸಹಿಸುವದಾದರೆ ಅವಳಿಗೆ ಸಹಿಷ್ಣುತಾ ಗುಣವಿರುವದೇ ಬಹಳ ಪ್ರಶಂಸನೀಯವಾಗುತ್ತದೆ.

ನಾರೀಚರಿತ್ರೆಯಲ್ಲಿ ಸ್ನೇಹಪ್ರವೃತ್ತಿಯೇ ಮುಖ್ಯವಾದ್ದೆಂದು ಹೇಳಲು ಕಾರಣ.

ಕೆಲವರು ಸ್ನೇಹ ಪ್ರವೃತ್ತಿಯೇ ಪ್ರಬಲವಾದರೆ ನಾರೀ ಚರಿತ್ರೆಯು ಉತ್ಕೃಷ್ಟವಾಗುವದಕ್ಕೆ ಕಾರಣವೇನೆಂದು ಚರ್ಚಿಸುವರು. ಇದಕ್ಕೆ ಉತ್ತರವೇನೆಂದರೆ—ಇತರ ಜಂತುಗಳಲ್ಲಿಯೂಕೂಡ ಸ್ತ್ರೀ ಜಾತಿಗೆ ಸ್ನೇಹಪ್ರವೃತ್ತಿಯೇ ಪ್ರಬಲವಾದದ್ದು. ಮನುಷ್ಯ ಜಾತಿ ಯಲ್ಲಿಯೂ ಪುರುಷನಗಿಂತಲೂ ಸ್ತ್ರೀಗೆ ಸ್ನೇಹ ಪ್ರವೃತ್ತಿ ಹೆಚ್ಚಾಗಿರುತ್ತದೆ. ಮತ್ತು ನಾರೀ ಚರಿತ್ರೆಯನ್ನು ವರ್ಣಿಸಿರುವ ಕವಿಗಳೆಲ್ಲರೂ ಅವಳ ಸ್ನೇಹಪ್ರವೃತ್ತಿಯನ್ನು ಪ್ರಬಲ ಪಡಿಸುವದರಲ್ಲಿ ಪ್ರಯತ್ನಿಸಿರುತ್ತಾರೆ. ಸಂತಾನ ಲಾಲನ ಪಾಲನೆ ಭಾರಗಳೆಲ್ಲ ಸರ್ವತ್ರ ಸ್ತ್ರೀಯರಲ್ಲಿಯೇ ಬಹಳವಾಗಿಡಲ್ಪಟ್ಟಿರುತ್ತವೆ. ಆದದ್ದರಿಂದ ಈಶ್ವರನು ಸ್ತ್ರೀಯರಲ್ಲಿ ಸ್ನೇಹ ಪ್ರವೃತ್ತಿಯನ್ನೇ ಅಧಿಕವಾಗಿಟ್ಟಿರುತ್ತಾನೆ. ಸ್ತ್ರೀಯರು ಸ್ವಭಾವತಃ ಪುರುಷರಿಗಿಂತಲೂ ದುರ್ಬಲರು. ಆದದರಿಂದಲೇ ಸ್ತ್ರೀಯರು ಪುರುಷರನ್ನು ಆಶ್ರೈಸಿಕೊಂಡಿರುತ್ತಾರೆ; ಆದಕಾರಣ ಯಾವ ಸಕಲ ಮನೋವೃತ್ತಿಗಳಿದ್ದರೆ ಸಮಾಜದಲ್ಲಿ ಸದ್ಭಾವಗಳಿಂದ ನಡೆದುಕೊಳ್ಳಬಹುದೋ ಅವು

ಗಳೇ ಸಹಜವಾಗಿ ಸ್ತ್ರೀಯರಿಗೆ ಪ್ರಯೋಜನ ಕಾರಿಯಾಗಿರುವವು.

ಅತಏವ, ದೇಶಗತ, ಕಾಲಗತ, ಅವಸ್ಥಾಗತ ವೈಲಕ್ಷಣ್ಯ ಪರಿಹಾರ ಪೂರ್ವಕ ನಾರೀ ಚರಿತ್ರೆಗೆ ಸಂಪೂರ್ಣ ಉತ್ಕರ್ಷತೆಯನ್ನು ಸ್ಥಿರ ಮಾಡುವದಾದರೆ ಅವರ ಸ್ನೇಹ ಪ್ರವತ್ತಿಯನ್ನು ಸಾಧ್ಯವಾದ ಪರ್ಯಂತಕ್ಕೂ ತೇಜಸ್ವಿನಿಯನ್ನಾಗಿ ಮಾಡುವದು ಅವಶ್ಯಕವೆಂದು ನಿಶ್ಚಯ ಮಾಡಬೇಕು. ಅವರಿಗೆ ಕರ್ಮಕ್ಷಮತೆಯೂ ಬುದ್ಧಿವೃತ್ತಿಯೂ ಸಹ ವಿಲಕ್ಷಣಸ್ಫೂರ್ತಿಯಾಗಿರತಕ್ಕದ್ದು ಯುಕ್ತವೇಸರಿ; ಹಾಗಿದ್ದರೆ ಅವರು ಮಾಡತಕ್ಕ ಕೆಲಸದಲ್ಲಿ ಅವರಿಗೆ ವಿಲಕ್ಷಣವಾಗಿ ದೃಷ್ಟಿಯಿರುವದು. ಆದರ ಸ್ನೇಹ ಪ್ರವೃತ್ತಿಗೋಸ್ಕರ ಕರ್ತವ್ಯ ಕಾರ್ಯಗಳನ್ನು ಪರಿತ್ಯಜಿಸಿ ಶಾರೀರಕ ಕಷ್ಟಗಳನ್ನು ಅನುಭವಿಸಿದರೂ ಉಚಿತವೆಂದೇ ಅಂಗೀಕರಿಸ ಬಹುದು.

ಪ್ರಸ್ತಾಪದ ಅವತಾರಣ. ಪ್ರಪಂಚದಲ್ಲಿರುವ ಎಲ್ಲಾ ದೇಶದ ಕವಿಗಳೂ ಇಂತಾ ನಾರೀಚರಿತ್ರೆಯನ್ನು ಬರಿಯಲು ಪ್ರಯತ್ನ ಪಟ್ಟಿರುತ್ತಾರೆ; ಆದರೆ ಸಾಮಾಜಕನಿಯಮ, ಜಾತೀಯ ಸ್ವಭಾವ ಮತ್ತು ಕವಿಸ್ವಭಾವ ಇವುಗಳಿಗೋಸ್ಕರ ಬಹುಶಃ ಯಾರೂ ಈ ರೀತಿಯಾದ ಸರ್ವಾಂಗೀಣ ಸುಂದರ ಚರಿತ್ರೆಯನ್ನು ಚಿತ್ರಿಸುವದರಲ್ಲಿ ಸಂಪೂರ್ಣಕೃತಕಾರ್ಯರಾಗಿಲ್ಲ. ನಮ್ಮ ಪುರಾತನರಾದ ಕವಿಗಳೂ ಕೂಡ ಪೂರ್ವೋಕ್ತ ಕಾರಣತ್ರಯವನ್ನು ಪರಿಹರಿಸಲು ಸಮರ್ಥರಾಗಿಲ್ಲ. ಆದರೆ ಸೀತಾಪ್ರಭೃತಿ ಸೌಭಾಗ್ಯವತಿಗಳಾದ ಕಾಮಿನೀಯರ ಇತಿಹಾಸವನ್ನೋದಿದರೆ ಅವರು ನಾರೀಕುಲದ ಮಧ್ಯದಲ್ಲಿ ಸರ್ವೋಚ್ಚ ಸಿಂಹಾಸನದಲ್ಲಿ ಆರೋಹಣ ಮಾಡುವದಕ್ಕೆ ತಕ್ಕವರಾಗಿರುತ್ತಾರೆ. ಹಿಂದೂ ಜನರ ಸಾಹಿತ್ಯದಲ್ಲಿ ಎಂತಾ ಸರ್ವಗುಣ ಸಂಪನ್ನೆಯರಾದ ಪತಿಪರಾಯಣರಾದ ಕಾರ್ಯ ಕುಶಲರಾದ ರಮಣೀಗಳ ವಿವರಣೆಯನ್ನು ಓದಬಹುದೋ, ಪ್ರಪಂಚದಲ್ಲಿ ಇತರ ಯಾವ ದೇಶದ ಕವಿಗಳ ಗ್ರಂಥಾವಳಿಯಲ್ಲಿಯೂ ಅಂತಾ ರಮಣೀ ಚರಿತ್ರೆಯನ್ನು ನೋಡುವೆವೆಂಬುವದು ಸಂದೇಹವಾಗಿದೆ.

## ಎರಡನೇ ಅಧ್ಯಾಯ.

ನಮ್ಮ ಪ್ರಾಚೀನ ಪಂಡಿತರು ಸ್ತ್ರೀಯರ ಚರಿತ್ರ ವಿಷಯದಲ್ಲಿ ಎಷ್ಟುದೂರ ಉತ್ಕರ್ಷತೆಯನ್ನು ಕಲ್ಪನೆಮಾಡಲು ಸಮರ್ಥರಾಗಿದ್ದರೋ ಅದನ್ನು ತಿಳಿಯಬೇಕಾದರೆ, ಮೊದಲು ಆ ಕಾಲದಲ್ಲಿ ಸ್ತ್ರೀಯರ ಸಾಮಾಜಿಕಾವಸ್ಥೆಯು ಯಾವರೀತಿ ಇತ್ತೆಂಬದನ್ನ ಪರ್ಯಾಲೋಚಿಸಬೇಕಾದದ್ದು ಆವಶ್ಯಕವಾಗಿರುತ್ತದೆ. ಕವಿಗಳಿಗೆ ಕಲ್ಪನಾಶಕ್ತಿಯು ಎಷ್ಟುದೂರ ಪ್ರಬಲವಾಗಿ ತಾನೇ ಇರಲಾರದು, ಎಷ್ಟು ನೂತನ ನೂತನವಾದ ಪದಾರ್ಥವನ್ನು ಕಲ್ಪಿಸಿ ವರ್ಣನೆಯನ್ನು ತಾನೇ ಮಾಡಲಾರರು; ಅವರು ಯಾವ ಕಾಲದಲ್ಲಿದ್ದರೋ ತತ್ಕಾಲೀನ ಸಾಮಾಜಿಕ ಸ್ಥಿತಿಯನ್ನವಲಂಬಿಸಿಯೇ ತಮ್ಮ ಶಕ್ತಿಯನ್ನು ಪ್ರಕಾಶಮಾಡ ಬಲ್ಲವರಾಗಿದ್ದರೇ ಹೊರತು ಅನ್ಯಥಾ ಆಗಿರಲಾರದು. ಆದಕಾರಣ ಅವರ ಗ್ರಂಥಾವಲೋಕನದ್ವಾರಾ, ಈ ಅಧ್ಯಾಯದ ಮೊದಲು ಭಾಗದಲ್ಲಿ ಆಯಾಕಾಲದ ಸ್ತ್ರೀಯರ ಸಾಮಾಜಿಕಾವಸ್ಥೆಯು ಯಾವರೀತಿ ಇತ್ತೆಂಬದನ್ನ ನಿರ್ಣಯ ಮಾಡಿ, ನಂತರ, ವಾಲ್ಮೀಕಿ ವೇದವ್ಯಾಸ ಕಾಳಿದಾಸ ಪ್ರಭೃತಿ ಪ್ರಸಿದ್ಧರಾದ ಕವಿ ಶ್ರೇಷ್ಠರ ಗ್ರಂಥಗಳಲ್ಲಿ ಉದಾಹೃತರಾದ ಕೆಲವು ಪ್ರಸಿದ್ಧ ಸ್ತ್ರೀಯರ ಚರಿತ್ರಯನ್ನು ಕುರಿತು ಸಮಾಲೋಚನೆ ಮಾಡುವೆವು.

ಸಾಮಾಜಿಕಾವಸ್ಥೆಯನ್ನು ತಿಳಿಯುವದಕ್ಕೆ ಉಪಾಯವು.

ಆ ಸಾಮಾಜಿಕಾವಸ್ಥೆಯನ್ನು ತಿಳಿಯಲನೇಕ ಉಪಾಯವುಂಟು. ಅವುಗಳಲ್ಲಿ ಮೊದಲನೇದು, ವೇದ; ಎರಡನೇದು, ಸ್ಮೃತಿ; ಮೂರನೇದು, ಪುರಾಣ; ನಾಲ್ಕನೇದು, ತಂತ್ರ; ಇವಾಗಿವೆ. ಆದರೆ ಈ ಸಕಲ ಗ್ರಂಥಗಳಲ್ಲಿಯೂ ಸ್ತ್ರೀಯರ ಸಾಮಾಜಿಕಾವಸ್ಥೆಯನ್ನು ಏಕತ್ರ ವರ್ಣನೆಮಾಡಿಲ್ಲವು. ಕೆಲ ಕೆಲ ಭಾಗಗಳಲ್ಲಿದ ಸ್ವಲ್ಪ ಸ್ವಲ್ಪ ವರ್ಣಿಸಿರುವದನ್ನು ನೋಡಿ ಸಂಗ್ರಹಿಸ ಬೇಕಾಗಿದೆ. ವಿಶೇಷವಾಗಿ ಪುರಾಣದಲ್ಲಿ ಅನೇಕ ಅಂಶಗಳು ಕವಿಕಲ್ಪನಾ ಸಂಭೂತವಾ

ದವುಗಳು. ಆದಕಾರಣ ಅದು ಸಮಾಜದ ಕೇವಲ ಸ್ವಾಭಾವಿಕವಾದ ಚಿತ್ರವೆಂದು ಹೇಳುವದಕ್ಕಾಗುವದಿಲ್ಲ. ವೇದ ಮತ್ತು ತಂತ್ರವು ಉಪಾಸನ ವಿಧಾನಗಳಿಂದಲೂ ಮತ್ತು ಇತರ ಧರ್ಮ ಸಂಬಂಧವಾದ ಕಥೆಗಳಿಂದಲೂ ಪರಿಪೂರ್ಣವಾಗ್ಯವೆ. ಆದರೆ ಸ್ಮೃತಿ ಸಂಹಿತೆಗಳಲ್ಲಿ ಸ್ವಭಾವ ಸಿದ್ಧವಾದ ಸಮಾಜದ ಯಥಾರ್ಥ ವಿವರಣೆಯು ಸಿಕ್ಕಬಹುದು. ಯಾತಕ್ಕಂದರೆ, ವರ್ಣಾಶ್ರಮ ಧರ್ಮಗಳನ್ನು ವರ್ಣನೆ ಮಾಡುವದು ಸ್ಮೃತಿಗಳುದ್ದೇಶ್ಯವು. ಆತಏವ, ಸ್ಮೃತಿಗಳಿಂದಲೇ ವಿಶೇಷವಾಗಿ ಪ್ರಮಾಣಗಳು ಉದಹರಿಸಲ್ಪಡುತ್ತೆ.

ಸ್ತ್ರೀಯನ್ನು ಅತ್ಯಂತ ಜಾಗರೂಕತೆಯಿಂದ ರಕ್ಷಣೆ ಮಾಡತಕ್ಕದ್ದು ಅವಶ್ಯಕವಾದದ್ದು.

ಪ್ರಾಚೀನರಾದ ಋಷಿಗಳು ಸ್ತ್ರೀಯರು ಯಾವಜ್ಜೀವವೂ ಪುರುಷರಿಗೆ ಅಧೀನರಾಗಿರಬೇಕೆಂತಲೂ, ಅವರಿಗೆ ಸ್ವಾತಂತ್ರ್ಯ ಇಲ್ಲವೆಂತಲೂ ಹೇಳಿರುತ್ತಾರೆ. ಇದನ್ನು ಕುರಿತು ಮನು ಮುಂತಾದ ಸಕಲ ಋಷಿಗಳೂ "ನಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಎಂದು ಕಂಠೋಕ್ತವಾಗಿ ಅಂಗೀಕರಿಸಿರುತ್ತಾರೆ. ಸ್ತ್ರೀಯರ ಸಂರಕ್ಷಣೆಯನ್ನು ಕುರಿತು, ಮನುವು, ಸ್ತ್ರೀಯರ ಸಂರಕ್ಷಕರು ಅವರನ್ನು ಯಾವಾಗಲೂ ತಮ್ಮ ಅಧೀನದಲ್ಲಿಟ್ಟುಕೊಂಡಿರಬೇಕು, ಸ್ತ್ರೀಯರು ನಿಯಮಿತ ವಿಶ್ರಾಮ ಸಮಯದಲ್ಲಿ ಹೊರತು ಮಿಕ್ಕ ಕಾಲದಲ್ಲಿ ಅವರ ಸಂರಕ್ಷಕರ ಆಜ್ಞಾನುಸಾರ ಗೃಹ ಕಾರ್ಯವನ್ನು ನೆರವೇರಿಸುತಲಿರಬೇಕು ಎಂದು ಹೇಳಿರುತ್ತಾನೆ. ಯಾಜ್ಞವಲ್ಕ್ಯನು, ಬಾಲ್ಯದಲ್ಲಿ ತಂದೆ ತಾಯಿಗಳೂ, ಯೌವನದಲ್ಲಿ ಪತಿಯೂ, ವಾರ್ಧಿಕ್ಯದಲ್ಲಿ ಪುತ್ರರು ಸ್ತ್ರೀಯರ ಸಂರಕ್ಷಣೆಯನ್ನು ಮಾಡಬೇಕು; ಸ್ತ್ರೀಯರಿಗೆ ಯಾವಾಗಲೂ ಸ್ವಾತಂತ್ರ್ಯವಿಲ್ಲವೆಂದು ಹೇಳಿರುತ್ತಾನೆ. ಬೃಹಸ್ಪತಿಯು, ಅತ್ತೆ ಅಥವಾ ಮತ್ತ್ಯಾರಾದರೂ ವೃದ್ಧಳಾದ ಹೆಂಗಸು ತರುಣ ವಯಸ್ಕಳಾದ ಸ್ತ್ರೀಯನ್ನು ಸರ್ವದಾ ನೋಡಿಕೊಂಡಿರಬೇಕೆಂದು ಹೇಳಿದ್ದಾನೆ. ನಾರದನು, ಗಂಡನ ವಂಶದವರು ಯಾರೂ ಇಲ್ಲದಿದ್ದರೆ ಅಥವಾ ಆವನ ಜ್ಞಾತಿಗಳು ಅವಳ ರಕ್ಷಣೆಯನ್ನು ಮಾಡ

ಲು ಸಮರ್ಥರಾಗದೆ ಇದ್ದರೆ ಅವಳು ತನ್ನ ಪಿತೃವಂಶದವರನ್ನು ಆಶ್ರಯ ಮಾಡಬೇಕು; ಪಿತೃವಂಶದವರು ಯಾರೂ ಇಲ್ಲದೆ ಹೋದರೆ ರಾಜನು ಆ ಅನಾಥಳಾದ ಹೆಂಗಸಿನ ರಕ್ಷಕನಾಗಬೇಕು; ಅಂತಾ ಹೆಂಗಸು ಒಂದು ವೇಳೆ ಧರ್ಮ ವಿರುದ್ಧವಾದ ಕೆಲಸವನ್ನು ಮಾಡಿದರೆ ರಾಜನು ಅವಳನ್ನು ಶಿಕ್ಷಿಸಬೇಕು ಎಂದು ಹೇಳಿದ್ದಾನೆ. ಪೈಠೀನಸಿಯೆಂಬ ಸ್ಮೃತಿ ಕರ್ತನು "ಸ್ತ್ರೀಯನ್ನು ಸರ್ವದಾ ಬಹುಜಾಗರೂಕತೆಯಿಂದ ರಕ್ಷಿಸಬೇಕು" ಎಂದು ಹೇಳಿರುತ್ತಾನೆ. ಈ ವಚನಗಳನ್ನೆಲ್ಲಾ ನೋಡಿದರೆ ಋಷಿಗಳೆಲ್ಲರೂ ಪರಮಪ್ರಯತ್ನ ಪೂರ್ವಕವಾಗಿ ಸ್ತ್ರೀಯರನ್ನು ಬಹು ಜಾಗರೂಕತೆಯಿಂದ ಕಾಪಾಡಬೇಕೆಂದು ವ್ಯವಸ್ಥೆ ಮಾಡಿರುವ ಹಾಗೆ ಸ್ಪಷ್ಟವಾಗಿ ತಿಳಿಯಬರುತ್ತೆ. ಆದರೆ ಮಹಾಭಾರತದಲ್ಲಿ ನೋಡಿದರೆ ಕೆಲವು ಕಾಲದಲ್ಲಿ ಸ್ತ್ರೀಯರು ಪುರುಷರ ಹಾಗೆಯೇ ಸರ್ವ ಪ್ರಕಾರದಿಂದಲೂ ಸ್ವಾತಂತ್ರ್ಯವುಳ್ಳವರಾಗಿದ್ದರೆಂದು ಕಾಣುತ್ತದೆ.

ಸ್ತ್ರೀಯರು ಅವರೋಧವರ್ತಿನಿಗಳಾಗಿರಲಿಲ್ಲ.

ಸ್ತ್ರೀಯರ ಸಂರಕ್ಷಣೆಯ ವಿಚಾರವಾಗಿ ಋಷಿಗಳು ಇಷ್ಟು ಕುತೂಹಲವುಳ್ಳವರಾಗಿದ್ದರೂ, ಅವರು ಅವರನ್ನ ಅವರೋಧವರ್ತಿನಿಗಳನ್ನಾಗಿ (ಅಂದರೆ ಗೋಷೆಯಲ್ಲಿ) ಇಟ್ಟಿದ್ದರೆಂದು ಯಾವ ಪ್ರಮಾಣವೂ ಒದುಗುವದಿಲ್ಲ. ಅವರೋಧವರ್ತಿನಿಗಳಾಗಿರಲಿಲ್ಲವೆಂಬುವದಕ್ಕೆ ಅನೇಕ ದೃಷ್ಟಾಂತರಗಳುಂಟು. ಅವ್ಯಾವಂದರೆ, ಸೀತೆಯು ರಾಮನ ಸಂಗಡ ವನ ಸಂಚಾರ ಮಾಡಿದಳು; ದ್ರೌಪದಿಯು ಪಂಚಪಾಂಡವರ ಸಂಗಡ ವನವಾಸದಲ್ಲಿ ಸಂಚಾರ ಮಾಡಿ, ಅಜ್ಞಾತ ವಾಸದಲ್ಲಿಯೂ ಇದ್ದಳು. ಬ್ರಾಹ್ಮಣ ಕನ್ಯೆಯರು ಯಾವಾಗಲೂ ಅವರೋಧವರ್ತಿನಿಗಳಾಗಿರಲಿಲ್ಲ; ಈಗಲೂ ಇಲ್ಲ. ಮಹಾ ಭಾರತದಲ್ಲಿ ದೇವಯಾನಿಯ ಉಪಾಖ್ಯಾನವನ್ನು ಓದಿದರೆ ಇದು ಚನ್ನಾಗಿ ತಿಳಿಯ ಬರುತ್ತದೆ. ಕಾವ್ಯ ಗ್ರಂಥಗಳಲ್ಲಿ ಮಾತ್ರ "ಶುದ್ಧಾಂತ" "ಅಂತಃಪುರ" "ಅವರೋಧ" ಎಂಬೀ ಶಬ್ದಗಳ ಪ್ರಯೋಗದಿಂದ ಕ್ಷತ್ರಿಯ ರಾಜರ ಮಹಿಷಿಯರು

ಅವರೋಧವರ್ತಿನಿಗಳಾಗಿದ್ದರೆಂದು ಮಾತ್ರ ಬೋಧೆಯಾಗುತ್ತದೆ. ಏಳೆಂಟು ಶತ ಸಂಖ್ಯಾಕ ಪತ್ನಿಯರನ್ನು ವಿವಾಹ ಮಾಡಿಕೊಂಡರೆ ಅಂತವರಿಗೆ ಮಾತ್ರ ಅವಶ್ಯಕವಾಗಿ ಅವರೋಧವು ಪ್ರಯೋಜನವಾಗಿತ್ತೆಂದು ಯೋಚಿಸ ಬಹುದು. ಆದರೆ ಆರ್ಯ ಕುಲದವರು ಪ್ರಾಯಃ ಒಬ್ಬ ಹೆಂಗಸನ್ನು ಮಾತ್ರ ಮದುವೆ ಮಾಡಿಕೊಳ್ಳುತ್ತಿದ್ದ ಕಾರಣ, ಅವರು ನಿರ್ಮಲವಾದ ಗಾರ್ಹಸ್ಥ್ಯ ಸುಖಾಧಿಕಾರಿಗಳಾಗಿದ್ದರು. ಅವರು ತಮ್ಮ ಪತ್ನಿಯರನ್ನು ಯಾವಾಗಲೂ ಚನ್ನಾಗಿ ಆದರದಿಂದ ನೋಡಿಕೊಳ್ಳುತ್ತಿದ್ದರು. ಈ ಅಂಶದಲ್ಲಿ ಮನುವು, ಯಾವ ಮನೆಯಲ್ಲಿ ಹೆಂಗಸರು ಅಸಂತುಷ್ಟರಾಗುವರೋ, ಆ ಮನೆಯಲ್ಲಿ ಯಾವಾಗಲೂ ಮಂಗಳವಿರುವದಿಲ್ಲವೆಂದು ಹೇಳಿದ್ದಾನೆ. ಸ್ತ್ರೀಯರು ಅವರೋಧವರ್ತಿನಿಯರಾಗಿರಲಿಲ್ಲ ವೆಂಬುವದಕ್ಕೆ ಮತ್ತೊಂದು ದೃಷ್ಟಾಂತವೇನಂದರೆ;—ಅರುಂಧತಿಯು ಸರ್ವದಾ ಸಪ್ತ ಋಷಿಗಳ ಸಂಗಡಲೇ ಇರುತ್ತಾಳೆಂದು ಹೇಳಲ್ಪಟ್ಟದೆ. ರಾಜರ ಪಟ್ಟ ಮಹಿಷಿಗಳು ಪ್ರಾಯಶಃ ಸಿಂಹಾಸನಾರ್ಧ ಭಾಗಿನೀಯರಾಗಿದ್ದರು. ಮತ್ತು "ಸಸ್ತ್ರೀಕೋ ಧರ್ಮಮಾಚರೇತ್" ಎಂಬದಾಗಿ ನಿಯಮವಿರುವದರಿಂದ, ಪ್ರಾಯಃ ಸಕಲ ಧರ್ಮಕರ್ಮಗಳಲ್ಲಿಯೂ ಪತ್ನಿಯರಿಗೆ ಗಂಡನೊಂದಿಗೆ ಸಭೆಯಲ್ಲಿ ಧಾರಾಳವಾಗಿ ಪ್ರವೇಶ ವುಂಟು. ಸ್ತ್ರೀಯರು ಯಾವ ಕಾಲದಲ್ಲಿ ನಿರ್ಬಂಧದಲ್ಲಿರಬೇಕೆಂಬದನ್ನು ಕುರಿತು ಯಾಜ್ಞವಲ್ಕ್ಯನು ಹೇಳಿರುವದೇನಂದರೆ :—

ಕ್ರೀಡಾಂಶರೀರಸಂಸ್ಕಾರಂ ಸಮಾಜೋತ್ಸವದರ್ಶನಂ।
ಹಾಸ್ಯಂ ಪರಗೃಹೇಯಾನಂತ್ಯಜೇತ್ಪ್ರೋಷಿತಭರ್ತೃಕಾ॥

ಎಂದು ವಿಧಿಯನ್ನು ಮಾಡಿರುವದ್ದರಿಂದ, ಸ್ವಾಮಿಯು ವಿದೇಶಕ್ಕೆ ಹೋಗಿರುವಾಗ್ಯೆ ಸ್ತ್ರೀಯು ಪರಗೃಹಕ್ಕೆ ಹೋಗಕೂಡದು, ಯಾವ ಸಮಾಜದಲ್ಲಿಯೂ ಶೇರಬಾರದು, ಯಾವ ಉತ್ಸವವನ್ನೂ ಹೋಗಿ ನೋಡಕೂಡದು, ಕ್ರೀಡಾ ಕುತೂಹಲಳಾಗಕೂಡದು, ಹಾಸ್ಯವನ್ನು ಮಾಡಲಾಗದು, ಶರೀರ ಸಂಸ್ಕಾರವನ್ನು ಮಾಡಿಕೊಳ್ಳಕೂಡದು.

ಇದರಿಂದ ತೋರಿಬರುವದೇನಂದರೆ, ಪತಿಯು ಗೃಹದಲ್ಲಿದ್ದರೆ ಸ್ತ್ರೀಯು ಆತನ ಅನುಮತಿಯನ್ನು ಪಡೆದು ಸರ್ವತ್ರ ಹೋಗಿ ಬರಬಹುದಾಗಿತ್ತೆಂಬುವದಕ್ಕೆ ಸಂದೇಹ ಕಾಣುವದಿಲ್ಲ.

ಸ್ತ್ರೀಯರ ವಿದ್ಯಾಶಿಕ್ಷೆಯು. "ಕನ್ಯಾಪ್ಯೇವಂಪಾಲನೀಯಾ ಶಿಕ್ಷಣೀಯಾತಿಯತ್ನತಃ" ಅಂದರೆ, ಯಾವ ರೀತಿಯಾಗಿ ಪುತ್ರರಿಗೆ ವಿದ್ಯೆಯನ್ನು ಕಲಿಸಬೇಕಾದದ್ದು ಅವಶ್ಯಕವೋ, ಅದೇ ರೀತಿಯಾಗಿ ಕನ್ಯೆಯೂ ವಿದ್ಯಾ ಶಿಕ್ಷೆಯನ್ನು ಹೊಂದಲು ಅರ್ಹಳಾಗಿರುತ್ತಾಳೆ. ಈ ಶಿಕ್ಷೆಯು ಕಷ್ಟವಾದ ವೇದವನ್ನು ಹೊರತು ಸ್ತ್ರೀಯರು ಸಕಲ ಶಾಸ್ತ್ರಗಳನ್ನೂ ತಿಳಿಯಲು ಅಧಿಕಾರಿಗಳಾದ್ದರಿಂದ, ವೇದವನ್ನು ಹೊರತು ಮಿಕ್ಕ ಶಾಸ್ತ್ರಗಳನ್ನೆಲ್ಲಾ ಅಡಿಗಿಸಿಕ್ಕೊಂಡಿರುತ್ತದೆ. ಆದರೆ ಗಾರ್ಗೀ ಮೊದಲಾದ ಪುರಾತನರಾದ ಸ್ತ್ರೀಯರು ವೇದವನ್ನು ಕೂಡ ಸಂಪೂರ್ಣವಾಗಿ ಅಧ್ಯಯನ ಮಾಡಿದ್ದರು ; ಒಂದು ಕಡೆಯಲ್ಲಿ ಯಾಜ್ಞವಲ್ಕ್ಯನು ಸ್ತ್ರೀಯರಿಗೆ ವೇದವನ್ನು ಉಪದೇಶ ಮಾಡಿರುವದಾಗಿ ಹೇಳಲ್ಪಟ್ಟದೆ. ವೇದದಲ್ಲಿ ಕರ್ಮ ಕಾಂಡವೆಂತಲೂ ಜ್ಞಾನ ಕಾಂಡವೆಂತಲೂ ಎರಡು ಭಾಗಗಳಿವೆ ; ಇವುಗಳಲ್ಲಿ ಜ್ಞಾನ ಕಾಂಡವು ಅತಿ ದುರೂಹವಾದದ್ದು. ಆದರೆ ಗಾರ್ಗಿಯು ಯಾಜ್ಞವಲ್ಕ್ಯನಲ್ಲಿ ಜ್ಞಾನ ಕಾಂಡದಲ್ಲಿಯೇ ಉಪದೇಶವನ್ನು ಹೊಂದಿದಳು. ಭವಭೂತಿ ರಚಿತ ಉತ್ತರ ಚರಿತ ನಾಟಕದಲ್ಲಿ ಬಬ್ಬಳು ತಾಪಸೀಯು ವೇದದಲ್ಲಿ ಜ್ಞಾನ ಕಾಂಡವನ್ನು ಅಧ್ಯಯನ ಮಾಡುವದಕ್ಕೋಸ್ಕರ ವಾಲ್ಮೀಕಿ ಮುನಿಗಳ ಆಶ್ರಮದಿಂದ ಬೇರೆ ಆಶ್ರಮಕ್ಕೆ ಹೋಗಿದ್ದಳೆಂದು ಉದಾಹೃತವಾಗಿದೆ. ಆ ಮಹಾ ಕವಿಯು ಮತ್ತೊಂದು ನಾಟಕದಲ್ಲಿ ಕಾಮಂದಕೀ ಯೆಂಬುವಳು ಭೂರಿವಸು ಮತ್ತು ದೇವರಾತ ಎಂಬ ಇಬ್ಬರು ಪ್ರಸಿದ್ಧರಾದ ಮಂತ್ರಿಗಳೊಂದಿಗೆ ಸಹಾಧ್ಯಾಯಿನಿಯಾಗಿದ್ದಳೆಂದು ಕಂಡು ಬರುತ್ತದೆ. ಕಾಮಂದಕಿಯು ಬೌದ್ಧಮತದವಳಾಗಿದ್ದ ಕಾರಣ ಆರೀತಿ ಆ ಮಂತ್ರಿಗಳೊಂದಿಗೆ ವಿದ್ಯಾಭ್ಯಾಸ ಮಾಡುವದಕ್ಕೆ ಅವಕಾಶವಾಯಿತೆಂದು ಅನೇಕರು ಚರ್ಚಿಸುವರು, ಆದರೆ, ಆ

ವಳು ವಿದ್ಯಾಭ್ಯಾಸ ಮಾಡುತಲಿದ್ದ ಸಮಯದಲ್ಲಿ ಅವಳು ಬೌದ್ಧಮತವನ್ನು ಅವಲಂಬಿಸಿರಲಿಲ್ಲವು. ಮಾಳವಿಕಾಗ್ನಿ ಮಿತ್ರವೆಂಬ ನಾಟಕದಲ್ಲಿ ಪಂಡಿತಳಾದ ಕೌಶಿಕಿ ಯೆಂಬುವಳು ಅವಳ ವಿದ್ಯಾ ಪಾಂಡಿತ್ಯ ಪ್ರಭಾವದಿಂದ ಪಂಡಿತಳೆಂಬ ಬಿರದನ್ನು ಪಡೆದಿದ್ದಳು. ಅವಳು ಬಾಲ್ಯದಲ್ಲಿ ಹಿಂದೂ ಮತದವಳಾಗಿದ್ದಳೆಂಬುವದಕ್ಕೆ ಯಾವ ಸಂದೇಹವೂ ಇಲ್ಲ. ಇವುಗಳನ್ನೆಲ್ಲಾ ನೋಡಿದರೆ ಪ್ರಾಚೀನ ಕಾಲದಲ್ಲಿ ಸ್ತ್ರೀಯರೂ ಪುರುಷರೂ ಸಮಾನವಾಗಿ ವಿದ್ಯಾಭ್ಯಾಸ ಮಾಡುತಲಿದ್ದರೆಂದು ವ್ಯಕ್ತವಾಗುತ್ತದೆ. ಆದದ್ದರಿಂದ ನಮ್ಮ ದೇಶೀಯರು ಸ್ತ್ರೀಯರನ್ನು ವಿದ್ಯೆ ಕಲಿಯಕೂಡದೆಂದು ನಿಷೇಧಿಸುವದಕ್ಕೆ ಯಾವ ಕಾರಣವೂ ಕಂಡುಬರುವದಿಲ್ಲವು. ಪಾರ್ವತಿಯು ಬಾಲ್ಯ ಕಾಲದಲ್ಲಿಯೇ ನಾನಾ ವಿದ್ಯೆಯಲ್ಲಿ ಪಾರಂಗತಳಾಗಿದ್ದಳು. ವಿದ್ಯೆ ವಿಷಯದಲ್ಲಿ ಸ್ತ್ರೀಯರು ಎಷ್ಟು ದೂರ ಅಭಿವೃದ್ಧಿಯನ್ನು ಹೊಂದಿದ್ದರೆಂಬುವದನ್ನ ಈ ಕೆಳಗೆ ಬರಿಯುವ ಉದಾಹರಣೆಗಳಿಂದ ಚನ್ನಾಗಿ ತಿಳಿಯಬಹುದು.

ವಿಶ್ವದೇವಿ ಗಂಗಾ ಎಂಬುವಳು ವಾಕ್ಯಾವಳಿ ಎಂಬ ಹೆಸರುಳ್ಳ ಒಂದು ಸ್ಮೃತಿಸಂಗ್ರಹವನ್ನು ರಚನೆ ಮಾಡಿದ್ದಾಳೆ. ಲಕ್ಷ್ಮಿದೇವಿ ಯೆಂಬುವಳಿಂದ ಮಾಡಲ್ಪಟ್ಟ ಮಿತಾಕ್ಷರ ವ್ಯಾಖ್ಯಾನವು ಈಗಲೂ ಪ್ರಚುರವಾಗಿದೆ. ಉದಯನಾಚಾರ್ಯರ ಮಗಳು ಲೀಲಾವತಿ ಎಂಬುವಳು ವಿದ್ಯಾ ಪಾರಂಗತಳೆಂದು ಪ್ರಸಿದ್ಧಳಾಗಿದ್ದಾಳೆ. ಶಂಕರ ವಿಜಯದ ಕಡೇ ಭಾಗದಲ್ಲಿ ಶಂಕರಾಚಾರ್ಯರು ಮಂಡನ ಮಿಶ್ರನೊಡನೆ ಪ್ರಸಂಗವನ್ನು ಮಾಡಿದಾಗ ಮಂಡನ ಮಿಶ್ರನ ಹೆಂಡತಿಯಾದ ಸಾರಸವಾಣಿಯು ಅಪರವರ ಪ್ರಸಂಗ ವಿಚಾರದಲ್ಲಿ ಮಧ್ಯಸ್ಥಳಾಗಿದ್ದಳೆಂದು ಉದಹರಿಸಲ್ಪಟ್ಟದೆ. ಕರ್ನಾಟ ದೇಶದ ರಾಜನ ಪಟ್ಟಮಹಿಷಿಯು ಕವಿತ್ವ ವಿಷಯದಲ್ಲಿ ಕಾಳಿದಾಸನಿಗೆ ಎದುರಾಳಿಯಾಗಿದ್ದಳು. ಬಲ್ಲಾಳ ಸೇನನ ಸೊಸೆಯು ಕವಿತಾ ವಿಚಾರದಲ್ಲಿ ಅತಿ ಪ್ರೌಢಳಾಗಿದ್ದಳೆಂದು ಪ್ರಸಿದ್ಧವಾಗಿದೆ. ಸದುಕ್ತಿ ಕರ್ಣಾಮೃತವೆಂಬ ಗ್ರಂಥವು ೧೨೦೫ ಕ್ರೀಸ್ತ ಶತಕದಲ್ಲಿ ರಚಿತವಾದ್ದು; ಅದರಲ್ಲಿ ಆ ಕಾಲದಲ್ಲಿ ಪ್ರಸಿದ್ಧರಾಗಿದ್ದ ಕವಿ

ಗಳ ಕವಿತ್ವವು ಉದಹರಿಸಲ್ಪಟ್ಟದೆ. ಈ ಕವಿಗಳ ಗುಂಪಿನಲ್ಲಿ ಭಾವ ದೇವಿ, ಚಂಡಾಲವಿದ್ಯಾ ಸಾಟೋಪಾ, ಶಿಲಾ, ಭಟ್ಟಾರಿಕಾ, ವಿದ್ಯಾ, ವಿಜಯಾ, ವಿಕಟನಿತಂಬಾ, ವ್ಯಾಸಪಾದಾ, ಇವರ ಹೆಸರುಗಳು ಉದ್ಧೃತವಾಗಿವೆ; ಇವರೆಲ್ಲರೂ ಆ ಕಾಲದಲ್ಲಿ ಕವಿಗಳೆಂದು ಪ್ರಸಿದ್ಧರಾಗಿದ್ದರು.

ಸ್ತ್ರೀಯರ ವಿವಾಹವು. ತಂದೆಯು ಉಪಯುಕ್ತ ವರನಿಗೆ ಕನ್ಯಾಪ್ರದಾನ ಮಾಡಬೇಕೆಂದು ಸಕಲ ಮುನಿಗಳ ಮತವು. ಆದರೆ ಕನ್ಯಾವಸ್ಥೆಯು ಮೀರಿದರೂ ತಂದೆಯು ಮದುವೆ ಮಾಡುವದಕ್ಕೆ ಪ್ರಯತ್ನ ಪಡದಿದ್ದರೆ ಕನ್ಯೆಯು ಅವಳಿಗೆ ಇಷ್ಟವಿದ್ದವನನ್ನ ಲಗ್ನ ಮಾಡಿ ಕೊಳ್ಳ ಬಹುದು. ಇದು ಮನು ವಚನವು. ಉಪಯುಕ್ತ ವರನಲ್ಲಿ ಕನ್ಯಾಪ್ರದಾನ ಮಾಡಿದರೆ ಅಕ್ಷಯವಾದ ಸ್ವರ್ಗ ಲಾಭವಾಗುವದೆಂತಲೂ, ಇಲ್ಲದಿದ್ದರೆ ನರಕಪ್ರಾಪ್ತಿ ಯಾಗುತ್ತೆಂತಲೂ, ವಿಧಿ ಯಿರುವಣದರಿಂದ ಅನುಪಯುಕ್ತ ಪಾತ್ರನಲ್ಲಿ ಕನ್ಯಾಪ್ರದಾನವು ಪ್ರಾಯಶಃ ಸಂಘಟನೆ ಯಾಗುವದಿಲ್ಲವು. ವಿಶೇಷವಾಗಿ, ಯಾಜ್ಞವಲ್ಕ್ಯನು ವರನ ಗುಣಾಗುಣ ವಿಚಾರವಾಗಿ ವಿಧಿಸಿರುವ ಕಠಿಣವಾದ ನಿಯಮದಿಂದ ಅಪಾತ್ರನಲ್ಲಿ ಕನ್ಯಾದಾನವಾಗುವದು ಅಪರೂಪವೆಂದು ಖಂಡಿತವಾಗಿ ಹೇಳಬಹುದು. ಯಾಜ್ಞವಲ್ಕ್ಯನು ಹೇಳಿರುವದೇನಂದರೆ.

ಏತೈರೇವಗುಣೈರ್ಯುಕ್ತಃ ಸವರ್ಣಃ ಶ್ರೋತ್ರಿಯೋವರಃ।
ಯತ್ನಾತ್ಪರೀಕ್ಷಿತಃ ಪುಂಸ್ತ್ವೆಯುವಾಧೀಮಾನ್ಜನಪ್ರಿಯಃ॥

ಯಾಜ್ಞವಲ್ಕ್ಯ ಸಂಹಿತೆಗೆ ಪ್ರಸಿದ್ಧವಾದ ವ್ಯಾಖ್ಯಾನವಾದ ಮಿತಾಕ್ಷರವೆಂಬ ಗ್ರಂಥದಲ್ಲಿ ಈ ಮೇಲಿನ ವಚನಕ್ಕೆ ವಿಶೇಷವಾಗಿ ವ್ಯಾಖ್ಯಾ ಮಾಡಿರುತ್ತೆ. ಹ್ಯಾಗೆಂದರೆ, ‘‘ಯುವಾ’’ ಅಂದರೆ, ತಂದೆಯು ವಯಸ್ಸು ಹೋದವನಿಗೆ ಕನ್ಯಾಪ್ರದಾನ ಮಾಡಕೂಡದು, ‘‘ಧೀಮಾನ್’’ ಅಂದರೆ, ಜಡಮತಿಯಾದ ವೇದಾರ್ಥ ತಿಳಿಯಲಸಮರ್ಥನಾದವನು ವಿವಾಹಕ್ಕೆ ಅರ್ಹನಲ್ಲ. ‘‘ಜನಪ್ರಿಯಃ’’ ಅಂದರೆ ಕರ್ಕಶ ಸ್ವಭಾವವುಳ್ಳವನಿಗೆ ಕನ್ಯಾದಾನವು ನಿಷೇಧವಾದದ್ದು, ಎಂದು ಮುಂ

ತಾಗಿ ವಿವರವಾಗಿ ವ್ಯಾಖ್ಯಾನವಿದೆ. ಈ ವಚನಗಳನ್ನು ನೋಡಿದರೆ ಆ ಕಾಲದಲ್ಲಿ ವರ ಪರೀಕ್ಷೆಯ ನಿಯಮವು ಇತ್ತೆಂದು ವ್ಯಕ್ತವಾಗುತ್ತದೆ. ವರನು ಸರ್ವ ಪ್ರಕಾರದಿಂದಲೂ ಶಾಸ್ತ್ರ ಸಮ್ಮತನಾಗಿದ್ದು, ಅಂತವನಿಗೆ ಕನ್ಯಾಪ್ರದಾನ ಮಾಡಿದರೇನೇ ತಂದೆಗೆ ಪುಣ್ಯ ವುಂಟು, ಇಲ್ಲದಿದ್ದರೆ ನರಕ ಪ್ರಾಪ್ತಿಯಾಗುವದು. ಮನುವು ಶಾಸ್ತ್ರಾನುಮೋದಿತ ವರನು ಸಿಕ್ಕದಿದ್ದರೆ ಕನ್ಯೆಯು ಯಾವಜ್ಜೀವವೂ ತಂದೆಯ ಮನೆಯಲ್ಲಿಯೇ ಇದ್ದರೂ ಒಳ್ಳೇದೇ ಹೊರತು ಅನುಪಯುಕ್ತ ವರನಿಗೆ ಕನ್ಯಾದಾನ ಮಾಡಕೂಡದೆಂದು ಹೇಳಿದ್ದಾನೆ.

ಸ್ತ್ರೀಯರ ವಿಚಾರದಲ್ಲಿ ನಡೆದುಕೊಳ್ಳ ಬೇಕಾದ ರೀತಿ.

ಬಹು ಕಲ್ಯಾಣವನ್ನು ಕೋರುವ ತಂದೆ, ತಾಯಿ, ಗಂಡ, ಅಣ್ಣ, ತಮ್ಮ ಭಾವಮೈದ ಮುಂತಾದವರು ಸ್ತ್ರೀಯರನ್ನು ಸಮ್ಮಾನ ಮಾಡಬೇಕಲ್ಲದೆ, ಅವರನ್ನು ವಸ್ತ್ರಾಭರಣಗಳಿಂದ ಸಂತುಷ್ಟ ಪಡಿಸಬೇಕು (1). ಎಲ್ಲಿ ಸ್ತ್ರೀಯರಿಗೆ ಸಮ್ಮಾನ ಮಾಡುವರೋ ಅಲ್ಲಿ ದೇವತೆಗಳು ಸಂತುಷ್ಟರಾಗುವರು. ಯಾರು ಸ್ತ್ರೀಯರಿಗೆ ಅವಮಾನ ಮಾಡುವರೋ ಅವರ ಸಕಲ ಕಾರ್ಯಗಳೂ ನಿಷ್ಫಲವಾಗುವವೆಂದು ಮನು ವಚನವಿದೆ (2). ಮತ್ತು ಯಾರು ಸ್ತ್ರೀಯರನ್ನ ಶೋಕಾಕುಲರನ್ನಾಗಿ ಮಾಡುವರೋ ಅವರ ಕುಲವು ಶೀಘ್ರವಾಗಿ ನಾಶವನ್ನು ಹೊಂದುವದು; ಎಲ್ಲಿ ಅವರು ಸಂತುಷ್ಟರಾಗಿರುವರೋ, ಅಲ್ಲಿ ಸರ್ವದಾ ಶ್ರೀವೃದ್ಧಿಯಾಗುವದು. ಆದಕಾರಣ ಐಶ್ವರ್ಯವನ್ನು ಅಪೇಕ್ಷಿಸುವರು ಸತ್ಕಾರ್ಯೋತ್ಸವಗಳಿಂದಲೂ, ವಸ್ತ್ರ ಭೂಷಣಾದಿಗಳಿಂದಲೂ ಸ್ತ್ರೀಯರನ್ನು "ಪೂಜೆ" ಮಾಡುವರು. "ಯಾವ ಮಂದಿರದಲ್ಲಿ ಪತಿ ಪತ್ನಿಯು

---

(1). ಪಿತೃಭಿರ್ಭ್ರಾತೃಭಿಶ್ಚೈವ ಪತಿಭಿರ್ದೇವರೈಸ್ತಥಾ । ಪೂಜ್ಯಾಭೂಷಯಿತವ್ಯಾಶ್ಚ ಬಹುಕಲ್ಯಾಣಮೀಪ್ಸುಭಿಃ ॥

(2). ಯತ್ರನಾರ್ಯಸ್ತು ಪೂಜ್ಯಂತೆ ರಮಂತೆ ತತ್ರದೇವತಾಃ। ಯತ್ರೈತಾಸ್ತುನ ಪೂಜ್ಯಂತೆ ಸರ್ವಾಸ್ತತ್ರಾಫಲಾಃಕ್ರಿಯಾಃ ॥

ರು, ಪರಸ್ಪರ ಸಂತೋಷ ಪಡಿಸುವರೋ, ಆ ಮಂದಿರದಲ್ಲಿ ಬಹು ಮಂಗಳ ವುಂಟಾಗುವದು" ಎಂದು ಮುಂತಾಗಿ ವಿಧಿಸಿರುವ ಮನು ಸ್ಮೃತಿ ವಚನಗಳನ್ನು ಓದಿದರೆ ಪೂರ್ವ ಕಾಲದಲ್ಲಿಯೂ ಸ್ತ್ರೀಯರನ್ನು ಸನ್ಮಾನಿಸುತ್ತಿದ್ದರಲ್ಲದೆ, ಆಭರಣಾದಿಗಳಿಂದಲೂ ಸಂತೋಷ ಪಡಿಸುತಲಿದ್ದರೆಂದು ತಿಳಿಯ ಬರುತ್ತೆ. ಇದಲ್ಲದೆ, ತಾಯಿ ತಂದೆಗಳಿಗಿಂತಲೂ ಸಹಸ್ರಗುಣ ಹೆಚ್ಚಾಗಿ ಪೂಜನೀಯಳಾದ ಭಾರ್ಯೆಯು ಪುರುಷನ ಅರ್ಧಾಂಗಿಣಿಯಾಗಿರುತ್ತಾಳೆ. ಆದದ್ದರಿಂದ ಪತಿಯು ಪತ್ನಿಗೆ ಅನ್ಯಾಯವನ್ನು ಆಚರಿಸುವದು ಸರ್ವಪ್ರಕಾರದಿಂದಲೂ ಯುಕ್ತವಾದದ್ದಲ್ಲವು. ಈ ದೇಶೀಯರಾದ (ಬಂಗಾಳೀಯವರಾದ) "ಕುಲೀನ" ಬ್ರಾಹ್ಮಣರಲ್ಲಿ ಕನ್ಯಾ ಜನನವಾದರೆ ಬಹಳ ಅಸಂತುಷ್ಟರಾಗುವರು; ರಾಜಪುತಾನ ದೇಶದ ರಾಜಪೂತರಲ್ಲಿ ಬಾಲಿಕಾ ಹತ್ಯವು ಪ್ರಸಿದ್ಧವಾಗಿತ್ತು. ಆದರೆ ಮನುವು "ಕನ್ಯಾಪ್ಯೇವಂಪಾಲನೀಯಾ ಶಿಕ್ಷಣೀಯಾತಿಯತ್ನತಃ" ಎಂಬದಾಗಿಯೂ, ಮತ್ತೊಬ್ಬ ಋಷಿಯು "ಮಗಳಿಗೂ ಮಗನಿಗೂ ಯಾವ ಭೇದವೂ ಇಲ್ಲ, ಕನ್ಯೆಯನ್ನು ಸತ್ಪಾತ್ರನಲ್ಲಿ ದಾನ ಮಾಡಿದರೆ ಶ್ರೇಷ್ಠವೂ, ಪರಲೋಕದಲ್ಲಿ ಸುಖವೂ ಉಂಟಾಗುವದು" ಎಂತಲೂ ಹೇಳಿರುತ್ತಾರೆ. ಸ್ತ್ರೀಯರಿಗೆ ಶರೀರ ಕಷ್ಟವನ್ನು ಕೊಡುವದು ಅತ್ಯಂತ ಪಾತಕಕಾರಿಯೆಂದು ಈಗಲೂ ಪ್ರಸಿದ್ಧವಾಗಿದೆ. ಗರುಡ ಪುರಾಣದಲ್ಲಿ ತಿರ್ಯಗ್ಜಾತಿಯಲ್ಲಿಯೂ ಸ್ತ್ರೀ ಜಂತುವು ವಧೆಗೆ ಅನರ್ಹವೆಂದು ಹೇಳಿದೆ (1). ಮನುವು ಪರ ಪತ್ನಿಯರನ್ನು ತಂಗಿಯೆಂದು ಸಂಬೋಧಿಸಬೇಕೆಂತಲೂ, ಅಪಸ್ತಂಬ ಋಷಿಯು, ಪರ ಪತ್ನಿಯರನ್ನು ತಾಯಿಯ ಹಾಗೆ ನೋಡಬೇಕೆಂತಲೂ, ಹೇಳಿರುತ್ತಾರೆ. ಸ್ತ್ರೀಯರನ್ನು ಕುರಿತು ಯಾವರೀತಿ ಆಚರಣೆ ಇತ್ತೆಂಬದಕ್ಕೆ ಮೇಲೆ ಉದಹೃತವಾಗಿರುವ ವಚನಗಳನ್ನು ಓದಿದರೆ, ಈಗಿನ ನಾಗಲೀಕತೆಯನ್ನು ಹೊಂದಿದ ಜನರು ಸ್ತ್ರೀಯರ ವಿಚಾರದಲ್ಲಿ ಯಾವರೀತಿಯಾಗಿ ಸನ್ಮಾರ್ಗದಲ್ಲಿ ಆಚರಿಸುತ್ತಾರೋ, ನಮ್ಮ ಪೂರ್ವೀಕರು ಅವರನ್ನು

---

(1). ಅವಧ್ಯಾಂಚಸ್ತ್ರಿಯಾಂ ಪ್ರಾಹುಸ್ತಿರ್ಯಗ್ಜಾತಿಗತೇಷ್ವಪಿ ||

ಕುರಿತು ಅದೇರೀತಿಯಾಗಿ ಆಚರಿಸುತಲಿದ್ದರೆಂದು ಚನ್ನಾಗಿ ತಿಳಿಯ ಬರುತ್ತದೆ. ಆದರೆ "ಸ್ತ್ರೀಯರು ಅತಿಹೇಯ ಪದಾರ್ಥವು, ಅವರು ಹೃದಯದಲ್ಲಿ ವಿಷವುಳ್ಳವರಾಗಿಯೂ, ಮುಖದಲ್ಲಿ ಮಧುರ ಸಂಭಾಷಣೆಯುಳ್ಳವರಾಗಿಯೂ, ಅವರ ಮನಸ್ಸು ತಿಳಿಯಲಸಾಧ್ಯವಾದದ್ದಾಗಿಯೂ ಇರುವದರಿಂದ ಅವರನ್ನು ಪ್ರೀತಿಸಕೂಡದು, ಅವರ ಸಂಗವನ್ನು ಪರಿತ್ಯಜಿಸಬೇಕು" ಎಂದು ಮುಂತಾಗಿ ಬ್ರಹ್ಮಾಂಡ ಪುರಾಣ ಮೊದಲಾದ ಗ್ರಂಥಗಳಲ್ಲಿ ಹೇಳಲ್ಪಟ್ಟಿರುವ ಈ ವಚನಗಳನ್ನು ಸಂಸಾರವನ್ನು ಬಿಟ್ಟ ಯೋಗಿಗಳು ಹೇಳಿದ್ದಾಗಿದೆ. ಯಾತಕ್ಕಂದರೆ, ಅವರು ತಮ್ಮ ಮನುಸ್ಸು ದೇವರನ್ನು ಬಿಟ್ಟು ಬೇರೆ ಕಡೆಯಲ್ಲಿ ಆಸಕ್ತವಾದೀತೆಂತಲೂ, ಸ್ತ್ರೀಯರ ವ್ಯಾಮೋಹದಿಂದ ಸಂಸಾರದಲ್ಲಿ ಬದ್ಧರಾಗುವೆವೆಂಬ ಭಯದಿಂದಲೂ ಈ ರೀತಿಯಾಗಿ ಹೆಂಗಸರನ್ನು ತಿರಸ್ಕರಿಸಿ, ಸರ್ವಸಂಗ ಪರಿತ್ಯಾಗಮಾಡಿ ಅರಣ್ಯವನ್ನು ಆಶ್ರಯಿಸಿರುತ್ತಾರಾದಕಾರಣ, ಇವರು ಹೇಳಿರುವದನ್ನ ನೋಡಿದವರಾಗಿ ನಮ್ಮ ಪೂರ್ವೀಕರು ಯಾರೂ ಸ್ತ್ರೀಯರನ್ನು ನಿರಾಕರಿಸಿ, ಅವರ ವಿಚಾರದಲ್ಲಿ ಯಾವ ಅಸದ್ವ್ಯವಹಾರವನ್ನೂ ಮಾಡುತ್ತಿರಲಿಲ್ಲವು. ಯಾಜ್ಞವಲ್ಕ್ಯನು ಮಾಡಿರುವ ನಿಯಮವನ್ನು ನೋಡಿದರೆ ಪ್ರಾಚೀನ ಋಷಿಗಳು ಸ್ತ್ರೀಯರನ್ನು ಅತಿಪವಿತ್ರ ಪದಾರ್ಥವೆಂದು ತಿಳಿದಿದ್ದಹಾಗೆ ತೋರುತ್ತದೆ. ಮತ್ತು ಕಾಶೀ ಖಂಡದಲ್ಲಿ "ಎಲ್ಲಿ ಸ್ತ್ರೀಯರ ಪಾದಸ್ಪರ್ಶವಾಗುವದೋ, ಅಲ್ಲಿ ಭೂದೇವಿಯು, ತಾನು ಪವಿತ್ರಳಾದೆನೆಂದು ತಿಳಿಯುವಳು" ಎಂಬದಾಗಿ ಹೇಳಿದೆ. ಪಾಪಚಾರಿಣಿಯಾದ ಹೆಂಗಸನ್ನು ಹೊರತು ಇತರ ಸಾಮಾನ್ಯರಾದ ಹೆಂಗಸರೂ ಕೂಡ ಪವಿತ್ರರೆಂದು ಗಣ್ಯವಾಗಿದ್ದರು. ಇದಲ್ಲದೆ ಇತರ ಗ್ರಂಥಗಳಲ್ಲಿಯೂ ಹೆಂಗಸರಿಗೆ "ಸೋಮನು ಸುಖವನ್ನುಂಟುಮಾಡುತ್ತಾನೆ, ಗಂಧರ್ವರು ಅವರಿಗೆ ಮಧುರವನ್ನು ಕೊಡುತ್ತಾರೆ, ಅಗ್ನಿಯು ಅವರನ್ನು ಸರ್ವಪ್ರಕಾರದಿಂದಲೂ ಪವಿತ್ರರನ್ನಾಗಿ ಮಾಡುತ್ತಾನೆ; ಆದಕಾರಣ ಅವರು ಸರ್ವಪ್ರಕಾರದಿಂದಲೂ ಪವಿತ್ರರು" ಎಂದು ಹೇಳಲ್ಪಟ್ಟಿದೆ.

ಸ್ತ್ರೀಯರು ಮಾಡಬೇಕಾದ ಕೆಲಸಗಳು.

ಸ್ತ್ರೀಯರು ಮನೋವಾಕ್ಕಾಯಗಳಿಂದ ತಮ್ಮ ಪತಿಯ ಶುಶ್ರೂಷೆಯನ್ನು ಮಾಡಬೇಕಾದದ್ದು ಅವರಿಗೆ ಮುಖ್ಯವಾದ ಕೆಲಸವಾಗಿದೆ. ಗಂಡನು ಕುರಡನಾದರೂ, ಕಿವುಡನಾದರೂ, ಆಚಾರಹೀನನಾದರೂ, ಕಾಮವೃತ್ತನಾದರೂ, ಗುಣರಹಿತನಾದರೂ ಸ್ತ್ರೀಯರಿಗೆ ಆತನೇ ಗುರುವಾಗಿಯೂ, ಪೂಜ್ಯನಾಗಿಯೂ, ಇಷ್ಟದೇವತಾ ಸ್ವರೂಪನಾಗಿಯೂ ಇರುವದರಿಂದ ಪತಿಯನ್ನು ದೇವರಹಾಗೆ ಪೂಜಿಸಬೇಕು (1). ಆತನ ಚರಣ ಸೇವೆಯನ್ನು ಮಾಡಿದರೇನೇ ಸ್ತ್ರೀಯರಿಗೆ ಪರಲೋಕದಲ್ಲಿ ಪರಮಗತಿಯುಂಟಾಗುವದೆಂದು ಮನುವು ವಿಧಿಸಿದ್ದಾನೆ (2). ಪತಿಯನಂತರ ಅತ್ತೆ ಮಾವ, ತಂದೆ ತಾಯಿ ಇವರಗಳ ಸೇವೆಯನ್ನೂ, ಭಾವ ಮೈದಂದಿರ ಪ್ರತಿಪಾಲನೆಯನ್ನೂ ಮಾಡಬೇಕಾದದ್ದು ಅವಶ್ಯಕವು. ಸ್ತ್ರೀಯು ಗ ಹ ಕಾರ್ಯದಲ್ಲಿ ಸಮರ್ಥಳಾಗಿರಬೇಕು, ಹಿಡಿತದಿಂದ ಖರ್ಚು ಮಾಡಬೇಕು (3). ಪತಿ ಮತ್ತು ಪುತ್ರರನ್ನು ಬಿಟ್ಟು ಯಾವಾಗಲೂ ಬೇರೆ ಇರುವದಕ್ಕೆ ಅಪೇಕ್ಷಿಸಕೂಡದು. ಅವಳು ತನ್ನ ಇಷ್ಟಕ್ಕೆ ಬಂದಹಾಗೆ ಕೆಲಸವನ್ನು ಮಾಡುವದು ನಿಂದನೀಯವಾದದ್ದು. ಸ್ತ್ರೀಯರಿಗೆ ವ್ರತ, ಧರ್ಮ, ಉಪಾಸನೆ, ಉಪವಾಸ ಮುಂತಾದ್ದು ಯಾವದೂ ಇಲ್ಲವು (4). ಶಿಲ್ಪಾದಿ ಕುಶಲ ಕಾರ್ಯದಲ್ಲಿ ಚತುರಳಾಗಿರಬೇಕಾದದ್ದು ಅವಳಿಗೆ ಮುಖ್ಯ ಕೆಲಸವಲ್ಲವಾಗಿದ್ದರೂ, ಅದು ಗುಣದಲ್ಲಿ ಗಣ್ಯವಾಗುವದು. ಅವಳು ಮಾಡುವ ಕುಶಲ ಕಾರ್ಯಗಳಿಂದಲೇನಾದರೂ ಧನ ಸಂಪಾದನೆಯಾದರೆ ಅದು ಅವಳ ಸ್ವಾಂತವೆನಿ

---

(1). ವಿಶೀಲಃಕಾಮವೃತ್ತೋವಾ ಗುಣೈರ್ವಾಪರಿವರ್ಜಿತಃ | ಉಪಚರ್ಯಸ್ತ್ರಿಯಾಸಾಧ್ವ್ಯಾಸತತಂದೇವವತ್ಪತಿಃ || ಮನು.

(2). ಪತಿಂಶುಶ್ರೂಷತೆಯೇನತೇನಸ್ವರ್ಗೇಮಹೀಯತೇ. ಮನು.

(3). ಸದಾಪ್ರಹೃಷ್ಟಯಾಕಾರ್ಯಂಗೃಹಕಾರ್ಯೇಷುದಕ್ಷಯಾ | ಸುಸಂಸ್ಕೃತೋಪಸ್ಕರಯಾವ್ಯಯೇಚಾಮುಕ್ತಹಸ್ತಯಾ || ಮನು.

(4). ನಾಸ್ತಿಸ್ತ್ರೀಣಾಂಪೃಥಗ್ಯಜ್ಞೋನವ್ರತಂನಾಪ್ಯುಪೋಷಿತಂ | ಮನು.

ಸಿಕೊಳ್ಳುವದಿಲ್ಲ. ಆ ಧನವು ಗಂಡನ ಸ್ವತ್ತಾಗುವದು. ಗೃಹ ಕಾರ್ಯದಲ್ಲಿ ಸಮರ್ಥಳಾಗಿರಬೇಕೆಂದು ಮೇಲೆ ಹೇಳಿದಿಯಷ್ಟೆ, ಆ ಗೃಹ ಕಾರ್ಯಗಳ್ಯಾವವೆಂಬುವದನ್ನು ಕುರಿತು ವಹ್ನಿ ಪುರಾಣದಲ್ಲಿ "ಸ್ತ್ರೀಯು ಪ್ರಾತಃಕಾಲದಲ್ಲಿ ಎದ್ದು ಮುಖ ಪ್ರಕ್ಷಾಳನಾದಿ ಕಾರ್ಯವನ್ನು ಮಾಡಿಕೊಂಡು, ನಂತರ ಪತಿಗೂ ದೇವರಿಗೂ ನಮಸ್ಕರ ಮಾಡಿ ಗೃಹ ಕಾರ್ಯವನ್ನು ಮಾಡುವದಕ್ಕೆ ಪ್ರವೃತ್ತಿಸಬೇಕು. ಅನಂತರ ಸ್ನಾನ ಮಾಡಿ ದೇವ ಬ್ರಾಹ್ಮರ ಮತ್ತು ಪತಿಯ ಸೇವೆಯನ್ನು ಮಾಡಿ ಗೃಹ ದೇವತಾಪೂಜೆಯನ್ನು ಮಾಡಬೇಕು. ಇವುಗಳೆಲ್ಲವನ್ನೂ ಯಥಾರೀತಿಯಾಗಿ ಆಚರಿಸಿದ ನಂತರ, ಅತಿಥಿ ಮತ್ತು ಪತಿಯ ಭೋಜನವನ್ನು ಮಾಡಿಸಿ, ತರುವಾಯ ತಾನೂ ಪರಮ ಸುಖದಿಂದ ಭೋಜನ ಮಾಡಬೇಕು." ಎಂದು ಉಕ್ತವಾಗಿದೆ.

ಈವರಿವಿಗೆ ಸ್ತ್ರೀಯರು ಅವಶ್ಯಕವಾಗಿ ಮಾಡತಕ್ಕ ಕೆಲಸವನ್ನು ಕುರಿತು ಸಂಕ್ಷೇಪವಾಗಿ ಹೇಳಲಾಯಿತು. ಇದಲ್ಲದೆ ಇನ್ನೂ ಅನೇಕ ಕೆಲಸಗಳುಂಟು. ಆದರೆ ಅವು ಕರ್ತವ್ಯವೆಂದು ಹೇಳಿಸಿಕೊಳ್ಳುವದಿಲ್ಲವಾದರೂ, ಅವುಗಳನ್ನು ಆಚರಣೆಯಲ್ಲಿಟ್ಟುಕೊಂಡರೆ ಅವರು ಅತ್ಯಂತ ಶ್ಲಾಘನಾರ್ಹರಾಗುವರು. ಆ ಇತರ ಕಾರ್ಯಗಳ ವಿವರಣೆಯನ್ನು ಮೂರನೇ ಅಧ್ಯಾಯದಲ್ಲಿ ವಿವರಿಸುವಣಾಗುತ್ತದೆ. ಸ್ತ್ರೀಯರ ಚರಿತ್ರೆಯು ಯಾವಪರ್ಯಂತ ಉನ್ನತಿ ಹೊಂದಿತ್ತೆಂಬದನ್ನು ತಿಳಿಯಬೇಕಾದರೆ ಅವರ ಕರ್ತವ್ಯ ಕೆಲಸಗಳು ಯಾವ್ಯಾವ ಪ್ರಕಾರವಾಗಿತ್ತೆಂದು ತಿಳಿಯಬೇಕಾದದ್ದು ಅವಶ್ಯಕವು; ಯಾತಕ್ಕೆಂದರೆ, ಅವರು ಕರ್ತವ್ಯಕಾರ್ಯವನ್ನು ಚನ್ನಾಗಿ ನಿರ್ವಹಿಸಿದರೇನೇ ಅವರ ಚರಿತ್ರೆಯು ಉತ್ತಮವೆಂದು ಹೇಳಬಹದು, ಅಲ್ಲದೆ ಜನರಲ್ಲಿ ಮಾನನೀಯವಾದ ಅಕಾಪಟ್ಯ ಸರಳತೆ ಮುಂತಾದ ಸದ್ಗುಣಗಳೂ ಯಾರಿಗೆ ಇರುವವ್ರೋ ಅಂತಾವಳ ಚರಿತ್ರೆಯು ಅತ್ಯುನ್ನತ ಚರಿತ್ರೆಯೆಂದೆಣಿಸಲ್ಪಡುತ್ತದೆ.

ಸ್ತ್ರೀಯರಿಗೆ ಧನಾಧಿಕಾರ.

ಸ್ತ್ರೀಯರಿಗೆ ಧನಾಧಿಕಾರ ವಿಷಯದಲ್ಲಿರುವ ನಿಯಮವೇನಂದರೆ:—ಸ್ತ್ರೀಯು ಸ್ವಂತವಾಗಿ ಸಂಪಾದನೆಯನ್ನು ಮಾಡಿದರೆ ಅದು ಸ್ವಾಮಿಯ ಸ್ವತ್ತಾಗುವದು. ತಾಯಿತಂದೆಗಳು ತಮ್ಮ ಮಗಳಿಗೋಸ್ಕರ ಕೊಡುವ ಧನವು ಅವಳದಾಗಿಯೇ ಇರುವದು. ತಾಯಿ ತಂದೆ ಕೊಡುವ ಸ್ವತ್ತಿನಲ್ಲಿ ಮತ್ತು ಗಂಡನು ಲಗ್ನಕಾಲದಲ್ಲಿ ಕೊಡುವದರಲ್ಲಿ ಸಹಾ ಅವಳಿಗೆ ನಿರ್ವ್ಯೂಢ ಸ್ವತ್ವವಿರುವದು, ಅಂದರೆ ಅವಳಿಗೆ ಅವುಗಳನ್ನು ಕ್ರಯದಾನ ಮಾಡುವ ಅಧಿಕಾರವಿಲ್ಲವು; ಆದರೆ ಅವಳು ಯಾವಜ್ಜೀವವೂ ಅವುಗಳನ್ನು ಅನುಭವಿಸ ಬಹುದು. ಅದಾದರೂ ವಸ್ತ್ರಾದಿ ಅಲಂಕಾರವನ್ನು ಧರಿಸಿ ಭೋಗಿಸುವದಲ್ಲ; ಕೇವಲ ಪತಿಯ ಪಾರಲೌಕಿಕ ಮತ್ತು ಸತ್ಕಾರ್ಯಗಳಲ್ಲಿ ವಿನಿಯೋಗ ಮಾಡಬೇಕು. ತಂದೆಯ ಧನವು ದೌಹಿತ್ರನಿದ್ದರೆ ಅವಳಿಗೆ ಬರುವದು. ಬಂಜೆ ಅಥವಾ ಗಂಡನಿಲ್ಲದವಳಾದರೆ ಆ ಧನದಮೇಲೆ ಅವಳಿಗೆ ಅಧಿಕಾರವಿರುವದಿಲ್ಲ. ಸ್ತ್ರೀಯು ಈ ರೀತಿ ಧನೋಪಾರ್ಜನೆಯಲ್ಲಿ ವಂಚಿಸಲ್ಪಟ್ಟರೂ ಅಥವಾ ಈ ರೀತಿಯಾದ ದ್ರವ್ಯವು ಅವಳಿಗೆ ಬಾಧ್ಯತೆ ಮೇಲೆ ಬಾರದಿದ್ದರೂ ಅವಳಿಗೆ ಧನಾಧಿಕಾರಕ್ಕೆ ಬೇರೆ ಅನೇಕ ಮಾರ್ಗಗಳುಂಟು. ಅವಳ ತಂದೆಯು ಅವಳಿಗೋಸ್ಕರ ಕೊಟ್ಟ ಧನದ ಮೇಲೆ ಅವಳ ಗಂಡನ ಅಧಿಕಾರವಿಲ್ಲ. ಗಂಡನು ಆ ದ್ರವ್ಯವನ್ನು ತೆಗದುಕೊಂಡರೆ ಅದಕ್ಕವನು ಬಡ್ಡಿಯನ್ನು ಕೊಡಬೇಕು. ಬಡ್ಡಿಯನ್ನು ಕೊಡದಿದ್ದರೆ ಕಳ್ಳನಹಾಗೆ ಶಿಕ್ಷೆಗೆ ಗುರಿಯಾಗುವನು. ಸ್ತ್ರೀಯರಿಗೆ ಧನಾಧಿಕಾರ ವಿಷಯದಲ್ಲಿ ಭಾರತವರ್ಷದ ಋಷಿಗಳು ಮಾಡಿರುವ ನಿರ್ಬಂಧದಷ್ಟು ಮತ್ಯಾವ ದೇಶದವರೂ ಈ ವರಿವಿಗೂ ಮಾಡಿದ್ದಾರೆಂದು ಹೇಳುವದಕ್ಕೆ ಆಗುವದಿಲ್ಲ.

ವಿಧವೆಯರು ಮಾಡಬೇಕಾದ ಕೆಲಸಗಳು.

"ಮೃತೇಭರ್ತರಿಸಾಧ್ವೀಸ್ತ್ರೀ ಬ್ರಹ್ಮಚರ್ಯೆ ವ್ಯವಸ್ಥಿತಾ" ಎಂದಿರುವ ಮನು ಸ್ಮೃತಿವಚನ ಪ್ರಕಾರ ಪತಿಯು ಮೃತನಾದರೆ ಹೆಂಗಸು ಬ್ರಹ್ಮಚರ್ಯವನ್ನು ಅವ

ಲಂಬಿಸಬೇಕು. ಗಂಡನ ವಂಶದವರು ಯಾರಾದರೂ ಜೀವಿತರಾಗಿದ್ದರೆ ತನಿಗೆ ಗಂಡನಿಂದ ಬಂದ ಸ್ವತ್ತನ್ನು ತನ್ನ ತಂದೆಯ ವಂಶದವರಿಗೆ ಕೊಡಕೂಡದು. ಗಂಡನ ವಂಶದವರು ಯಾರೂ ಇಲ್ಲದಿದ್ದರೆ ತಂದೆಯ ಮನೆಯಲ್ಲಿ ಆಶ್ರಯವನ್ನು ಹೊಂದಬೇಕು. ಸಹಗಮನವನ್ನು ಕುರಿತು ಮನುವು ಹೇಳಿಲ್ಲವು. ಆದರೆ ಮಹಾಭಾರತದಲ್ಲಿ ಈ ಸಹಗಮನವನ್ನು ಕುರಿತು ಬಹಳವಾಗಿ ಹೇಳಿದೆ. ಅದರಿಂದ ಆ ಕಾಲದಲ್ಲಿ ಸಹಮರಣವು ಅತಿ ಬಾಹುಳ್ಯವಾಗಿತ್ತೆಂದು ಕಾಣುತ್ತದೆ. ಪಾಂಡು ಮಹರಾಯನ ಹೆಂಡತಿಯಾದ ಮಾದ್ರಿಯು ಸಹಗಮನ ಮಾಡಿದಳು. ಕುರು ಕ್ಷೇತ್ರದಲ್ಲಿ ಯುದ್ಧವಾದ ನಂತರ, ಆ ಯುದ್ಧದಲ್ಲಿ ಮೃತರಾದ ಅನೇಕ ವೀರ ಶ್ರೇಷ್ಠರ ಹೆಂಡತಿಯರು ಸಹಗಮನ ಮಾಡಿದರು. ಮನುವು ಹೊರತು ವಿಷ್ಣು ಯಾಜ್ಞವಲ್ಕ್ಯ ಮುಂತಾದ ಋಷಿಗಳೆಲ್ಲರೂ ಸಹಮರಣವನ್ನು ಅನುಮೋದನೆ ಮಾಡಿದ್ದಾರೆ, ಅದಲ್ಲದೆ ಅನುಮೃತರಾದವರನ್ನು ವಿಶೇಷ ಪ್ರಶಂಸೆಯನ್ನು ಮಾಡಿದ್ದಾರೆ. ಒಬ್ಬ ಋಷಿಯು "ಸ್ತ್ರೀಯು ಸಹ ಗಮನಮಾಡಿದರೆ, ಪತಿಯು ಬಹಳ ಪಾಪಿಷ್ಠನಾಗಿದ್ದರೂ ಅವನೊಂದಿಗೆ ಮೂರೂವರೆ ಕೋಟಿ ವರ್ಷಗಳು ಸ್ವರ್ಗದಲ್ಲಿ ವಾಸ ಮಾಡುವಳು" ಎಂದು ಹೇಳಿದ್ದಾನೆ. ಪರಾಶರನು, "ಸಹ ಮೃತಳಾದ ನಾರಿಯು ಯಾವ ರೀತಿಯಾಗಿ ಸರ್ಪವನ್ನು ಹಿಡಿಯುವ ಮನುಷ್ಯನು ಹುತ್ತದಿಂದ ಹಾವನ್ನು ಬಲಾತ್ಕಾರದಿಂದ ಹಿಡಿದು ಮೇಲಕ್ಕೆ ತೆಗಿಯುವನೋ, ಅದೇ ರೀತಿಯಾಗಿ ತನ್ನ ಪತಿಯನ್ನು ಉದ್ಧಾರ ಮಾಡಿ ಅವನೊಂದಿಗೆ ಸ್ವರ್ಗದಲ್ಲಿ ಸುಖಾನುಭವ ಮಾಡುವಳು" ಎಂದು ಹೇಳಿದ್ದಾನೆ. ಆದರೆ ಸಹ ಮರಣವು ಸ್ತ್ರೀಯರಿಗೆ ಅವಶ್ಯ ಕರ್ತವ್ಯ ಕೆಲಸವಲ್ಲವು. ಸಹಗಮನ ಮಾಡಿದರೆ ಪುಣ್ಯ ಮತ್ತು ಶ್ಲಾಘನೀಯವಾದ ಕೆಲಸವೆಂದು ಮಾತ್ರ ಹೇಳಿಸಿಕೊಳ್ಳುವದು. ಈ ಅಂಶವನ್ನು ಕುರಿತು ಮೂರನೇ ಅಧ್ಯಾಯದಲ್ಲಿ ಪುನಃ ಹೇಳುವೆವು. ಸಹಮರಣವೆನ್ನುವದು ಭಾರತ ವರ್ಷದಲ್ಲಿ ಹೊರತು ಮತ್ಯಾವ ದೇಶದಲ್ಲಿಯೂ ಕಂಡುಬರುವದಿಲ್ಲ. ಇದು ಈ ಭಾರತವರ್ಷದ ಸ್ತ್ರೀ

ಯರ ಪತಿ ಪರಾಯಣತಾ ಧರ್ಮದ ಅತ್ಯುತ್ಕರ್ಷತೆಯನ್ನು ತೋರಿಸುತ್ತದೆ. ಆದರೆ ಪರಿಣಾಮದಲ್ಲಿ ಸಹಮರಣವು ಅನರ್ಥಗಳಿಗೆ ಗುರಿಯಾಗುವದು; ಹ್ಯಾಗಂದರೆ, ದುಷ್ಟ ಜನರು ಮೋಸಗೊಳಿಸಿ ಸ್ತ್ರೀಯುರ ಇಷ್ಟಕ್ಕೆ ವಿರೋಧವಾಗಿ ಅವರನ್ನು ಸಹಗಮನ ಮಾಡಲು ಬಲಾತ್ಕಾರ ಪಡಿಸ ಬಹುದು. ಇಂತಾ ಸಂಭವ ಉಂಟಾಗುವದು ನಿಜವೇ ಸರಿ. ಆದರೆ ಈ ಪದ್ಧತಿಯು ಆದಿಯಲ್ಲಿ ಹುಟ್ಟಿದ್ದು ಮುಖ್ಯವಾಗಿ ಪತಿಗೋಸ್ಕರವೇ; ಅವಿಚ್ಛಿನ್ನವಾಗಿ ಪರಲೋಕದಲ್ಲಿಯೂ ಪತಿಯೊಂದಿಗೆ ವಸಿಸಬೇಕೆಂಬ ಕೋರಿಕೆಯಿಂದಲೇ ಏರ್ಪಟ್ಟು ಸ್ತ್ರೀಯರ ಸರ್ವಾಂತ ಪರಿಮಿತಿಯುಳ್ಳ ಪತಿ ಪರಾಯಣತೆಗೆ ಸ್ಪಷ್ಟವಾದ ದೃಷ್ಟಾಂತವಾಗಿದೆ.

ದುಷ್ಟ ಚರಿತ್ರೆಯುಳ್ಳ ಸ್ತ್ರೀಯರ ದಂಡ ವಿಧಾನವು.

ಅಪ್ರಿಯವನ್ನು ಹೇಳುವ ಹೆಂಗಸನ್ನು ಪತಿಯು ಕೂಡ್ಲೆ ಪರಿತ್ಯಜಿಸ ಬಹುದೆಂದು ಪೂರ್ವದಲ್ಲಿ ಉಕ್ತವಾಗಿದೆ. ಸ್ತ್ರೀಯು ಮನೆ ಕೆಲಸದಲ್ಲಿ ಮನಸ್ಸಿಡದೆ ಹೇಳಿದ ಮಾತು ಕೇಳದಿದ್ದರೂ, ಅಥವಾ ಮನಸ್ಸಿಗೆ ಬಂದಹಾಗೆ ವ್ಯಯ ಮಾಡಿದರೂ, ಪತಿಯು ಅವಳನ್ನು ಪರಿತ್ಯಾಗ ಮಾಡ ಬಹುದು. ಸುರಾಪಾನಿಯಾದವಳು ಪರಿತ್ಯಾಗಾರ್ಹಳು. ಪರಿತ್ಯಾಗ ಮಾಡುವದೆಂದರೆ ಮನೆಯಿಂದ ಹೊರಡಿಸುವದೆಂಬರ್ಥವಲ್ಲವು. ಇಂತಾ ದುಷ್ಟಳಾದ ಸ್ತ್ರೀಯನ್ನು ಬಿಟ್ಟು ಬೇರೆ ಸ್ತ್ರೀಯನ್ನು ಮದುವೆಮಾಡಿಕೊಳ್ಳಬಹುದು, ದುರಾಚಾರಿಯಾದವಳಿಗೆ ಅನ್ನ ವಸ್ತ್ರಗಳನ್ನು ಮಾತ್ರ ಕೊಡಬೇಕೆಂದು ಅರ್ಥವು. ಹೆಂಗಸು ತನ್ನ ತಂದೆಯು ಕೊಟ್ಟ ಹಣದಿಂದ ಗರ್ವಿತಳಾಗಿ ತನ್ನ ಪತಿಯನ್ನುಅವಹೇಳನ ಮಾಡಿದರೂ, ಪರ ಪುರುಷನಲ್ಲಿ ಆಶ್ರಯ ಮಾಡಿದರೂ, ರಾಜನು ಅಂತವಳನ್ನ ನಾಯಿಗಳಿಂದ ಕಚ್ಚಿಸಿ, ಆ ಉಪ ಪತಿಯಾಗಿದ್ದವನನ್ನು ಮರಣಾಂತ ದಂಡನೆ ಮಾಡಬೇಕೆಂತಲೂ ವಿಧಿಗಳಿದ್ದವು.





## ಮೂರನೇ ಅಧ್ಯಾಯವು.

ಪೂರ್ವಾಧ್ಯಾಯಗಳಲ್ಲಿ ಸ್ತ್ರೀಯರ ಕರ್ತವ್ಯ ಕೆಲಸವನ್ನು ಕುರಿತು ಸಂಕ್ಷೇಪವಾಗಿ ಬರಿಯಲಾಯಿತು. ಈ ಅಧ್ಯಾಯದಲ್ಲಿ ಅದನ್ನು ವಿಸ್ತಾರವಾಗಿ ತಿಳಿಯಪಡಿಸುತ್ತೇವೆ. ಎಲ್ಫಿನ್‌ಸ್ಟೋನ್ (Elphinstone) ಎಂಬುವನು ಬ್ರಾಹ್ಮರಿಗೆ ಶಾಂತಗುಣಾವಲಂಬನೆಯಿಂದ ತಮ್ಮ ಶುದ್ಧ ಚರಿತ್ರೆಯನ್ನು ಮಾತ್ರ ಕಾಪಾಡಿಕೊಳ್ಳುವದರಲ್ಲಿದ್ದ ಆಸ್ಥೆಯು ತಮ್ಮ ಸಮಾಜಕ್ಕೆ ಅಥವಾ ದೇಶಕ್ಕೆ ಉನ್ನತಿಯನ್ನುಂಟು ಮಾಡುವ ಕಾರ್ಯಸಾಧನೆಯಲ್ಲಿರಲಿಲ್ಲವೆಂತಲೂ, ಸರ್ವಪ್ರಕಾರದಿಂದಲೂ ಶಾಂತಿ ಸುಖಾನುಭವಮಾಡುವದು ಮತ್ತು ಪ್ರಾಣಿಮಾತ್ರಕ್ಕೆ ದುಃಖ ವಿಮೋಚನೆಮಾಡುವದು ಅವರ ಮತದವರಿಗೆ ಪ್ರಧಾನ ಕರ್ತವ್ಯವಾಗಿದೆಯಂತಲೂ ಹೇಳಿರುತ್ತಾನೆ. ಆದರೆ ಈತನು ಹೇಳುವಂತೆ ಈ ಗುಣವು ಕೇವಲ ಬ್ರಾಹ್ಮರಲ್ಲಿಯೇ ಇತ್ತೆಂದು ಯಾತಕ್ಕೆ ಹೇಳಬೇಕು? ಪ್ರಾಚೀನರಾದ ಎಲ್ಲಾ ದೇಶದವರ ಧರ್ಮ ಶಾಸ್ತ್ರಗಳಲ್ಲಿಯೂ ಈ ದೋಷವು ಇದ್ದೇ ಇತ್ತೆಂದು ಹೇಳಬೇಕಾಗಿದೆ. ಯಾತಕ್ಕಂದರೆ, ಯುರೋಪ್ ದೇಶದವರ ಧರ್ಮ ಶಾಸ್ತ್ರಗಳಲ್ಲಿಯೂ ಸ್ವದೇಶೋನ್ನತಿ ಅಥವಾ ಸಮಾಜೋನ್ನತಿಯನ್ನು ಕುರಿತು ಹೇಳಿರುವ ವಿಚಾರವೇ ಕಾಣಬರುವದಿಲ್ಲ, ಮತ್ತು ಅಂತಾ ಶಬ್ದಗಳ ಪ್ರಯೋಗ ಕೂಡ ಇಲ್ಲವು. ಬ್ರಾಹ್ಮರು ತಮ್ಮಲ್ಲಿ ನಿರ್ದೋಷವಾದ ನಿರ್ಮಲ ಚರಿತ್ರೆಯನ್ನೇ ಕೇವಲ ಅಧಿಕವಾಗಿ ಆದರಮಾಡುತಲಿದ್ದರೆನ್ನುವದಕ್ಕೆ ಸಂದೇಹವಿಲ್ಲ. ಇದು ಅವರ ಧರ್ಮ ಶಾಸ್ತ್ರವನ್ನು ಓದಿದರೆ ಲೇಶವೂ ಸಂದೇಹವಿಲ್ಲದೆ ವ್ಯಕ್ತವಾಗುತ್ತದೆ. ಅವರು ಮಾಡಿರುವ ನಿಯಮಗಳು ಪಾಪಸ್ಪರ್ಶವಾಗದಿರುವದಕ್ಕೋಸ್ಕರವೇ ಅಧಿಕಾಂಶವಾಗಿರುತ್ತದೆ. ಅದ್ಯತನ ಸುಶಿಕ್ಷಿತರಾದ ವಿದ್ಯಾವಂತರು ತಮ್ಮ ದೇಶದ ಅಥವಾ ಸಮಾಜದ ಉನ್ನತಿಯನ್ನುಂಟುಮಾಡಬೇಕೆಂದು ಅಪೇಕ್ಷಿಸುವ

ಹಾಗೆ ಅಪೇಕ್ಷಿಸುತ್ತಿದ್ದವರು ಪ್ರಾಚೀನ ಋುಷಿಗಳಲ್ಲಿ ಅತಿ ವಿರಳವಾಗಿದ್ದರು. ಅವರಾದರೂ ಸ್ತ್ರೀಯರಿಗೆ ಕರ್ತವ್ಯ ಕರ್ಮಗಳು ಯಾವ್ಯಾವುಗಳೆಂದು ನಿಷ್ಕರ್ಷೆಯನ್ನು ಮಾಡುವದರಲ್ಲಿ ದೇಶ ಸಮಾಜ ಅಥವಾ ಮಾನವ ಜಾತಿಯ ಸಮುನ್ನತಿಯನ್ನು ಮಾಡಬೇಕಾದ ಅಂಶಗಳನ್ನು ಕುರಿತು ತಮ್ಮ ಗ್ರಂಥಗಳಲ್ಲಿ ಲೇಶವಾದರೂ ಉದಹರಿಸಿರುವದಿಲ್ಲ. ಆದರೆ, ಮುಖ್ಯವಾಗಿ ಸ್ತ್ರೀಯರಿಗೆ ಅವರ ಚರಿತ್ರೆಯು ಪರಿಶುದ್ಧವಾಗಿರಬೇಕೆಂಬ ಉದ್ದೇಶ್ಯದಿಂದ ಸ್ತ್ರೀಯರು ಸರ್ವಪ್ರಕಾರದಿಂದಲೂ ಪಾಪಕಾರ್ಯಗಳನ್ನಾಚರಿಸದೆ ಸ್ವಾಮಿ ಪುತ್ರರ ಅಧೀನದಲ್ಲಿರಬೇಕೆಂದು ಮೊದಲಾದ ಅನೇಕ ನಿಯಮಗಳನ್ನು ಮಾತ್ರ ವಿರಚಿಸಿದ್ದಾರೆ. ಈ ವಿಶಿಷ್ಟ ನಿಯಮಗಳೂ ಅತ್ಯಂತ ಕಠಿಣವಾದವುಗಳು. ಇವುಗಳನ್ನು ನೋಡಿದರೆ, ಈ ಯಲ್ಲಾ ಕಠಿಣವಾದ ನಿಯಮಗಳಲ್ಲಿ ಅಧಿಕಾಂಶವನ್ನು ಆಚರಿಸಲು ಯಾರು ಶಕ್ತರಾಗುವರೋ ಅಂತವರಗಳಲ್ಲಿರುವ ದುರ್ಗುಣವೂ ಶ್ಲಾಘನೀಯವಾಗುತ್ತದೆಂದು ತೋರಿಬರುತ್ತದೆ. ಅನೇಕಮಂದಿ ಸ್ತ್ರೀಯರು ಈ ಕಷ್ಟವಾದ ನಿಯಮಗಳನ್ನೆಲ್ಲಾ ಯಥಾಯೋಗ್ಯವಾಗಿ ಆಚರಿಸಿ ತಮ್ಮ ಬುದ್ಧಿ ಕುಶಲತೆಯಿಂದ ಅನೇಕ ಸತ್ಕಾರ್ಯಗಳನ್ನು ಕೂಡ ಮಾಡಿರುತ್ತಾರೆಂದು ತಿಳಿಯಬರುತ್ತದೆ. ಅದು ಹ್ಯಾಗಂದರೆ, ದ್ರೌಪದಿಯು ಪಂಚಪಾಂಡವರೊಡನೆ ಅರಣ್ಯವಾಸವನ್ನು ಮಾಡಿ ವಿಧಿಗೆ ಲೇಶವಾದರೂ ವೆತ್ಯಸ್ತವಾಗದಂತೆ ಅವರ ಶುಶ್ರೂಷೆಯನ್ನು ಮಾಡುತ್ತಾ ಯಾವಾಗಲೂ ಅವರಿಗೆ ನೀತಿಶಾಸ್ತ್ರವನ್ನು ಉಪದೇಶಮಾಡುತಲಿದ್ದಳು. ವಾಸ್ತವ್ಯತಃ, ಪಾಂಡವರಿಗೆ, ಅವರ ವನವಾಸಕಾಲದಲ್ಲಿ ದ್ರೌಪದಿಗಿಂತಲೂ ವಿಚಕ್ಷಣವಾದ ಮಂತ್ರಿಯು ಮತ್ಯಾರೂ ಇರಲಿಲ್ಲವು.

ಸಾಧ್ವೀಗಳ ಶ್ರೇಣೀ ವಿಭಾಗ ಅಥವಾ ತರಗತಿ.

ಪುರಾತನರಾದ ಋುಷಿಶ್ರೇಷ್ಠರು ವಿಧಿಸಿರುವ ನಿಯಮಗಳೆಲ್ಲವನ್ನೂ ಯಾರು ಚನ್ನಾಗಿ ಆಚರಿಸಿ ಯಾವ ಮೋಸಕ್ಕೂ ಒಳಗಾಗದೆ ಯಶಸ್ವಿನೀಯರಾಗಿರು

ತ್ತಾರೋ, ಅಂತಾ ಸ್ತ್ರೀಯರ ಚರಿತ್ರೆಯನ್ನು ಮೊದಲು ಪರ್ಯಾಲೋಚನೆಯನ್ನು ಮಾಡಿ, ನಂತರ ಯಾವ ಸ್ತ್ರೀಯರು ನಾನಾವಿಧ ಮೋಸಕ್ಕೊಳಗಾದರೂ ಸಂಪೂರ್ಣವಾಗಿ ತಮ್ಮ ಚರಿತ್ರೆಯನ್ನು ವಿಶುದ್ಧವಾಗಿ ಸಂರಕ್ಷಿಸಿಕ್ಕೊಂಡಿದ್ದಾರೋ ಅವರ ಜೀವನ ಚರಿತ್ರೆಯನ್ನು ವಿವರವಾಗಿ ಹೇಳುವೆವು. ಹಿಂದೂ ಜನರಲ್ಲಿ, ಈ ರೀತಿಯಾಗಿ ಮೋಸಕ್ಕೊಳಗಾಗಿದ್ದರೂ ತಮ್ಮ ಚರಿತ್ರೆಯನ್ನು ಚನ್ನಾಗಿ ಕಾಪಾಡಿಕ್ಕೊಂಡ ಹೆಂಗೆಸರು ಮುಖ್ಯ ಉದಾಹರಣ ಸ್ವರೂಪರಾಗಿದ್ದಾರೆ. ಪಾಂಡವವಧೂ ದ್ರೌಪದಿಯು, ರಾಮಗೇಹಿನೀ ಸೀತೆಯು ಸಾಧ್ವೀಶ್ರೇಣಿಯಲ್ಲಿ ಮುಖ್ಯರಾಗಿ ಗಣನೀಯರಾಗಿರುತ್ತಾರೆ. ಸಾವಿತ್ರಿ, ಶಕುಂತಳಾ ಮುಂತಾದ ಮಹಿಳೇರು ತಮ್ಮ ನಡತೆಯನ್ನು ವಿಶುದ್ಧವಾಗಿ ಕಾಪಾಡಿಕ್ಕೊಳ್ಳುವದಕ್ಕೋಸ್ಕರ ನಾನಾವಿಧ ಕಷ್ಟಗಳನ್ನು ಅನುಭವಿಸಿರುವದು ನಿಜವಾದಾಗ್ಯೂ, ಅವರಿಗೆ ಸೀತೆ ಮತ್ತು ದ್ರೌಪದಿಯ ಹಾಗೆ ಮಾಯಾವಿಗಳ ಮೋಸಕ್ಕೊಳಗಾಗಿ ಅನುಭವಿಸಿದಷ್ಟು ಕಷ್ಟಸಂಭವವೇನೂ ಇರಲಿಲ್ಲ. ಆದದ್ದರಿಂದ ಅವರು ಮೊದಲು ಹೇಳಲ್ಪಟ್ಟ ಸಾಧ್ವೀಗಳ ಶ್ರೇಣಿಯಲ್ಲಿ ಸರ್ವೋಚ್ಚರಾಗಿರುವದಕ್ಕರ್ಹರೇ ಹೊರ್ತು ಶೇಷೋಕ್ತ ಗುಂಪಿನವರಲ್ಲಿ ಶೇರುವದಕ್ಕೆ ಶುದ್ಧವಾಗಿ ಅರ್ಹರಾಗುವದಿಲ್ಲವು.

ಸ್ತ್ರೀಯರಿಗೆ ಕರ್ತವ್ಯ ಕೆಲಸ.

ಸ್ತ್ರೀಯರಿಗೆ ಪತಿಯೇ ದೈವಸ್ವರೂಪನಾಗಿಯೂ ಸರ್ವಸ್ವ ಸ್ವರೂಪನಾಗಿಯೂ ಇರುವಣದರಿಂದ ಅವರಿಗೆ ಪತಿಸೇವೆಯೇ ಪ್ರಥಮ ಕರ್ತವ್ಯವಾಗಿದೆ. ಗೃಹ ಕಾರ್ಯವು ದ್ವಿತೀಯ ಕರ್ತವ್ಯ ಕೆಲಸವಾಗಿದೆ. ಮತ್ತು ಗೃಹಸ್ಥನ ಸಕಲ ಗೃಹಕೃತ್ಯವನ್ನು ನಿರ್ವಹಿಸುವ ಭಾರವೂ ಸ್ತ್ರೀಯರಿಗೆ ವಹಿಸಲ್ಪಟ್ಟದೆ. ಸಂತಾನಪಾಲನೆಯು ಸ್ತ್ರೀಯರಿಗೆ ಕರ್ತವ್ಯ ಕೆಲಸವಾಗಿ ಎಲ್ಲಿಯೂ ಹೇಳಲ್ಪಟ್ಟಲ್ಲವು. ಆದರೆ ಮನುವು ಒಂದು ಕಡೆಯಲ್ಲಿ "ಸ್ತ್ರೀಯರಿಂದಲೇ ಸಂತಾನೋತ್ಪತ್ತಿಯಾಗಿ ಆ ಸಂತಾನದ

ಲಾಲನ ಪಾಲನೆಯು ಅವರಿಂದಲೇ ಅಗಬೇಕಾಗಿರುವದರಿಂದ ಸ್ತ್ರೀಯರೇ ಲೋಕಯಾತ್ರೆಗೆ ಪ್ರತ್ಯಕ್ಷ ಉಪಾಯವಾಗಿರುತ್ತಾರೆ" ಎಂದು ಹೇಳಿರುತ್ತಾನೆ. ಆದದರಿಂದ ಸಂತಾನ ಸಂರಕ್ಷಣೆಯನ್ನು ಮಾಡುವ ಭಾರವೂ ಸ್ತ್ರೀಯರಿಗೆ ವಹಿಸಲ್ಪಟ್ಟಿರುತ್ತದೆ. ಇದಲ್ಲದೆ ನೃತ್ಯಗೀತಾದಿ ಕಲಾವಿದ್ಯಗಳನ್ನರಿಯೋಣವೂ ಸ್ತ್ರೀಯರಿಗೆ ಮತ್ತೊಂದು ಕರ್ತವ್ಯವಾಗಿತ್ತು. ಆದರೆ ಅದನ್ನು ಕ್ಷತ್ರಿಯ ಮುಂತಾದ ಭದ್ರ ಪರಿವಾರದ ಮಹಿಳೆಯರು ಮಾತ್ರ ಕಲಿಯುತ್ತಿದ್ದರು. ಋಷಿಗಳ ಕಾಲದಲ್ಲಿ ಸಕಲ ಜನರೂ ಸರಳ ಹೃದಯರಾಗಿಯೂ ಈಗಣ ಜನರ ಹಾಗೆ ಪ್ರತಿಷ್ಠೆ ಅಥವಾ ಜುಂಭಕೊಳ್ಳುಗಾಗದವರಾಗಿಯೂ ಇದ್ದರು. ಕಾಳಿದಾಸನ ಕಾಲದಲ್ಲಿ ಜನರು ತಮ್ಮ ಸರಳತೆಯೇ ಮೊದಲಾದ ಪೂರ್ವ ಸ್ವಭಾವಗಳನ್ನು ಪರಿತ್ಯಜಿಸಿ ಸುಖವಿಲಾಸಗಳಲ್ಲಿ ಮಗ್ನರಾಗಿ ನೃತ್ಯಗೀತಾದಿಗಳೂ ಹೆಂಗಸರಿಗೆ ನಿತ್ಯ ಕರ್ತವ್ಯವೆಂದೆಣಿಸಿ ಅವುಗಳನ್ನು ಅಭ್ಯಾಸಮಾಡಿಸುತಲಿದ್ದರು. ಇದು ಕಾಳಿದಾಸನ ಕಾವ್ಯಗಳಿಂದ ವ್ಯಕ್ತವಾಗುತ್ತದೆ. ಒಂದು ಕಡೆಯಲ್ಲಿ ಕಾಳಿದಾಸನು ಹೇಳಿರುವದೇನಂದರೆ" ಗೃಹಿಣೀಸಚಿವಸ್ಸಖೀಮಿಥಃ ಪ್ರಿಯಶಿಷ್ಯಾಲಲಿತೆ ಕಲಾವಿಧೌ ॥ ಕರುಣಾವಿಮುಖೇನಮೃತ್ಯುನಾ ಹರತಾತ್ವಾಂವದಕಿಂನಮೆ ಹೃತಂ ॥ ಇದರ ಅರ್ಥ.—" ಎಲೈ ಪ್ರಿಯಳೆ! ಗೃಹಿಣಿಯಾಗಿಯೂ, ಮಂತ್ರಿಯಾಗಿಯೂ, ಸ್ನೇಹಿತಳಾಗಿಯೂ, ಮನೋಹರವಾದ ಸಂಭಾಷಣೆಗೆ ಜೊತೆಗಾರಳಾಗಿಯೂ, ಲಲಿತವಾದ ಸಂಗೀತ ಮುಂತಾದ ಶಾಸ್ತ್ರಗಳಲ್ಲಿ ನನಗೆ ಪ್ರಿಯ ಶಿಷ್ಯಳಾಗಿಯೂ ಇದ್ದ ನಿನ್ನನ್ನು ಕೊಂಡೊಯ್ದು ಕರುಣಾವಿಮುಖನಾದ ಮೃತ್ಯುವು ನನ್ನದು ಯಾವದು ತಾನೇ ಅಪಹರಿಸಲಿಲ್ಲ, ಹೇಳು?" ಎಂದು ಹೇಳಿದ್ದಾನೆ. ಇದರಿಂದ ಕಾಳಿದಾಸನ ಸಮಯದಲ್ಲಿ ನೃತ್ಯಗೀತಗಳನ್ನೂ ಸ್ತ್ರೀಯರು ಅಭ್ಯಸಿಸುತಲಿದ್ದರೆಂದು ತೋರುತ್ತದೆ. ಆದರೆ ಮಹರ್ಷಿವ್ಯಾಸರು ಅವರ ಸಂಹಿತೆಯಲ್ಲಿ ಸ್ತ್ರೀಯರ ಕರ್ತವ್ಯ ವಿಚಾರದಲ್ಲಿ" ಛಾಯೇವಾನುಗತಾಸ್ವಚ್ಛಾ ಸಖೀವ ಹಿತಕರ್ಮಸು। ದಾಸೀವಾದಿಷ್ಟಕಾರ್ಯೇಷು

ಭಾರ್ಯಾಭರ್ತುರ್ನಸ್ಸದಾಭವೇತ್ ॥ ಅರ್ಥ.—ಸ್ತ್ರೀಯು ತನ್ನ ಪತಿಯನ್ನು ನೆರಳಿನ ಹಾಗೆ ಅನುಸರಿಸಬೇಕು, ಮಂಗಳ ಕಾರ್ಯಗಳಲ್ಲಿ ಸ್ನೇಹಿತಳ ಹಾಗೆ ಯತ್ನಶೀಲಳಾಗಿರಬೇಕು, ಆಜ್ಞಾಪಿಸಲ್ಪಟ್ಟ ಕಾರ್ಯಗಳಲ್ಲಿ ದಾಸಿಯಹಾಗಿರಬೇಕು " ಎಂದು ಹೇಳಿದ್ದಾರೆ.

ಮೇಲೆ ಹೇಳಿರುವ ಕಾಳಿದಾಸನಿಂದಲೂ ವ್ಯಾಸರಿಂದಲೂ ಹೇಳಲ್ಪಟ್ಟ ಶ್ಲೋಕಗಳಲ್ಲಿ ತಾರತಮ್ಯವೇನಂದರೆ. "ಪ್ರಿಯಶಿಷ್ಯಾ ಲಲಿತೆ ಕಲಾವಿಧೌ" ಎಂಬುವದು ಕಾಳಿದಾಸನ ಗ್ರಂಥದಲ್ಲಿ ಒಂದು ಹೆಚ್ಚು ವಿಶೇಷಣವಿದೆ. ಇದರಿಂದ ಅವನ ಕಾಲದಲ್ಲಿ ಸ್ತ್ರೀಯರಿಗೆ ನೃತ್ಯಗೀತ ಕಲಾವಿದ್ಯದಲ್ಲಿ ಪರಿಶ್ರಮವಿತ್ತೆಂತಲೂ, ಈ ವಿಶೇಷಣವು ವ್ಯಾಸಸಂಹಿತೆಯಲ್ಲಿಲ್ಲದ್ದರಿಂದ, ಕಾಳಿದಾಸನಗಿಂತಲೂ ಪುರಾತನರಾದ ವ್ಯಾಸಾದಿ ಋುಷಿಗಳ ಕಾಲದಲ್ಲಿ ಸ್ತ್ರೀಯರಿಗೆ ನೃತ್ಯಗೀತಾಭ್ಯಾಸ ಮಾಡಿಸುವದರಲ್ಲಿ ಉತ್ಸಾಹವಿರಲಿಲ್ಲವೆಂತಲೂ ಸ್ಪಷ್ಟವಾಗಿ ಬೋಧೆಯಾಗುತ್ತದೆ.

ಮುಖ್ಯವಾಗಿ, ಇದುವರಿವಿಗೆ ಹೇಳಿರುವಣದರಲ್ಲಿ ಹೆಂಗಸರಿಗೆ ಪತಿಸೇವೆಯೂ ಗೃಹಕೃತ್ಯವೂ ಅಲ್ಲದೆ ನೃತ್ಯಗೀತಾಧ್ಯಯನವೂ ಕೂಡ ನಿತ್ಯಕರ್ತವ್ಯವಾಗಿ ಏಣಿಸಲ್ಪಟ್ಟಿತ್ತೆಂದು ಸಂಕ್ಷೇಪವಾಗಿ ತಿಳಿಸಿದಹಾಗಾಯಿತು. ಆದರೆ ಇದನ್ನು ಕುರಿತು ವಿಶೇಷ ತಿಳಿಯಬೇಕಾದರೆ ಸಂಹಿತೆಗಳನ್ನು ಮಾಡಿರುವರು ಏನು ಹೇಳಿದ್ದಾರೆಯೋ ಅದನ್ನು ವಿವರವಾಗಿ ಪರ್ಯಾಲೋಚನೆ ಮಾಡಿ ನೋಡಬೇಕು. ಅಷ್ಟಾದಶ ಸ್ಮೃತಿಗಳಲ್ಲಿ ಎಂಟೊಂಭತ್ತು ಸ್ಮೃತಿಗಳು ಕೇವಲ ಸಂಕೋಚವಾಗಿರುವಣದರಿಂದ ಅವುಗಳಲ್ಲಿ ಸ್ತ್ರೀಯರ ನಡವಳಿತೆಯನ್ನು ಕುರಿತು ಯಾವದನ್ನೂ ಹೇಳಿಲ್ಲವು. ಉಳಿದವುಗಳಲ್ಲಿ ಮನು ಸಂಹಿತೆಯು ದೊಡ್ಡದಾಗಿದ್ದರೂ ಅದರಲ್ಲಿ ಸ್ತ್ರೀಧರ್ಮವನ್ನು ಕುರಿತು ಹೇಳಿರುವದಿಲ್ಲವು. ಯಾಜ್ಞವಲ್ಕ್ಯನು ಗೃಹಸ್ಥ ಧರ್ಮ ಪ್ರಕರಣದಲ್ಲಿ ಸ್ತ್ರೀ ಧರ್ಮವನ್ನು ಕುರಿತು ಕೆಲವು ವಚನಗಳನ್ನು ಮಾತ್ರ ಹೇಳಿ ಸುಮ್ಮನಾಗಿದ್ದಾ

ನೆ. ದಕ್ಷ, ವ್ಯಾಸ, ವಿಷ್ಣು ಈ ಸ್ಮೃತಿ ಕರ್ತರು ಮಾತ್ರ ಸ್ತ್ರೀ ಧರ್ಮವನ್ನು ಕುರಿತು ಬಹಳವಾಗಿ ಬರದು ಇದ್ದಾರೆ. ಇವುಗಳಲ್ಲಿಯೂ, ವಿಷ್ಣು ಸ್ಮೃತಿಯಲ್ಲಿ ಸ್ತ್ರೀ ಧರ್ಮವು ಬಹಳ ವಿಸ್ತಾರವಾಗಿ ಬರಿಯಲ್ಪಟ್ಟಿದೆ. ಈ ವಿಷ್ಣು ಸ್ಮೃತಿಯು ಅತಿಸರಳ ಮತ್ತು ಸುಲಭವಾಗಿ ರಚಿಸಲ್ಪಟ್ಟಿದೆ. ವಚನಗಳ ಅರ್ಥವು ಸಂದೇಹಾಸ್ಪದವಾಗುವ ಸಂಭವವೇ ಇಲ್ಲ. ದಾಯವಿಭಾಗ ಗ್ರಂಥಕರ್ತನಾದ ಜೀಮೂತವಾಹನನು ವಿಷ್ಣು ಸ್ಮೃತಿ ವಚನಗಳನ್ನೇ ಅವಲಂಬಿಸಿ ಅವಗಾಹನೆಗೆ ಅತಿ ಕಷ್ಟವಾಗಿದ್ದ ಅಪುತ್ರ ಧನಾಧಿಕಾರವನ್ನು ಕುರಿತು ಸುಲಭವಾಗಿ ತಿಳಿಯುವಂತೆ ಒಂದು ಅಧ್ಯಾಯವನ್ನು ರಚಿಸಿದ್ದಾನೆ. ಆದದ್ದರಿಂದ ಪ್ರಕೃತ, ವಿಷ್ಣು ಸ್ಮೃತಿ ವಚನಗಳನ್ನೇ ಅವಲಂಬಿಸಿ ಸ್ತ್ರೀಧರ್ಮ ವಿಚಾರವನ್ನು ಕುರಿತು ಕೆಲವು ಅಂಶಗಳು ತಿಳಿಸಲ್ಪಡುತ್ತವೆ. ಈ ವಿಚಾರದಲ್ಲಿ ವಿಷ್ಣು ಸ್ಮೃತಿಯಲ್ಲಿ ಹೇಳಿರುವದೇನಂದರೆ.

ಸ್ತ್ರೀಯು ಪತಿಯೊಂದಿಗೆ ಏಕವ್ರತಚಾರಿಣೀಯಾಗಬೇಕು.

ಈ ವಿಷ್ಣು ಸ್ಮೃತಿ ವಚನಕ್ಕೆ, ಪತಿಯು ಯಾವ್ಯಾವ ಕೆಲಸಗಳನ್ನು ಆಚರಿಸಲು ಸಂಕಲ್ಪ ಮಾಡುತ್ತಾನೋ, ಪತ್ನಿಯೂ ಆ ಎಲ್ಲಾ ಕೆಲಸಗಳನ್ನೂ ಆಚರಿಸಬೇಕಾದ್ದು ಚಿತವೆಂದು, ವಿಷ್ಣು ಸ್ಮೃತಿಗೆ ಪ್ರಸಿದ್ಧ ವ್ಯಾಖ್ಯಾನ ಕರ್ತನಾದ ನಂದ ಪಂಡಿತನು ವ್ಯಾಖ್ಯಾನ ಮಾಡಿರುತ್ತಾನೆ.

ಅತ್ತೆ ಮಾವ ಮತ್ತು ದೇವತಾ ಸೇವೆ ಮಾಡಬೇಕು.

ಅತ್ತೆ ಮಾವಂದಿರ ಸೇವೆಯೆಂದರೆ ಅವರ ಪಾದಗಳಿಗೆರಗಿ ಸಂತೋಷ ಪಡಿಸುವದೇ ಅವರ ಸೇವೆಯೆಂದೆಣಿಸಿಕೊಳ್ಳುತ್ತದೆ. ದೇವತಾ ಶಬ್ದಕ್ಕೆ ವಿಷ್ಣುಮುಂತಾದ ದೇವರೆಂದು ಅರ್ಥವಲ್ಲವು. ಯಾತಕ್ಕಂದರೆ, ಸ್ತ್ರೀಯು ತನ್ನ ಇಷ್ಟಾನುಸಾರವಾಗಿ ದೇವತಾ ಉಪಾಸನವನ್ನು ಮಾಡುವದಾದರೆ ಮೇಲೆ ಹೇಳಿದ ವಚನಕ್ಕೆ ವಿರೋಧವಾಗುತ್ತದೆ. ಆದದ್ದರಿಂದ ದೇವತಾ ಶಬ್ದಕ್ಕೆ "ಸೌಭಾಗ್ಯಧಾತ್ರೀಲ

ಷ್ಮ್ಯಾದಿಃ" ಅಂದರೆ, ಸೌಭಾಗ್ಯವನ್ನುಂಟುಮಾಡುವ ಲಕ್ಷ್ಮೀ ಮುಂತಾದವರೆಂದು ಅರ್ಥವು. ವಿದ್ಯೆಯಿಂದ ಬ್ರಾಹ್ಮಣರಿಗೆ ಹ್ಯಾಗೆ ಗೌರವವೋ, ಬಲದಿಂದ ಕ್ಷತ್ರಿಯರಿಗೆ ಹ್ಯಾಗೆ ಖ್ಯಾತಿಯೋ ಅದೇರೀತಿಯಾಗಿ ಸೌಭಾಗ್ಯದಿಂದಲೇ ನಾರೀಯರಿಗೆ ಯಶಸ್ಸೂ ಶ್ರೇಷ್ಠತ್ವವೂ ವುಂಟಾಗುತ್ತವೆ. ಯಾವ ಹೆಂಗಸಿಗೆ ಸೌಭಾಗ್ಯವಿಲ್ಲವೋ ಆ ಹೆಂಗಸಿನ ಮುಖ ದರ್ಶನವೂ ಮಾಡತಕ್ಕದ್ದಲ್ಲವು. ಗಂಡನು ಪ್ರೀತಿಸುವದೇ ಸೌಭಾಗ್ಯಶಬ್ದಕ್ಕೆಅರ್ಥವು. ಪತಿಯ ವಿಶ್ವಾಸಕ್ಕೆ ಯಾರು ಪಾತ್ರಳಾಗುವಳೋ ಅವಳೇ ಸೌಭಾಗ್ಯವತಿಯೆನಿಸಿಕೊಳ್ಳುವಳು.

ಅತಿಥಿ ಸೇವೆ. ಮನುವು ಗ್ರಹಸ್ಥಾಶ್ರಮಿಗಳಿಗೆ ನಿರ್ಣಯಿಸಿರುವ ಮುಖ್ಯ ಕರ್ತವ್ಯವಾದ ಕೆಲಸಗಳಲ್ಲಿ ಅತಿಥಿಸೇವೆಯು ಪ್ರಧಾನವಾದದ್ದು. ಅತಿಥಿಸೇವೆಗೆ ಮನುಷ್ಯ ಯಜ್ಞವೆಂದು ಹೆಸರು. ಈ ಯಜ್ಞದಿಂದ ದೇವತೆಯರು ಸಂತುಷ್ಟರಾಗುತ್ತಾರೆ. ಆದರೆ ಇತರ ಕಾರ್ಯಾವಲಂಬನದಿಂದ ಗ್ರಹಸ್ಥನಾದವನು ತಾನೇ ಸ್ವಂತವಾಗಿ ಅತಿಥಿಸೇವೆಯನ್ನು ಮಾಡಲಾರನು. ಆದ್ದರಿಂದ ಅತಿಥಿಸೇವೆಯನ್ನು ಮಾಡುವದು ಗೃಹಿಣಿಯು ಮಾಡುವ ಕೆಲಸವಾಗಿದೆ. ಗೃಹಿಣಿಯು ಸರಳಾಂತಃಕರಣಳಾಗಿ ಅತಿಥಿಸೇವೆಯನ್ನು ಮಾಡಿದರೆ ಅದು ಅಲ್ಪ ಪ್ರಶಂಸನೀಯವಾದದ್ದಲ್ಲವು. ಪೂರ್ವ ಕಾಲದಲ್ಲಿ ಗೃಹಸ್ಥರ ಮಹಿಳೆಯರು ಕೇವಲ ಅತಿಥಿಸೇವೆಯಲ್ಲಿಯೇ ನಿಯುಕ್ತರಾಗಿದ್ದರು. ಪಾಂಡವರ ತಾಯಿಯಾದ ಕುಂತೀದೇವಿಯು ಬಾಲ್ಯದಲ್ಲಿಯೇ ಅತಿಥಿಸೇವೆಯನ್ನು ಮಾಡುವದರಲ್ಲಿ ಬಹಳ ಕುತೂಹಲವುಳ್ಳವಳಾಗಿದ್ದಳು. ಒಂದು ದಿನ ಮಹರ್ಷಿದುರ್ವಾಸನು ಬಂದು ಕುದಿಯುವ ಪಾಯಸವನ್ನು ಭೋಜನ ಮಾಡಿಸಬೇಕೆಂದು ಕುಂತಿಯನ್ನು ಯಾಚಿಸಲು, ಆಕೆಯು ಅತ್ಯಂತ ಅತಿಥಿವತ್ಸಲಳಾಗಿದ್ದ ಕಾರಣ ಪಾಯಸವನ್ನು ಮಾಡಿ ಕುದಿಯುತಲಿದ್ದ ಆ ಪಾಯಸ ಪಾತ್ರವನ್ನೇ ಕರತಲದಲ್ಲಿಟ್ಟುಕೊಂಡು ಋಷಿಗೆ ಪಾಯಸವನ್ನು ಬಡಿಸಿ ಭೋಜನ ಮಾಡಿಸಿದಳು. ಕೈ

ಲಿದ್ದ ಆ ಕುದಿಯುತಲಿದ್ದ ಪಾತ್ರೆಯಿಂದ ಆಕೆಯ ಕೈ ಸುಟ್ಟುಹೋದರೂ ಅದರಿಂದ ಅವಳು ಅಸಂತುಷ್ಟಳಾಗಲೀ ಕೋಪಗೊಂಡವಳಾಗಲೀ ಆಗಲಿಲ್ಲವು. ದುರ್ವಾಸ ಋಷಿಯು ಆಕೆಯ ಅತಿಥಿವಾತ್ಸಲ್ಯವನ್ನು ನೋಡಿ ಬಹಳವಾಗಿ ಕೊಂಡಾಡಿ ಆಕೆಗೆ ಬೇಕಾದ ವರಗಳನ್ನು ಕೊಟ್ಟನೆಂಬ ಇತಿಹಾಸವಿರುವದು ನಾರಿಯರನೇಕರು ಬಲ್ಲವರಾಗಿದ್ದಾರೆ.



ಗೃಹ ಸಾಮಗ್ರಿಯನ್ನು ಸರಿಯಾಗಿ ಇಟ್ಟಿರಬೇಕು.

ಈ ವಚನಕ್ಕೆ ಸಾಧಕವಾಗಿ ಕೇಶವ ವೈಜಯಂತೀ ಗ್ರಂಥಕಾರನು ಶಂಖಸ್ಮೃತಿಯಿಂದ ವಿಸ್ತಾರವಾದ ವ್ಯಾಖ್ಯಾನದ ಪಂಕ್ತಿಗಳನ್ನುದಾಹರಿಸಿದ್ದಾನೆ. ಆದರೆ ಭವಾನಿ ಚರಣವಂದ್ಯೋಪಾಧ್ಯಾಯನಿಂದ ರಚಿತವಾಗಿರುವ ಶಂಖ ಸಂಹಿತೆಯಲ್ಲಿ ಆ ವಚನವೇ ಕಾಣಬರುವದಿಲ್ಲವಾದ್ದಕ್ಕೆ ವ್ಯಸನ ಪಡಬೇಕಾಗಿದೆ. ಈ ವಚನಕ್ಕೆ ಅರ್ಥವೇನಂದರೆ; ಪ್ರಾತಃಕಾಲದಲ್ಲಿ ಪಾಕಪಾತ್ರೆಗಳನ್ನೂ ಉಪಕರಣಗಳನ್ನೂ ಶುದ್ಧಿ ಮಾಡುವದು, ಮನೆ ಬಾಗಿಲನ್ನು ಸಾರಿಸಿ ರಂಗವಲ್ಲಿಯಿಂದಲಂಕರಿಸುವದು, ಅಗ್ನಿಕಾರ್ಯಕ್ಕೂ ದೇವ ಕಾರ್ಯಕ್ಕೂ ಬೇಕಾದ ಸಾಮಗ್ರಿಯುವನ್ನೊದಗಿಸುವದು, ಪತಿಯು ಹಾಸಿಗೆಯನ್ನು ಬಿಡುವದಕ್ಕೆ ಮೊದಲೇ ತಾನು ಹಾಸಿಗೆಯನ್ನು ಬಿಟ್ಟು ಪತಿಯು ಎದ್ದನಂತರ ಆತನ ಹಾಸಿಗೆಯನ್ನು ತೆಗದು ಸರಿಯಾದ ಸ್ಥಳದಲ್ಲಿ ಜೋಪಾನ ಮಾಡಿಡುವದು, ಪಾಕಕಾರ್ಯ ಕೌಶಲ್ಯ, ಪರಿವಾರ ವರ್ಗದವರಿಗೆ ಸಂತೋಷಪಡಿಸಿ ಅವರಿಗೆ ಭೋಜನ ಮಾಡಿಸುವದು, ಈ ಮುಂತಾದ ಕೆಲಸಗಳನ್ನು ಮಾಡಬೇಕೆಂಬ ಅರ್ಥವು. ಇವು ಪೂರ್ವಾಧ್ಯಾಯದಲ್ಲಿ ಉದಹರಿಸಿರುವ ವಸ್ಥಿ ಪುರಾಣದ ವಚನಗಳ ಮುಖ್ಯಾರ್ಥವಾಗಿರುತ್ತವೆ.

ಅಮುಕ್ತಹಸ್ತತಾ ಮತ್ತು ಗುಪ್ತ ಭಾಂಡತಾ.

ಅಂದರೆ ಹಿಡಿತದಿಂದ ಖರ್ಚುಮಾಡಬೇಕು ಮತ್ತು ಧನವನ್ನು ಗುಪ್ತವಾಗಿ ರಕ್ಷಿಸಿಇಡಬೇಕು. ಪೂರ್ವಾಧ್ಯಾಯದಲ್ಲಿ ಸ್ತ್ರೀಯರಿಗೆ ಧನಾಧಿಕಾರವು ಅ

ತ್ಯಲ್ಪವಾಗಿದೆಯೆಂದು ಹೇಳಲ್ಪಟ್ಟಿದ್ದರೂ, ಪತಿಯಿಂದ ಸಂಪಾದಿಸಲ್ಪಟ್ಟ ಸಮಸ್ತ ಧನವೂ ಪತ್ನಿಯದೇ ಆಗಿರುತ್ತದೆ. ಪತಿಯು ಸಂಪಾದಿಸಿದ ಧನವನ್ನೆಲ್ಲಾ ಅವಳೇ ಭದ್ರಪಡಿಸಿ ಇಡಬೇಕು, ಅದರ ಆದಾಯವ್ಯಯಗಳನ್ನೆಲ್ಲಾ ಅವಳೇ ನೋಡಿಕೊಳ್ಳಬೇಕು. ಆದರೆ ಪತಿಯು ಸಂಪಾದಿಸಿದ ಧನದಮೇಲೆ ತನಿಗೆ ಇಷ್ಟರಸ್ವಾತಂತ್ರ್ಯವಿದ್ದರೂ, ಆತನ ಅನುಮತಿಯನ್ನು ವಿನಾ ಯಾವ ಖರ್ಚನ್ನೂ ಮಾಡಬಾರದು. ಸಕಲ ಋಷಿಗಳೂ ಹೆಂಗಸು ಹೆಚ್ಚು ಖರ್ಚಾಳಿಯಾಗಿರಬಾರದೆಂದು ಖಂಡಿತವಾದ ತಾತ್ಪರ್ಯದಿಂದಲೇ "ವ್ಯಯೇಚಾಮುಕ್ತಹಸ್ತಯಾ" "ವ್ಯಯವಿವರ್ಜಿತಾ" "ವ್ಯಯಪರಾಙ್ಮುಖೀ" ಎಂಬ ವಚನಗಳನ್ನು ಎಲ್ಲಾ ಸ್ಮೃತಿಗಳಲ್ಲಿಯೂ ಕಂಠೋಕ್ತವಾಗಿ ಹೇಳಿರುತ್ತಾರೆ. ಆದದರಿಂದ ಹೆಂಗಸು ಮನಸ್ವೀ ಖರ್ಚುಮಾಡುವಳಾದರೆ ಅಂತವಳನ್ನು ಪತಿಯಾದವನು ಪರಿತ್ಯಜಿಸಿ ಮತ್ತೊಬ್ಬಳನ್ನು ಮದುವೆ ಮಾಡಿಕೊಳ್ಳಬೇಕು. ಇದಕ್ಕೆ ಅನುಸಾರವಾಗಿಯೇ ಸಾಕ್ಷಾತ್ ವಿಷ್ಣುಪತ್ನಿಯಾದ ಲಕ್ಷ್ಮೀದೇವಿಯೂ ಕೂಡ ಯಾವ ಹೆಂಗಸು ವ್ಯಯಕುಂಠಿತಳಾಗಿ ಅಂದರೆ ಖರ್ಚು ಮಾಡದವಳಾಗಿರುವಳೋ ಆ ಹೆಂಗಸಿನ ಮನೆಯಲ್ಲಿ ತಾನು ವಾಸಮಾಡುತ್ತೇನೆಂದು ಹೇಳಿರುತ್ತಾಳೆ. ಈ ಕಾರಣಗಳಿಂದ ಸ್ತ್ರೀಯರಿಗೆ ಮಿತವರಿತು ಖರ್ಚುಮಾಡುವದು ಮುಖ್ಯವಾದ ಗುಣಗಳಲ್ಲೊಂದೆಂದು ಪರಿಗಣಿತವಾಗಿದೆ. ಅದರಲ್ಲಿಯೂ ಯಾರು ಅಲ್ಪ ಆದಾಯದಿಂದ ಸಂಸಾರವನ್ನು ನಿರ್ವಹಿಸಿಕೊಳ್ಳಬೇಕೋ ಅವರು ಬಹಳ ಮಿತವಾಗಿ ಖರ್ಚು ಮಾಡಬೇಕಾದದ್ದು ಕೇವಲ ಅವಶ್ಯಕವಾಗಿಯೂ ಪ್ರಯೋಜನಕಾರಿಯಾಗಿಯೂ ಇರುವದೆಂದು ಸರ್ವರೂ ಅಂಗೀಕರಿಸತಕ್ಕದ್ದಾಗಿದೆ.

ಮಂಗಳಾಚರಣೆಯಲ್ಲಿ ತತ್ಪರಳಾಗಿರಬೇಕು.

ಅಂದರೆ ಮಂಗಳ ದ್ರವ್ಯಗಳಾದ ಅರಶಿನ ಕುಂಕುಮಾದಿಗಳನ್ನು ಯಾವಾಗಲೂ ಧರಿಸಿರಬೇಕು; ವೃದ್ಧಸುಮಂಗಲಿಗಳನ್ನು ನೋಡಿ ಕಲಿತುಕೊಂಡ ಆ

ಚಾರಗಳನ್ನು ಆಚರಿಸುತಲಿರಬೇಕು; ಗುರುಜನರ ಅಪ್ಪಣೆ ಇಲ್ಲದೆ ಪರಗೃಹಕ್ಕೆ ಹೋಗಬಾರದು; ವಾಡಿಕೆಯಾದ ಉಡುಪುಗಳನ್ನು ಧರಿಸದೆ ಅನ್ಯರ ಮನೆಗೆ ಹೋಗಬಾರದು; ಯಾವಾಗಲೂ ವೇಗವಾಗಿ ನಡಿಯುಬಾರದು; ವ್ಯಾಪಾರಗಾರರು, ಸನ್ಯಾಸಿಗಳು, ವೃದ್ಧರು, ವೈದ್ಯರು ಇವರಗಳನ್ನು ವಿನಾ ಮತ್ಯಾವ ಪರಪುರುಷನ ಸಂಗಡಲೂ ಮಾತನಾಡಬಾರದು; ನಾಭಿಪ್ರದೇಶವು ಪರರಿಗೆ ಕಾಣದಹಾಗೆ ಮೈತುಂಬ ವಸ್ತ್ರ ಧಾರಣೆಯನ್ನು ಮಾಡಬೇಕು; ಯಾವಾಗಲೂ ಮೈಮೇಲೆ ಬಟ್ಟೆ ಇಲ್ಲದಿರಕೂಡದು, ಎಂದು ಮುಂತಾಗಿ ಶಂಖ ಸಂಹಿತೆಯಲ್ಲಿ ವಿವರವಾಗಿ ಹೇಳಿದೆ.

ಪತಿಯು ವಿದೇಶಕ್ಕೆ ಹೋಗಿದ್ದರೆ ಶರೀರಾಲಂಕಾರವನ್ನು ಮಾಡಿಕೊಳ್ಳಕೂಡದು, ಪರರ ಮನೆಗೆ ಹೋಗಕೂಡದು, ಎಂಬೀ ವಚನಗಳನ್ನು ಕುರಿತು ಯೋಗೀಶ್ವರನಾದ ಯಾಜ್ಞವಲ್ಕ್ಯನು, ಪತಿಯು ವಿದೇಶಕ್ಕೆ ಹೋಗಿದ್ದರೆ ಸ್ತ್ರೀಯು ಶರೀರಾಲಂಕಾರವನ್ನು ಮಾಡಿಕೊಳ್ಳಕೂಡದು, ವಿವಾಹೋತ್ಸವಾದಿಗಳನ್ನು ನೋಡುವದಕ್ಕೆಳಸಕೂಡದು, ಪರರ ಮನೆಗೆ ಹೋಗಕೂಡದು, ಹಾಸ್ಯಾಲಾಪಗಳನ್ನು ಮಾಡಬಾರದೆಂದು ಮುಂತಾಗಿ ಹೇಳಿರುತ್ತಾನೆ. ಮತ್ತು ಇದನ್ನು ಕುರಿತು ಮನುವು, ಗಂಡನಾದವನು ಗೃಹಕೃತ್ಯ ನಡಿಸುವ ವಿಚಾರದಲ್ಲಿ ಯಾವದೊಂದೂ ನಿಯಾಮಕವನ್ನು ಮಾಡದೆ ವಿದೇಶಕ್ಕೆ ಹೋಗಿದ್ದರೆ, ಸ್ತ್ರೀಯು ತನ್ನ ಕೌಶಲ ಕಾರ್ಯಗಳನ್ನು ಮಾಡಿ ಅದರಿಂದ ಲಭಿಸುವ ದ್ರವ್ಯದಿಂದ ಸಂಸಾರ ನಡಿಸಬೇಕೆಂದು ಹೇಳಿದ್ದಾನೆ. ಇದಕ್ಕೆ ವ್ಯಾಖ್ಯಾನಕಾರನು ಶಂಖಸ್ಮೃತಿಯಿಂದ ವಿಸ್ತಾರವಾದ ವಚನಗಳನ್ನು ತೆಗದು ಉದಹರಿಸಿದ್ದಾನೆ. ಗ್ರಂಥ ಬಾಹುಳ್ಯ ಭಯದಿಂದ ಆ ವಚನಗಳನ್ನೆಲ್ಲಾ ಇದರಲ್ಲಿ ಹೇಳಿಲ್ಲವು. ಪರಗೃಹವೆಂದರೆ ತಂದೆ ತಾಯಿ, ಅಣ್ಣ, ತಮ್ಮ ಅತ್ತೆ ಮಾವ, ಇವರಗಳ ಮನೆಹೊರ್ತು ಇತರರ ಮನೆಯೆಂದು ತಿಳಿಯತಕ್ಕದ್ದಾಗಿದೆ. ಗಂಡನು ವಿದೇಶಕ್ಕೆ ಹೋಗಿದ್ದಾಗ ಹೆಂಡತಿಯು ಯಾವರೀತಿಯಾಗಿರಬೇಕೆಂಬ ವಿಚಾರವನ್ನು ಕುರಿತು

ಮಹಾ ಕವಿ ಕಾಳಿದಾಸ ಪ್ರಣೀತ ಮೇಘ ಸಂದೇಶವೆಂಬ ಕಾವ್ಯದಲ್ಲಿ ಹೇಳಿರುತ್ತದೆ. ಅದರಲ್ಲಿ ಕಾಳಿದಾಸನು, ಪೂರ್ವದಲ್ಲಿ, ದೇವೇಂದ್ರನ ಉದ್ಯಾನವನ್ನು ಕಾದುಕೊಂಡಿದ್ದ ಒಬ್ಬ ಯಕ್ಷನು ತನ್ನ ಕೆಲಸದಲ್ಲಿ ಅಶ್ರದ್ಧೆಯನ್ನು ತೋರಿಸಿದ್ದರಿಂದ ಇಂದ್ರನ ಆನೆಯು ತೋಟವನ್ನು ನುಗ್ಗಿ ಧ್ವಂಸಮಾಡಿತು; ಇದನ್ನು ಇಂದ್ರನು ನೋಡಿ ಖತಿಗೊಂಡು ಆ ಯಕ್ಷನನ್ನು ಶಪಿಸಿದನು; ನಂತರ ಆ ಯಕ್ಷನು ಒಂದು ಸಂವತ್ಸರ ಪರ್ಯಂತ ಅಲಕಾವತಿಯಲ್ಲಿರಕೂಡದೆಂದು ಶಾಪಮೂಲಕ ದೂಡಲ್ಪಟ್ಟವನಾಗಲು, ಅವನು ರಾಮಗಿರಿಯೆಂಬ ಆಶ್ರಮವನ್ನು ಪ್ರವೇಶಿಸಿ ಆ ಒಂದು ವರ್ಷಕಾಲಪರ್ಯಂತ ತನ್ನ ಪತ್ನೀವಿರಹ ಜನ್ಯವಾದ ಯಾತನೆಯನ್ನು ಯಾವರೀತಿಯಾಗಿ ಸಹಿಸಿಕೊಂಡಿದ್ದನೋ ಅದನ್ನೂ, ಮತ್ತು ಪತಿಪ್ರಾಣಳಾದ ಯಕ್ಷಪತ್ನಿಯು ಪತಿ ವಿರಹಕಾಲದಲ್ಲಿ ಯಾವರೀತಿಯಾಗಿ ಇದ್ದಳೆಂಬದನ್ನೂ ವರ್ಣಿಸಿರುತ್ತಾನೆ. ಆ ಯಕ್ಷಪತ್ನಿಯು ಪತಿ ವಿರಹಕಾಲದಲ್ಲಿ ತಜ್ಜನ್ಯ ದುಃಖದಿಂದ ಏಕವೇಣೀಧರಳಾಗಿ ಕೇವಲ ಬ್ರಹ್ಮಚರ್ಯ ವ್ರತದಿಂದ ಯಾವರೀತಿಯಾಗಿ ಕಷ್ಟವನ್ನು ಸಹಿಸಿಕೊಂಡು ಕಾಲಯಾಪನೆಯನ್ನು ಮಾಡುತಲಿದ್ದಳೋ ಅದನ್ನು ವರ್ಣಿಸಿರುವದನ್ನು ನೋಡಿದರೆ ಶೋಕ ಮತ್ತು ಕರುಣಾರಸಪ್ರವಾಹವು ಪ್ರವಹಿಸುತ್ತದೆ. ಯಕ್ಷನು ಇತ್ತಲಾಗಿ ತನ್ನ ಸಮಾಚಾರವನ್ನು ತನ್ನ ಪತ್ನಿಗೆ ತಿಳಿಸುವದಕ್ಕೋಸ್ಕರ ಮೇಘವನ್ನು ಕುರಿತು ತನ್ನ ಪತ್ನಿಯು ಈ ರೀತಿಯಾಗಿರುತ್ತಾಳೆಂದು ಆಕೆಯ ಕುರುಹುಗಳನ್ನು ತಿಳಿಸುತ್ತಾನೆ. ಅದು ಹ್ಯಾಗಂದರೆ—ಶ್ಲೋಕ—ಆಲೋಕೇತೆನಿಪತತಿ ಪುರಾಸಾ ಬಲಿವ್ಯಾಕುಲಾವಾ ಮತ್ಸಾದೃಶ್ಯಂವಿರಹತನುವಾ ಭಾವಗಮ್ಯಂಲಿಖಂತೀ॥ ಪೃಚ್ಛಂತೀವಾ ಮಧುರವಚನಾಂ ಸಾರಿಕಾಂ ಪಂಜರಸ್ಥಾಂಕಚ್ಚಿದ್ಭರ್ತುಃ ಸ್ಮರಸಿರಸಿಕೆತ್ವಂಹಿತಸ್ಯಪ್ರಿಯೇತಿ. ಇದರ ಅರ್ಥ.—"ಎಲೈ ಮೇಘವೆ! ಆ ನನ್ನ ಪ್ರಿಯಳು ನನ್ನ ಸ್ವಾಗಮನ ನಿಮಿತ್ತವಾಗಿ, ದೇವತಾ ಪೂಜೆಯನ್ನು ಮಾಡುವದರಲ್ಲಿ ಆಸಕ್ತಳಾಗಿಯಾದರೂ ಇರುವಳು, ಅಥವಾ ವಿರಹದಿಂದ ನನ್ನ ಶರೀರವು ಯಾವರೀತಿ ಕೃಶವಾಗಿರಬ

ಹುದೋ ಅದನ್ನು ಮನಸ್ಸಿನಲ್ಲಿ ಭಾವಿಸಿಕೊಂಡು ಅದರಂತೆ ಒಂದು ಚಿತ್ರವನ್ನಾದರೂ ಬರಿಯುತಲಿರಬಹುದು, ಅಥವಾ ಮಧುರ ವಚನವ ನುಳ್ಳ ಪಂಜರದಲ್ಲಿರುವ ಸಾರಿಕೆಯನ್ನು ಕುರಿತು, ಎಲೈ ಸಾರಿಕೆ! ನೀನು ಅವನಿಗೆ ಅತ್ಯಂತ ಪ್ರೀತ್ಯಾಸ್ಪದವಾಗಿದ್ದೆ, ಅವನನ್ನು ಸ್ಮರಿಸುತ್ತೀಯಾ? ಎಂದು ಕೇಳುತಲಾದರೂ ಇರುವಳು, ಇಂತವಳನ್ನು ನೀನು ನೋಡುವಿ" ಎಂದು ತಿಳಿಸಿ ಮೇಘದ ಸಂಗಡ ತನ್ನ ವೃತ್ತಾಂತವನ್ನು ಹೇಳಿ ಕಳುಹಿಸಿದ್ದಾಗಿ ವರ್ಣಿಸಿದೆ. ಮತ್ತು ಆ ಯಕ್ಷ ಪತ್ನಿಯು ಪತಿ ವಿರಹಕಾಲದಲ್ಲಿ ಕೆಲಕಾಲ ದೇವತಾ ಪೂಜೆಯಲ್ಲಿ ಆಸಕ್ತಳಾಗಿಯೂ, ಪ್ರತಿ ದಿನದಲ್ಲಿಯೂ ತನ್ನ ಪತಿಯು ಬರುವನೆಂಬ ನಿರೀಕ್ಷಣೆಯು ಭಂಗವಾಗಿ ಕೃಶಳಾಗಿಯೂ, ಕೆಲ ಕಾಲ ಒಂದೇ ಮಗ್ಗಲಾಗಿ ಹಾಸಿಗೆಯ ಮೇಲೆ ಶಯನ ಮಾಡುತ್ತಲೂ ವಿರಹಯಾತನಾನುಭವವನ್ನು ಮಾಡುತಲಿದ್ದಳು. ಆದುದರಿಂದ ಸ್ತ್ರೀಯರು ಪತಿಯ ವಿರಹಕಾಲದಲ್ಲಿ ವ್ರತವನ್ನವಲಂಬಿಸಿ ಪತಿಯ ಆಗಮನವನ್ನು ನಿರೀಕ್ಷಿಸುತಲಿರಬೇಕು. ಸ್ತ್ರೀಯರಿಗೆ ಇಚ್ಛಾನುಸಾರವಾಗಿ ಕಾರ್ಯ ನಿರ್ವಾಹ ಮಾಡುವದರಲ್ಲಿ ಅಧಿಕಾರವಿಲ್ಲವಾದದರಿಂದ, ಮನುವು, ಸ್ತ್ರೀಯು ಬಾಲಳಾದರೂ, ಯುವತಿಯಾದರೂ, ವೃದ್ಧಳಾದರೂ ತನ್ನ ಇಚ್ಛಾನುಸಾರವಾಗಿ ನಡಿಯಕೂಡದೆಂದು ಹೇಳಿರುತ್ತಾನೆ. ಆದಕಾರಣ ಯಾವಾಗಲೂ ಹೆಂಗಸರಿಗೆ ಸ್ವಾತಂತ್ರ್ಯವಿಲ್ಲವು. ಪತಿಯು ಪರಲೋಕಗತನಾದರೆ ಸ್ತ್ರೀಯು ಸಹಗಮನವನ್ನಾಗಲಿ ಮಾಡಬೇಕು ಅಥವಾ ಬ್ರಹ್ಮಚಾರಿಣೀಯಾಗಿಯಾದರೂ ಇರಬೇಕೆಂದು ಹೇಳಲ್ಪಟ್ಟದೆ. ಕಾಶೀ ಖಂಡಕಾರನು ಬ್ರಹ್ಮಚರ್ಯ ವಿಷಯದಲ್ಲಿ ಅತಿಕಠೋರವಾದ ವಿಧಿಗಳನ್ನು ವಿಧಿಸಿರುತ್ತಾನೆ. ಆದರೆ ಕಲಿಯುಗಕ್ಕೆ ಉಕ್ತವಾಗಿರುವ ಪಾರಾಶರ್ಯಸ್ಮೃತಿಯಲ್ಲಿ ಸಹಗಮನವೂ ಬ್ರಹ್ಮಚರ್ಯವೂ ಉತ್ತಮವಾದವವುಗಳೆಂದು ಉಕ್ತವಾಗಿದ್ದರೂ ಪತಿವಿಹೀನಳು ಪುನರುದ್ವಾಹ ಮಾಡಿಕೊಳ್ಳಬಹುದೆಂದು ವಿಧಿಸಲ್ಪಟ್ಟದೆ. ಈ ವಿಧಿಯನ್ನನುಸರಿಸಿ ಪ್ರಕೃತದಲ್ಲಿ ಸುಶಿಕ್ಷಿತರಾದ ಸಭ್ಯರು ಬಾಲ್ಯದಲ್ಲಿಯೇ ಹೆಣ್ಣು

ಹುಡುಗರಿಗೆ ಶೋಚನೀಯವಾದ ವೈಧವ್ಯವು ಸಂಪ್ರಾಪ್ತವಾದರೆ ಅಂ ತವರಿಗೆ ಪುನರ್ವಿವಾಹ ಮಾಡ ಬಹುದಾದ ಪ್ರಥೆಯನ್ನು ಏರ್ಪಡಿಸು ತಲಿದ್ದಾರೆ.

ವಿಷ್ಣುಸ್ಮೃತಿಯು ಪ್ರಾಯಶಃ ವಾಕ್ಯರೂಪವಾಗಿ ಬರಿಯಲ್ಪಟ್ಟಿದೆ. ಅಲ್ಲಲ್ಲಿ ಕೆಲವು ಶ್ಲೋಕಗಳು ಮಾತ್ರ ಬರಿಯಲ್ಪಟ್ಟಿವೆ. ಸ್ತ್ರೀಧರ್ಮ ನಿರ್ಣಯ ವಿಚಾರದಲ್ಲಿ ಕಡೆಗೆ ಈ ಮೂರು ಶ್ಲೋಕಗಳು ಉದಾಹೃ ತವಾಗಿವೆ.

ನಾಸ್ತಿಸ್ತ್ರೀಣಾಂಪೃಥಗ್ಯಜ್ಞೋ ನವ್ರತಂನಾಪ್ಯುಪೋಷಣಂ ।
ಪತಿಂಶುಶ್ರೂಷತೆಯೇನ ತೇನಸ್ವರ್ಗೇಮಹೀಯತೆ ॥
ಪತ್ಯೌಜೀವತಿಯಾಯೋಷಿ ದುಪವಾಸವ್ರತಂಚರೇತ್ ।
ಆಯುಸ್ಸಾಹರತೆಪತ್ಯು ರ್ನರಕಂಚೈವಗಚ್ಛತಿ ॥
ಮೃತೆಭರ್ತರಿಸಾಧ್ವೀಸ್ತ್ರೀ ಬ್ರಹ್ಮಚರ್ಯೆವ್ಯವಸ್ಥಿತಾ ।
ಸ್ವಯಂಗಚ್ಛತ್ಯಪುತ್ರಾಪಿ ಯಥಾತೆಬ್ರಹ್ಮಚಾರಿಣಃ ॥

ಅರ್ಥ.—ಸ್ತ್ರೀಯರಿಗೆ ಪತಿಶುಶ್ರೂಷೆಯನ್ನು ಹೊರತು ಬೇರೆ ಇತ ರವಾದ ವ್ರತ, ಉಪವಾಸ, ಯಜ್ಞ ಯಾವದೂ ಇಲ್ಲವು; ಪತಿಯ ಶು ಶ್ರೂಷೆಯನ್ನು ಮಾಡಿದರೆ ಸಾಕು, ಅದರಿಂದಲೇ ಅವಳಿಗೆ ಸ್ವರ್ಗ ಸು ಖ ವುಂಟಾಗುವದು. ಯಾವ ಸ್ತ್ರೀಯು ಪತಿಯು ಜೀವಂತನಾಗಿರು ವಾಗ ಉಪವಾಸ ವ್ರತಾದಿಗಳನ್ನು ಮಾಡುವಳೋ, ಅವಳು ಪತಿಯ ಆಯುಷ್ಯವನ್ನು ಹರಣ ಮಾಡುವಳು, ಮತ್ತು ನರಕಕ್ಕೆ ಹೋಗು ವಳು. ಸಾಧುಶೀಲಳಾದ ರಮಣಿಯು ಪತಿಗೆ ಪರಲೋಕಪ್ರಾಪ್ತಿ ಯಾದನಂತರ ಬ್ರಹ್ಮಚರ್ಯವನ್ನು ಅವಲಂಬಿಸಿದರೆ, ನಿಷ್ಠನಾದ ಬ್ರ ಹ್ಮಚಾರಿಯ ಹಾಗೆ ಸ್ವರ್ಗವನ್ನು ಹೊಂದುವಳು.

ಈವರಿವಿಗೆ ವಿಷ್ಣುಸ್ಮೃತಿಯಲ್ಲಿ ಉದಾಹೃತವಾದ ಸ್ತ್ರೀಧರ್ಮ ಗಳೆಲ್ಲವನ್ನೂ ವಿಶದವಾಗಿ ಹೇಳಿರುವದಲ್ಲದೆ, ದಕ್ಷಸ್ಮೃತಿ ಮತ್ತೆ ಕೆ ಲವು ಇತರ ಸ್ಮೃತಿಗಳನ್ನು ವಿನಾ, ಮಿಕ್ಕ ಎಲ್ಲಾ ಸ್ಮೃತಿಗಳನ್ನೂ

ಸಮಾಲೋಚನೆ ಮಾಡಿದಹಾಗಾಯಿತು. ದಕ್ಷ ಸಂಹಿತೆಯಲ್ಲಿ ಸ್ತ್ರೀಯರ ಕರ್ತವ್ಯವನ್ನು ನಿರ್ಣಯಮಾಡಿಲ್ಲವು. ಅವರು ಹ್ಯಾಗೆ ಪ್ರಶಂಸನೀಯರಾದಾರೆಂಬ ಅಂಶವು ಮಾತ್ರ ಹೇಳಲ್ಪಟ್ಟಿರುತ್ತದೆ. ವ್ಯಾಸ ಸಂಹಿತೆಯು ವಿಷ್ಣು ಸಂಹಿತೆಗಿಂತಲೂ ಬಾಹುಳ್ಯವಾಗಿಲ್ಲದಿದ್ದರೂ ಅದರಲ್ಲಿ ವಿಷ್ಣು ಸ್ಮೃತಿಗಿಂತಲೂ ಹೆಚ್ಚಾಗಿ ಸ್ತ್ರೀಯರ ನಡವಳಿತೆಯ ವಿಚಾರವು ವರ್ಣಿತವಾಗಿದೆ. ಈ ಎರಡು ಸ್ಮೃತಿಗಳ ವಚನಗಳನ್ನು ಕುರಿತು ಪ್ರಸ್ತಾಪಿಸಿ ಈ ಅಧ್ಯಾಯವನ್ನು ಪೂರೈಸೋಣವಾಗುತ್ತದೆ. ಮತ್ತು ಇದುವರಿವಿಗೂ ಕಾತ್ಯಾಯನ ಸ್ಮೃತಿಯನ್ನುಕುರಿತು ಪ್ರಸ್ತಾಪ ಮಾಡಿರುವದಿಲ್ಲವು. ಕಾತ್ಯಾಯನ ಸ್ಮೃತಿಯು ಇತರ ಎಲ್ಲಾ ಸ್ಮೃತಿಗಳ ಅರ್ಥವನ್ನೂ ಪರಿಷ್ಕಾರವಾಗಿ ತಿಳಿಸುತ್ತದೆ. ಇತರ ಸ್ಮೃತಿಗಳಲ್ಲಿರುವ ಅಸ್ಪಷ್ಟಾರ್ಥಗಳನ್ನೂ ಕಾತ್ಯಾಯನನು ತನ್ನ ಸ್ಮೃತಿಯಲ್ಲಿ ಸ್ಪಷ್ಟಪಡಿಸಿರುತ್ತಾನೆ. ಇತರ ಸ್ಮೃತಿಗಳಲ್ಲಿ ಇಲ್ಲದಿರುವ ಅಂಶಗಳೂ ಕಾತ್ಯಾಯನ ಸ್ಮೃತಿಯಲ್ಲಿ ಸಿಕ್ಕುತ್ತವೆ. ಕಾತ್ಯಾಯನನು ಸ್ತ್ರೀಯರಿಗೆ ಕರ್ತವ್ಯ ಕರ್ಮಗಳಲ್ಲಿ, ಪತಿಯು ವಿದೇಶಕ್ಕೆ ಹೋಗಿರುವಾಗ ಆತನ ಧಾರ್ಯಾಗ್ನಿಯನ್ನು ಸಂರಕ್ಷಿಸಿಕೊಂಡಿರಬೇಕಾದದ್ದು ಮುಖ್ಯವಾದ ಕೆಲಸವೆಂದು ಹೇಳಿರುವದಲ್ಲದೆ, ಅಗ್ನಿ ಸಂರಕ್ಷಣೆ ಮಾಡುವಣದರಿಂದ ಸ್ತ್ರೀಯರಿಗೆ ಸೌಭಾಗ್ಯ ವುಂಟಾಗುವದೆಂದು ಹೇಳಿರುತ್ತಾನೆ. ಮತ್ತು ಪ್ರಾತಃಕಾಲದಲ್ಲಿ ಯಾರು ಸೌಭಾಗ್ಯವತಿಗಳ ಮುಖವನ್ನು ನೋಡುವರೋ ಅವರಿಗೆ ಆ ದಿವಸವೆಲ್ಲಾ ಮಂಗಳಕರವಾಗಿರುವದು, ದುರ್ಭಾಗ್ಯಳ ಮುಖಾವಲೋಕನವನ್ನು ಮಾಡಿದರೆ ಕಲಹವುಂಟಾದ್ದು ಸಂಭವಿಸುವದೆಂತಲೂ ಹೇಳಿರುತ್ತಾನೆ. ವಿಷ್ಣುಸಂಹಿತೆಯ ಅಂತ್ಯ ಭಾಗದಲ್ಲಿ ಶ್ರೀಮನ್ನಾರಾಯಣನು ಲಕ್ಷ್ಮೀದೇವಿಯನ್ನು ಕುರಿತು, ಹೇ ಲಕ್ಷ್ಮೀ! ನೀನು ಯಾವ ಯಾವ ಸ್ಥಳದಲ್ಲಿ ಯಾವ ಯಾವ ಹೆಂಗಸಿನ ಮನೆಯಲ್ಲಿ ಇರುವದಕ್ಕೆ ಇಷ್ಟವುಳ್ಳವಳಾಗಿರುತ್ತಿ? ಎಂದು ಕೇಳಲು ಲಕ್ಷ್ಮೀದೇವಿಯು "ನಾರೀಷುನಿತ್ಯಂ ಸುವಿಭೂಷಿತಾಸು ಪತಿವ್ರತಾಸು ಪ್ರಿಯವಾದಿನೀಷು ॥

ಅಮುಕ್ತಜನಸ್ತ್ರಾಸು ಸುತಾನ್ವಿತಾಸು ಸುಗುಪ್ತಭಾಂಡಾಸು ಬಲಿಪ್ರಿಯಾಸು ॥ ಸಮ್ಮೃಷ್ಟವೇಶ್ಮಾಸು ಜಿತೇಂದ್ರಿಯಾಸು ಬಲಿವ್ಯಪೇತಾಸು ವಿಲೋಲುಪಾಸು ॥ ಧರ್ಮವ್ಯಪೇಕ್ಷಿತಾಸು ದಯಾನ್ವಿತಾಸು ಸ್ಥಿತಾಸದಾಹಂ ಮಧುಸೂದನೇತಿ ॥ ಅರ್ಥ.–ಉತ್ತಮವಾದ ಭೂಷಣಾಲಂಕೃತಳಾಗಿಯೂ, ಪ್ರಿಯವಾದಿನಿಯಾಗಿಯೂ, ವ್ಯಯಕುಂಠಿತಳಾಗಿಯೂ, ದ್ರವ್ಯಸಂಚಯನ ಮಾಡುವದರಲ್ಲಿ ಯತ್ನಶೀಲಳಾಗಿಯೂ, ದೇವತಾ ಪೂಜೆಯಲ್ಲಿ ಆಸಕ್ತಳಾಗಿಯೂ, ಗೃಹವನ್ನು ಪರಿಷ್ಕಾರವಾಗಿ ಇಟ್ಟುಕೊಂಡಿರುವಣದರಲ್ಲಿ ಕುತೂಹಲವುಳ್ಳವಳಾಗಿಯೂ, ಜಿತೇಂದ್ರಿಯಳಾಗಿಯೂ, ಕಲಹವಿರತಳಾಗಿಯೂ, ವಿಲಾಸಯುಕ್ತಳಾಗಿಯೂ, ಧರ್ಮಕಾರ್ಯಪರಳಾಗಿಯೂ, ದಯಾಶೀಲಳಾಗಿಯೂ, ಇರುವ ಹೆಂಗಸಿನಲ್ಲಿ ನಾನು ವಾಸಮಾಡುತ್ತೇನೆ; ಹೇ ಮಧುಸೂದನ! ನಿನ್ನಲ್ಲಿ ನನಗೆ ಹ್ಯಾಗೆ ವಿಶ್ವಾಸವೋ ಈ ಸದ್ಗುಣ ಶೀಲಳಾದ ನಾರಿಯಲ್ಲಿಯೂ ಅದೇರೀತಿಯಾಗಿ ವಿಶ್ವಾಸವಿರುತ್ತೆ” ಎಂದು ಹೇಳಿದಳು. ಈ ಲಕ್ಷ್ಮೀ ವಾಕ್ಯವು ಸ್ತ್ರೀಯರ ನಡತೆಯ ಒಂದತಿಸುಂದರವಾದ ಚಿತ್ರವಾಗಿರುತ್ತದೆ.



ಮೊದಲು ಹೇಳಿರುವಪ್ರಕಾರ ಸ್ತ್ರೀಯರಿಗೆ ಕರ್ತವ್ಯವಾಗಿಯೂ ಪ್ರಯೋಜನಕರವಾಗಿಯೂ ಇರುವ ಕಾರ್ಯಗಳನ್ನೆಲ್ಲವನ್ನೂ ನಿರ್ವಹಿಸಿಕೊಂಡು ಕಲಹಕಾರಿಣಿಯಾಗದೆ ಪುತ್ರವತಿಯಾಗಿ ಜಿತೇಂದ್ರಿಯಳಾಗಿ ಸುಶೀಲಳಾಗಿಯೂ ಇದ್ದರೆ ಲಕ್ಷ್ಮೀದೇವಿಯು ಯಾವಾಗಲೂ ಅಂತವಳ ಮನೆಯಲ್ಲಿ ವಾಸಮಾಡುತಲಿರುವಳು. ವಾಸ್ತವ್ಯತಃ, ಅತಿ ಪ್ರಾಚೀನಕಾಲದಲ್ಲಿ ಅಂದರೆ, ಮನು ಯಾಜ್ಞವಲ್ಕ್ಯ ಮೊದಲಾದ ಋಷಿಗಳು ಸ್ಮೃತಿಗಳನ್ನು ರಚಿಸಿದಾಗ ಸ್ತ್ರೀಯರ ನಡತೆಯು ಅತ್ಯುನ್ನತಿಯನ್ನು ಹೊಂದಿತ್ತು. ಈ ಋಷಿಗಳೂ ಕೂಡ ಆ ಕಾಲೀನರಾದ ಸ್ತ್ರೀಯರ ಆಡಳಿತಗಳನ್ನು ನೋಡಿಯೇ ಸ್ಮೃತಿಗಳನ್ನು ಬರೆದಿರಬೇಕು. ಮತ್ತು ಅವರು ಸ್ತ್ರೀ ಚರಿತ್ರೆಯು ಎಷ್ಟುದೂರ ಪರ್ಯಂತವಾಗಿ ಉನ್ನತಿಯನ್ನು ಹೊಂದುವದಕ್ಕೆ ಸಾಧ್ಯವಾಗಿತ್ತೋ ಅದರ ಯ

ಥಾರ್ಥ ಚಿತ್ರವನ್ನು ಬರದಿರುತ್ತಾರೆ. ಪೌರಾಣೀಕರು ಮಾತ್ರ ನಿಜದಮೇಲೆ ಅಷ್ಟು ದೃಷ್ಟಿಯನ್ನು ಕೊಡದೆ ಅತ್ಯಂತ ಕಠೋರವಾದ ನಿಯಮಗಳನ್ನು ಪ್ರಚುರ ಮಾಡಿರುತ್ತಾರೆ. ವ್ಯಾಸ ಸಂಹಿತೆಯಲ್ಲಿ ಮತ್ತೊಂದುತ್ಕೃಷ್ಟವಾದ ಸ್ತ್ರೀ ಚರಿತ್ರೆಯ ವಿವರಣೆಯನ್ನು ನೋಡಬಹುದು. ಅದೇನಂದರೆ.

"ತಂದೆ, ತಂದೆಯತಂದೆ, ಅಣ್ಣ, ತಮ್ಮ, ಪಿತೃವ್ಯ, ಜ್ಞಾತಿ, ತಾಯಿ ಇವರು ಕ್ರಮವಾಗಿ ಒಬ್ಬರಿಲ್ಲದಾಗ್ಯೆ ಒಬ್ಬರು, ವಯಸ್ಸು ವಿದ್ಯೆ ವಂಶ ಇವುಗಳಲ್ಲಿ ತಕ್ಕವನಾಗಿರುವ ವರನಿಗೆ ಕನ್ಯಾಪ್ರದಾನ ಮಾಡಬೇಕು. ಇವರು ಯಾರೂ ಇಲ್ಲದಿದ್ದರೆ ಕನ್ಯೆಯೇ ಸ್ವಯಂವರಿಸಬಹುದು. ಆದಿಯಲ್ಲಿ ಸಾಕ್ಷಾತ್ ಈಶ್ವರನು ತನ್ನ ದೇಹವನ್ನು ಎರಡು ಭಾಗ ಮಾಡಿದ್ದಾಗಿಯೂ, ಅದರಲ್ಲಿ ಒಂದು ಭಾಗದಿಂದ ಪತ್ನಿಯೂ ಮತ್ತೊಂದು ಭಾಗದಿಂದ ಪತಿಯು ಉತ್ಪತ್ತಿಯಾದರೆಂದು ವೇದದಲ್ಲಿ ಉಕ್ತವಾಗಿದೆ. ಪುರುಷನು ವಿವಾಹವಾಗುವವರಿವಿಗೂ ಅರ್ಧ ದೇಹಿಯೆಂದು ಹೇಳಲ್ಪಡುತ್ತಾನೆ. ಶ್ರುತಿಯಲ್ಲಿ ಅರ್ಧ ದೇಹವು ಹುಟ್ಟುವದಿಲ್ಲವಾದರೂ ಉಂಟುಮಾಡಲ್ಪಡಬಹುದೆಂದು ಹೇಳಲ್ಪಟ್ಟದೆ. ವಿವಾಹಿತನಾದನಂತರ ಪುರುಷನು ಗೃಹನಿರ್ಮಾಣಮಾಡಿ ಅಗ್ನಿ ಮತ್ತು ಪತ್ನಿಯೊಡನೆ ಅದರಲ್ಲಿ ವಾಸಮಾಡಬೇಕು. ತನ್ನ ಸ್ವಂತ ದ್ರವ್ಯದಿಂದ ಜೀವನ ಮಾಡಿಕೊಂಡು ಧಾರ್ಯಾಗ್ನಿಯು ಹೋಗದ ಹಾಗೆ ನೋಡಿಕೊಳ್ಳಬೇಕು. ಧರ್ಮಾರ್ಥ ಕಾಮಗಳೆಂಬ ತ್ರಿವರ್ಗ ಲಾಭಕ್ಕೋಸ್ಕರ ಸ್ತ್ರೀ ಪುರುಷರಿಬ್ಬರೂ ಒಂದೇಮನಸ್ಸುಳ್ಳವರಾಗಿ ಒಂದೇ ವಿಧವಾದ ನಿಯಮಗಳನ್ನು ಆಚರಿಸುತಲಿರಬೇಕು. ಸ್ತ್ರೀಯರಿಗೆ ಈ ತ್ರಿವರ್ಗ ಸಾಧನೇಗೋಸ್ಕರ ಮಾರ್ಗಾಂತರವಿಲ್ಲವು. ಶಾಸ್ತ್ರದಲ್ಲಿ ವಿಧಿಸಿರುವ ಭಾವಾರ್ಥಗಳನ್ನು ಸಂಗ್ರಹಮಾಡಿ ಸೂಕ್ಷ್ಮವಾಗಿ ನೋಡಿದರೂ, ಅವರಿಗೆ ಸ್ವತಂತ್ರವನ್ನು ಕೊಟ್ಟ ಹಾಗೆ ಕಾಣಬರುವದಿಲ್ಲ. ಸ್ತ್ರೀಯು ಪತಿಗಿಂತಲೂ ಮುಂಚಿತವಾಗಿ ಹಾಸಿಗೆಯಿಂದೆದ್ದು ತನ್ನ ದೇಹ ಶುದ್ಧಿಯನ್ನು ಮಾಡಿಕೊಂಡು ಪತಿಯು ಎ

ದ್ವನಂತರ ಅವನ ಹಾಸಿಕೆಯನ್ನು ಸುತ್ತಿಡಬೇಕು. ಅಗ್ನಿಶಾಲೆ, ಅಂಗಳ, ಮುಂಬಾಗಿಲು ಮುಂತಾದ್ದನ್ನ ಸಾರಿಸಿ ಗುಡಿಸಬೇಕು. ನಂತರ ಅಗ್ನಿಕಾರ್ಯಕ್ಕೆ ಬೇಕಾದ ಸಾಮುಗ್ರಿಯಗಳನ್ನು ಸಿದ್ಧಪಡಿಸ ಬೇಕು, ನಂತರ ಗೃಹ ಸಾಮುಗ್ರಿಯಗಳನ್ನು ನೋಡಿಕೊಳ್ಳಬೇಕು. ಈ ರೀತಿಯಾಗಿ ಪ್ರಾತಃಕಾಲದ ಕೆಲಸಗಳನ್ನೆಲ್ಲಾ ಪೂರೈಸಿ, ಗುರುಜನರಿಗೆರಗಿ, ಅವರು ಕೊಟ್ಟಿರುವ ವಸ್ತ್ರಾಲಂಕಾರಗಳನ್ನೆಲ್ಲಾ ಧಾರಣ ಮಾಡಿಕೊಂಡು, ಮನೋವಾಕ್ಕಾಯಗಳಿಂದ ಪತಿಸೇವೆಯಲ್ಲಿ ತತ್ಪರಳಾಗಿರಬೇಕು. ಛಾಯಾನುರೀತಿಯಾಗಿ ಪತಿಯನ್ನನುಸರಿಸಿಕೊಂಡಿರಬೇಕು. ಪತಿಗೆ ಹಿತವಾದ ಕಾರ್ಯಗಳನ್ನು ಅವನ ಸ್ನೇಹಿತಳಹಾಗೂ, ಆತನು ಆಜ್ಞಾಪಿಸಿದ ಕಾರ್ಯಗಳನ್ನು ನೆರವೇರಿಸುವದರಲ್ಲಿ ದಾಸಿಯ ಹಾಗೂ ತತ್ಪರಳಾಗಿರಬೇಕು. ಈರೀತಿ ಸಕಲ ಕಾರ್ಯಗಳೂ ಆದನಂತರ ಪಾಕಕ್ರಿಯೆಯನ್ನು ಮಾಡಿ ಪತಿಗೂ ಇತರರಿಗೂ ಭೋಜನ ಮಾಡಿಸಿ, ನಂತರ ತಾನೂ ಭುಂಜಿಸಿ, ಅನಂತರ, ಉಳಿದ ಕಾಲದಲ್ಲಿ ಮನೆಯ ಆಯವ್ಯಗಳನ್ನು ನೋಡಿಕೊಳ್ಳಬೇಕು. ಈ ಆಚರಣೆಯು ಪ್ರತ್ಯಹದಲ್ಲಿಯೂ ನಡಿಯತಕ್ಕದ್ದಾಗಿದೆ. ಸಾಯಿಂಕಾಲವಾದ ನಂತರ, ಪತಿಗೆಚನ್ನಾಗಿ ಭೋಜನಾದಿಗಳನ್ನು ಮಾಡಿಸಿ, ತಾನೂ ಆಹಾರವನ್ನು ಮಾಡಿ ಗೃಹಕಾರ್ಯಗಳನ್ನು ಯಥಾರೀತಿಯಾಗಿ ನೋಡಿಕೊಂಡು, ಸಾಧುಶಯನವನ್ನು ಹಾಸಿ, ಪತಿಯು ಶಯನಮಾಡಿದಮೇಲೆ, ಅವನ ಸಮೀಪದಲ್ಲಿ ಅವನನ್ನೇ ಧ್ಯಾನಮಾಡಿಕೊಂಡು, ತಾನೂ ಶಯನಮಾಡಬೇಕು." ಎಂದು ಮುಂತಾಗಿ ಸ್ತ್ರೀಯರಿಗೆ ನಿತ್ಯಕರ್ಮಗಳನ್ನು ಕುರಿತು ಹೇಳಿರುವ ಈ ವಚನಗಳು ಇತರ ಸ್ಮೃತಿಗಳಿಗೆ ಬಹಳ ಭಿನ್ನಿಸಿರುವದಿಲ್ಲವು. ಆದರೆ ಸ್ವಲ್ಪ ವಿಸ್ತಾರವಾಗಿ ವಿವರಿಸಲ್ಪಟ್ಟಿರುತ್ತವೆ. ಈರೀತಿ ನಿಯಾಮಕಗಳನ್ನು ಮಾಡಿದ ನಂತರ, ವ್ಯಾಸಸಂಹಿತೆಯಲ್ಲಿ ಸ್ತ್ರೀಯರಿಗೆ ಪ್ರಯೋಜನಕರವಾದ ಕೆಲವು ಸಂಗತಿಗಳು ಬರಿಯಲ್ಪಟ್ಟಿವೆ. ಏನಂದರೆ– "ಸ್ತ್ರೀಯು

ಅಜಾಗರೂಕಳಾಗಿರಕೂಡದು, ತನಿಗೋಸ್ಕರವೇ ಯಾವದನ್ನೂ ಚಿಂತಿಸಕೂಡದು, ಜಿತೇಂದ್ರಿಯಳಾಗಿರಲು ಯತ್ನಶೀಲಳಾಗಿರಬೇಕು, ಯಾವಾಗಲೂ ಘಟ್ಟಿಯಾಗಿ ಮಾತನಾಡಕೂಡದು, ಮಿತ ಭಾಷಿಣಿಯಾಗಿರಬೇಕು, ತನ್ನ ಪತಿಯನ್ನು ಕುರಿತು ಪರುಷವಾದ ಮಾತುಗಳನ್ನಾಗಲೀ, ಅಪ್ರಿಯವಾದ ಮಾತುಗಳನ್ನಾಗಲೀ ಹೇಳುವದು ಅತ್ಯಂತ ದೂಷ್ಯವಾದದ್ದು, ಯಾರ ಸಂಗಡಲೂ ವಿವಾದ ಮಾಡಕೂಡದು, ಧರ್ಮಾರ್ಥವಿರೋಧವಾದ ಕೆಲಸಗಳನ್ನು ಮಾಡಕೂಡದು, ಸಾಧುಶೀಲಳಾದ ಹೆಂಗಸಿಗೆ ಉನ್ಮಾದ, ಪ್ರಮಾದ, ಕೋಪ, ಈರ್ಷೆ, ವಂಚನೆ, ಅಭಿಮಾನ, ಖಲತೆ, ಹಿಂಸೆ, ವಿದ್ವೇಷ, ಅಹಂಕಾರ, ಧೂರ್ತತೆ, ನಾಸ್ತಿಕತೆ, ಸಾಹಸ, ಚೌರ್ಯ ಮತ್ತು ಜಂಭ ಮುಂತಾದ ಯಾವ ದುರ್ಗುಣವೂ ಇರಕೂಡದು. ಇವುಗಳನ್ನೆಲ್ಲಾ ಪರಿತ್ಯಜಿಸಿ ಮನೋವಾಕ್ಕಾಯಗಳಿಂದ ಪತಿ ಸೇವೆಯಲ್ಲಿ ತತ್ಪರಳಾಗಿದ್ದರೆ ಇಹದಲ್ಲಿ ಯಶಸ್ಸು, ಪರದಲ್ಲಿ ಪತಿಯೊಡನೆ ಬ್ರಹ್ಮ ಸಾಲೋಕ್ಯ ಸಾಮಿಪ್ಯ, ಸಾರೂಪ್ಯಾದಿ ಆನಂದಗಳುಂಟಾಗುವವು, ” ಎಂದು ಉಕ್ತವಾಗಿದೆ.

ವ್ಯಾಸಸಂಹಿತೆಯ ಈ ಸುಂದರವಾಗಿಯೂ ಪರಿಷ್ಕಾರವಾಗಿಯೂ ಇರುವ ವರ್ಣನೆಯಮೇಲೆ ಹೆಚ್ಚಾಗಿ ಹೇಳಬೇಕಾದ್ದಿಲ್ಲವು. ಇದನ್ನು ಓದಿದರೆ ಸ್ಮೃತಿ ಕರ್ತರು ಸ್ತ್ರೀಯರ ನಡವಳಿಕೆಯ ವಿಷಯದಲ್ಲಿ ಎಷ್ಟು ಉನ್ನತಿಯನ್ನು ಭಾವಿಸುತಲಿದ್ದರೆಂಬುವದು ಸ್ಪಷ್ಟವಾಗಿ ಹೃದಯಂಗಮವಾಗುತ್ತದೆ. ಈ ಉಕ್ತಗುಣ ವಿಶಿಷ್ಟಳಾದ ಸ್ತ್ರೀಯರೀಗ ಅತಿವಿರಳವಾದಾಗ್ಯೂ, ಪೂರ್ವ ಭಾರತವರ್ಷದಲ್ಲಿ ಅನೇಕರು ಇದ್ದರಲ್ಲದೆ, ಈಗಲೂ ಅಂತವರನ್ನು ನೋಡಬಹುದು. ಈಗಣ ಕೆಲವು ದೊಡ್ಡ ಮನುಷ್ಯರು, ಮತ್ತು ವಿದ್ಯಾವಂತರೆನ್ನಿಸಿಕ್ಕೊಂಡಿರುವವರು ನಮ್ಮ ದೇಶೀಯರಾದ ಸ್ತ್ರೀಯರಿಗೆ ವಿದ್ಯಾಶಿಕ್ಷೆಯ ನಿಯಮಗಳಿರಲಿಲ್ಲವಾದದ್ದರಿಂದಲೇ ಈಗಲೂ ಕೇವಲ ದಾಸೀಯರು ಮಾಡುವ ಕೆಲಸಗಳನ್ನು ಮಾಡಿಕ್ಕೊಂಡು ಕಲಹಕಾರಿಣಿಯರಾಗಿ ಕಾಲಯಾಪನೆಯನ್ನು ಮಾಡಿಕ್ಕೊಂಡಿದ್ದಾರೆಂದು ತಿಳದುಕ್ಕೊಂಡಿದ್ದಾರೆ.

ಆದರೆ ಅವರು ವ್ಯಾಸಸಂಹಿತೆಯನ್ನು ಓದಬೇಕಾದದ್ದು ಅವಶ್ಯಕವು. ಅದನ್ನು ಓದಿದರೆ ಪೂರ್ವದಲ್ಲಿ ಹೆಂಗಸರು ಕೇವಲ ದಾಸೀಯರ ವೃತ್ತಿಯನ್ನೇ ಮಾಡುತಲಿರಲಿಲ್ಲವೆಂತಲೂ, ಸಂಸಾರದ ಆದಾಯ ವ್ಯಯಗಳನ್ನೆಲ್ಲಾ ನೋಡಿಕೊಳ್ಳುತಲಿದ್ದರೆಂತಲೂ ಅರಿಯುವರು. ಪೂರ್ವ ಗ್ರಂಥಗಳನ್ನು ನೋಡದೆ ದಿವಾನಗಿರಿಯ ಮಾತನಾಡಿದರೆ ಏನು ಪ್ರಯೋಜನ? ಫಲತಃ, ವ್ಯಾಸಸಂಹಿತೆಯ ವಚನಗಳನ್ನು ನೋಡಿದರೆ ಪುರಾತನ ಸ್ತ್ರೀಯರು ದಾಸವೃತ್ತಿಯನ್ನು ಮೊದಲ್ಗೊಂಡು ದಿವಾನಗಿರಿಯ ಪರ್ಯಂತರವಾಗಿ ಗೃಹಕೃತ್ಯದಲ್ಲಿ ಅಧಿಕಾರವನ್ನು ನಡಿಸುತಲಿದ್ದರೆಂದು ಸ್ಪಷ್ಟವಾಗಿ ತಿಳಿಯಬರುತ್ತದೆ. ಸ್ತ್ರೀಯರು ಈರೀತಿಯಾಗಿ ಕೆಲಸಗಳನ್ನು ಮಾಡಿದರೆ ಪುರುಷನಿಗೆ ಮತ್ಯಾವ ಕೆಲಸಗಳುಳಿಯುತಲಿತ್ತೋ ಯೋಚಿಸಬೇಕಾದ್ದವಶ್ಯಕವು. ಸ್ತ್ರೀಯರ ಬುದ್ಧಿಯು ಎಷ್ಟರ ಮಟ್ಟಿಗೆ ಅಭಿವೃದ್ಧಿಯನ್ನು ಹೊಂದಿತ್ತೆಂಬುವದಕ್ಕೂ ಸ್ಮೃತಿಗಳಲ್ಲಿ ಕೆಲವು ಪ್ರಮಾಣ ವಚನಗಳು ಸಿಕ್ಕುತ್ತವೆ. ವ್ಯಾಸನು ಸ್ತ್ರೀಯರು ನಾಸ್ತಿಕರಾಗಕೂಡದೆಂದು ಸ್ಪಷ್ಟವಾಗಿ ಹೇಳಿರುತ್ತಾನೆ. ಮತ್ತೊಬ್ಬ ಋಷಿಯು ಸ್ತ್ರೀಯರು ಹೇತುವಾದಗಳಲ್ಲಿ ಶಿಕ್ಷಿತರಾಗಕೂಡದೆಂದು ಹೇಳಿರುತ್ತಾನೆ. ಹೇತುವಾದ ಮಾಡುವದನ್ನು ತಪ್ಪಿಸುವ ಅಭಿಲಾಷೆಯಿಂದಲೂ, ನಾಸ್ತಿಕತೆಯನ್ನು ನಿಷೇಧಿಸಿರುವದರಿಂದಲೂ, ಪೂರ್ವ ಕಾಲದಲ್ಲಿ ಸ್ತ್ರೀಯರು ಹೇತುವಾದ ಮಾಡುವದರಲ್ಲಿ ಶಿಕ್ಷಿತರಾಗುತಲಿದ್ದರೆಂತಲೂ, ಅತಿ ಕಷ್ಟವಾದ ಈಶ್ವರತತ್ವ ನಿರೂಪಣ ವಿಷಯವನ್ನು ಕುರಿತು ಆಗಾಗ್ಯೆ ಆಲೋಚಿಸುತಲಿದ್ದರೆಂತಲೂ, ಸ್ಪಷ್ಟವಾಗಿ ಬೋಧೆಯಾಗುತ್ತದೆ. ದಕ್ಷ ಸಂಹಿತೆಯಲ್ಲಿ ಸ್ವಲ್ಪವಾದರೂ ಸ್ತ್ರೀಯರ ಕರ್ತವ್ಯಕಾರ್ಯಗಳನ್ನು ಕುರಿತಾಗಲೀ ಅಥವಾ ಅವರಿಗೆ ಇರಬೇಕಾದ ಗುಣಗಳಂತಾವುಗಳೆಂದಾಗಲೀ ನಿರ್ಣಯವನ್ನು ಮಾಡಿರುವದಿಲ್ಲ. ಆದರೂ ಮುಖ್ಯವಾದ ಗುಣಗಳ ಪ್ರಶಂಸೆಯನ್ನು ಮಾತ್ರ ಮಾಡಿದೆ. ಅದೇನಂದರೆ—“ ಪತ್ನಿಯಾದವಳು ತನ್ನ ಪತಿಯ ಮನಸರಿತು ನಡಿಯುವವಳಾಗಿ ಅವನಿಗೆ ಅನುಕೂಲಳಾ

ಗಿದ್ದರೆ ಗೃಹಸ್ಥಾಶ್ರಮಕ್ಕಿಂತಲೂ ಸುಖವಾದದ್ದು ಮತ್ತ್ಯಾವದೂ ಅಲ್ಲವು. ಮತ್ತು ಸ್ತ್ರೀಮೂಲಕವಾಗಿಯೇ ಧರ್ಮಾರ್ಥಕಾಮಗಳೆಂಬ ತ್ರಿವರ್ಗಫಲ ಪ್ರಾಪ್ತಿಯಾಗುತ್ತದೆ. ಪತಿಯು ಸ್ನೇಹ ವಶನಾಗಿ ಸ್ತ್ರೀಯು ತನಗೆ ವ್ಯತಿರೇಕವಾಗಿ ನಡೆದುಕೊಳ್ಳುತ್ತಿರುವದನ್ನು ಕಂಡರೂ, ಅದನ್ನು ತಪ್ಪಿಸದೆ ಸ್ವೇಚ್ಛಾನುಸಾರವಾಗಿ ನಡೆಯುತಲಿರುವದನ್ನು ಕಂಡು ಸುಮ್ಮನಿದ್ದರೆ, ಉಪೇಕ್ಷೆಯನ್ನು ಮಾಡಿದ ವ್ಯಾಧಿಯಹಾಗೆ ಕಡೆಯಲ್ಲಿ ಬಹಳ ಕಷ್ಟಕ್ಕೆ ಕಾರಣವಾಗುವದು" ಎಂದು ಹೇಳಿದೆ. ಸ್ತ್ರೀಯರಿಗೆ ಪುರುಷರಂತೆಯೇ ವಿದ್ಯೆಯನ್ನು ಕಲಿಸಬೇಕೆಂದು ಮನುಸ್ಮೃತಿಯಲ್ಲಿ ವಿಧಿಸಿರುತ್ತದೆ; ಅಲ್ಲದೆ ಅವರು ವಿದ್ಯಾವ್ಯಾಸಂಗವನ್ನು ಮಾಡದ ಪಕ್ಷದಲ್ಲಿ ತಾಡನೆಯನ್ನು ಮಾಡಬಹುದೆಂತಲೂ ಶಂಖಸ್ಮೃತಿಯಲ್ಲಿ ಉಕ್ತವಾಗಿರುತ್ತದೆ. ಏನಂದರೆ– "ಲಾಲನೀಯಾಸದಾಭಾರ್ಯಾ ತಾಡನೀಯಾತಥೈವಚ। ಲಾಲಿತಾತಾಡಿತಾಚೈವ ಸ್ತ್ರೀಶ್ರೀರ್ಭವತಿನಾನ್ಯಥಾ॥ ಮತ್ತು ಇದಕ್ಕನುಸಾರವಾಗಿ ದಕ್ಷನು ಮೊದಲಿನಿಂದ ಸ್ತ್ರೀಯರನ್ನು ಶಾಸನ ಮಾಡಬೇಕೆಂದು ಹೇಳಿರುತ್ತಾನೆ. ದಕ್ಷವಚನಗಳು ಯಾವವಂದರೆ– "ಅನುಕೂಲಕಾರಿಣಿಯಾಗಿಯೂ, ಮಿಷ್ಟಭಾಷಿಣಿಯಾಗಿಯೂ, ದಕ್ಷಳಾಗಿಯೂ, ಸಾಧುಶೀಲಳಾಗಿಯೂ, ಪತಿಪರಾಯಣಳಾಗಿಯೂ, ಜಿತೇಂದ್ರಿಯಳಾಗಿಯೂ, ಇರುವ ಹೆಂಗಸು ಕೇವಲ ದೇವತಾಸ್ವರೂಪಳೇ ಹೊರತು ಮನುಷ್ಯಸ್ವರೂಪಳಲ್ಲವು. ಯಾರಿಗೆ ಹೆಂಡತಿಯಾದವಳು ಅನುಕೂಲ ಕಾರಿಣಿಯಾಗಿರುವಳೋ, ಅವನಿಗೆ ಇಲ್ಲಿಯೇ ಸ್ವರ್ಗವು. ಸ್ವರ್ಗದಲ್ಲಿಯೂ ಇಂತಾ ಸುಖವು ಲಭಿಸುವದು ದುರ್ಲಭವು. ಆದರೆ ಪತಿಪತ್ನೀರು ಐಕಮತ್ಯವಾಗಿರದೆ ಪರಸ್ಪರ ಅನನುರಕ್ತರಾದರೆ, ಅದಕ್ಕಿಂತಲೂ ಕಷ್ಟತರವಾದದ್ದು ಮತ್ತೆಲ್ಲಿಯೂ ಇಲ್ಲವು. ಗೃಹ ನಿರ್ಮಾಣ ಮಾಡಿ ವಾಸಮಾಡಬೇಕೆಂಬುವದು ಸುಖಕ್ಕೋಸ್ಕರವಾಗಿರುತ್ತೆ. ಆ ಸುಖಕ್ಕೆ ಪತ್ನಿಯೇ ಮೂಲಕಾರಣವಾಗಿರುತ್ತಾಳೆ. ಆದುದರಿಂದ ಪತ್ನಿಯಾದವಳು ತಿಳುವಳಿಕೆಯುಳ್ಳವಳಾಗಿಯೂ, ವಿನಯುಮುಳ್ಳವಳಾಗಿಯೂ,

ಸ್ವಾಮಿ ವಶಾನುವರ್ತಿನಿಯಾಗಿಯೂ, ಇರಬೇಕಾದದ್ದತ್ಯವಶ್ಯಕವು. ಹೆಂಗಸು ಯಾವಾಗಲೂ ಖಿನ್ನಳಾಗಿರಕೂಡದು, ಪತಿಯ ತಾತ್ಪರ್ಯವನ್ನು ಭಿನ್ನಿಸಿದವಳಾಗಕೂಡದು; ಹಾಗಾದರೆ, ಅದಕ್ಕಿಂತಲೂ ದುಃಖತಮವಾದ ಪದಾರ್ಥವೇ ಇಲ್ಲವು. ಪ್ರಸಿದ್ಧವಾದ ಜಿಗಣೆಯು ಮನುಷ್ಯನ ರಕ್ತವನ್ನು ಮಾತ್ರ ಹೀರುತ್ತದೆ; ದುಷ್ಟಳಾದ ಹೆಂಗಸಾದರೋ ಪುರುಷನ ವಿತ್ತ, ಬಲ, ಮಾಂಸ, ವೀರ್ಯ, ಸುಖ ಮುಂತಾದವುಗಳನ್ನೆಲ್ಲಾ ಹೀರಿಬಿಡುವಳು. ಈ ದುರ್ನಡತೆಯನುಳ್ಳ ಸ್ತ್ರೀಯು ತನ್ನ ಬಾಲ್ಯದಲ್ಲಿಯೂ, ಯೌವನದಲ್ಲಿಯೂ, ಸಂಶಯಾಸ್ಪದವಾದ ನಡತೆಯುಳ್ಳವಳಾಗಿಯೂ, ಪತಿಗೆ ವಿಮುಖಳಾಗಿಯೂ ಇರುವಳಲ್ಲದೆ ಪತಿಯನ್ನ ತೃಣಗಣಾಯಮಾನವಾಗಿ ನೋಡುವಳು. ಅನುಕೂಲಳಾಗಿಯೂ, ಮಿಷ್ಟಭಾಷಿಣಿಯಾಗಿಯೂ, ಪತಿವ್ರತೆಯಾಗಿಯೂ ಇರುವ ರಮಣೀಶಿರೋಮಣಿಯು ಮನೆಗೆ ಲಕ್ಷ್ಮೀಸ್ವರೂಪಳಾಗಿರುವಳು. ಯಾವಳು ನಿತ್ಯವೂ ಹೃಷ್ಟಚಿತ್ತಳಾಗಿ ಯಥಾಕಾಲ ಯಥಾರೀತಿಯಾಗಿ ತನ್ನ ಪತಿಗೆ ಪ್ರೀತಿಕರವಾದ ಕಾರ್ಯದಲ್ಲಿ ಆಸಕ್ತಳಾಗಿರುವಳೋ ಅವಳೇ ಭಾರ್ಯೆಯು; ಮಿಕ್ಕವರೆಲ್ಲರೂ ಜಾರೆಯರೆನ್ನಿಸಿಕೊಳ್ಳುವರು.

ಎರಡು ಮೂರನೇ ಅಧ್ಯಾಯಗಳ ಸಂಕ್ಷೇಪಾರ್ಥವು.

ಇದುವರಿವಿಗೂ ಸ್ಮೃತ್ಯುಕ್ತವಾದ ಸ್ತ್ರೀಧರ್ಮವನ್ನು ಕುರಿತು ಸಮಾಲೋಚನೆ ಮಾಡಿದ್ದಾಯಿತು. ಇದನ್ನೆಲ್ಲಾ ಓದಿದರೆ ಪೂರ್ವಕಾಲದ ಸ್ತ್ರೀಯರಿಗೆ ಸಾಮಾಜಿಕಾವಸ್ಥೆಯು ಯಾವರೀತಿ ಇತ್ತು, ಮತ್ತು ಯಾವ್ಯಾವ ಗುಣಗಳಿದ್ದರೆ ಶ್ಲಾಘನೀಯ್ಯರಾಗುತ್ತಿದ್ದರೆಂಬುದು ಸ್ವಲ್ಪಮಟ್ಟಿಗೆ ತಿಳುವಳಿಕೆಗೆ ಬರುತ್ತದೆ.

ತಂದೆಗೆ ಬೇಕಾದ ವರನಿಗೆ ಕನ್ಯಾಪ್ರದಾನ ಮಾಡತಕ್ಕ ಅಧಿಕಾರವಿದ್ದರೂ, ಶಾಸ್ತ್ರೋಕ್ತಪ್ರಕಾರವಾಗಿ ಗುಣಶಾಲಿಯಾದ ವರನಿಗೇನೇ ಕನ್ಯಾಪ್ರದಾನ ಮಾಡಬೇಕು, ಹಾಗೆ ಸರಿಯಾದ ವರನಿಗೆ ಕನ್ಯಾಪ್ರದಾನ ಮಾಡದಿದ್ದರೆ ಇಹದಲ್ಲಿ ಅಪಯಶಸ್ಸನ್ನೂ ಪರದಲ್ಲಿ ದುರ್ಗ

ತಿಯನ್ನೂ ಹೊಂದುವನು. ಪತಿಯಾದವನು ತನ್ನ ಇಚ್ಛೆಗೆ ಬಂದಹಾಗೆ ವಿವಾಹಿತಳಾದವಳನ್ನು ಬಿಟ್ಟು ಬೇರೆ ಮದುವೆಯನ್ನು ಮಾಡಿಕೊಳ್ಳಕೂಡದು. ಸ್ತ್ರೀಯರು ಕೇವಲ ದಾಸಕೃತ್ಯದ ಭಾರವನ್ನು ಮಾತ್ರ ವಹಿಸಿದವರಾಗಿರಲಿಲ್ಲ. ಗೃಹಸ್ಥನ ಸಂಸಾರದ ಆದಾಯ ವ್ಯಯಗಳ ಚಿಂತೆಯು, ಧನಸಂಚಯ ಮಾಡುವಣವೂ, ಇವೇ ಮೊದಲಾದ ಬಹತ್ಕಾರ್ಯಗಳ ಭಾರವೂ ಕೂಡ ಸ್ತ್ರೀಯರಿಗೆ ವಹಿಸಲ್ಪಟ್ಟಿತ್ತು. ಪತಿಯು ದೇಶಾಂತರ ಸಂಚಾರ ಹೋದಾಗ್ಯೆ ಅವನ ಧಃರ್ಮ್ಯಾಗ್ನಿಯನ್ನು ಸಂರಕ್ಷಿಸುವ ಭಾರವೂ ಸ್ತ್ರೀಯರ ಅಧೀನವಾಗಿತ್ತು. ಸ್ತ್ರೀಯರಿಗೆ ಸ್ವಾತಂತ್ರ್ಯವು ಬಹಳಮಟ್ಟಿಗೆ ಕಡಮೆಯಾಗಿದ್ದರೂ ಅವರು ಇಚ್ಛಾಮತವಾಗಿ ಸಮಾಜ ಮೊದಲಾದವುಗಳಿಗೆ ಹೋಗಿ ಬರುವದಕ್ಕೂ ಶಕ್ತರಾಗಿದ್ದರು. ಸರ್ವಪ್ರಕಾರದಿಂದಲೂ ಸ್ತ್ರೀಯರಿಗೆ ದಾಯಾಧಿಕಾರವಿಲ್ಲದಿದ್ದರೂ ಅವರ ನಿಜಧನವನ್ನು ಪುರುಷನಾದವನು ಬಲಾತ್ಕಾರದಿಂದಾಗಲೀ, ಮೋಸದಿಂದಾಗಲೀ ತೆಗದುಕೊಳ್ಳುವದಕ್ಕೆ ಶಕ್ತನಾಗುವದಿಲ್ಲ. ಒಂದುವೇಳೆ ಪುರುಷರು ಸ್ತ್ರೀಯರ ನಿಜಧನವನ್ನು ಬಲಾತ್ಕಾರದಿಂದಾಗಲೀ, ಚಮತ್ಕಾರದಿಂದಾಗಲೀ ತೆಗದುಕೊಂಡರೆ ಚೋರರಹಾಗೆ ಶಿಕ್ಷೆಗೆ ಅರ್ಹರಾಗುತ್ತಾರೆ. ಪತಿಯಾದವನು ತನ್ನ ಭಾರ್ಯೆಯ ನಿಜಧನವನಪಹರಿಸಿಕೊಂಡು ಅನ್ಯಸ್ತ್ರೀಯರಲ್ಲಿ ಆಸಕ್ತನಾದರೆ, ರಾಜನು ಅವಳಿಗೆ ಅವಳ ನಿಜಧನವನ್ನು ಸರಿಯಾದ ವೃದ್ಧ್ಯಂಶದೊಡನೆ ಕೊಡಿಸಬೇಕು. ಬಹು ವಿವಾಹವನ್ನ ಮಾಕೊಳ್ಳಕೂಡದೆಂದು ಶಾಸ್ತ್ರದಲ್ಲಿ ನಿಷೇಧವನ್ನು ಹೇಳದಿದ್ದರೂ ಅತ್ಯಂತವಾಗಿ ಅದನ್ನು ನಿಂದಿಸಿರುವದೇ ಬಹುವಿವಾಹವನ್ನು ಮಾಡಿಕೊಳ್ಳಕೂಡದೆಂದು ಹೇಳುವಣದರಲ್ಲಿ ಉದ್ದೇಶ್ಯವಾಗಿರುತ್ತದೆ. ರಾಮಾಯಣದ ಅಯೋಧ್ಯಾ ಕಾಂಡದಲ್ಲಿ ಬಹು ವಿವಾಹಿತನನ್ನು ದೂಷಣೆಮಾಡಿರುವಹಾಗೆ ಒಂದು ಭಾಗದಲ್ಲಿ ಉಲ್ಲಿಖಿತವಾಗಿರುತ್ತದೆ. ಕಾಳಿಕಾಪುರಾಣದಲ್ಲಿ ಚಂದ್ರನಿಗೆ ಪ್ರಾಪ್ತವಾಗಿರುವ ರಾಜಯಕ್ಷ್ಮರೋಗವು ಬಹು ವಿವಾಹದಿಂದುಂಟಾದ ಪಾಪಕ್ಕೆ ಪ್ರತಿಫಲವೆಂದು ಹೇಳಲ್ಪಟ್ಟ

ರುತ್ತದೆ. ಧ್ರುವೋಪಾಖ್ಯಾನದಲ್ಲಿ ಬಹು ವಿವಾಹವಮಾಡಿಕೊಳ್ಳುವ ಣದರ ದೋಷವನ್ನು ಸ್ಪಷ್ಟವಾಗಿ ತಿಳಿಯಬಹುದು. ಏತಂತು ವಿವಾಹವು ಕಲಿಯುಗಕ್ಕೆಮಾತ್ರ ಉಕ್ತವಾಗಿದೆ; ಅನ್ಯಯುಗಗಳಲ್ಲಿ ಬ್ರಹ್ಮಚರ್ಯವ್ರತ ಮುಂತಾದ್ದು ಹೇಳಲ್ಪಟ್ಟಿದೆ. ಪೌರಾಣಿಕರೂ, ಋಷಿಗಳೂ ಮತ್ತು ಸ್ಮೃತಿ ವ್ಯಾಖ್ಯಾನಕಾರರೂ ಸಹಾ ಸ್ತ್ರೀಯರಿಗೆ ಹೇಳಿರುವಷ್ಟು ಕಠೋರ ವ್ರತವನ್ನು ಸ್ಮೃತಿ ಕರ್ತರ್ರ್ಯರೂ ಹೇಳಿರುವದಿಲ್ಲವು. ಸ್ತ್ರೀಯರಿಗೆ ನಿಷ್ಠುರವಾದ ವ್ರತವನ್ನು ಹೇಳಿರುವ ಮನುಸಂಹಿತೆಯಲ್ಲಿಯೂ ಕೂಡ ಅಷ್ಟು ಕಠೋರನಿಯಮಗಳನ್ನು ಹೇಳಿಲ್ಲವು. ಸ್ತ್ರೀಯರು ಓದು ಬರಹಗಳನ್ನು ಕಲಿಯುತಲಿದ್ದರೆಂದು ಅನೇಕ ಸ್ಥಳಗಳಲ್ಲಿ ಹೇಳಿರುವದನ್ನು ನೋಡಬಹುದು. ಶಾಸ್ತ್ರದಲ್ಲಿ ಸರ್ವತ್ರ ಸ್ತ್ರೀಯರಿಗೆ ಸದ್ವ್ಯವಹಾರ ಮಾಡಬೇಕೆಂದುಕ್ತವಾಗಿದೆ. ಆದ್ದರಿಂದ ಅವರ ವಿಷಯದಲ್ಲಿ ಅಸದ್ವ್ಯವಹಾರವನ್ನು ಯಾರು ಮಾಡುವರೋ, ಅವರ ಮನೆಯಲ್ಲಿ ಲಕ್ಷ್ಮಿಯು ನೆಲೆಮಾಡುವದಿಲ್ಲವು. ಅನೇಕ ಜಾತಿಗಳಲ್ಲಿ ಇಂದ್ರಿಯ ಸುಖಕ್ಕೋಸ್ಕರವೇ ವಿವಾಹ ಮಾಡಿಕೊಳ್ಳುವ ಹಾಗೆ ಆರ್ಯರಲ್ಲಿ ಆರೀತಿ ವಿವಾಹವಿಲ್ಲವು. ಆರ್ಯರು ವಿವಾಹವನ್ನು ಸಂತಾನ ಲಾಭಕ್ಕೋಸ್ಕರ ಮಾಡಿಕೊಳ್ಳುತ್ತಾರೆ. ನೈಷ್ಠಿಕ ಬ್ರಹ್ಮಚಾರಿಗಳು ವಿವಾಹವಿಲ್ಲದೇನೇ ಇದ್ದರೂ ಇರಬಹುದು. ಆದರೆ ಅಗಸ್ತ್ಯೋಪಾಖ್ಯಾನವನ್ನೂ ಜರತ್ಕಾರು ಉಪಾಖ್ಯಾನವನ್ನೂ ನೋಡಿದರೆ ಪಿತೃವಂಶಸಂರಕ್ಷಣೆಗೋಸ್ಕರ ವಿವಾಹವನ್ನು ಮಾಡಿಕೊಳ್ಳುವಂತೆ ತಿಳಿಯಬರುತ್ತದೆ.

ಸ್ಮೃತಿಸಮ್ಮತ ನಾರೀ ಚರಿತ್ರೆಯ ಉತ್ಕರ್ಷತೆ. ಸ್ತ್ರೀಯು ತನ್ನ ಪತಿಯನ್ನವಿನಾ ಪರಪುರುಷನೊಡನೆ ಸಹವಾಸ ಮಾಡಕೂಡದು. ಹಾಗೇನಾದರು ಮಾಡಿದರೆ ಇಹದಲ್ಲಿ ದುರಂತವಾದ ಶಿಕ್ಷೆಯೂ, ಪರದಲ್ಲಿ ದುರಂತವಾದ ನರಕವೂ ಪ್ರಾಪ್ತಿಯಾಗುತ್ತದೆ. ಸ್ತ್ರೀಯು ತನ್ನ ಪತಿಯನ್ನು ದೇವರಹಾಗೆ ತಿಳಿದು ಗೃಹಕಾರ್ಯದಲ್ಲಿಯೂ, ಅತಿಥಿ ಸತ್ಕಾರ್ಯದಲ್ಲಿಯೂ, ದೇವತಾ ಪೂಜೆಯಲ್ಲಿಯೂ, ಆಸಕ್ತಳಾಗಿರಬೇಕು.

ಪತಿಯು ಪತಿತನಾಗಲೀ, ಪಲಾತಕನಾಗಲೀ, ಬೇರೆ ವಿವಾಹವನ್ನು ಮಾಡಿಕೊಳ್ಳಬೇಕಾದ ವಿಧಿಇದ್ದರೂ, ಅದು ಕಲಿಯುಗಕ್ಕೋಸ್ಕರ ಹೇಳಿದ್ದಾಗಿದೆ. ಇತರ ಯುಗಗಳಲ್ಲಿ ಪತಿಯು ಪತಿತನಾದರೂ, ಕುಷ್ಟ ರೋಗಿಯಾಗಿದ್ದರೂ, ಅವನನ್ನು ಬಿಟ್ಟು ಬೇರೆ ಮದುವೆಯನ್ನು ಮಾಡಿಕೊಳ್ಳುವವಳಿಗೆ ನಾಯಿ ಜನ್ಮ ಬರುವದೆಂದು ಹೇಳಲ್ಪಟ್ಟಿರುತ್ತದೆ. ಆದದರಿಂದ ಸಾಮಾಜಿಕ ನಿಯಮಗಳನ್ನು, ಕಾಪಾಡಿಕೊಂಡು, ಸ್ತ್ರೀಯು ಸರಳ ಸ್ವಭಾವವುಳ್ಳವಳಾಗಿಯೂ, ದಯಾಳುವಾಗಿಯೂ, ಗುರುಜನರಲ್ಲಿ ಭಕ್ತಿಯುಳ್ಳವಳಾಗಿಯೂ, ಪುತ್ರಾದಿಗಳಲ್ಲಿ ಸ್ನೇಹವುಳ್ಳವಳಾಗಿಯೂ, ಮತ್ತು ಪತಿಪರಾಯಣಳಾಗಿಯೂ ಇದ್ದರೆ, ಅವಳು ಸ್ತ್ರೀಯರಲ್ಲಿ ಪೂಜನೀಯಳೆಂದು ಪರಿಗಣಿತಳಾಗುವಳು. ಹೇತುವಾದವೂ, ನಾಸ್ತಿಕವಾದವೂ ಸಹಾ ಸ್ತ್ರೀಯರಿಗೆ ಅರ್ಹವಾದದ್ದಲ್ಲವು. ಯಾವಾಗಲೂ ಈಶ್ವರ ಪರಾಯಣರಾಗಬೇಕು. ತರ್ಕಮಾಡೋಣದರಲ್ಲಿ ಪ್ರವೃತ್ತರಾಗಕೂಡದು. ಮತ್ತು ಮತವಿಚಾರದಲ್ಲಿ ಹೇತುವಾದ ಮಾಡುವವರೊಡನೆಯೂ, ಸ್ವಧರ್ಮ ಪರಿತ್ಯಾಗಮಾಡಿ ಸನ್ಯಾಸಧರ್ಮವನ್ನು ಅವಲಂಬಿಸುವರೊಡನೆಯೂ ಯಾವಾಗಲೂ ಸ್ನೇಹ ಮಾಡಬಾರದು. ಅಂತವರನ್ನು ಸರ್ವಪ್ರಕಾರದಿಂದಲೂ ಪರಿತ್ಯಜಿಸಬೇಕು. ಸ್ತ್ರೀಯರು ಸಾಹಸ ಕೆಲಸವನ್ನು ಮಾಡಲು ಪ್ರವೃತ್ತರಾಗಬಾರದು. ಪತಿ ಪುತ್ರರನ್ನು ಬಿಟ್ಟು ಸ್ವತಂತ್ರವಾಗಿರುವದಕ್ಕೆ ಪ್ರಯತ್ನ ಪಡಕೂಡದು.

ಸ್ತ್ರೀಯರು ಅಭಿಮಾನವನ್ನೂ, ಕಾರ್ಯಗಳಲ್ಲಿ ಉದಾಸೀನವನ್ನೂ ಈರ್ಷಾದಿಗಳನ್ನೂ ಪರಿತ್ಯಜಿಸಿದರೆ ಜಗತ್ತಿನಲ್ಲಿ ಮಾನನೀಯರಾಗುತ್ತಾರೆ. ವಂಚನೆ, ಹಿಂಸೆ, ಅಹಂಕಾರ ಮುಂತಾದ್ದನ್ನು ಅಗತ್ಯವಾಗಿ ಪರಿತ್ಯಜಿಸಬೇಕು. ಲಜ್ಜೆಯು ಸ್ತ್ರೀಯರಿಗೆ ಭೂಷಣಪ್ರಾಯವಾದದ್ದು. ಇತರರ ದುಃಖವನ್ನುನೋಡಿ ವ್ಯಸನ ಪಡುವದು, ಅನ್ಯರ ಮನಸ್ಸರಿತು ನಡಿಯುವದು, ಸ್ತ್ರೀಯರಿಗೆ ಮುಖ್ಯಗುಣಗಳಾಗಿ ಅವೆ. ಸಕಲ ಪದಾರ್ಥಗಳನ್ನೂ ಪರಿಷ್ಕಾರವಾಗಿಟ್ಟುಕೊಂಡಿರೋಣವನ್ನು

ಪುರಾತನರಾದ ಋಷಿಗಳು ಬಹು ಶ್ಲಾಘನೆಯನ್ನು ಮಾಡುತ್ತಿದ್ದರು. ಋಷಿ ಪತ್ನಿಯರು ತಮ್ಮ ದೇಹವನ್ನೂ, ಗೃಹದ್ವಾರವನ್ನೂ, ಪಾತ್ರೆಗಳನ್ನೂ ಬಹಳ ಪರಿಶುದ್ಧವಾಗಿ ಇಟ್ಟುಕೊಳ್ಳುತ್ತಿದ್ದರು. ಅಶುಚಿಯಾಗಿಯೂ, ಅಪರಿಷ್ಕಾರವಾಗಿಯೂ ಇರುವ ಗೃಹಕ್ಕೆ ಲಕ್ಷ್ಮೀಪ್ರವೇಶವಿಲ್ಲವೆಂದು ಅರಿತಿದ್ದರು. ಸ್ತ್ರೀಯರು ಅಲಂಕಾರ ಪ್ರಿಯರೆಂದು ಋಷಿಗಳು ಬಲ್ಲವರಾಗಿದ್ದ ಕಾರಣವೇ, ತಂದೆ ತಾಯಿ ಗಂಡನೇ ಮೊದಲಾದವರು ಸ್ತ್ರೀಯರಿಗೆ ಅಲಂಕಾರ ಪ್ರದಾನ ಮಾಡಬೇಕೆಂದು ಹೇಳುತ್ತಾರೆ. ಆದರೆ ಸ್ತ್ರೀಯರು ಸ್ವಂತಕ್ಕೋಸ್ಕರವೇ ಯಾವ ವ್ಯಯವನ್ನೂ ಮಾಡಕೂಡದು. ವ್ಯಯಕುಂಠಿತೆಯು ಅವರಿಗೆ ಮುಖ್ಯವಾದ ಗುಣಗಳಲ್ಲಿ ಒಂದೆಂದು ಅನೇಕ ಸ್ಥಳಗಳಲ್ಲಿ ನಿಯಾಮಕವಾಗಿದೆ. ಧರ್ಮ ವಿಚಾರದಲ್ಲಿ ವಿಷ್ಣು ಸೂತ್ರಪ್ರಕಾರವಾಗಿ ಪತಿಪತ್ನಿಯರು ಐಕಮತ್ಯವುಳ್ಳವರಾಗಿರಬೇಕು. ಇತರ ವಿಚಾರಗಳಲ್ಲಿ ಹ್ಯಾಗೆ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲವೋ ಅದೇರೀತಿಯಾಗಿ ಧರ್ಮವಿಚಾರದಲ್ಲಿಯೂ ಅವರಿಗೆ ಸ್ವಾತಂತ್ರ್ಯವಿಲ್ಲವು. ಪೂರ್ವ ಋಷಿಗಳೆಲ್ಲರೂ ಯಾವರೀತಿಯಾಗಿ ಗಂಡನ ವಿಶ್ವಾಸವೇ ಸ್ತ್ರೀಯರಿಗೆ ಸೌಭಾಗ್ಯವೆಂದು ಹೇಳಿರುತ್ತಾರೋ, ಅದೇರೀತಿಯಾಗಿ, ಲಜ್ಜಾಶೀಲಳಾಗಿಯೂ, ಗೃಹಕಾರ್ಯ ತತ್ಪರಳಾಗಿಯೂ, ಪತಿಪರಾಯಣಳಾಗಿಯೂ ಇರುವ ಸ್ತ್ರೀಯನ್ನು ಪತ್ನಿಯಾಗಿ ಪಡೆಯುವದು ಅಲ್ಪಭಾಗ್ಯವಲ್ಲವೆಂದು ಹೇಳಿರುತ್ತಾರೆ. ಸ್ತ್ರೀಯು ವಶಳಾಗಿ ಸಕಲಕ್ಕೂ ಬಾಧ್ಯಪಟ್ಟಿದ್ದರೆ ಇಹಕ್ಕೂ ಪರಕ್ಕೂ ಏನು ವ್ಯತ್ಯಾಸ? ಪುರಾತನ ಋಷಿಗಳು ಸತ್ಸ್ವಭಾವವನ್ನು ಕಲಿಸಿಕೊಡುವದಕ್ಕೋಸ್ಕರ ಸ್ತ್ರೀಯರನ್ನು ಕದಾಚಿತ್ ತಾಡನೆಯನ್ನು ಮಾಡಬಹುದೆಂದು ಹೇಳಿದ್ದರೂ, ಮನುವು, ಸದ್ವ್ಯವಹಾರ ದ್ವಾರಾ ಸ್ತ್ರೀಯರು ತಮ್ಮ ಕಾರ್ಯಗಳಲ್ಲಿ ಆಸಕ್ತರಾಗದಿದ್ದರೆ ಬಲಾತ್ಕಾರದಿಂದ ಒಳ್ಳೇ ನೀತಿಯನ್ನು ಕಲಿಸಿಕೊಡಬಹುದೆಂದು ಹೇಳಿರುತ್ತಾನೆ. ಮನೋವಾಕ್ಕಾಯಗಳಿಂದ ಶುದ್ಧಳಾದ ರಮಣಿಯು ಛಾಯಾನುಸಾರವಾಗಿ ಪತಿಪರಾಯಣಳಾಗಿರುವಳು. ಹಿತಕಾರ್ಯ ನಿರ್ವಾಹದಲ್ಲಿ

ಸ್ನೇಹಿತಳಾಗಿಯೂ, ಆಜ್ಞಾಪಾಲನೆಯಲ್ಲಿ ದಾಸಿಯಾಗಿಯೂ ಇರಬೇಕು. ಕೆಲವರು ನಮ್ಮ ಸ್ತ್ರೀಯರಿಗೆ ಕಲಹ ಮಾಡುವದೇ ಸಾಮಾನ್ಯ ಕಾರ್ಯವಾಗಿ ನಡೆದು ಬಂದಿದೆಯೆಂದು ಹೇಳುತ್ತಾರೆ. ಆದರೆ ಇದು ಅನ್ಯಾಯವೆಂದು ಶಾಸ್ತ್ರಮುಖತಃ ತಿಳಿಯಬರುತ್ತೆ. ಯಾತಕ್ಕಂದರೆ—ಕಲಹ ಮಾಡದಿರುವದನ್ನೇ ಶಾಸ್ತ್ರದಲ್ಲಿ ಪ್ರಶಂಸೆಯನ್ನು ಮಾಡಿರುತ್ತೆ. ಪ್ರಿಯವಾದಿನಿಯಾಗಿಯೂ, ಕಲಹ ಮಾಡದವಳಾಗಿಯೂ ಇರುವ ರಮಣಿಯು ಲಕ್ಷ್ಮೀಗೆ ಆವಾಸಸ್ಥಾನವಾಗಿರುತ್ತಾಳೆ. ಶ್ರೀಮನ್ನಾರಾಯಣನು "ಅಸ್ಥಿಭಿರಸ್ಥೀನಿಮಾಂಸೈರ್ಮಾಂಸಾನಿ" ಎಂಬ ಶ್ರುತ್ಯನುಸಾರವಾಗಿ, ತನ್ನ ದೇಹವನ್ನೆರಡು ಭಾಗಮಾಡಿ ಒಂದು ಭಾಗದಿಂದ ಸ್ತ್ರೀಯನ್ನೂ ಮತ್ತೊಂದು ಭಾಗದಿಂದ ಪುರುಷನನ್ನೂ ಸೃಷ್ಟಿಸಿದನು. ವಿವಾಹಾ ನಂತರ ಎರಡು ಶರೀರವೂ ಒಂದಾಗುತ್ತದೆ. ಪತಿಯ ಸುಕೃತದಿಂದ ಸ್ತ್ರೀಗೆ ಮೋಕ್ಷವುಂಟು. ಉಕ್ತಗುಣ ವಿಶಿಷ್ಟಳಾದ ಸ್ತ್ರೀಯು ತನ್ನ ಪತಿಯನ್ನು ಅಪಾರವಾದ ನರಕದಿಂದುದ್ಧರಿಸಿ ಸ್ವರ್ಗ ಸುಖಾನುಭವವನ್ನು ಮಾಡುವಳು.

### ತೂಲನಾ.

ಮೊದಲನೇ ಅಧ್ಯಾಯದಲ್ಲಿ ನಾರಿಯ ಚರಿತ್ರೆಯ ಉತ್ಕರ್ಷವನ್ನು ವರ್ಣನೆ ಮಾಡಿರುವದರೊಂದಿಗೆ ಸ್ಮೃತಿ ಕರ್ತರು ಬರದಿರುವ ನಾರೀ ಚರಿತ್ರೆಯನ್ನು ಜೊತೆಮಾಡಿ ನೋಡಿದರೆ, ಅದಕ್ಕದಕ್ಕೆ ಯಾವ ಅಂಶದಲ್ಲಿಯೂ ಭೇದ ತೋರುವದಿಲ್ಲವು. ಸ್ನೇಹ ಪ್ರವೃತ್ತಿಯಲ್ಲಿ ವ್ಯಾಸನು ವಿಲಕ್ಷಣ ದೃಷ್ಟಿ ಇಟ್ಟಿರುತ್ತಾನೆ. ದಯೆ, ಪಿತೃಭಕ್ತಿ, ಪತಿಭಕ್ತಿ ಮತ್ತು ಅಪತ್ಯಸ್ನೇಹ ಇವುಗಳು ಎಷ್ಟು ಅಧಿಕವಾಗಿರುವವೋ ಅಷ್ಟು ಅವರ ಚರಿತ್ರೆಯು ಉತ್ಕೃಷ್ಟವಾಗಿರುವದು. ಸ್ತ್ರೀಯರ ಬುದ್ಧಿವೃತ್ತಿಯ ಔನ್ನತ್ಯ ವಿಷಯದಲ್ಲಿ ಋಷಿಗಳು ಯಾವವಿಧವಾಗಿಯೂ ತಮ್ಮ ಅಸಮ್ಮತಿಯನ್ನು ತೋರಿಸಿಲ್ಲವು. ಸಂಸಾರದ ಆದಾಯವ್ಯಯಗಳನ್ನೆಲ್ಲಾ ಅವರಿಗೆ ಒಪ್ಪಿಸಿರುತ್ತಾರೆ. ಈ ಪ್ರಕಾರವಾಗಿ ಪ್ರಾಯಶಃ ಅವರಿಗೆ ಕರ್ತವ್ಯ ಕರ್ಮವನ್ನು ನಿರ್ದೇಶ ಮಾಡು

ವದರಲ್ಲಿ ಕರ್ಮಕ್ಷಮತೆಯನ್ನೇ ವಿಶೇಷವಾಗಿ ಹೇಳಿರುತ್ತಾರೆ. ಧರ್ಮವಿಚಾರದಲ್ಲಿ ಮಾತ್ರ ಸ್ತ್ರೀಯರು ತಮ್ಮ ಮನಸ್ಸು ಬಂದಹಾಗೆ ನಡೆಯಕೂಡದು. ಆದ್ದರಿಂದ ಧರ್ಮ ನಿಷ್ಠತೆಗೋಸ್ಕರ ಬಹುತರ ಯೂರೋಪಿಯರ್ನ ಸ್ತ್ರೀಜನರು ಪ್ರವರ್ತಿಸಿರುವಹಾಗೆ ನಮ್ಮ ಸ್ತ್ರೀಯರು ಪ್ರವರ್ತಿಸಿಲ್ಲವು. ಜಾನ್ ಹೌವರ್ಡ್ ಎಂಬುವನ ಹೆಂಡತಿಯು ತನ್ನ ಗಂಡನೊಡನೆ ದೇಶ ಸಂಚಾರಮಾಡಿ ಹ್ಯಾಗೆ ಪರರಹಿತ ವ್ರತದಲ್ಲಿ ತನ್ನ ಜೀವಮಾನವನ್ನೆಲ್ಲಾ ಕಳೆದಳೋ ಅಂತಾ ರಮಣೀಯು ನಮ್ಮವರಲ್ಲಿ ಈಗ ಯಾರೂ ಇಲ್ಲವು. ಮತ್ತು ನಮ್ಮ ದೇಶದ ಹೆಂಗಸರ್ಯಾರೂ ಸ್ವಯಂ ರಾಜ್ಯಪಾಲನೆಯನ್ನು ಮಾಡಿಲ್ಲವು.



# ನಾಲ್ಕನೇ ಅಧ್ಯಾಯವು.

ಮೂರನೇ ಅಧ್ಯಾಯದ ಪ್ರಥಮ ಭಾಗದಲ್ಲಿ ಸ್ತ್ರೀಯರು ಎರಡು ಶ್ರೇಣಿಯವರಾಗಿ ವಿಭಾಗಿಸಲ್ಪಟ್ಟಿರುತ್ತಾರೆ. ಅದರಲ್ಲಿ, ಯಾರು ಮೋಸಕ್ಕೊಳಗಾಗದೆ ಕರ್ತವ್ಯ ಕರ್ಮವನ್ನು ನಿರ್ವಹಿಸಿದ್ದಾರೆಯೋ ಅವರ ಚರಿತ್ರೆಯನ್ನು ಕುರಿತು ಈ ಅಧ್ಯಾಯದಲ್ಲಿಯೂ, ಯಾರು ನಾನಾವಿಧವಾದ ಮೋಸಗಳಿಗೊಳಗಾಗಿದ್ದರೂ ತಮ್ಮ ಕರ್ತವ್ಯ ಕರ್ಮಗಳನ್ನು ಅಣುಮಾತ್ರವೂ ಅಶ್ರದ್ಧೆ ಮಾಡದೆ ನಿರ್ವಹಿಸಿದ್ದಾರೆಯೋ, ಅಂತವರ ಚರಿತ್ರೆಯನ್ನು ಮತ್ತೊಂದು ಅಧ್ಯಾಯದಲ್ಲಿಯೂ, ವಿವರಿಸುವೆವು. ಈ ಉಭಯತ್ರರೂ ಸರ್ವಪ್ರಧಾನ ಶ್ರೇಣಿಯವರಾಗಿದ್ದಾರೆ.

ತೃತೀಯಾಧ್ಯಾಯದ ಅಂತ್ಯ ಭಾಗದಲ್ಲಿ ಸ್ತ್ರೀಯರ ನಡವಳಿಕೆಯು ಯಾವರೀತಿ ಇದ್ದರೆ, ಅದು ಶ್ರೇಷ್ಠವಾಗುತ್ತದೆಂಬುವದನ್ನ ಕುರಿತು ಸೂಚಿಸಿರುವದು ಸ್ಮೃತಿಗಳಿಂದಲೇ ಮುಖ್ಯವಾಗಿ ಸಂಗ್ರಹೀತವಾಗಿರುತ್ತದೆ. ಈಗ ತಾದೃಶ ಗುಣವನುಳ್ಳ ನಾರಿಯರ ಉದಾಹರಣವನ್ನು ಕೊಟ್ಟು ಅವರು ಯಾರೆಂಬುವದನ್ನ ವಿಶದವಾಗಿ ತಿಳಿಯಪಡಿಸಬೇಕಾದದ್ದವಶ್ಯಕವಾಗಿದೆ. ಸ್ಮೃತಿಗಳಲ್ಲಿ ಉದಾಹಾರ ಸ್ವರೂಪವಾಗಿ ಯಾವ ಹೆಂಗಸಿನ ಹೆಸರನ್ನೂ ಹೇಳಿಲ್ಲವು. ಆದಕಾರಣ ಪ್ರಾಚೀನ ಮಹಾ ಕಾವ್ಯವಾದ ರಾಮಾಯಣದಿಂದಲೂ, ಮತ್ತು ಪ್ರಾಚೀನ ಇತಿಹಾಸವಾಗಿರುವ ಮಹಾ ಭಾರತದಿಂದಲೂ ಇನ್ನೂ ಪುರಾಣಗಳಿಂದಲೂ ಉದಾಹರಣೆಗಳನ್ನು ಸಂಗ್ರಹಿಸಬೇಕಾಗಿದೆ.

ರಾಮಾಯಣ ಮತ್ತು ಮಹಾ ಭಾರತವೂ ಅತಿಪ್ರಾಚೀನ ಗ್ರಂಥಗಳು. ಮಹಾ ಕಾವ್ಯ ಕರ್ತರಾದ ಮಹರ್ಷಿ ವಾಲ್ಮೀಕಿ, ಮತ್ತು ಮಹಾ ಭಾರತ ಕರ್ತರಾದ ವೇದವ್ಯಾಸ ಇವರಗಳೂ, ಸ್ಮೃತಿ ಕರ್ತರಾದ ಪರಾಶರ ಅತ್ರಿಮುಂತಾದ ಮಹರ್ಷಿಗಳೂ ಸಹಾ ಸಮಕಾಲದಲ್ಲಿದ್ದವರಾಗಿದ್ದಾರೆ. ಆದಕಾರಣ ವಾಲ್ಮೀಕಿ ವೇದವ್ಯಾಸ ಮಹರ್ಷಿಗಳ ಗ್ರಂಥಗಳಲ್ಲಿ ಸ್ಮೃತಿ ಸಮ್ಮತವಾದ ಉತ್ತಮ ನಾರಿಯರ ಉ

ದಾಹರಣೆಗಳು ಉದಾಹೃತವಾಗಿವೆ. ಪುರಾಣಗಳು ಸ್ಮೃತಿ ಕರ್ತರ ಅನೇಕ ಕಾಲಾನಂತರ ರಚಿತವಾದವವು. ಪುರಾಣ ರಚನಾಕಾಲದಲ್ಲಿ ಆರ್ಯರಿಗೆ ಸ್ಮೃತಿ ರಚನಾಕಾಲದಲ್ಲಿದ್ದಹಾಗೆ ಶ್ಲಾಘನೀಯವಾದ ನಡವಳಿಕೆಗಳಿರಲಿಲ್ಲವು. ಅತಏವ ಪುರಾಣಗಳಲ್ಲಿ ಸ್ಮೃತ್ಯುಕ್ತ ಸೂಕ್ಷ್ಮವಾದ ಆಚಾರವ್ಯವಹಾರಗಳೂ ಕೂಡ ಬಲ್ಬಜನಾಗುವಂತೆ ಅತಿಯಾಗಿ ವಿವರಿಸಲ್ಪಟ್ಟಿರುತ್ತವೆ. ಋಷಿಗಳು ಸಾಮಾನ್ಯವಾಗಿ ಬ್ರಹ್ಮಚರ್ಯ ವ್ರತದಲ್ಲಿರಬೇಕೆಂದು ಹೇಳಿರುವದಕ್ಕೆ ಪುರಾಣಗಳಲ್ಲಿ ಆ ಬ್ರಹ್ಮಚರ್ಯ ವ್ರತಕ್ಕೆ ಆಕಾಲದಲ್ಲಿ ಅವರ ಚರ್ಯಗಳು ವಿಪರೀತವಾಗಿದ್ದಹಾಗೆಲ್ಲ ಲೌಕಿಕಾಚಾರಗಳನ್ನೂ ಅದರಲ್ಲಿ ಸೇರಿಸಿ ಆಚರಿಸುವದಕ್ಕಸಾಧ್ಯವಾದ ನಿಯಮಗಳನ್ನು ಮಾಡಿ ಕೇವಲ ವಿಧಾಯಕಗಳನ್ನಾಗಿಮಾಡಿ ಹೇಳಲ್ಪಟ್ಟದೆ. ಇಷ್ಟುಮಾತ್ರವೇ ಅಲ್ಲದೆ, ಈ ಕಷ್ಟವಾದ ಬ್ರಹ್ಮಚರ್ಯ ವ್ರತಕ್ಕೆ ಉಪಷ್ಟಂಭಕವಾಗಿ ಕಠೋರತರವಾದ ನಿಯಮಗಳನ್ನು ವಿಧಿಸಿ, ಅದನ್ನು ಆಚರಿಸುವದೇ ಅಸಾಧ್ಯವಾಗುವಂತೆ ಅತಿಭಯಂಕರವಾಗಿ ವಿವರಿಸಿರುತ್ತಾರೆ. ವ್ಯಾಖ್ಯಾನ ಕರ್ತರು ಈ ಪುರಾಣ ವಚನಗಳನ್ನೇ ಅವಲಂಬಿಸಿ ಸ್ಮೃತಿಗಳಿಗೆ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಅದರಲ್ಲಿಯೂ, ವಿತಂತುವಿನ ಬ್ರಹ್ಮಚರ್ಯದ ಕಾಠಿಣ್ಯವನ್ನು ಸ್ಕಂದ ಪುರಾಣದಲ್ಲಿ ನೋಡಿದರೆ ಅತಿ ದುಃಖದಾಯಕವಾಗಿಯೂ, ಕಷ್ಟತಮವಾಗಿಯೂ, ಕಾಣುತ್ತದೆ. ಸ್ಮೃತಿ ಕರ್ತರಾದ ಪುರಾತನ ಮಹರ್ಷಿಗಳು ಪತಿಸೇವೆಯನ್ನು ಮಾಡಬೇಕೆಂದು ಸಾಮಾನ್ಯವಾಗಿ ನಿರ್ದೇಶ ಮಾಡಿರುವದನ್ನು ಪುರಾಣಗಳಲ್ಲಿ ಆಗಾಡಂಬರ ವಾಗಾಡಂಬರಗಳಾಗಿ ಅತಿ ಗಹನವನ್ನು ಮಾಡಿರುವದನ್ನು ಹೇಳುವದಸಾಧ್ಯವಾಗಿದೆ.

ಅದು ಹ್ಯಾಗಾದರೂ ಇರಲೀ: ಈಗ ಪ್ರಥಮ ಶ್ರೇಣಿಗೆ ಶೇರಿದ ಸ್ತ್ರೀ ಸಮೂಹವನ್ನು ಕುರಿತು ವಿಚಾರಮಾಡುವದಕ್ಕೆ ಪ್ರವೃತ್ತಿಸಬೇಕಾದ್ದವಶ್ಯಕವಾಗಿದೆ. ಇವರ ಸಮೂಹದಲ್ಲಿ ಪುರಂಧ್ರೀಗಳು, ಅಂದರೆ, ಕುಟುಂಬನೀಗಳು ಬಹಳಮಂದಿ ಇರುತ್ತಾರೆ; ಆದರೆ ಕೆಲವರು ಪತಿವ್ರತೆಗಳಾದ ಯುವತಿಗಳೂ ಕೂಡ ಈ ಸಮೂಹದಲ್ಲಿ ಪರಿಗಣಿತ

ರಾಗಿರುತ್ತಾರೆ. ಬ್ರಹ್ಮವೈವರ್ತ ಪುರಾಣದ ಪ್ರಕೃತಿ ಖಂಡದಲ್ಲಿ ಕೆಲವು ಮುಖ್ಯರಾದ ಸಾಧ್ವೀಯರು ನಾರಾಯಣನಿಂದ ಉದಾಹೃತರಾಗಿರುತ್ತಾರೆ. ಅವರು ಯಾರಂದರೆ.

ಶ್ಲೋಕ.—ರೋಹಿಣೀ ಚಂದ್ರಪತ್ನೀಚ (೧) ಸಂಜ್ಞಾಸೂರ್ಯಸ್ಯಕಾಮಿನೀ (೨) ಶತರೂಪಾ ಮನೋಭಾರ್ಯಾ (೩) ವಶಿಷ್ಠಸ್ಯಾಪ್ಯರುಂಧತಿ (೪). ಅಹಲ್ಯಾಗೌತಮಸ್ತ್ರೀಚಾ (೫) ಪ್ಯನುಸೂಯಾತ್ರಿಕಾಮಿನೀ (೬) ದೇವಹೂತಿಃ ಕರ್ದಮಸ್ಯ (೭) ಪ್ರಸೂತೀದಕ್ಷಕಾಮಿನೀ (೮) ಪಿತೄಣಾಂಮಾನಸೀಕನ್ಯಾಮೇನಕಾ ಸಾಂಬಿಕಾಪ್ರಸೂಃ (೯) ಲೋಪಾಮುದ್ರಾ (೧೦) ತಥಾಹೂತಿಃ (೧೧) ಕುಬೇರಕಾಮಿನೀತಥಾ (೧೨) ವರುಣಾನೀಯಮಸ್ತ್ರೀಚ (೧೩) ಬಲೇರ್ವಿಂಧ್ಯಾಬಲೀತಿಚ (೧೪) ಕುಂತೀಚ (೧೫) ದಮಯಂತೀಚ (೧೬) ಯಶೋದಾ (೧೭) ದೇವಕೀತಥಾ (೧೮) ಗಾಂಧಾರೀ (೧೯) ದ್ರೌಪದೀ (೨೦) ಸಾಮ್ಯಾಸಾವಿತ್ರೀಸತ್ಯವತ್ಪ್ರಿಯಾ (೨೧). ವೃಕಭಾನುಪ್ರಿಯಾಸಾಧ್ವೀ (೨೨) ರಾಧಾಮಾತಾಕಲಾವತೀ (೨೩). ಮಂದೋದರೀ (೨೪) ಚಕೌಸಲ್ಯಾ (೨೫) ಸುಭದ್ರಾ (೨೬) ಕೈಟಭೀತಥಾ (೨೭) ರೇವತೀ (೨೮) ಸತ್ಯಭಾಮಾಚ (೨೯) ಕಾಳಿಂದೀ (೩೦) ಲಕ್ಷ್ಮಣಾತಥಾ (೩೧) ಜಾಂಬವತೀ (೩೨) ನಾಗ್ನಜಿತೀ (೩೩) ಮಿತ್ರವಿಂದಾತಥಾಪರಾ (೩೪) ಲಕ್ಷ್ಮೀಚ (೩೫) ರುಕ್ಮಿಣೀ (೩೬) ಸೀತಾ (೩೭) ಸ್ವಯಂಲಕ್ಷ್ಮೀಪ್ರಕೀರ್ತಿತಾ (೩೮) ಕಲಾ (೩೯) ಯೋಜನಗಂಧಾಚ ವ್ಯಾಸಮಾತಾಮಹಾಸತೀ (೪೦) ಬಾಣಪುತ್ರೀತಥೋಷಾಚ (೪೧) ಚಿತ್ರಲೇಖಾಚತತ್ಸಖೀ (೪೨) ಪ್ರಭಾವತೀಭಾನುಮತೀ (೪೩) ತಥಾಮಾಯಾವತೀಸತೀ (೪೪) ರೇಣುಕಾಚಭೃಗೋರ್ಮಾತಾ (೪೫) ಹಲಿಮಾತಾಚರೋಹಿಣೀ (೪೬).

ಇವರೇ ನಾರಾಯಣೋಕ್ತ ಸತೀ ಶಿರೋಮಣಿಗಳಾಗಿರುತ್ತಾರೆ. ಇವರಲ್ಲಿ ಸಕಲರೂ ಪರಿಗಣಿತರಾಗಿಲ್ಲ. ಶ್ರೀವತ್ಸಪತ್ನೀ ಚಿಂತಾ, ವಾಲೀರಾಜನಮಹಿಷೀತಾರಾ, ಮುಂತಾದ ಅನೇಕರ ಹೆಸರಗಳು ಬಿಟ್ಟುಹೋಗಿರುತ್ತವೆ. ಮತ್ತು ಅವರಲ್ಲಿ ದೇವತಿಗಳೆಂತಲೂ ಮನುಷ್ಯರೆಂತಲೂ ಪ್ರಭೇದಮಾಡಿಲ್ಲವು. ಉಕ್ತಸಾಧ್ವೀಗಳೆಲ್ಲರ ಜೀವನ ವೃತ್ತಾಂತವನ್ನು ಹೇಳರುವದಿಲ್ಲ; ಆದ್ದರಿಂದ ಈ ಅಧ್ಯಾಯದಲ್ಲಿ ಅವರಲ್ಲಿ ಕೆಲವರ ವೃತ್ತಾಂತವನ್ನು ಸಂಕ್ಷೇಪವಾಗಿ ಬರದು, ಎರಡು ಮೂರು ಚರಿತ್ರಯನ್ನು ಮಾತ್ರ ಸ್ವಲ್ಪ ವಿಶದವಾಗಿ ಬರಯುತ್ತೇವೆ.

ಲೋಪಾಮುದ್ರಾ—ಪೌರಾಣೀಕ ಋುಷಿಗಳು ಸ್ತ್ರೀಯರ ನಡವಳಿಕೆಯ ವಿಷಯದಲ್ಲಿ ಎಷ್ಟುದೂರ ಉನ್ನತಿಯನ್ನು ಕಲ್ಪಿಸಿರುತ್ತಾರೆಂಬುವದನ್ನು ತಿಳಿಯಬೇಕಾದರೆ ಕಾಶೀ ಖಂಡದಲ್ಲಿ ಉದಾಹೃತವಾಗಿರುವ ಲೋಪಾಮುದ್ರೆಯ ಚರಿತ್ರೆಯನ್ನು ಓದಬೇಕಾದ್ದವಶ್ಯಕವು. ಈಕೆಯ ಚರಿತ್ರೆಯನ್ನು ವಿಸ್ತಾರವಾಗಿ ಇದರಡಿ ಬರಿಯಲಾಗುತ್ತದೆ.

ಕದಾಚಿತ್ ನೈಮಿಷಾರಣ್ಯದಲ್ಲಿ ಅನೇಕ ಮಹರ್ಷಿಗಳೆಲ್ಲರೂ ಶೇರಿರುವ ಕಾಲದಲ್ಲಿ ಅಗಸ್ತ್ಯಮಹರ್ಷಿಗಳು ಅಲ್ಲಿಗೆ ದಯಮಾಡಿಸಿದರು, ಅವರನ್ನುನೋಡಿ ಅಲ್ಲಿ ಶೇರಿದ್ದ ಋುಷಿಗಳೆಲ್ಲರೂ ಸತ್ಕಾರಮಾಡಿ ಅವರನ್ನು ಕುರಿತು, ಋುಷಿವರ್ಯರೆ! ತಮಗೆ ತಪೋಲಕ್ಷ್ಮಿಯು ಪ್ರಸನ್ನಳಾಗಿರುತ್ತಾಳೆ. ತಾವು ಬ್ರಹ್ಮತೇಜೋ ವಿರಾಜಮಾನರಾಗಿ ಮಹಾ ಔದಾರ್ಯಶಾಲಿಗಳಾಗಿರುತ್ತೀರಿ. ಈ ಪತಿವ್ರತಾ, ಕಲ್ಯಾಣಿ, ಸುಧರ್ಮಿಣೀ ಲೋಪಾಮುದ್ರೆಯು ತಮ್ಮ ಅಂಗಛಾಯಾ ಸ್ವರೂಪಳಾಗಿರುತ್ತಾಳೆ. ಇವಳ ನಾಮಸಂಕೀರ್ತನೆಯ ಮಾತ್ರದಿಂದಲೇ ಜಗತ್ಪವಿತ್ರವಾಗುತ್ತದೆ. ಇವಳು ಅರುಂಧತಿ, ಸಾವಿತ್ರಿ ಅನಸೂಯಾ, ಶಾಂಡಿಲ್ಯಾ ಸತೀ, ಖ್ಯಾತರೂಪಾ ಲಕ್ಷ್ಮೀ, ಮೇನಕಾ, ಸುನೀತೀ, ಸಂಜ್ಞಾ, ಸ್ವಾಹಾ, ಇವರೇ ಮುಂತಾದವರಹಾಗೆ ಅತ್ಯಂತ ಪತಿ ಪ್ರಾಣಳು. ಆದರೆ ಇವಳನ್ನು ಪ್ರಶಂಸೆ ಮಾಡುವಹಾಗೆ ಮತ್ಯಾರನ್ನೂ ಪ್ರಶಂಸೆ ಮಾಡುವದಿಲ್ಲವು. ತಾವು ಭೋಜನ ಮಾಡಿದರೆ ಅವಳು ಭೋಜನ ಮಾಡುವಳು, ತಾವು ಕೂತರೆ ಅವಳು ಕೂಡುವಳು, ತಾವು ನಿದ್ರಾಗತರಾದರೆ ಅವಳು ನಿದ್ರೆಯನ್ನು ಮಾಡುವಳು. ತಾನು ಎಷ್ಟು ನಿದ್ರಾಪರಳಾಗಿದ್ದರೂ, ತಮಗಿಂತಲೂ ಮುಂಚಿತವಾಗಿಯೇ ಶಯನವನ್ನು ಬಿಟ್ಟು ಏಳುವಳು. ತಮ್ಮ ಆಯುಷ್ಯ ಹರಣವಾದೀತೆಂಬ ಭೀತಿಯಿಂದ ಯಾವಾಗಲೂ ತಮ್ಮ ನಾಮ ಗ್ರಹಣವನ್ನು ಮಾಡುವದಿಲ್ಲ; ಅನ್ಯ ಪುರುಷನ ಹೆಸರನ್ನು ಯಾವಾಗಲೂ ಉಚ್ಚರಿಸುವದಿಲ್ಲ. ತಾವು ಯಾವ ಕೆಲಸವನ್ನಾಗಲೀ ಹೇಳಲುದ್ಯುಕ್ತರಾದ ಕ್ಷಣದಲ್ಲಿಯೇ, ಆ ಕೆಲಸವನ್ನು

ಮಾಡಿ, ಸ್ವಾಮಿ! ತಪ್ಪಿದ್ದರೆ ಮನ್ನಿಸಬೇಕೆಂದು ಕ್ಷಮಾ ಪ್ರಾರ್ಥನೆಯನ್ನು ಮಾಡುವಳು. ತಾವು ಕರದರೆ ಯಾವ ಕೆಲಸವಿದ್ದರೂ ಬಿಟ್ಟು ಬಂದು ಏನಾಜ್ಞೆಯೆಂದು ಬೇಡುವಳು. ಬಾಗಲಿನಲ್ಲಿ ಬಹಳ ಹೊತ್ತು ನಿಲ್ಲುವವಳಲ್ಲ. ಸರ್ವದಾ ಬಾಗಲಿಗೆ ಹೋಗುವವಳಲ್ಲ. ತಾವು ಹೇಳದೆ ಯಾರಿಗ್ಯಾಗಲಿ ಏನೂ ಕೊಡುವವಳಲ್ಲ. ತಾವು ಹೇಳುವದಕ್ಕೆ ಮುಂಚಿತವಾಗಿಯೇ ದೇವತಾಪೂಜೆಗೆ ಬೇಕಾದ ಸಕಲ ಉಪಕರಣಗಳನ್ನೂ ಸಿದ್ಧಪಡಿಸುವಳು. ಅತಿವಿನಯದಿಂದ ಹೃಷ್ಟಚಿತ್ತಳಾಗಿ ಆಯಾ ಸಮಯಕ್ಕೆ ಬೇಕಾದ್ದನ್ನೆಲ್ಲಾ ತಾನಾಗಿಯೇ ತಿಳಿದುಕೊಂಡು ಸಿದ್ಧಪಡಿಸಿ ತಮ್ಮ ಸನ್ನಿಧಿಯಲ್ಲಿ ಅರ್ಪಿಸುವಳು. ತಮ್ಮ ಉಚ್ಛಿಷ್ಟ ಫಲಮೂಲಾದಿಗಳನ್ನು ಭೋಜನ ಮಾಡುವಳು. ತಾವು ಕೊಟ್ಟದ್ದನ್ನು ಮಹಾಪ್ರಸಾದವೆಂದು ಭಾವಿಸಿ ಹೃಷ್ಟಚಿತ್ತಳಾಗಿ ತೆಗದುಕೊಳ್ಳುವಳು. ದೇವತಾ, ಅತಿಥಿ, ಪರಿವಾರ, ಗೊವು, ಭಿಕ್ಷುಕರು, ಇವರಿಗೆ ಕೊಡದೆ ಯಾವದೂ ಭಕ್ಷಣೆಯನ್ನು ಮಾಡುವವಳಲ್ಲ. ಸರ್ವದಾ ಮನೆಯಲ್ಲಿ ಬಳಸುವ ಪಾತ್ರೆಗಳನ್ನು ಬೆಳಗಿ ಪರಿಷ್ಕಾರಮಾಡಿಟ್ಟಿರುವಳು. ಸಕಲ ಕಾರ್ಯದಲ್ಲಿಯೂ ದಕ್ಷಳು. ಸರ್ವದಾ ಸಂತೋಷ ಚಿತ್ತಳಾಗಿರುವಳು. ತಮ್ಮ ಆಜ್ಞಾಇಲ್ಲದೆ ಖರ್ಚುಮಾಡುವದರಲ್ಲಿ ಹಿಂಜರಿಯುವಳು. ತಮಗೆ ಹೇಳದೆ ಯಾವಾಗಲೂ ಉಪವಾಸವ್ರತಾಚರಣೆಯನ್ನು ಮಾಡುವವಳಲ್ಲ. ತಮ್ಮ ಅಪ್ಪಣೆಯಾಗದಿದ್ದರೆ ಉತ್ಸವಾದಿಗಳನ್ನು ದೂರದಿಂದಲೂ ಕಣ್ಣೆತ್ತಿ ನೋಡುವವಳಲ್ಲ. ವಿವಾಹಪ್ರೇಕ್ಷಣೆ ತೀರ್ಥಯಾತ್ರೆ ಮುಂತಾದ್ದರಲ್ಲಿ ತಮ್ಮ ಅನುಮತಿ ಇಲ್ಲದೆ ಪ್ರವೃತ್ತಳಾಗುವವಳಲ್ಲ. ತಾವು ಸುಖವಾಗಿ ನಿದ್ರೆಮಾಡುತ್ತಿರುವಾಗಲೂ ಅಥವಾ ಇಚ್ಛಾನುಸಾರ ಕ್ರೀಡೆಮಾಡುತ್ತಿರುವಾಗಲೂ ಎಷ್ಟು ಅವಶ್ಯಕವಾದ ಕೆಲಸವಾಗಿದ್ದಾಗ್ಯೂ ತಮ್ಮ ನಿದ್ರಾವಿಲಾಸ ಭಂಗವಾದೀತೆಂಬ ಭೀತಿಯಿಂದ ಹೇಳತಕ್ಕವಳಲ್ಲ. ಸ್ನಾನಾನಂತರ ಪತಿಯ ಮುಖದರ್ಶನ ಮಾತ್ರ ಮಾಡುವಳೇ ವಿನಾ ಮತ್ತ್ಯಾರ ಮುಖವನ್ನು ನೋಡುವವಳಲ್ಲ. ತಾವು ಸಮೀಪದಲ್ಲಿಲ್ಲದಿದ್ದರೂ ಮನಸಾ ತಮ್ಮ ಧ್ಯಾ

ನ ಪರಳಾಗಿಯೇ ಇರುವಳೆಂದು ಮುಂತಾಗಿ ಲೋಪಾಮುದ್ರಾ ಗುಣ ಕೀರ್ತನೆಯನ್ನು ಮಾಡಿ, ಋುಷಿಗಳು ಪುನಃ ಸ್ತ್ರೀ ಸಾಮಾನ್ಯವಾಗಿ ಆಚರಿಸಬೇಕಾದ ಧರ್ಮವನ್ನು ಹೇಳಲುಪಕ್ರಮಿಸಿದರು. ಸಾಧ್ವೀ ಶಿರೋಮಣಿಯಾದವಳು ಪತಿಯ ಆಯುಸ್ಸು ಹರಣವಾದೀತೆಂಬ ಭೀ ತಿಯಿಂದ ಹರಿಹಾ್ರ ಕುಂಕುಮ ಸಿಂಧೂರಗಳನ್ನು ಮಾಂಗಲ್ಯವೇ ಮೊ ದಲಾದ ಆಭರಣಗಳನ್ನೂ ಯಾವಾಗಲೂ ಬಿಟ್ಟಿರಬಾರದು. ಹೇತು ವಾದ ಮಾಡುವ ಮತ್ತು ಗೃಹ ಪರಿತ್ಯಾಗಮಾಡುವ ಸ್ತ್ರೀಯರ ಸಹ ವಾಸ ಮಾಡಬಾರದು. ಪತಿಯ ಸಂಗಡ ವಿರೋಧಿಸುವವಳ ಮು ಖಾವಲೋಕನ ಮಾಡಬಾರದು. ಏಕಾಂಗಿಯಾಗಿ ಎಲ್ಲಿಯೂ ಯಾ ವಾಗಲೂ ಇರಬಾರದು. ನಗ್ನಳಾಗಿ ಸ್ನಾನ ಮಾಡಬಾರದು. ಪತಿ ಯೊಡನೆ ತನ್ನ ಪಾಂಡಿತ್ಯವನ್ನು ತೋರಿಸಬಾರದು. ದುಷ್ಟ ಸ್ತ್ರೀ ಯರು ಕೂಡುವ ಸ್ಥಳದಲ್ಲಿ ಪ್ರವೇಶ ಮಾಡಬಾರದು. ಪತಿಗೆ ಯಾ ವ ಯಾವ ಪದಾರ್ಥಗಳಲ್ಲಿ ಅಭಿರುಚಿಯೋ ಅದರಲ್ಲಿಯೇ ಅಭಿರುಚಿ ಯುಳ್ಳವಳಾಗಿರಬೇಕು. ತನ್ನ ಸ್ನೇಹಿತರಿಗೆ ಇವುಗಳನ್ನೆಲ್ಲಾ ಒಂ ದೊಂದು ವ್ರತವಾಗಿಯೂ, ಯಜ್ಞವಾಗಿಯೂ, ದೇವತಾಪೂಜೆಯಾ ಗಿಯೂ, ಉಪದೇಶ ಮಾಡುತಲಿರಬೇಕು. ಯಾವಾಗ್ಯೂ ತನ್ನ ಪ ತಿಯ ಆಜ್ಞೆಯನುಲ್ಲಂಘಿಸಬಾರದು. ಪತಿಯು ದುರವಸ್ಥೆಯುಳ್ಳವ ನಾಗಲಿ, ವ್ಯಾಧಿಯುಕ್ತನಾಗಲಿ, ವೃದ್ಧನಾಗಲಿ, ಸುಸ್ಥಿತನಾಗಲಿ, ದುಸ್ಥಿ ತನಾಗಲಿ, ಆತನ ಮಾತನ್ನು ಅತಿಕ್ರಮಿಸಬಾರದು. ಪತಿಯು ಸಂ ತುಷ್ಟನಾದರೆ ತಾನೂ ಸಂತುಷ್ಟಳಾಗಿರಬೇಕು; ದುಃಖ ಪಡುತಲಿದ್ದ ರೆ ತಾನೂ ದುಃಖಪಡುತಲಿರಬೇಕು; ಸಂಪದ್ವಿಪತ್ತುಗಳು ಪ್ರಾಪ್ತ ವಾದಾಗ್ಯೆ ಸಮಾನವಾಗಿ ಎಣಿಸಿ ಒಂದೇರೀತಿಯಾಗಿರಬೇಕು. ಘೃತ ಲವಣ ತೈಲಮುಂತಾದ್ದು ಮುಗಿಯಿತೆಂದು ಹೇಳಬಾರದು. ಪತಿಗೆ ಆಯಾಸಕರವಾದ ಕೆಲಸವನ್ನು ಹೇಳಬಾರದು. ತೀರ್ಥ ಸ್ನಾನವ ನ್ನು ಮಾಡಬೇಕೆಂಬಪೇಕ್ಷೆಯುಂಟಾದರೆ ಸ್ವಾಮಿಯ ಪಾದೋದಕವ ನ್ನು ತೆಗದುಕೊಳ್ಳಬೇಕು. ಶಂಕರ, ವಿಷ್ಣು ಇವರಿಗಿಂತಲೂ ಪತಿ

ಯೇ ಉತ್ತಮನೆಂದು ಭಾವಿಸಬೇಕು. ಪತಿಯ ಆಜ್ಞಾ ಇಲ್ಲದೆ ವ್ರತೋಪವಾಸಾದಿಗಳನ್ನು ಮಾಡಿದರೆ, ಪತಿಗೆ ಆಯುರ್ನಾಶವಾಗಿ ತನಗೆ ನರಕ ಪ್ರಾಪ್ತಿ ಯಾದೀತೆಂದು ತಿಳಿದಿರಬೇಕು. ಪತಿಯು ಕರೆದಾಗ್ಯೆ ಕ್ರೋಧಾನ್ವಿತಳಾಗಿ ಉತ್ತರ ಕೊಟ್ಟರೆ ನಾಯಿ ನರಿ ಜನ್ಮ ಬರುವದು. ಸ್ತ್ರೀಯರು ಯಾವಾಗಲೂ ಪತಿಯ ಚರಣ ಸೇವೆಯನ್ನು ಮಾಡಿ ಭುಂಜಿಸುವದು ಯುಕ್ತವಾದದ್ದು. ಯಾವಾಗಲೂ ಉಚ್ಛಾಸನದಲ್ಲಿ ಕೂಡಬಾರದು. ಅನ್ಯರ ಗೃಹಕ್ಕೆ ಹೋಗಬಾರದು. ಲಜ್ಜಾಕರವಾದ ಮಾತುಗಳಾಡಬಾರದು. ಯಾರನ್ನೂ ದೂಷಿಸಬಾರದು. ಕಲಹವನ್ನು ದೂರದಲ್ಲಿ ಬಿಟ್ಟು ಬಿಡಬೇಕು. ಪತಿಯನ್ನು ಪರಿತ್ಯಜಿಸಿ ರಹಸ್ಯವಾಗಿ ಅನ್ಯಪುರುಷನನ್ನು ಕೂಡಿದವಳು ಗೂಬೆಯಾಗಿ ಹುಟ್ಟಿ ವೃಕ್ಷ ಕೋಟರಗಳ ನಿವಾಸಿಯಾಗುವಳು. ಪತಿಯು ತಾಡನೆಯನ್ನು ಮಾಡಿದರೆ ಪ್ರತಿಯಾಗಿ ತಾಡನೆಯನ್ನು ಮಾಡುವಳು ಹುಲಿಯಾಗಿ ಹುಟ್ಟುವಳು, ಎಂದು ಮುಂತಾಗಿ ಹೇಳಿ,ಋಷಿಗಳು ಪುನಃ ಹೇಳ ತೊಡಗಿದರು. ಯಾವ ಹೆಂಗಸು ಪತಿಯು ಮನೆಗೆ ಬರುವದನ್ನು ದೂರದಿಂದಲೇ ನೋಡಿ ಜಾಗ್ರತೆಯಾಗಿ ಜಲಖಾದ್ಯ ಆಸನ ತಾಂಬೂಲಗಳನ್ನು ಸಿದ್ಧಪಡಿಸಿ ಪಾದಪ್ರಕ್ಷಾಳನೆಯನ್ನು ಮಾಡಿ ಚತುರವಚನಗಳಿಂದ ಸಂತೋಷ ಪಡಿಸುವಳೋ ಅವಳು ಮೂರು ಲೋಕದಲ್ಲಿಯೂ ಜಯಶಾಲಿನೀಯಾಗಿರುವಳು. ತಂದೆ ಮಕ್ಕಳು ಅಣ್ಣತಮ್ಮಂದಿರು ಕೊಡುವ ಪದಾರ್ಥಗಳೆಲ್ಲಾ ಪರಿಮಿತಿಯಾದ್ದಾಗಿಯೂ, ಅಲ್ಪವಾಗಿಯೂ ಇರುವವು. ಪತಿ ಕೊಡುವ ಸಕಲ ಪದಾರ್ಥವೂ ಅಪರಿಮಿತವಾದದ್ದು. ಆದ್ದರಿಂದ.ಯಾರುತಾನೇ ಪತಿಯನ್ನು ಆರಾಧಿಸದಿರುವರು ? ಪತಿಯೇ ಗುರುದೇವತಾ ಧರ್ಮ ತೀರ್ಥಕ್ರಿಯೆಯಾಗಿರುತ್ತಾನೆ. ಅತಏವ ಸಕಲವನ್ನೂ ಪರಿತ್ಯಜಿಸಿ ಪತಿಸೇವೆಯನ್ನು ಮಾಡಬೇಕು, ಜೀವವಿಲ್ಲದ ದೇಹದಹಾಗೆ ಪತಿಹೀನಳಾದ ಹೆಂಗಸು ಅಶುದ್ಧಳು. ತಾಯಿಯನ್ನು ವಿನಾ ಇತರ ವಿಧವೆಯರ ಆಶೀರ್ವಾದವನ್ನು ತೆಗದುಕೊಳ್ಳಕೂಡದೆಂದು ಮುಂತಾಗಿ ಧರ್ಮವನ್ನು ಹೇಳಿದ

ರು. ಮತ್ತು ಹೃದಯವಿದಾರಣವಾದ ವೈಧವ್ಯದ ಕಷ್ಟವನ್ನುಂತಾದ್ದನ್ನೂ, ಸಹಮರಣದ ಪ್ರಶಂಸೆಯನ್ನೂ ವಿವರಿಸಿ ಪುನಃ ಹೇಳುತ್ತಾರೇನಂದರೆ—ವಯೋರೂಪ ಲಾವಣ್ಯಗಳಿಂದ ಗರ್ವಿತರಾದ ನಾರಿಯರು ಯಾರಮನೆಯಲ್ಲಿತಾನೇ ಇರುವದಿಲ್ಲ? ಆದರೆ ಜಗಧೀಶ್ವರನಲ್ಲಿ ಭಕ್ತಿಯುಳ್ಳವನಿಗೆ ಮಾತ್ರ ಪತಿವ್ರತೆಯಾದ ಸ್ತ್ರೀಯು ದೊರಕುವಳು. ಯಾರ ಮನೆಯಲ್ಲಿ ಪತಿವ್ರತಾ ಸ್ತ್ರೀಯು ಇರುವಳೋ ಆ ಮನೆಯವನೇ ಗ್ರಹಸ್ಥನೆನಿಸಿಕೊಳ್ಳುವನೆಂತಲೂ ತಿಳಿಸಿದರು.



ಲೋಪಾಮುದ್ರಾ ಚರಿತ್ರೆಯು ವಿಶುದ್ಧತರ ಮತ್ತು ನಿರ್ಮಲವಾದದ್ದು. ಅವಳು ಈ ಶ್ರೇಣಿಗೆ ಶೇರಿದ ಸ್ತ್ರೀಯರ ಸಮೂಹಕ್ಕೆ ಆದರ್ಶಸ್ವರೂಪಳಾಗಿರುತ್ತಾಳೆ. ಈ ಶ್ರೇಣಿಯಲ್ಲಿ ಉದಹರಿಸಿರುವ ಸಾಧ್ವೀಗಳಲ್ಲಿ ಇವಳಗಿಂತಲೂ ಸುಗುಣಗಳಲ್ಲಿ ಅಧಿಕವಾಗಿಯೂ ಸ್ವಲ್ಪ ಕಡಮೆಯಾಗಿಯೂ ಇರುವರುಂಟು. ಆದರೆ ಇವಳ ಚರಿತ್ರೆಯು ರಾಮಾಯಣದಲ್ಲಿಯೂ ಆದರ್ಶಸ್ವರೂಪವಾಗಿ ಉದಹರಿಸಲ್ಪಟ್ಟದೆ. ಯುಧಿಷ್ಠಿರಾದಿ ಕೆಲ ಮಹಾ ಭಾಗ್ಯಶಾಲಿಗಳಿಗೆ ಪುಣ್ಯಶ್ಲೋಕರೆಂಬ ವಿಶೇಷಣವು ಹ್ಯಾಗೆ ಉಂಟಾಯಿತೋ, ಅದೇರೀತಿಯಾಗಿ ಈ ಲೋಪಾಮುದ್ರೆಗೆ ಯಶಸ್ವಿನೀಎಂಬ ಬಿರದು ಪ್ರಾಪ್ತವಾಗಿರುತ್ತದೆ.

ಮಹಾಭಾರತದಲ್ಲಿ ಅಂತರ್ಗತವಾಗಿರುವ ಶಕುಂತಳೋಪಾಖ್ಯಾನವು ಆಕಾಲದ ಉತ್ತಮ ರಮಣೀ ಚರಿತ್ರೆಯಲ್ಲಿ ಒಂದಾಗಿ ಶೇರಿದೆ. ಋಷಿಪಾಲಿತಳಾದ ಶಕುಂತಳೆಯು ರಾಜನ ದರ್ಶನಾರಭ್ಯ ಅವನ ಪ್ರಣಯಪಾಶದಲ್ಲಿ ಬದ್ಧಳಾದಳು. ರಾಜನು ಗಾಂಧರ್ವ ವಿಧಾನವಾಗಿ ಅವಳನ್ನು ವಿವಾಹ ಮಾಡಿಕೊಂಡನು. ಅವಳಲ್ಲಿ ರಾಜನಿಗೆ ಔರಸನಾಗಿ ಒಬ್ಬ ಮಗನು ಹುಟ್ಟಿದನು. ರಾಜನಾದರೋ, ರಾಜಧಾನಿಗೆ ಹಿಂದಿರಿಗಿ ಹೋದಾರಭ್ಯ ಶಕುಂತಳಾ ವೃತ್ತಾಂತವನ್ನೇ ನೆನಪಿಗೆ ತರಲಿಲ್ಲ. ಶಕುಂತಳೆಯು ಐದು ವರ್ಷಕಾಲ ಪತಿವಿರಹ ಯಾ

ತನಾನುಭವವನ್ನು ಮಾಡಿ ನಂತರ ತನ್ನ ಮೊಗುವನ್ನು ಎತ್ತಿಕೊಂಡು ರಾಜಮಂದಿರಕ್ಕೆ ಬಂದಾಗ್ಯೆ ಇವಳು ಸ್ವೇಚ್ಛಾಚಾರಿಣಿಯೆಂದು ದೋಷಾರೋಪಣೆಯನ್ನು ಮಾಡಿ ಈಕೆಯ ಗುರುತುಕೂಡ ತನಿಗೆ ಇಲ್ಲವೆಂದು ತಿರಸ್ಕರಿಸಿದನು. ಶಕುಂತಳೆಯು ತನ್ನ ಪೂರ್ವವೃತ್ತಾಂತವೆಲ್ಲವನ್ನೂ ಎಷ್ಟು ವಿಶದವಾಗಿ ರಾಜನ ಸ್ಮರಣೆಗೆ ಬರಲೆಂದು ತಿಳಿಸಿದಾಗ್ಯೂ, ಆಮೂಲಾಗ್ರವಾಗಿ ಮೋಸಗೊಳಿಸುವ ಅಭಿಲಾಷೆಯುಳ್ಳ ರಾಜನಿಗೆ ಹ್ಯಾಗೆತಾನೇ ತಾನು ಮಾಡಿದ ಕೆಲಸವು ನೆನಪಿಗೆ ಬಂದೀತು (1). ಕಡೆಗೂ ತಾನು ಶಕುಂತಳೆಯನ್ನು ಸರ್ವಾತ್ಮನಾ ಅರಿಯೆನೆಂದು ಸಾಧಿಸಿ ಪ್ರತ್ಯುತ್ತರವನ್ನು ಕೊಟ್ಟನು. ನಂತರ ಅಲ್ಲಿ ನೆರದಿದ್ದ ಸಭಾಮಂಡಲಿಯಲ್ಲಿ ಅನೇಕವಿಧವಾಗಿ ತನ್ನನ್ನು ವಿವಾಹ ಮಾಡಿಕೊಂಡ ವೃತ್ತಾಂತವನ್ನು ಸರ್ವಜನ ಸಮ್ಮತವಾಗುವಂತೆ ಪುನಃ ಪುನಃ ಉಪಪಾದಿಸಿ ಹೇಳಿದಳು. ಆಗ ಇವಳ ದೈನ್ಯೋಕ್ತಿಗಳನ್ನು ಸಭೆಯವರು ಶ್ರವಣಮಾಡಿ ಕರುಣಾ ಜಲಾರ್ದ್ರ ಹೃದಯರಾಗಿ ಶಕುಂತಳೆಯು ಸತ್ಯವನ್ನು ನುಡಿದಿರುತ್ತಾಳೆಂದು ನಂಬಿದರು. ರಾಜನ ಅನಂಗೀಕಾರವನ್ನು ಎಲ್ಲರೂ ಅನಂಗೀಕರಿಸಿದರು. ನಂತರ ರಾಜನು ತನ್ನ ಮನೋನುಗುಣವಾಗಿ ಮೋಸಗೊಳಿಸುವದು ಅಸಾಧ್ಯವೆಂದು ತಿಳಿದು ಶಕುಂತಳೆಯನ್ನಂಗೀಕರಿಸಿದನು. ಮಹಾಭಾರತದಲ್ಲಿಯೂ ರಾಮಾಯಣದಲ್ಲಿಯೂ ಉದಹರಿಸಿರುವ ತತ್ಕಾಲೀನರಾದ ಸಾಧ್ವೀಶಿರೋಮಣಿಗಳ ಇಂತಾ ಅಪೂರ್ವವಾದ ಸಾಹಸವನ್ನು ನೋಡಿದರೆ, ಆ ಕಾಲದ ನಾರೀಚರಿತ್ರೆಯು ಬಹಳಮಟಿಗೆ ಪರಿಶುದ್ಧವಾಗಿತ್ತೆಂದು ಸ್ಪಷ್ಟವಾಗಿ ತೋರಿಬರುತ್ತದೆ. ಶಕುಂತಳೆ, ದೇವಯಾನೆ, ದ್ರೌಪದಿ, ಸೀತೆ, ಇವರೆಲ್ಲರೂ ಸಾಹಸ ಪೂರ್ವಕವಾಗಿ ಸ್ವಾಮಿಗಳೊಂದಿಗೆ ಚರ್ಚೆಮಾಡಿ ತಮ್ಮ ತಮ್ಮ ಪತಿಗಳಿಗೆ ಅನೇಕ ಧರ್ಮಗಳನ್ನು ತಿಳಿಯಪಡಿಸಿರುತ್ತಾರೆ, ಮತ್ತು ದುಷ್ಟರಾದವರನ್ನು

(1). ಕಾಳಿದಾಸನು ತನ್ನ ನಾಟಕದಲ್ಲಿ ಶಕುಂತಳಾ ಚರಿತ್ರೆಯನ್ನು ಭಾರತದಲ್ಲಿರುವದಕ್ಕೆ ಸ್ವಲ್ಪ ಭಿನ್ನಿಸಿ ಬರೆದಿರುತ್ತಾನೆ

ತಿರಸ್ಕರಿಸಿರುತ್ತಾರೆ. ಏತಾದೃಶ ಸಾಹಸಕಾರ್ಯವು ದೋಷಾವಹವಾದದ್ದಲ್ಲವು; ಸುಗುಣಗಳಲ್ಲೊಂದಾಗಿ ಎಣಿಸತಕ್ಕದ್ದಾಗಿದೆ. ಸ್ತ್ರೀಯಾದವಳಿಗೆ ಇಂತಾ ಸಾಹಸ ಉಂಟಾಗಬೇಕಾಗಿದ್ದರೆ ತಾನು ಪಾಪಸ್ಪರ್ಶಳಲ್ಲವೆಂತಲೂ, ತನಗೆ ಪಾಪದಲ್ಲಿ ಮನಸ್ಸಿಲ್ಲವೆಂತಲೂ ದೃಢವಾದ ಜ್ಞಾನವಿದ್ದರೇನೇ ಇಂತಾ ಸಾಹಸವು ಪ್ರಾಪ್ತವಾದೀತು. ಮಹಾ ಭಾರತದಲ್ಲಿ ಪತಿವ್ರತೋಪಾಖ್ಯಾನವೆಂದು ಒಂದು ಅಧ್ಯಾಯವಿದೆ. ಸ್ತ್ರೀಯರಿಗೆ ಅವರ ಚರಿತ್ರೆಯು ಪರಿಶುದ್ಧವಾಗಿದ್ದರೆ ಅವರಿಗೆ ಎಂತಾ ಸಾಹಸ ಉಂಟಾದೀತೆಂಬದನ್ನು ತಿಳಿಯಲಳಸಿದರೆ ಆ ಪತಿವ್ರತೋಪಾಖ್ಯಾನವನ್ನು ಚನ್ನಾಗಿ ನೋಡಬೇಕಾದ್ದವಶ್ಯಕವಾಗಿರುತ್ತೆ.

ಈಗ ಈ ಶ್ರೇಣಿಯಲ್ಲಿ ದೃಷ್ಟಾಂತವಾಗಿ ಸರ್ವ್ವಪ್ರಧಾನ ನಾರೀಮಣಿಯ ಚರಿತ್ರೆಯನ್ನು ಹೇಳುತ್ತದೆ. ಅವಳ್ಯಾರಂದರೆ—ಸಾವಿತ್ರಿಯು. ಈಕೆಯು ಅಶ್ವಪತಿ ಮಹಾರಾಯನ ಮಗಳು. ಒಂದಾನೊಂದು ಕಾಲದಲ್ಲಿ ಈ ಅಶ್ವಪತಿ ಮಹಾರಾಯನು ವಿವಾಹೋಪಯುಕ್ತ ವಯಸ್ಕಳಾಗಿದ್ದ ತನ್ನ ತನುಜೆಯನ್ನು ನೋಡಿ, ಅಮ್ಮಾ ಸಾವಿತ್ರಿ! ನೀನು ವಿವಾಹ ಯೋಗ್ಯವಾದ ವಯಸ್ಕಳಾಗಿರುವದರಿಂದ, ನನ್ನ ವಿಶ್ವಾಸಪಾತ್ರನಾದ ಈ ಸಾರಥಿಯೊಂದಿಗೆ ದೇಶ ಸಂಚಾರವನ್ನು ಮಾಡಿ ನೀನು ಯಾರನ್ನು ನಿನಗೆ ಅನುರೂಪ ಪತಿಯನ್ನಾಗಿ ವರಿಸುವಿಯೋ ಅವನಿಗೆ ನಿನ್ನನ್ನು ಧಾರೆಯೆರೆಯುವೆನು. ನೀನು ಲಜ್ಜಿತಳಾಗಬಾರದು. ಇದು ಆಗಮೋಕ್ತ ವಿಧಿಯಾಗಿರುತ್ತದೆ. ಅನೇಕ ಸ್ತ್ರೀಯರು ಈ ನಿಯಮವನ್ನಂಗೀಕರಿಸಿ ಅಭಿಲಿಷಿತ ಪತಿಯನ್ನು ಹೊಂದಿರುತ್ತಾರೆಂದು ಹೇಳಿದನು. ನಂತರ ಸಾವಿತ್ರಿಯು ತಂದೆಯ ಆಜ್ಞಾನುಗುಣವಾಗಿ ಆ ಸಾರಥಿಯೊಡನೆ ರಥಾರೋಹಣವನ್ನು ಮಾಡಿ ನಾನಾ ದೇಶವನ್ನು ಸಂಚಾರಮಾಡಿ ಕಡೆಗೆ ಒಂದು ತಪೋವನಕ್ಕೆ ಬಂದು ಸೇರಿದಳು. ಆ ತಪೋವನದಲ್ಲಿ ರಾಜ್ಯಭ್ರಷ್ಟನಾದ ದ್ಯುಮತ್ಸೇನರಾಯನ ಪುತ್ರನಾದ ಸತ್ಯವಾನೆಂಬಾತನನ್ನು ನೋಡಿದಳು. ದ್ಯುಮತ್ಸೇನರಾಯನನ್ನು ಆತನ ಶತ್ರುಗಳು ನೇತ್ರೋತ್ಪಾಟನೆಯನ್ನು

ಮಾಡಿ ರಾಜ್ಯದಿಂದ ಹೊರಡಿಸಿಬಿಟ್ಟಿದ್ದರು. ಸಾವಿತ್ರಿಯು ಸತ್ಯವಾನನ ವಯೋರೂಪಾದಿ ಗುಣಗಳನ್ನು ನೋಡಿ ಆತನೇ ತನಗೆ ಪತಿಯೆಂದು ಮನಸಾವರಿಸಿದಳು. ಇಷ್ಟರಲ್ಲೇ ದೇವ ಋಷಿಯಾದ ನಾರದರು ಈಕೆಯ ಸಂಕಲ್ಪವನ್ನು ತಿಳಿದು, ಅಶ್ವಪತಿರಾಯನ ಸಮೀಪಕ್ಕೆ ಬಂದು, ಅವನನ್ನು ಕುರಿತು, ಅಯ್ಯಾ ಅಶ್ವಪತಿಮಹಾರಾಜನೆ! ನಿನ್ನ ಮಗಳು ಸಾವಿತ್ರಿಯು ಸತ್ಯವಾನೆಂಬವನನ್ನು ವಿವಾಹ ಮಾಡಿಕೊಳ್ಳುವದಕ್ಕೆ ಮನಸಾಸಂಕಲ್ಪಮಾಡಿರುತ್ತಾಳೆ. ಆದರೆ ಆ ಸತ್ಯವಾನನಿಗೆ ಇನ್ನೊಂದು ಸಂವತ್ಸರದೊಳಗಾಗಿ ಮೃತ್ಯು ಸಂಭವಿಸುತ್ತದೆಂದು ಹೇಳಿದರು. ಇದನ್ನು ಕೇಳಿ ಅಶ್ವಪತಿಯು ಮಗಳನ್ನು ಕರೆಸಿ, ಸಾವಿತ್ರಿ! ನೀನು ಸತ್ಯವಾನನ್ನು ಬಿಟ್ಟು ಮತ್ತೊಬ್ಬ ಪತಿಯನ್ನು ವರಿಸೆನ್ನಲು, ಸ್ಥಿರಪ್ರತಿಜ್ಞಳಾದ ಸಾವಿತ್ರಿಯು, ನಾನು ಒಂದಾವರ್ತಿ ವರಿಸಿದನಂತರ, ಅವನು ದೀರ್ಘಾಯುವಾಗಲಿ, ಅಲ್ಪಾಯುವಾಗಲಿ, ಗುಣವಾನಾಗಲಿ, ನಿರ್ಗುಣನಾಗಲಿ, ಆತನೇ ನನಗೆ ಪತಿಯಾಗಿರುತ್ತಾನೆ. ಆತನನ್ನು ಬಿಟ್ಟು ಮತ್ತೊಬ್ಬನನ್ನು ನಾನು ವರಿಸುವವಳಲ್ಲ (1). ಲೋಕದಲ್ಲಿ "ಸಕೃದಂಶೋನಿಪತತಿ ಸಕೃತ್ಕನ್ಯಾಪ್ರದೀಯತೆ। ಸಕೃದಾಹದದಾನೀತಿ ತ್ರೀಣ್ಯೇತಾನಿ ಸಕೃತ್ಸಕೃತ್ ॥ ಎಂಬಂತೆ ನಾನು ಒಂದಾವರ್ತಿ ವರಿಸಿದವನನ್ನು ಬಿಟ್ಟು ಮತ್ತೊಬ್ಬನನ್ನು ವರಿಸುವವಳಲ್ಲವೆಂದು ಹೇಳಿದಳು. ನಂತರ ರಾಜನು ತನ್ನ ಮಗಳ ಈಪ್ಸಿತವನ್ನು ಸ್ಥಿರಪ್ರತಿಜ್ಞೆಯನ್ನಾಗಿ ತಿಳಿದು ಅವಳನ್ನು ಸತ್ಯವಾನನಿಗೆ ಕೊಟ್ಟು ಧಾರೆ ಎರದನು. ನಂತರ ಸಾವಿತ್ರಿಯು ಮನೋವಾಕ್ಕಾಯಗಳಿಂದಲೂ ಭಕ್ತಿಪುರಸ್ಸರವಾಗಿ ಅಂಧರಾದ ಅತ್ತೆಮಾವಂದಿರನ್ನು ಇತರ ಗುರುಜನರನ್ನೂ ಶುಶ್ರೂಷೆ ಮಾಡುವದರಲ್ಲಿ ಆಸಕ್ತಳಾಗಿ, ನಿರಂತರದಲ್ಲಿಯೂ ಸತ್ಯವಾನನಿಗೆ ಮೃತ್ಯು ಸಂ

---

(1). ದೀರ್ಘಾಯುರಥವಾಲ್ಪಾಯುಃ ಸಗುಣೋನಿರ್ಗುಣೋಥವಾ ।
ಸಕೃದ್ವೃತೋಮಯಾಭರ್ತಾ ನದ್ವಿತೀಯಂವೃಣೋಮ್ಯಹಂ ॥

ಛವವಾಗಕೂಡದೆಂತಲೂ, ಹಾಗೇನಾದರೂ ಆದರೆ ತಾನೂ ಆತನೊಡನೆ ಮೃತ್ಯುವಿನ ಅಧೀನಳಾಗಬೇಕೆಂತಲೂ ದೇವರನ್ನು ಪ್ರಾರ್ಥಿಸುತಲಿದ್ದಳು. ಈರೀತಿಯಾಗಿ ಕಾಲವನ್ನು ಕಳಿಯುತ್ತಾ ಇರಲಾಗಿ ಸತ್ಯವಾನನಿಗೆ ಮೃತ್ಯುಪಕ್ರಮಣ ದಿವಸ ಪ್ರಾಪ್ತವಾಯಿತು. ಪತಿಪ್ರಾಣಳಾದ ಸಾವಿತ್ರಿಯು ಬಹಳ ವ್ಯಸನಾಕ್ರಾಂತಳಾಗಿ ಶೋಕಾವೇಗವನ್ನು ಬಹಳ ಕಷ್ಟದಿಂದ ಸಹಿಸಿಕೊಂಡು, ಆ ದಿವಸ ಪತಿಯೊಡನೆ ಫಲಮೂಲಾದಿಗಳನ್ನು ತರುವದಕ್ಕೆ ವನಗಮನ ಮಾಡಬೇಕೆಂದು ನಿಶ್ಚೈಸಿ, ಅತ್ತೆಮಾವಂದಿರ ಅಪ್ಪಣೆಯನ್ನು ಪಡೆದು ಸತ್ಯವಾನನಿಗೆ ಸಂಭವಿಸುವ ಮೃತ್ಯು ನಿವಾರಣಾರ್ಥವಾಗಿ ಅವನ ಹಿಂದೆ ಆ ನಿಬಿಡತರವಾದ ವನ ಮಧ್ಯದಲ್ಲಿ ಅವನನ್ನು ಎಡೆಬಿಡದೆ ಅಲಿಯುತ್ತಿದ್ದಳು. ಸಾಯಂಕಾಲದಲ್ಲಿ ಸತ್ಯವಾನನು ಫಲಮೂಲಗಳನ್ನು ಗಂಟುಕಟ್ಟಿ, ಆ ಗಂಟನ್ನು ತಲೆಯಮೇಲೆ ಹೊತ್ತುಕೊಂಡು ಗೃಹಾಭಿಮುಖವಾಗಿ ಹೊರಟನು. ಸ್ವಲ್ಪದೂರ ಬಂದನಂತರ, ಸತ್ಯವಾನನಿಗೆ ಶಿರಃ ಪೀಡೆಯುಂಟಾಗಿ ಸಾವಿತ್ರಿಯನ್ನು ಕುರಿತು, ಪ್ರಿಯೆ ! ನೀನು ಇಲ್ಲಿ ಕೂತುಕೊಂಡು ಈ ಫಲಮೂಲಗಳ ಗಂಟನ್ನು ನೋಡಿಕೊಳ್ಳುತಲಿರು; ನಾನು ನಿನ್ನ ತೊಡೆಯಮೇಲೆ ತಲೆಯನ್ನಿಟ್ಟುಕೊಂಡು ಒಂದು ಕ್ಷಣಕಾಲ ಮಾತ್ರ ಆಯಾಸ ವಿಶ್ರಾಂತಿ ಮಾಡಿಕೊಳ್ಳುತ್ತೇನೆಂದನು. ಆಗ ಸಾವಿತ್ರಿಯು ಇದೇ ತನ್ನ ಪತಿಗೆ ಕಠೋರತರವಾದ ಮೃತ್ಯು ಸಂಭವ ಕಾಲವೆಂದು ಮನಸ್ಸಿನಲ್ಲಿ ತಿಳಿದುಕೊಂಡಳು. ಕ್ರಮೇಣ ಸತ್ಯವಾನನ ಅಂಗಾಂಗಗಳೆಲ್ಲಾ ಸಂಪೂರ್ಣವಾಗಿ ಶೀತಳವಾಯಿತು. ಆ ಕಾಲದಲ್ಲಿ ಏಕಾಕಿನೀಯಾಗಿದ್ದ ಸಾವಿತ್ರಿಯು ಆ ಶವವನ್ನು ತೊಡೆಯ ಮೇಲಿಟ್ಟುಕೊಂಡು ಎಷ್ಟು ರೋದಿಸಿದಳೋ, ಅದನ್ನು ಯಥಾವತ್ತಾಗಿ ಹೇಳುವದಕ್ಕೆ ಯಾರಿಂದತಾನೇ ಸಾಧ್ಯವಾದೀತು? ಕ್ರಮಾತ್ ರಜನಿಯು ಗಾಢಾಂಧಕಾರದಿಂದ ವ್ಯಾಪ್ತವಾಯಿತು. ಆ ಕಾಲದಲ್ಲಿ ಪ್ರಾಣಾಪಹಾರಿಗಳಾದ ಯಮದೂತರು ಈ ಸತ್ಯವಾನನ ಪ್ರಾಣವನ್ನು ಅಪಹರಿಸುವದಕ್ಕೆ ಬಂದವರು, ಇವನ ದೇಹವು ಆ ಪತಿವ್ರತಾ

ಶಿರೋಮಣಿಯು ತೊಡೆಯಮೇಲೆ ಇದ್ದದ್ದರಿಂದ ಅವಳನ್ನು ಸ್ಪರ್ಶ ಮಾಡಿ ಅವನ ಪ್ರಾಣಾಪಹಾರಮಾಡುವದು ಅಸಾಧ್ಯವಾಗಿ, ಈ ವಿಷಯವನ್ನು ಯಮನ ಸಮೀಪಕ್ಕೆ ಹಿಂದಿರಿಗಿಹೋಗಿ ವಿಜ್ಞಾಪಿಸಿದರು. ಯಮದೇವನು ಈ ಸಮಾಚಾರವನ್ನು ಕೇಳಿ, ತಾನೇ ಸಾವಿತ್ರಿಯ ಯೆದುರಿಗೆ ಬಂದು ನಿಂತುಕೊಂಡು, ಅವಳನ್ನು ಕುರಿತು, ಸಾವಿತ್ರಿ! ನಿನ್ನ ಪತಿಯ ದೇಹವು ಈ ಕ್ಷಣದಲ್ಲಿಯೇ ನನಗೆ ಬರತಕ್ಕದ್ದಾಗಿದೆ; ನಾನು ಮಾಡಬೇಕಾದ ಕೆಲಸಕ್ಕೆ ಯಾತಕ್ಕೆ ಅಡ್ಡಿಮಾಡುತ್ತಿ? ನಿನ್ನ ತೊಡೆಯಮೇಲಿನಿಂದ ತೆಗದುಕೊಂಡುಹೋಗುವದು ನನಗೂ ಅಸಾಧ್ಯವಾಗಿದೆ; ನೀನು ಆ ದೇಹವನ್ನು ನನ್ನ ವಶಕ್ಕೆ ಕೊಟ್ಟುಬಿಡೆಂದು ಹೇಳಿದನು. ಸಾವಿತ್ರಿಯು ಯಮನು ಹೇಳಿದಂತೆ ತನ್ನ ಪತಿಯ ಮೃತದೇಹವನ್ನು ಕೆಳಗೆ ಬಿಟ್ಟುಬಿಟ್ಟಳು. ಯಮನು ಸತ್ಯವಾನನ ಅಂಗುಷ್ಟಪ್ರಮಾಣವಾದ ಮೂಲಶರೀರವನ್ನು ತೆಗದುಕೊಂಡು ದಕ್ಷಿಣಾಭಿಮುಖವಾಗಿ ಗಮನ ಮಾಡಿದನು. ಸಾವಿತ್ರಿಯು ನಿರ್ಭೀಕ ಚಿತ್ತಳಾಗಿ ಯಮನನ್ನು ಹಿಂದಟ್ಟಿ ನಡೆದಳು. ಯಮನು ಸ್ವಲ್ಪ ದೂರ ಹೋದನಂತರ, ತನ್ನ ಹಿಂದಟ್ಟಿ ಬರುತಲಿದ್ದ ಸಾವಿತ್ರಿಯನ್ನು ನೋಡಿ, ಸಾವಿತ್ರಿ! ನೀನು ಯಾತಕ್ಕೆ ನನ್ನ ಹಿಂದೆ ಬರುತ್ತೀ? ಇದು ನಿನಗೆ ವೃಥಾ ಆಯಾಸಕಾರಿಯೇ ವಿನಾ ಪ್ರಯೋಜನವೇನೂ ಇಲ್ಲವೆನಲು; ಸಾವಿತ್ರಿಯು, ನನ್ನ ಪತಿಯ ಸಮೀಪದಲ್ಲಿ ನಾನು ಬರುವಾಗ್ಯೆ ನನಗೇನು ಶ್ರಮ? ಆತನನ್ನು ಎಲ್ಲಿಗೆ ತೆಗದುಕೊಂಡು ಹೋಗುವಿಯೋ, ಅಲ್ಲಿಗೆ ನಾನೂ ಬರುತ್ತೇನೆ, ನನ್ನ ಸ್ವಾಮಿಯ ದೇಹವನ್ನು ಬಿಟ್ಟು ನಾನು ಇರುವವಳಲ್ಲವೆಂದಳು (1). ಈ ಮಾತನ್ನು ಕೇಳಿ ಯಮನು ಇನ್ನೂ ಸ್ವಲ್ಪದೂರ ಹೋದಮೇಲೆ, ಪುನಃ, ಸಾವಿತ್ರಿಯನ್ನು ಕುರಿತು, ಹೇ, ಸಾವಿತ್ರಿ! ನಿನ್ನ ಪತಿಯ ಪ್ರಾಣವನ್ನು ವಿನಾ ಇನ್ಯಾವ

(1). ಶ್ರಮಃ ಕುತೋ ಭರ್ತೃಸಮೀಪತೋ ಮೇ
ಯತೋ ಹಿ ಭರ್ತಾ ಮಮ ಸಾ ಗತಿರ್ಧ್ರುವಂ।
ಯತಃ ಪತಿಂ ನೇಷ್ಯತಿ ತತ್ರ ಮೇ ಗತಿಃ। ಸ. ಶ್ಲೋ.

ವರವನ್ನಾದರೂ ಕೇಳು, ನಾನು ಕೊಡುತ್ತೇನೆನಲು; ಸಾವಿತ್ರಿಯು, ನನ್ನ ಅತ್ತೆ ಮಾವಂದಿರಿಗೆ ಕಣ್ಣು ಬರಲೆಂದಳು. ಯಮನು ಅದೇ ರೀತಿಯಾಗಿ ವರಪ್ರದಾನವನ್ನು ಮಾಡಿ ಮುಂದಕ್ಕೆ ತೆರಳಿದನು. ಸಾವಿತ್ರಿಯು ಪುನಃ ಅವನ ಬೆನ್ನಟ್ಟಿ ನಡೆದಳು. ಯಮರಾಜನು ಇವಳ ಸ್ಥೈರ್ಯವನ್ನು ನೋಡಿ ಇವಳು ಕೇಳಿ ಕೇಳಿದಹಾಗೆಲ್ಲಾ ಅವಳ ಮಾವನಿಗೆ ರಾಜ್ಯಭೋಗ ಪ್ರಾಪ್ತಿಯಾಗುವಂತೆಯೂ, ಇವಳ ತಂದೆಗೆ ನೂರು ಮಂದಿ ಪುತ್ರರಾಗಲೆನ್ನುತ್ತಲೂ, ವರಗಳನ್ನು ಕೊಡುತ್ತಾ ಮುಂದೆ ನಡೆಯುತಲಿದ್ದನು. ಸಾವಿತ್ರಿಯು ಎಷ್ಟುಹೇಳಿದರೂ ಕೇಳದೆ ಯಮನನ್ನು ಬಿಡದೆ ಅವನ ಬೆನ್ನಟ್ಟಿ ಹೋಗುತಲಿದ್ದಳು. ಯಮನು ಎಷ್ಟು ಹೇಳಿದಾಗ್ಯೂ ಕೇಳದೆ ಹಿಂದಟ್ಟಿ ಬರುತಲಿದ್ದ ಸಾವಿತ್ರಿಯ ಪತಿಪರಾಯಣತೆಗೆ ಮೆಚ್ಚಿ, ಮನದಲ್ಲಿ ಆಶ್ಚರ್ಯಪಡುತ್ತಾ, ಪುನಃ ಸಾವಿತ್ರಿಯನ್ನು ಕುರಿತು, ಸಾವಿತ್ರಿ! ನೀನು ಯಾತಕ್ಕೆ ವೃಥಾ ಆಯಾಸವನ್ನು ಮಾಡಿಕೊಳ್ಳುತ್ತಿ, ಮನೆಗೆ ಹಿಂದಿರಿಗಿ ಹೋಗು, ಅಲ್ಲಿ ನೀನು ರಾಜ್ಯ ಭೋಗಮಾಡುವಿ, ಎನಲು; ಸಾವಿತ್ರಿಯು ಪುನಃ ಯಮನನ್ನು ಕುರಿತು, ನನ್ನ ಸ್ವಾಮಿಯೊಡನೆ ನಾನು ಬರುತಲಿರುವಾಗ್ಯೆ ನನಗೇನು ಶ್ರಮ? ನೀನು ರಾಜಭೋಗವನ್ನು ಮಾಡುವಿಯೆಂದು ಸಮಾಧಾನವನ್ನು ಹೇಳುತ್ತೀ, ನನ್ನ ಪ್ರತಿಜ್ಞೆಯನ್ನು ಕೇಳು, ನನಗೆ ನನ್ನ ಸ್ವಾಮಿಯನ್ನು ಬಿಟ್ಟು ಸುಖ ಸೌಭಾಗ್ಯ ಸ್ವರ್ಗ ಇವುಗಳಲ್ಲಿ ಯಾವ ಸುಖವೂ ಇಲ್ಲ, ಸ್ವಾಮಿ ಹೀನವಾದ ಜೀವನವು ಅತ್ಯಂತ ನಿಷ್ಪ್ರಯೋಜನವಾದದ್ದು, ಆದದ್ದರಿಂದ ಸ್ವಾಮಿಯನ್ನು ಬಿಟ್ಟು ಹೋಗುವವಳಲ್ಲ (1) ವೆಂದು ಹೇಳಲು; ಯಮನು ಸಾವಿತ್ರಿಯು ಸಾಮಾನ್ಯವಾದ ಹೆಂಗಸಲ್ಲವೆಂದು ತಿಳಿದು, ಅವಳ ಪತಿಪರಾಯಣತೆಯ

---

(1). ನಕಾಮಯೆ ಭರ್ತೃವಿನಾಕೃತಃಸುಖಂ ನಕಾಮಯೆ ಭರ್ತೃವಿನಾಕೃತಾಶ್ರಿಯಂ ।
ನಕಾಮಯೆ ಭರ್ತೃವಿನಾಕೃತಾದಿವಂ ನಭರ್ತೃಹೀನಂವ್ಯವಸಾಮಿ ಜೀವಿತಂ ॥

ನ್ನು ಅತ್ಯಂತ ಪ್ರಶಂಸನೆಯನ್ನು ಮಾಡಿ, ಅವಳ ಪತಿಪ್ರಾಣವನ್ನು ಹಿಂದಿರಿಗಿ ಅವಳಿಗೆ ಕೊಟ್ಟನು. ಸಾವಿತ್ರಿಯು ತನ್ನ ಪತಿಪ್ರಾಣವನ್ನು ತೆಗದುಕೊಂಡು ಬಂದು ಅವನ ದೇಹಕ್ಕೆ ಸಂಯೋಗ ಮಾಡಿದ ಕೂಡಲೇ, ಸತ್ಯವಾನನು ಪುನಃ ಸಚೇತನನಾಗಿ ಎದ್ದು, ತನ್ನ ಭಾರ್ಯೆಯನ್ನು ನೋಡಿ, ಓಹೋ! ಇದೇನು ಬಹಳ ಹೊತ್ತಾಯಿತು! ಆಹಾರವಿಲ್ಲದೆ ವೃದ್ಧರಾದ ತಾಯಿ ತಂದೆಗಳು ಶ್ರಮಪಡುತಲಿದ್ದಾರೆಂದು ಹೇಳಿ, ಜಾಗ್ರತೆಯಾಗಿ ತಪೋವನಾಭಿಮುಖವಾಗಿ ಗಮನ ಮಾಡಿದನು. ಸಾವಿತ್ರಿಯು ಪೂರ್ಣಕಾಮಳಾಗಿ ಅತಿ ಹರ್ಷದಿಂದ ತನ್ನ ಪತಿಯನ್ನನುಸರಿಸಿದಳು. ಆದದ್ದರಿಂದಲೇ ಸಾವಿತ್ರಿಯೂ ಸತ್ಯಕ್ಕೆ ಹಿರಿಯಳಾದಳು.

ಈ ಉಪಾಖ್ಯಾನವನ್ನು ಮಹಾ ಭಾರತದ ಅರಣ್ಯ ಪರ್ವದಲ್ಲಿ ಮಹರ್ಷಿ ವೇದವ್ಯಾಸರು ಅತಿ ರಮಣೀಯವಾಗಿ ವರ್ಣಿಸಿರುತ್ತಾರೆ. ಗ್ರಂಥ ಬಾಹುಳ್ಯ ಭೀತಿಯಿಂದ ಇಲ್ಲಿ ಸಂಕ್ಷೇಪವಾಗಿ ಬರದಿರುತ್ತದೆ. ಮೂಲ ಗ್ರಂಥವನ್ನು ನೋಡಿದರೆ, ಈ ಮಹಾ ಪತಿವ್ರತೆಯ ಕಥೆಯನ್ನು ಆಮೂಲಾಗ್ರವಾಗಿ ಓದಿ ಮನಸ್ಸಿಗೆ ತಿಳಿದುಕೊಳ್ಳಬಹುದು. ಆದರೆ ಭಾಷಾಂತರದಲ್ಲಿ ಅದನ್ನು ಯಥಾವತ್ತಾಗಿ ವರ್ಣಿಸುವದಸಾಧ್ಯ. ಮೂಲ ಗ್ರಂಥವನ್ನು ಓದಿದವರಿಗೆ ಈರೀತಿ ಸಂಕ್ಷೇಪವಾಗಿ ಬರಿಯುವದು ಆ ಕಥೆಯ ಸೌಂದರ್ಯಕ್ಕೆ ಹಾನಿಯುಂಟಾಗುವದೆಂದು ಚನ್ನಾಗಿ ತಿಳಿಯಬರುತ್ತದೆ.

ಪ್ರಕೃತ, ಪ್ರಾಚೀನ ಕಾಲದ ರಮಣಿಯರ ಚರಿತ್ರೆಗಳಿಗೆ ಈ ಸಾವಿತ್ರಿಯುಪಾಖ್ಯಾನವು ಒಂದುತ್ಕೃಷ್ಟವಾದ ಚಿತ್ರಸ್ವರೂಪವಾಗಿರುತ್ತೆಯೋ ಅಥವಾ ಇಲ್ಲವೆ ಎಂಬದನ್ನು ಯೋಚಿಸಬಹುದು. ಸಾವಿತ್ರಿಯು ಶೈಶವದಲ್ಲಿ ತನ್ನ ತಂದೆ ಅಧೀನಳಾಗಿದ್ದು, ತಂದೆಯ ಆದೇಶಾನುಸಾರ ಅನುರೂಪಪತಿಯನ್ನು ವರಿಸುವದಕ್ಕೋಸ್ಕರ ವನವನಗಳನ್ನು ತಿರುಗಿದಳು. ನಂತರ, ಅವಳು ಮನಸಾ ಸಂಕಲ್ಪ ಮಾಡಿದ ವರನು ಸಕಲಗುಣ ಸಂಪನ್ನನಾಗಿದ್ದನು. ಇದರಿಂದ ಸಾವಿತ್ರಿಯು

ಲೋಕ ವ್ಯವಹಾರದಲ್ಲಿ ಪೂರ್ಣ ಪ್ರಜ್ಞಾಶಾಲಿಯಾಗಿದ್ದಳೆಂದು ತಿಳಿಯ ಬಹುದು. ಅವಳು ಕೇವಲ ಐಶ್ವರ್ಯ ಬಲ ಮುಂತಾದವುಗಳನ್ನು ನೋಡಿ ಪತಿಯನ್ನು ವರಿಸಲಿಲ್ಲವು, ಯಾತಕ್ಕೆಂದರೆ, ಅವಳು ವರಿಸಿದ ಕಾಲದಲ್ಲಿ ಸತ್ಯವಾನನು ಒಬ್ಬ ಅಂಧಋಷಿಯ ಮಗನಾಗಿಯೂ, ವನವನವನ್ನು ಅಲಿದು ಫಲ ಮೂಲಗಳನ್ನು ತಂದು ತಂದೆ ತಾಯಿಗ ಳನ್ನ ಪೋಷಿಸುವನಾಗಿಯೂ, ಇದ್ದನು. ಇವಳು ವರಿಸಿದಾಗ್ಯೆ ಇ ವನಿದ್ದ ಸ್ಥಿತಿಯು ಸರ್ವಪ್ರಕಾರದಿಂದಲೂ ಸ್ತ್ರೀಯರು ಮೋಹಿಸು ವ ಹಾಗೆ ಇರಲಿಲ್ಲ.

ಸಾವಿತ್ರಿಯು ಸತ್ಯವಾನನಲ್ಲಿ ಸಕೃತ್ ಮನಸಾ ಸಂಕಲ್ಪ ಮಾಡಿದ್ದ ಮಾತ್ರವೇ, ಯಾವ ಜೀವವೂ ಅವನೇ ಪತಿಯೆಂದು ದೃಢ ಪ್ರತಿಜ್ಞೆ ಯನ್ನು ಮಾಡಿ, ದೇವರ್ಷಿನಾದರೂ ತಂದೆಯಾದ ಅಶ್ವಪತಿಯೂ ಬೇ ರೆ ಪತಿಯನ್ನು ವರಿಸೆಂದು ಎಷ್ಟು ಹೇಳಿದರೂ ಅಂಗೀಕರಿಸದೆ, ಪತಿ ಯನ್ನು ವರಿಸುವದು ಒಂದೇ ತಡವೆಯೇ ಹೊರತು, ಪುನಃ ಪುನಃ ವ ರಿಸುವವಳಲ್ಲವೆಂದು ಸತ್ಯವಾನನನ್ನೇ ಮದುವೆ ಮಾಡಿಕೊಂಡಳು. ಮದುವೆಯಾದಮೇಲೆ ಮಾವನ ಮನೆಗೆ ಹೋಗಿ, ಅಲ್ಲಿ ಆ ಅಂಧನಾದ ಮಾವನ ಸೇವೆಯನ್ನು ಮಾಡುತ್ತಾ ಗೃಹ ಕಾರ್ಯಗಳನ್ನೆಲ್ಲಾ ನಿರ್ವಾ ಹ ಮಾಡಿಕೊಂಡಿದ್ದಳು. ತನ್ನ ಪತಿಯ ಮೃತ್ಯುಕಾಲವನ್ನು ತಾ ನು ಖಂಡಿತವಾಗಿ ತಿಳಿದಿದ್ದರೂ, ಅದನ್ನು ಯಾರೊಬ್ಬರಿಗೂ ತಿಳಿಸದೆ ಏಕಾಂತದಲ್ಲಿ ಇಷ್ಟ ದೇವತಾರಾಧನೆಯನ್ನು ಮಾಡುತ್ತಾ, ನಾನಾ ವಿ ಧವಾದ ಕಠೋರ ವ್ರತ ನಿಯಮಾದಿಗಳನ್ನು ಆಚರಿಸುತ್ತಿದ್ದಳು. ಮೃತ್ಯುಕಾಲವು ಪ್ರಾಪ್ತವಾದದಿನ ಯಾರ ಸಂಗಡಲೂ ಹೇಳದೆ ತಾ ನೊಬ್ಬಳೇ ಗಂಡನ ಸಂಗಡ ಅರಣ್ಯಕ್ಕೆ ಹೋದಳು. ನಂತರ ಅ ವಳು ನಡೆಸಿದ ಅದ್ಭುತ ಕಾರ್ಯಗಳನ್ನೆಲ್ಲಾ ಮೇಲೆ ಹೇಳಿರುತ್ತದೆ. ಯಮನಿಗೆ ತನ್ನ ಪತಿದೇಹವನ್ನು ಒಪ್ಪಿಸಿದ ನಂತರ, ಅದನ್ನು ಅವನು ತೆಗದುಕೊಂಡು ಹೋಗುವ ಕಾಲದಲ್ಲಿ, ಇವಳ ಗುಣಕ್ಕೆ ಪ್ರಸನ್ನ ನಾಗಿ ಬೇಕಾದ ವರಗಳನ್ನು ಬೇಡೆನಲು, ಚತುರಳಾದ ಸಾವಿತ್ರಿಯು

ಅಂತಾ ಸಮಯದಲ್ಲಿಯೂ ತನ್ನ ತಂದೆಗೋಸ್ಕರವೂ, ಮಾವನಿಗೋಸ್ಕರವೂ, ಶುಭ ವರಗಳನ್ನು ಪಡೆದಳು. ಅವಳು ಪತಿವಿಯೋಗದಿಂದ ಕೇವಲ ದುಃಖ ಪರವಶಳಾಗಿದ್ದರೂ, ಬುದ್ಧಿ ಭ್ರಂಶಳಾಗಲಿಲ್ಲ. ಅಂತಾ ಭಯಂಕರವಾದ ಸಮಯದಲ್ಲಿ ಸಾಮಾನ್ಯ ಸ್ತ್ರೀಯಾಗಿದ್ದರೆ, ಸಾವಿತ್ರಿಯು ಹಾಗೆ ಧೈರ್ಯಗೊಂಡು ಕಾರ್ಯ ನಿರ್ವಾಹವನ್ನು ಮಾಡುತಲಿರಲಿಲ್ಲ. ಪತಿಯೇ ತನ್ನ ಸರ್ವಸ್ವವೆಂತ ತಿಳಿದು ಅವನಿಗೋಸ್ಕರ ತನ್ನ ಪ್ರಾಣವನ್ನು ಕೊಡುವದಕ್ಕೂ ಸಿದ್ಧಳಾಗಿದ್ದಳು. ಆ ವಿಪತ್ಕಾಲದಲ್ಲಿಯೂ ತನ್ನ ತಂದೆಗೂ, ಮಾವನಿಗೂ, ತನು ಮಾಡಬೇಕಾದ ಕಾರ್ಯವನ್ನು ಮರೆಯಲಿಲ್ಲ. ಅವಳು ಪಾತಿವ್ರತ್ಯವೆಂಬ ಒಂದೇ ಗುಣವನುಳ್ಳವಳಾಗಿದ್ದರೆ, ಆ ಘೋರತರವಾದ ರಾತ್ರಿಯಲ್ಲಿ ಪತಿಯ ಮೃತದೇಹದ ಮೇಲೆ ಬಿದ್ದು, ತಾನೂ ಪ್ರಾಣತ್ಯಾಗವನ್ನು ಮಾಡುತಲಿದ್ದಳು. ಹಾಗೆ ಮಾಡಿದ್ದರೆ ಅವಳು ರಮಣೀಕುಲಕ್ಕೆ ಶಿರೋಮಣಿಯೆಂದು ಗಣ್ಯಳಾಗುತ್ತಿರಲಿಲ್ಲ. ಎಷ್ಟು ನೂರಾರು ಪತಿಪರಾಯಣರಾದ ರಮಣಿಯರು ತಮ್ಮ ತಮ್ಮ ಪತಿಯ ಜ್ವಲಂತವಾದ ಚಿತಿಯಲ್ಲಿ ದೇಹವನ್ನು ಸಮರ್ಪಣೆ ಮಾಡಿಲ್ಲ? ಆದರೂ ಸಾವಿತ್ರಿಯ ಹಾಗೆ ಯಾರೂ ಈ ಭೂಮಂಡಲದಲ್ಲಿ ಮಾನನೀಯರಾಗಲಿಲ್ಲ. ಸಾವಿತ್ರಿಯು ಪತಿ ಪ್ರಾಣಳಾಗಿದ್ದಳೆಂಬುವದಕ್ಕೆ ಅಣುಮಾತ್ರವೂ ಸಂದೇಹವಿಲ್ಲ; ಅದಲ್ಲದೆ, ಅವಳಲ್ಲಿ ಅಸಾಧಾರಣವಾದ ನಾರಿಯ ಗುಣಗಳಿದ್ದವು. ಆದದ್ದರಿಂದಲೇ ಈ ದೇಶೀಯ ಸ್ತ್ರೀಯರು ಜ್ಯೇಷ್ಠಮಾಸದಲ್ಲಿ ಸಾವಿತ್ರಿಯ ವ್ರತವನ್ನು ಆಚರಿಸುತ್ತಾರೆ. ಯಾವ ಹೆಂಗಸುತಾನೇ ಪತಿಯು ಒಂದು ವರ್ಷದಲ್ಲಿ ಮೃತನಾಗುವನೆಂದು ತಿಳಿದು ಅಂತವನನ್ನು ಮದುವೆ ಮಾಡಿಕೊಳ್ಳುವಳು? ಯಾವ ಹೆಂಗಸುತಾನೇ ಸಂವತ್ಸರ ಪರಿಯಂತವಾಗಿಯೂ ಯಾರಿಗೂ ಹೇಳದೆ ಪತಿಗೆ ಸಂಭವಿಸುವ ಮೃತ್ಯುವನ್ನು ಗೋಪನಮಾಡಿ ಮನಸ್ಸಿನಲ್ಲಿಟ್ಟಿದ್ದಾಳು? ಯಾವಳುತಾನೇ ಅಂತಾ ಘೋರತರವಾದ ವಿಪತ್ಕಾಲದಲ್ಲಿ ಹತಚೇತನಳಾಗದೆ ಅಭಿಲಷಿತದಲ್ಲಿ ದೃಢಮನಸ್ಕಳಾಗಿರುವಳು? ಯಾರುತಾನೇ ಅಂತಾ ಸಮಯ

ದಲ್ಲಿ ತನ್ನ ಸಕಲ ಕರ್ತವ್ಯ ಕಾರ್ಯದಲ್ಲಿ ದೃಷ್ಟಿ ಇಟ್ಟು ನಡೆಯು ವಳು?

ಸ್ಮೃತಿ ಸಂಹಿತೆಗಳಲ್ಲಿ ಸ್ತ್ರೀಯರಿಗೆ ಎಷ್ಟು ಗುಣಗಳಿರಬೇಕೆಂದು ಉಕ್ತವಾಗಿವೆಯೋ, ಆ ಸಕಲ ಗುಣಗಳೂ ಸಾವಿತ್ರಿಯಲ್ಲಿ ನೆಲೆಗೊಂಡಿದ್ದವಲ್ಲದೆ, ಅವಳಲ್ಲಿ ಪುರುಷನಹಾಗೆ ನಿರ್ಭೀಕತಾ, ಸತ್ಯನಿಷ್ಟತಾ, ದೃಢಪ್ರತಿಜ್ಞತಾ ಮುಂತಾದ ಅನೇಕ ಗುಣಗಳಿದ್ದವು. ಆದದ್ದರಿಂದಲೇ, ಅವಳನ್ನು ಸಾಕ್ಷಾತ್ಸಾವಿತ್ರಿಯ ಅವತಾರವೆಂದು ತಿಳಿದಿದ್ದಾರೆ. ಸೀತಾ, ದ್ರೌಪದಿ ಮುಂತಾದವರಹಾಗೆ ಸಾವಿತ್ರಿಯು ಮೋಸಗಳಿಗೊಳಗಾಗದಿದ್ದರೂ, ಈಕೆಯ ಚರಿತ್ರೆಯನ್ನು ನೋಡಿದರೆ, ಅಂತಾ ಮೋಸಕ್ಕೆ ಒಂದು ವೇಳೆ ಒಳಗಾಗಿದ್ದರೂ, ಅವರಿಗಿಂತಲೂ ಅಧಿಕವಾದ ಯಶಸ್ವಿನಿಯಾಗುತಲಿದ್ದಳೆಂದು ತಿಳಿಯಬರುತ್ತದೆ. ಅವಳು ಈ ಶ್ರೇಣೀ ರಮಣೀ ಕುಲದಲ್ಲಿ ಸರ್ವೋತ್ಕೃಷ್ಟಳೆಂದು ಹೇಳುವದಕ್ಕೆ ಯಾವ ಸಂದೇಹವೂ ಇಲ್ಲ. ದಮಯಂತಿ ಮುಂತಾದವರಿಗಿಂತಲೂ ಅನೇಕ ವಿಷಯದಲ್ಲಿ ಸಾವಿತ್ರಿಯ ಚರಿತೆಯು ಉನ್ನತವಾಗಿತ್ತೆಂದು ಕಾಣಬರುತ್ತೆ.

---

## ಐದನೇ ಅಧ್ಯಾಯವು.

ನಾಲ್ಕನೇ ಅಧ್ಯಾಯದಲ್ಲಿ ಲೋಭಾದಿಗಳಿಗೊಳಪಡದೆ ಪತಿ ಪರಾಯಣತೆ, ಕಾರ್ಯಕ್ಷಮತೆ ಮುಂತಾದ ಸದ್ಗುಣಗಳನ್ನುಳ್ಳ ರಮಣೀಗಳನ್ನು ಉದಾಹಾರವಾಗಿ ಹೇಳಲ್ಪಟ್ಟಿತು. ಈ ಅಧ್ಯಾಯದಲ್ಲಿ ಮೋಸಕ್ಕೊಳಗಾಗಿದ್ದರೂ ತಮ್ಮ ಯಶೋಲೇಶವಾದರೂ ನಾಶವಾಗದ ಹಾಗೆ ಜಾಗರೂಕರಾಗಿಯೂ, ಪತಿಪರಾಯಣರಾಗಿಯೂ, ಇರುವ ರಮಣೀಗಳನ್ನು ಉದಾಹರಣೆಯಾಗಿ ಹೇಳುತ್ತೇವೆ. ಈ ಶ್ರೇಣಿಯಲ್ಲಿ ದ್ರೌಪದಿ, ದಮಯಂತಿ, ಸೀತಾ ಇವರು ಸರ್ವಪ್ರಧಾನರಾದ ರಮಣೀಯರು. ಶ್ರೀವತ್ಸಮಹಿಷಿಯಾದ ಚಿಂತಾ, ಧೃತರಾಷ್ಟ್ರ ಮಹಿಷಿಯಾದ ಗಾಂಧಾರಿ ಮುಂತಾದ ರಮಣೀಯರೂ ಈ ಶ್ರೇಣಿಯಲ್ಲೇ ಪರಿಗಣಿತರಾಗಿದ್ದಾರೆ. ಈ ಶ್ರೇಣೀ ರಮಣೀಯರ ಚರಿತ್ರೆಯಲ್ಲಿ ಪತಿಪರಾಯಣತೆಯೇ ಸರ್ವಪ್ರಧಾನಗುಣವಾಗಿ ಇರುವಂತೆ ತಿಳಿಯಬರುತ್ತೆ. ಗಾಂಧಾರಿಯು ತನ್ನ ಪತಿಯು ಅಂಧನಾಗಿದ್ದರೂ, ಯಾವಜ್ಜೀವವೂ ಪತಿಯ ಶುಶ್ರೂಷೆಯನ್ನು ಮಾಡಿ ಸಾಧ್ವೀಯೆಂದು ವಿಖ್ಯಾತಳಾಗಿರುತ್ತಾಳೆ. ಪಾಂಡವಪಾಲಕನಾದ ಶ್ರೀ ಕೃಷ್ಣನೂ ಕೂಡ, ಇವಳ ಶಾಪವನ್ನು ಅಂಗೀಕರಿಸಿರುತ್ತಾನೆ. ಅವಳು ತನ್ನ ನೂರುಮಂದಿ ಪುತ್ರರು ಮೃತರಾಗಿ ಹೋದನಂತರ ಅವರ ಭಾರ್ಯೆಯರಿಗೆ ಪ್ರಾಪ್ತವಾಗಿದ್ದ ಅಪಾರವಾದ ದುಃಖ ಪರಂಪರೆಯನ್ನು ಎಷ್ಟು ವಿಧವಾಗಿ ಸಮಾಧಾನಗೊಳಿಸಿದರೂ, ಅವರು ಶಾಂತರಾಗದೆ ತಮ್ಮ ತಮ್ಮ ಪತಿಗಳೊಡನೆ ಸಹಗಮನವನ್ನು ಮಾಡಿದರೂ, ಮಹಾ ಪತಿವ್ರತೆಯಾದ ಗಾಂಧಾರಿಯು ತನ್ನ ಪುತ್ರಶೋಕವನ್ನು ಲಕ್ಷ್ಯೀಕರಿಸದೆ, ಪತಿ ಶುಶ್ರೂಷೆಯೇ ಸ್ತ್ರೀಯರಿಗೆ ಮುಖ್ಯ ಕರ್ತವ್ಯವೆಂದು ಯೋಚಿಸಿ, ತಾನು ಪತಿಯ ಶುಶ್ರೂಷಾರ್ಥವೇ ಜೀವನಧಾರಣೆಯನ್ನು ಮಾಡಿ, ಪತಿಯೊಡನೆ ಆಶ್ರಮನಿವಾಸಿನಿಯಾಗಿದ್ದು, ಅವನೊಂದಿಗೇನೇ ಕಾಲಹರಣವನ್ನು ಮಾಡುತಲಿದ್ದಳು.

ದಮಯಂತಿಯು ಸ್ವಯಂವರದಲ್ಲಿ ಸೇರಿದ್ದ ಅನೇಕ ದೇವತೆಗಳ ನ್ನೂ ಕೂಡ ನಿರಾಕರಿಸಿ, ನಳನನ್ನು ವರಿಸಿದಳು. ಮತ್ತು ಅವನ ಸಂಗಡ ಅರಣ್ಯದಲ್ಲಿ ನಾನಾವಿಧವಾದ ಕಷ್ಟ ಸಹನವನ್ನು ಮಾಡಿದ ಳು. ಈ ಎರಡು ಕಾರಣವೇ, ಮುಖ್ಯವಾಗಿ, ಅವಳಿಗೆ ಪ್ರಾಶಸ್ತ್ಯ ವನ್ನುಂಟುಮಾಡಿರುತ್ತದೆ. ಅವಳ ಚರಿತ್ರೆಯನ್ನು ಪಠನಮಾಡಿದರೆ ಕಲಿಸಂಪರ್ಕವಾಗುವದಿಲ್ಲವು. ಮಹರ್ಷಿ ವೇದವ್ಯಾಸನು ದಮ ಯಂತಿಯನ್ನು ಪ್ರಿಯವಾದಿನಿಯೆಂದು ಪ್ರಶಂಸೆಮಾಡಿದ್ದಾನೆ. ಪೂ ರ್ವೋಕ್ತಕಾರಣದ್ವಯದಿಂದಲೇ, ಅವಳಿಗೆ ಪಾರಿಶುದ್ಧತೆ ಇತ್ತೆಂದು ಸ್ಪಷ್ಟವಾಗಿ ತಿಳಿಯಬರುತ್ತದೆ. ಅಹಲ್ಯೆಯು ವಿವಾಹಿತಳಾಗಿ ಪುತ್ರ ವತೀಯಾಗಿದ್ದರೂ, ಮೋಸಕ್ಕೊಳಗಾಗಿ, ನಾನಾ ವಿಧವಾದ ಕಷ್ಟವ ನ್ನನುಭವಿಸಿದಳು. ದಮಯಂತಿಯು ಅವಿವಾಹಿತಳಾಗಿ, ಯುವತಿ ಯಾಗಿ ಇದ್ದರೂ ಮೋಸಕ್ಕೊಳಗಾಗಲಿಲ್ಲವು.

ಶ್ರೀವತ್ಸರಾಜಮಹಿಷಿಯಾದ ಚಿಂತೆಯ ಚರಿತ್ರೆಯು ಅನೇಕ ಅಂಶ ಗಳಲ್ಲಿ ದಮಯಂತಿಯ ಚರಿತ್ರೆಗೆ ಅನುಗುಣವಾಗಿರುತ್ತದೆ. ಅವಳ ಚರಿತ್ರೆಯನ್ನು ಓದಿದರೆ ಶನಿಸಂಪರ್ಕವಾಗುವದಿಲ್ಲ.

ದ್ರೌಪದಿಯು ಸಂಸ್ಕೃತ ಗ್ರಂಥಾವಳಿಗಳಲ್ಲಿ ಪ್ರಶಂಸನೀಯಳಾದ ನಾರೀಮಣಿಯಾಗಿರುತ್ತಾಳೆಂಬುವದಕ್ಕೆ ಏನೂ ಸಂದೇಹವಿಲ್ಲ. ಆ ಕೆಯು ಮದುವೆಯನ್ನು ಮಾಡಿಕೊಂಡಾಗ್ಯೆ ಪಾಂಡವರಿಗೆ ರಾಜ್ಯ ಭೋಗವೇ ಇರಲಿಲ್ಲ. ದುಃಖಜಲಧಿಯಲ್ಲಿ ಮುಳುಗಿದ್ದರು. ಶು ದ್ಧ ಕ್ಷತ್ರಿಯ ಜನ್ಮದವರಾಗಿದ್ದರೂ ಬ್ರಾಹ್ಮಣರ ಹಾಗೆ ಬಿಕ್ಷುವೇಷವ ನ್ನು ತಾಳಿ, ಅಲ್ಲಲ್ಲಿ ಬಿಕ್ಷಾಟನೆಯನ್ನು ಮಾಡುತಲಿದ್ದರು. ದ್ರೌಪದಿ ಯು ವರಿಸಿದನಂತರ ಈ ಪಾಂಡವರು ಒಬ್ಬ ಕುಂಬಾರನ ಮನೆಯಲ್ಲಿ ವಾಸಮಾಡುತಲಿದ್ದದ್ದರಿಂದ, ಅವಳಿಗೆ ಆಮನೆಯೇ ಶ್ವಶುರಗೃಹವಾ ಯಿತು. ನಂತರ, ಗಂಡಂದಿರಿಗೆ ರಾಜ್ಯ ಪ್ರಾಪ್ತಿಯಾಗಿ ಮಹಿಷಿ ಪದ ವಿಯನ್ನು ಹೊಂದಿದಳು. ತದನಂತರ ಪಾಂಡವರು ನಡೆಸಿದ ರಾಜ ಸೂಯ ಯಾಗದಲ್ಲಿ ದ್ರೌಪದಿಯು ಆಚರಿಸಿದ ನಡವಳಿಕೆಯನ್ನು ಬಹ

ಳ ಶ್ಲಾಘಿಸಿರುತ್ತಾರೆ. ಕಡೆಗೆ ಧರ್ಮರಾಯನ ದೋಷದಿಂದ ರಾಜ್ಯ ಹೋಯಿತು, ಧನಹೋಯಿತು, ದ್ರೌಪದಿಯನ್ನು ಸೋತನು. ನಂತರ ದುರಾತ್ಮರಾದ ಕೌರವರು ಆ ನೆರದಿದ್ದ ಸಭಾ ಮಧ್ಯದಲ್ಲಿ ದ್ರೌಪದಿಯ ಮುಂಡೆಯನ್ನು ಹಿಡಿದೆಳದು, ವಸ್ತ್ರಾಪಹರಣೆಯನ್ನು ಮಾಡಿ, ಯತ್ಪರೋನಾಸ್ತಿ ಅವಮಾನ ಪಡಿಸಿದರು. ಕುರು ವೃದ್ಧರಾದ ಭೀಷ್ಮಾದಿಗಳು ಅವಳನ್ನು ಈ ಅಪಾಯದಿಂದ ಬಿಡಿಸಿದರು. ನಂತರ, ತನ್ನ ಪತಿಯರೊಡನೆ ಅವಳೂ ವನಗಮನವನ್ನು ಮಾಡಿದಳು. ಅರ್ಜುನನಿಗೂ ಭೀಮಸೇನನಿಗೂ ಪ್ರತ್ಯೇಕವಾಗಿ ಮಡದಿಯರಿದ್ದರೂ, ಅವರು ತಮ್ಮ ಪತಿಗಳೊಂದಿಗೆ ವನ ಗಮನವನ್ನು ಮಾಡಲಿಲ್ಲ. ದ್ರೌಪದಿಯು ಮಾತ್ರ ವನದಲ್ಲಿಯೂ ಅವರ ಕಷ್ಟವನ್ನನುಭವಿಸುತಲಿದ್ದಳು. ಸ್ವಾಮಿಗಳ ಸೇವೆಯಲ್ಲಿಯೇ ಅತ್ಯಂತಾಸಕ್ತಳಾಗಿದ್ದಳು. ಯುಧಿಷ್ಠಿರನು ಸಹಸ್ರ ಸಂಖ್ಯಾಕ ಸ್ನಾತಕ ಬ್ರಾಹ್ಮರನ್ನು ಭೋಜನ ಮಾಡಿಸಿ, ತಾನೂ ರಾತ್ರಿಯಲ್ಲಿ ಬಹಳ ಹೊತ್ತಿನಮೇಲೆ ಊಟ ಮಾಡಿದ ನಂತರ, ದ್ರೌಪದಿಯು ಊಟ ಮಾಡುತಲಿದ್ದಳು. ಯಾವಾಗ ನೋಡಿದರೂ ತನ್ನ ಪತಿಗಳಿಗೆ ನೀತಿಶಾಸ್ತ್ರವನ್ನು ವಿವರಿಸಿ ಹೇಳುತಲಿದ್ದಳು. ಆಕೆಯೇ ಅರ್ಜುನನಿಗೆ ಬುದ್ಧಿವಾದವನ್ನು ಹೇಳಿ, ಇಂದ್ರ ಸಭಾ ಪ್ರವೇಶ ಮಾಡಿಸಿ, ಪಾಂಡವರಿಗೆ ಪ್ರಾಪ್ತವಾದ ಸೌಭಾಗ್ಯಕ್ಕೆ ಮೂಲಕಾರಣಳಾದಳು. ಕೃಷ್ಣನು ದ್ರೌಪದಿಯನ್ನು ಬಹಳ ವಿಧವಾಗಿ ಶ್ಲಾಘಿಸಿದ್ದಾನೆ. ಯಾವಾಗಲೂ ಧರ್ಮಕಥಾ ಶ್ರವಣದಲ್ಲಿ ಅನುರಾಗಿಣಿಯಾಗಿದ್ದಳು. ಒಂದಾನೊಂದು ದಿನ ಯುಧಿಷ್ಠಿರನೂ ಕೂಡ ಮಾರ್ಕಂಡೇಯ ಮಹರ್ಷಿಯನ್ನು ಕುರಿತು, ದ್ರೌಪದಿಗಿಂತಲೂ ಉತ್ತಮಗುಣ ವಿಶಿಷ್ಟರಾಗಿಯೂ, ಧರ್ಮಪರಾಯಣರಾಗಿಯೂ ಇರುವ ಸತಿಯರ್ಯಾರೆಂದು ಪ್ರಶ್ನೆಮಾಡಿದನು. ಪಾಂಡವರು ಅತಿ ಕಠೋರತರವಾದ ವನವಾಸವನ್ನು ಮಾಡುತಲಿದ್ದ ಕಾಲದಲ್ಲಿ ಅವರಿಗೆ ದಾಸವೃತ್ತಿ ಬೇರೆ ಪ್ರಾಪ್ತವಾಯಿತು. ಆಗಲೂ, ಪೂರ್ವ ವನಸಂಚಾರ ಕಾಲದಲ್ಲಿ ಜಯದ್ರಥನು ಹ್ಯಾಗೆ ದ್ರೌಪದಿಯನ್ನು ಕುರಿತು ಅತ್ಯಾಚಾರ

ನಡಸಿದನೋ, ಅದೇರೀತಿಯಾಗಿ ಇವರು ದಾಸವೃತ್ತಿಯನ್ನು ವಹಿಸಿ ವಿರಾಟ ನಗರದಲ್ಲಿರುವಾಗ್ಯೆ ದುರುಳನಾದ ಕೀಚಕನು ಅವಳ ವಿಚಾರದಲ್ಲಿ ಅತ್ಯಾಚಾರ ನಡಿಸಿದನು. ಈ ಉಭಯ ಸಂಕಟದಲ್ಲಿಯೂ ಭೀಮಸೇನನೇ ಕಾಪಾಡಿದನು. ನಂತರ ಕೌರವ ಪಾಂಡವರಿಗೆ ಯುದ್ಧಸನ್ನಾಹ ವಾಗುವಣದರಲ್ಲಿ ಇವಳೇ ಮುಖ್ಯವಾಗಿ ಉದ್ಯೋಗಿಣಿಯಾಗಿದ್ದಳು. ಭಾರತ ಯುದ್ಧವಾದನಂತರ, ಕೆಲ ಕಾಲದಮೇಲೆ ಬಭ್ರುವಾಹನನಿಂದ ಅರ್ಜುನನಿಗುಂಟಾದ ಮೃತ್ಯುವಾರ್ತಾ ಶ್ರವಣ ಮಾಡಿ, ದ್ರೌಪದಿಯು ಅತ್ಯಂತ ಪರಿತಾಪಪಟ್ಟು ಕೃಷ್ಣನನ್ನು ಅಲ್ಲಿಗೆ ಕಳುಹಿಸಿ, ಅವನಿಗೆ ಪುನರುತ್ಥಾನ ಸಾಧನೆಯನ್ನ ಮಾಡಿದಳು. ಅಂತ್ಯದಲ್ಲಿ ಪತಿಗಳೊಡನೆ ಮಹಾ ಪ್ರಸ್ಥಾನ ಗಮನ ಮಾಡಿ, ಸರ್ವ ಪ್ರಥಮದಲ್ಲಿ ತಾನೇ ಪತಿಗಳೆದುರಾಗಿ ದೇಹ ಪರಿತ್ಯಾಗವನ್ನು ಮಾಡಿದಳು.

ದ್ರೌಪದಿಯು ಸತೀ ಲಕ್ಷ್ಮಿಯಾಗಿದ್ದಳು. ಆಕೆಗೆ ಪಂಚಸ್ವಾಮಿಗಳಿದ್ದರೂ, ಅವಳು ಪಂಚಸ್ವಾಮಿಗಳಿಗೂ ಮನೋಹಾರಿಣಿಯಾಗಿ ಸತಿಯರ ಮಧ್ಯದಲ್ಲಿ ಅಗ್ರಗಣ್ಯಳಾಗಿದ್ದಳು. ಅತ್ಯಂತ ಧರ್ಮಪರಾಯಣಳಾಗಿದ್ದಳು. ಮತ್ತು ಪತಿವ್ರತೆಯಾಗಿಯೂ, ದಯಾಶೀಲಳಾಗಿಯೂ ತನ್ನ ಭೃತ್ಯವರ್ಗವನ್ನು ತಾಯಿಯಹಾಗೆ ಪಾಲನೆಯನ್ನು ಮಾಡುತಲೂ ಇದ್ದಳು. ಇವಳು ಸ್ವಯಂ ರಾಜಕನ್ನಿಕೆಯಾಗಿ, ರಾಜಭಾರ್ಯೆಯಾಗಿದ್ದರೂ, ಪತಿಗಳೊಂದಿಗೆ ವನ ವನದಲ್ಲಿ ಭ್ರಮಣ ಮಾಡುತಲಿದ್ದಳು. ಈ ಸಕಲ ಗುಣಗಳಿಂದ ಆಕೆಯು ಹೆಸರು ಪ್ರಾತಸ್ಮರಣೀಯವಾಗಿರುತ್ತದೆ. ಹೆಂಗಸರಿಗೆ ಇದಕ್ಕಿಂತಲೂ ಮತ್ತೇನೂ ಅವಶ್ಯಕವಾದದ್ದಿಲ್ಲವು.

ಸೀತಾ—ಸೀತೆಯು ಸುಶೀಲಳು ಮತ್ತು ಶಾಂತಿಸ್ವಭಾವಳು. ಇವಳು ವಿವಾಹಿತಳಾದ ನಂತರ ಸರ್ವದಾ ಸ್ವಾಮಿ ಶುಶ್ರೂಷೆಯಲ್ಲಿ ವ್ಯಾಪೃತಳಾಗಿದ್ದಳು. ಈ ಸಮಯದಲ್ಲಿ ರಾಮಚಂದ್ರನು ಸೀತಾ ಸಹವಾಸದಿಂದ ಯಾವ ಸುಖವನ್ನು ಅನುಭವಿಸುತಲಿದ್ದನೋ, ಆ ಸುಖವು

ನಿರಂತರವಾಗಿ ತನಗಿರಲೆಂದು ಅಪೇಕ್ಷಿಸುತಲಿದ್ದನು. ರಾಮನು ಕೈಕಯಿಗೃಹದಿಂದ ಹೊರಟು ಬಂದು, ವನಗಮನ ವೃತ್ತಾಂತವನ್ನು ಸೀತಾದೇವಿಗೆ ತಿಳಿಯಪಡಿಸಿದೊಡನೇ, ಸೀತೆಯು ಪತಿಯ ಸಂಗಡ ಅರಣ್ಯಗಮನಕ್ಕೆ ಸನ್ನದ್ಧಳಾದಳು. ಆ ಸಮಯದಲ್ಲಿ ಅವಳು ಹೇಳಿದ ಮಾತುಗಳನ್ನು ಓದಿದರೆ ಎಲ್ಲರ ಹೃದಯವೂ ಕರುಣಾರಸಾರ್ದ್ರವಾಗುತ್ತದೆ. ಸೀತೆಯು ತಾನೂ ವನವಾಸಕ್ಕೆ ಹೋಗಬೇಕೆಂದು ಮುಷ್ಕರ ಹಿಡಿದಳು. ರಾಮನು ಹೋಗಕೊಡದೆಂದು ನಿರೋಧಿಸಿ, ಸಮಾಧಾನಪೂರ್ವಕವಾಗಿ, ವನದಲ್ಲಿ ಸಂಭವಿಸುವ ಕಷ್ಟವನ್ನೂ, ಗೃಹದಲ್ಲಿ ಉಂಟಾಗುವ ಸುಖವನ್ನೂ, ವಿಸ್ತಾರವಾಗಿ ವರ್ಣಿಸಿ, ಎಲೈ ಸೀತೆ! ನೀನು ಗೃಹದಲ್ಲಿದ್ದರೆ ಅನೇಕ ಧರ್ಮ ಕಾರ್ಯಗಳನ್ನು ಮಾಡಿ, ಸ್ವಾಮಿಗೆ ನಾನಾವಿಧವಾದ ಕಲ್ಯಾಣ ಸಾಧನೆಯನ್ನು ಮಾಡಬಹುದೆಂದು ಹೇಳಿದನು. ಆದರೂ ಅನೇಕ ವಾದಾನುವಾದಾ ನಂತರ ಸೀತೆಯು ರಾಮನನ್ನು ಕುರಿತು, ನನ್ನನ್ನು ವಿನಾ ನೀನು ಅರಣ್ಯಗಮನ ಮಾಡುವದು ಉಚಿತವಲ್ಲವು; ನಿನ್ನ ಸಂಗಡಲೇ ನಾನೂ ತಪಸ್ಸು ಮಾಡುವೆನು, ನಿನ್ನೊಡನೆ ವನದಲ್ಲಿ ವಾಸಮಾಡುವದೇ ನನಗೆ ಸ್ವರ್ಗವು, ನಿನ್ನೊಡನೆ ನಾನು ಅರಣ್ಯದಲ್ಲಿ ಸಂಚರಿಸುತಲಿದ್ದರೆ ನನಗೆ ಸ್ವಲ್ಪವೂ ಶ್ರಮವಾಗುವದಿಲ್ಲ; ನೀನು ಅರಣ್ಯದಲ್ಲಿ ನನಗೆ ಕಲ್ಲೂ ಮುಳ್ಳು ಇವುಗಳೇಮುಂತಾದ ಕಂಟಕಗಳ ಭಯವನ್ನು ಹೇಳುತ್ತಿ, ನಿನ್ನೊಂದಿಗೆ ನಾನು ಸಂಚರಿಸುತಲಿರುವಾಗ ಅವುಗಳೆಲ್ಲವೂ ನನಗೆ ಹತ್ತಿ ಮತ್ತು ಕೃಷ್ಣಾಜಿನದ ಹಾಗೆ ಮೃದುವಾಗಿರುವದೆಂದು ಹೇಳಿ, (1) ರಾ

---

(1) ಸಮಾಮನಾದಾಯವನಂನತ್ವಂ ಪ್ರಸ್ಥಿತುಮರ್ಹಸಿ | ತಪೋವಾಯದಿವಾರಣ್ಯಂ ಸ್ವರ್ಗೋವಾಸ್ಯಾತ್ತ್ವಯಾಸಹ ||

ನಚಮೆಭವಿತಾಕಶ್ಚಿತ್ತತ್ರಮಾರ್ಗೇಪರಿಶ್ರಮಃ | ಪೃಷ್ಠತಸ್ತವಗಚ್ಛಂತ್ಯಾವಿಹಾರಶಯನೇಷ್ವಿವ ||

ಕುಶಕಾಶಶರೇಷೀಕಾಯೇಚಕಂಟಿಕಿನೋದ್ರುಮಾಃ | ತುಲಾಜಿನಸಮಸ್ಪರ್ಶಾ ಮಾರ್ಗೇಮಮಸಹತ್ವಯಾ ||

ಮನ ಕಂಠಾಲಿಂಗನವನ್ನು ಮಾಡಿಕೊಂಡು ರೋದನಮಾಡಿದಳು. ಆಗ ರಾಮನು ಸೀತೆಯ ಈಪ್ಸಿತವನ್ನು ತಿರಸ್ಕರಿಸುವದಕ್ಕೆ ಸಾಧ್ಯವಲ್ಲವೆಂದು ತಿಳಿದು, ವನಕ್ಕೆ ಸಂಗಡ ಕರದುಕೊಂಡು ಹೋಗುತ್ತೇನೆಂದು ಹೇಳಿ, ಸಮಾಧಾನ ಪಡಿಸಿದನು. ನಂತರ ಸೀತೆಯು ರಾಮನೊಡನೆ ಅತ್ತೆ ಮಾವಂದರಿಗೆ ಪ್ರಣಾಮವನ್ನು ಮಾಡಿ, ವಸನ ಭೂಷಣಗಳನ್ನು ಪರಿತ್ಯಜಿಸಿ, ಜಟಾವಲ್ಕಲಗಳನ್ನು ಧರಿಸಲುದ್ಯುಕ್ತಳಾದಳು. ಅವಳು ಅತ್ಯಂತ ಮುಗ್ಧಸ್ವಭಾವಳಾದ್ದರಿಂದ ವಲ್ಕಲ ಧಾರಣೆಯನ್ನು ಯಾವರೀತಿ ಮಾಡಬೇಕೆಂಬುವದು ತಿಳಿಯದೆ, ಇದ್ದಕ್ಕಿದ್ದಹಾಗೆ ತನಿಗೆ ಪ್ರಾಪ್ತವಾದ ವಲ್ಕಲಗಳಲ್ಲಿ ಒಂದನ್ನು ಕೈಯಲ್ಲಿ ಹಿಡಿದುಕೊಂಡು, ಮತ್ತೊಂದನ್ನು ಭುಜದಮೇಲೆ ಇಟ್ಟುಕೊಂಡು, ಬಿರುಗಣ್ಣು ಬಿಡುತ್ತಾ, ರಾಮನನ್ನು ನೋಡುತ್ತಾ ನಿಂತಳು. ನಂತರ ಕಣ್ಣೀರು ತುಂಬಿದವಳಾಗಿ, ಕ್ಲಾಂತವದನಳಾಗಿ, ರಾಮನನ್ನುಕುರಿತು, ಸ್ವಾಮಿ! ನಾರು ಬಟ್ಟೆಯನ್ನು ಹ್ಯಾಗೆ ಧಾರಣೆ ಮಾಡಬೇಕೆಂದು ಕೇಳಿದಳು. ಆಗ ರಾಮನು ಸೀತೆಯು ಉಟ್ಟಿದ್ದ ಪಟ್ಟೆ ಶೀರೆಯಮೇಲೆ ಆ ನಾರು ಬಟ್ಟೆಯನ್ನುಡಿಸಿದನು. ನಂತರ ಸೀತೆಯು ರಾಮನೊಡನೆ ವನಗಮನವನ್ನು ಮಾಡಿ ಅನೇಕ ಕಷ್ಟವನ್ನು ಅನುಭವಿಸಿದಳು. ಮಾರ್ಗಾಯಾಸದಿಂದ ಸರ್ವದಾ ಬಳಲಿ ಬೆಂಡಾಗಿ ಬಿಳುತಲಿದ್ದಳು. ಕದರ್ಯವಾದ ವನದ ಕಂದಮೂಲ ಫಲಗಳೇ ಅವಳಿಗೆ ಆಹಾರವಾಗಿದ್ದವು. ಪರ್ಣಗಳಮೇಲೆ ಶಯನ ಮಾಡುತ್ತಿದ್ದಳು. ಆದರೂ ಆ ಕಷ್ಟಗಳೆಲ್ಲವೂ ರಾಮಮುಖಕಮಲಾವಲೋಕನದ್ವಾರಾ ದೂರವಾಗುವವು. ಚಿತ್ರಕೂಟದಿಂದ ಪಂಚವಟಿಗೆ ಹೋಗುವ ಸಮಯದಲ್ಲಿ ಸೀತೆಯು ರಾಮನಿಗೆ ಅಕಾರಣವಾಗಿ ಮತ್ತೊಬ್ಬರಲ್ಲಿ ದ್ವೇಷಿಸಬಾರದೆಂದು ಅನೇಕ ನೀತಿಗಳನ್ನು ತಿಳಿಸಿದಳು.

ರಾವಣನು ಸೀತೆಯನ್ನು ಹರಣ ಮಾಡಿ ರಥದಮೇಲೆ ಕೂಡಿಸಿಕೊಂಡು ಕರೆದುಕೊಂಡು ಹೋಗುವಾಗ ಅವಳನ್ನುಕುರಿತು, ನಾನು ನಿನಗೆ ಸದೃಶಪತಿ, ನನಗೆ ನೀನು ಸತಿಯಾಗು, ದೇವತೆಗಳೂ ನಿನಗ

ಧೀನರಾಗುವರು, ನನ್ನ ಪಟ್ಟಮಹಿಷಿಯೂ ನಿನಗೆ ದಾಸಿಯಾಗುವಳು, ಐದು ಸಹಸ್ರ ದಾಸಿಗಳು ನಿನ್ನ ಪರಿಚಾರಕರಾಗಿರುವರು, ಎಂದು ಮುಂತಾಗಿ ಹೇಳಲು; ಸೀತೆಯು ಅದ್ಯಾವದನ್ನೂ ಕಿವಿಗೆ ಹಾಕಿಕೊಳ್ಳದೆ, ಎಲೆ ದುರ್ವೃತ್ತನೆ! ರಾಮನನ್ನು ನಿನ್ನೊಡನೆ ತೂಲನ ಮಾಡಿದರೆ, ನೀನು ಕೇವಲ ಶೃಗಾಲ ಮತ್ತು ಕಾಕಸ್ವರೂಪನು, ನಾನು ರಾಮನನ್ನು ಹೊರ್ತು ಬೇರೆ ಯಾರನ್ನೂ ಮನಸಾತಿಳಿದವಳಲ್ಲ. ಬಲಾತ್ಕಾರದಿಂದ ನೀನು ನನ್ನನ್ನು ತೆಗದುಕೊಂಡು ಹೋಗುತ್ತಿಯಾದ್ದರಿಂಡ, ನೀನು ನಿನ್ನ ವಂಶದೊಡನೆ ನಿರ್ಮೂಲವಾಗಿ ನಾಶವಾಗುವಿಯೆಂದು ಹೇಳಿದಳು.

ರಾವಣನು ಸೀತೆಯನ್ನು ಅಪಹಾರಮಾಡಿದ ನಂತರ ನಿರ್ಬಂಧದಲ್ಲಿಟ್ಟದ್ದಾಗ್ಯೂ, ಅವನು ಪ್ರತಿ ದಿವಸವೂ ಉಪಾಸನ ಪೂರ್ವಕವಾಗಿ ಅವಳ ಪಾದಗಳಿಗೆರಗಿ, ಅವಳ ಪ್ರೀತ್ಯುತ್ಪಾದನಾರ್ಥವಾಗಿ ಅನೇಕವಿಧವಾದ ಚೇಷ್ಟೆಗಳನ್ನು ಮಾಡುತಲಿದ್ದಾಗ್ಯೂ, ಸೀತೆಯು, ರಾಮಚಂದ್ರನೇ ಪರಮಧಾರ್ಮಿಕ ಪುರುಷನು, ಅವನೇ ತ್ರಿಲೋಕ ವಿಖ್ಯಾತನಾದವನು, ಅವನು ದೀರ್ಘ ಬಾಹುಗಳನ್ನೂ, ವಿಶಾಲವಾದ ನಯನಯುಗ್ಮವನ್ನೂ ಉಂಟಾಗಿರತಕ್ಕವನು, ಅವನೇ ನನ್ನ ಪತಿ ಮತ್ತು ದೇವತೆಯು ಆಗಿರುವನೇ ವಿನಾ ನೀಚನಾದ ನೀನೆಷ್ಟರವನು (1) ಎಂದು ಧೈರ್ಯದಿಂದುತ್ತರವನ್ನು ಕೊಟ್ಟಳು.

ಈರೀತಿಯಾಗಿ ಅನೇಕ ದಿನಗಳು ಕಳದ ನಂತರ ರಾವಣನು, ನೀನು ಇನ್ನೊಂದು ತಿಂಗಳೊಳಗಾಗಿ ನನ್ನನ್ನು ಸ್ವಾಮಿಯೆಂದು ವರಿಸದಿದ್ದರೆ, ನಿನ್ನ ಮಾಂಸವನ್ನು ನನ್ನ ಆಹಾರಾರ್ಥವಾಗಿ ಉಪಯೋಗಿಸಿ, ನನ್ನ ಇಷ್ಟಾರ್ಥವನ್ನು ನೆರವೇರಿಸಿಕೊಳ್ಳುವೆನೆಂದನು. ಅದಕ್ಕೂ ಈ ಪತಿಪರಾಯಣಳಾದ ಸೀತೆಯು ಅಣುಮಾತ್ರವೂ ಭೀತಳಾಗದೆ, ಎಲೆ ರಾಕ್ಷಸಾಧಮ! ನನ್ನ ಶರೀರವು ಸಂಜ್ಞಾಶೂನ್ಯವಾದದ್ದು, ನಿನ್ನ ಇಷ್ಟ

---

(1) ರಾಮೋನಾಮಸಧರ್ಮಾತ್ಮಾ ತ್ರಿಷುಲೋಕೇಷುವಿಶ್ರುತಃ। ದೀರ್ಘಬಾಹುರ್ವಿಶಾಲಾಕ್ಷೋ ದೈವತಂಸಪತಿರ್ಮಮ ॥

ವಿದ್ದರೆ ರಕ್ಷಿಸು, ಇಲ್ಲದಿದ್ದರೆ ಘಾತಿಸು, ನಾನು ಈ ನನ್ನ ಶರೀರ ಮ ತ್ತು ಜೀವನವನ್ನು ರಕ್ಷಿಸಿಕೊಳ್ಳುವದಕ್ಕೆ ಲೇಶವಾದರೂ ಅಪೇಕ್ಷಿಸು ವದಿಲ್ಲ (1) ವೆಂದುತ್ತರವಿತ್ತಳು.

ಹನುಮಂತನು ಅಶೋಕ ವನ ಮಧ್ಯದಲ್ಲಿ ಸೀತೆಯನ್ನು ನೋಡಿ ದಾಗ್ಯೆ ಸೀತೆಯು ಮುಳಗಿ ಹೋಗುವದಕ್ಕೆ ಉದ್ಯುಕ್ತವಾಗಿರುವ ನಾ ವೆಯಂತೆ ಶೋಕಭಾರಾಕ್ರಾಂತಳಾಗಿ ಕ್ರಮಕ್ರಮಶಃ ಅಶ್ರುಪಾತ ಮಾಡುತಲಿದ್ದಳು. ರಾವಣನು ಆಕೆಯ ಸುತ್ತಲೂ ಅನೇಕ ಸಂಖ್ಯಾ ಕರಾದ ರಾಕ್ಷಸಿಯರನ್ನು ಕಾವಲಿಗೋಸ್ಕರ ಇಟ್ಟಿದ್ದನು. ಆ ರಾಕ್ಷ ಸಿಯರು ಅಹೋ ರಾತ್ರಿಯಲ್ಲಿಯೂ, ಅವಳಿಗೆ ಮೋಸಗೊಳಿಸಿ, ರಾವ ಣನ ಇಷ್ಟಾರ್ಥವನ್ನು ನೆರವೇರಿಸಬೇಕೆಂಬ ಅಭಿಲಾಷೆಯಿಂದ ಅನೇ ಕವಿಧವಾದ ಭಯೋತ್ಪಾದಯನ್ನುಂಟುಮಾಡುತಲಿದ್ದರು. ಮತ್ತು ಕುಸುಮ ಸುಕುಮಾರಿಯಾದ ಜಾನಕಿಯ ಪುರತಃ ಈ ಭಯಂಕರಿಗ ಳಾದ ರಕ್ಕಸಿಯರು ತಮ್ಮ ಗುಹಾಕಾರವಾದ ಮುಖಕುಹರವನ್ನು ಕಿ ರಿಯುತ್ತಾ ದಂಷ್ಟ್ರಗಳಿಂದ ಅಗಿಯುವವರಹಾಗೆ ಸೀತೆಯ ಎದುರಿ ಗೆ ದಂಡಾಯಮಾನವಾಗಿ ನಿಲ್ಲುತಲಿದ್ದರು. ಆ ವಿಷಮ ಕಾಲದಲ್ಲಿ ಅಂತಾ ರಾಕ್ಷಸಿಯರ ಮಧ್ಯದಲ್ಲಿಯೂ ತ್ರಿಜಟಾ, ಶರ್ಮ ಎಂಬ ಶಾಂತಸ್ವಭಾವರಾದ ರಾಕ್ಷಸಿಯರಿಬ್ಬರು ಇವಳಿಗೆ ಮನಸಾಹಿತವನ್ನು ಕೋರುವವರಾಗಿ ಅವಕಾಶ ಶಿಕ್ಕಿದಾಗ್ಯೆಲ್ಲಾ, ಸೀತೆಯನ್ನು ಸೂಕ್ತಿಗ ಳಿಂದ ಸಮಾಧಾನಪಡಿಸುತಲಿದ್ದರು. ಈರೀತಿ ಕಳದ ಅನೇಕದಿನಗ ಳನಂತರ, ಜಾನಕಿಯು ಹನುಮಂತನನ್ನು ನೋಡಿದಮೇಲೆ ಆನಂದ ಪ್ರಕಾಶವನ್ನು ಮಾಡಿ, ಹನುಮಂತನನ್ನು ಆಶೀರ್ವದಿಸಿ, ತನ್ನ ಮ ನೋಭಿಪ್ರಾಯವನ್ನು ರಾಮನಿಗರುಹೆಂದು ಹೇಳಿಕಳುಹಿಸಿ, ತನ್ನನ್ನು ರಾಮಚಂದ್ರನು ಉದ್ಧಾರಮಾಡುವನೆಂದು ಧೈರ್ಯಮುಳ್ಳವಳಾದಳು.

---

(1) ಇದಂಶರೀರಂನಿಸ್ಸಂಜ್ಞಂ ರಕ್ಷವಾಘಾತಯಸ್ವವಾ । ನೇದಂಶರೀರಂರ ಕ್ಷ್ಯಂಮೆ ಜೀವಿತಂಚಾಪಿರಾಕ್ಷಸ ||

ರಾವಣ ವಧೆಯಾದ ನಂತರ ವಿಭೀಷಣನಿಗೆ ರಾಜ್ಯಾಭಿಷೇಕವನ್ನು ಮಾಡಿ ರಾಮಚಂದ್ರನು ಸೀತೆಯನ್ನು ಕರೆತರುವದಕ್ಕೆ ಜನರನ್ನು ಕಳುಹಿಸಿದನು. ಸೀತೆಯು ರಾಮನೆದುರಿಗೆ ಕರತರಲ್ಪಟ್ಟಾಗ ರಾಮನು, ಎಲೈ ಸೀತೆ! ನಾನು ನಿನ್ನ ಉದ್ಧಾರ ಸಾಧನವನ್ನು ಮಾಡಿದೆನು; ಈ ದಿವಸ ವಿಭೀಷಣಾದಿಗಳ ಶ್ರಮ ಸಫಲವಾದ್ದಾಯಿತೆಂದು ಹೇಳಿದನು. ಈ ಸಕಲ ವೃತ್ತಾಂತವನ್ನೂ ಕೇಳಿ ಸೀತೆಯ ಮುಖಕಮಲವು ಅರಳಿತು; ಆನಂದಾಶ್ರುವು ಸುರಿಯಲಾರಂಭಿಸಿತು. ಆಗ ರಾಮಚಂದ್ರನು ಅತಿ ಕರ್ಕಶಸ್ವರದಿಂದ, ಎಲೈ ಜಾನಕಿ! ನನ್ನ ಕೆಲಸವನ್ನು ನಾನು ಮಾಡಿರುತ್ತೇನೆ, ಈಗ ನಿನ್ನನ್ನು ಪರಿಗ್ರಹಿಸಲಾರೆ, ನೀನು ಬಹಳ ದಿವಸಗಳಿಂದ ಪರ ಗೃಹವಾಸಿನಿಯಾಗಿದ್ದಿ, ನಾನು ಸತ್ಕುಲ ಪ್ರಸೂತನಾಗಿ ನಿನ್ನನ್ನು ಪರಿಗ್ರಹಿಸಿದರೆ ಕೇವಲ ನಿಂದನೀಯನಾಗುವೆನು, ಆದ್ದರಿಂದ ನೀನು ಯಾರನ್ನು ಇಚ್ಛೈಸುವಿಯೋ, ಅವನನ್ನು ಆಶ್ರಯಿಸಿಕೊಂಡು ಜೀವನ ರಕ್ಷಣೆಯನ್ನು ಮಾಡಿಕೊಳ್ಳಲು ಅನುಮತಿಯನ್ನು ಕೊಟ್ಟಿರುತ್ತೇನೆಂದನು. ಸೀತೆಯು ಈ ಕಠೋರವಾದ ಮಾತನ್ನು ಕೇಳಿ, ಅತ್ಯಂತವಾಗಿ ವ್ಯಥೆಪಟ್ಟುಕೊಂಡು ಕಣ್ಣೀರು ಸುರಿಸುತ್ತಾ, ಸ್ವಾಮಿ! ತಾವು ನನ್ನನ್ನು ಪ್ರಾಕೃತಳಹಾಗೆ ಭಾವಿಸಿದಿರಿ, ನಾನು ಲಂಕೆಯಲ್ಲಿ ಯಾವರೀತಿ ವಾಸಮಾಡುತಲಿದ್ದೆನೆಂಬುವದನ್ನು ತಮ್ಮ ದೂತನಾದ ಹನುಮಂತನು ತಮಗೆ ತಿಳಿಸಿರುತ್ತಾನೆ, ಹೀಗಿರಲಾಗಿ, ಈಗ ನನ್ನನ್ನು ಪರಿತ್ಯಾಗಮಾಡುವದುಚಿತವೆ? ತಾವು ನನ್ನನ್ನು ಬಾಲ್ಯದಲ್ಲಿಯೇ ಪಾಣಿಗ್ರಹಣವನ್ನು ಮಾಡಿ ಈಗ ನನ್ನ ಸ್ವಭಾವವನ್ನು ಮತ್ತು ಭಕ್ತಿಮುಂತಾದ ಇತರಗುಣಗಳನ್ನೂ ಮರೆತುಬಿಟ್ಟಿರುತ್ತೀರೆಂದು (1) ಹೇಳಿ, ಲಕ್ಷ್ಮಣನನ್ನು ಕುರಿತು, ಚಿತಿಯನ್ನು ಸಿದ್ಧಪಡಿಸುವಂತೆ ಹೇಳಿದಳು. ಚಿತಿಯು ಸಿದ್ಧವಾದ ನಂತರ ಸರ್ವರ ಸಮಕ್ಷಮದಲ್ಲಿ ಅಗ್ನಿಪ್ರವೇಶ ಮಾಡುವಾಗ್ಯೆ ದೇವತೆಗಳಿಗೂ ಬ್ರಾ

---

(1) ನಪ್ರಮಾಣೀಕೃತಃಪಾಣಿ ರ್ಬಾಲ್ಯೇಮಮನಿಪೀಡಿತಃ। ಮಮಭಕ್ತಿಂಚ ಶೀಲಂಚ ಸರ್ವಂತೇಪೃಷ್ಠತಃಕೃತಂ ॥

ಹ್ಮರಿಗೂ ನಮಸ್ಕರಿಸಿ, ಕೃತಾಂಜಲಿ ಪುಟಳಾಗಿ ಅಗ್ನಿಯನ್ನು ಕುರಿತು, ಯಾವ ಕಾರಣದಿಂದ ನನ್ನ ಮನಸ್ಸು ರಾಮನನ್ನು ವಿನಾ ಇರಲಿಲ್ಲ ವ್ವೋ, ಆಕಾರಣದಿಂದ ಲೋಕ ಸಾಕ್ಷಿಯಾದ ಅಗ್ನಿದೇವನು ನನ್ನ ನ್ನು ಸಂರಕ್ಷಿಸಲಿ; ಯಾವ ಕಾರಣದಿಂದ ನಾನು ಶುದ್ಧ ಚರಿತ್ರಳೆಂದು ರಾಘವನು ತಿಳಿದಿರುತ್ತಾನೋ, ಆ ಕಾರಣದಿಂದ ಲೋಕ ಸಾಕ್ಷಿಯಾ ದ ಅಗ್ನಿದೇವನು ನನ್ನನ್ನು ಸಂರಕ್ಷಿಸಲಿ; ಯಾವಕಾರಣ ಕಾಯಮ ನೋವಾಕ್ಕುಗಳಿಂದ ರಾಮಚಂದ್ರನನ್ನೇ ಸೇವಿಸುತ್ತಾ ಮನಸಾ ಇತ ರರ ನಾಮಗ್ರಹಣವನ್ನಾಗಲಿ ಮಾಡಲಿಲ್ಲವ್ವೋ, ಆ ಕಾರಣದಿಂದ ಲೋಕ ಸಾಕ್ಷಿಯಾದ ಅಗ್ನಿದೇವನು ನನ್ನನ್ನು ಸಂರಕ್ಷಿಸಲಿ (1) ಎಂ ದು ಪ್ರಾರ್ಥಿಸಿ, ಅಗ್ನಿಯಲ್ಲಿ ಪ್ರವೇಶಮಾಡುತ್ತಲೇ ಆಕೆಗೆ ಸ್ವಲ್ಪವೂ ಕ್ಷತಿಯಾಗಲಿಲ್ಲ. ಸಕಲರೂ ಸೀತೆಯೇ ಧನ್ಯಳೆಂದು ಸಾಧುವಾದಗ ಳನ್ನು ಮಾಡಿದರು.

ಸೀತೆಯು ಬಹುಕಾಲ ರಾಮನೊಡನೆ ಸುಖವಾಗಿದ್ದನಂತರ, ಭ ದ್ರಕನೆಂಬುವನು ಬಂದು ಸಭಾಮಧ್ಯದಲ್ಲಿ ರಾವಣನ ಮನೆಯಲ್ಲಿ ಅ ನೇಕ ಕಾಲ ವಾಸಮಾಡುತಲಿದ್ದ ಸೀತೆಯನ್ನು ರಾಮನು ಪುನಃ ಪರಿ ಗ್ರಹಿಸಿದನೆಂದು ಪ್ರಜೆಗಳೆಲ್ಲರೂ ನಿಂದಿಸುತ್ತಾರೆಂದು ಹೇಳಿದನು. ಈಮಾತು ಕಿವಿಗೆ ಬಿದ್ದೊಡನೆ ಕ್ಷತ್ರಿಯ ಪುರುಷನಾಗಿಯೂ, ನಾಡಿಗ ಳಲ್ಲೆಲ್ಲ ಕ್ಷತ್ರಿಯಶೋಣಿತಪೂರ್ಣನಾದವನಾಗಿಯೂ ಇರುವ ರಾಮ ನು ಸೀತಾ ಪರಿತ್ಯಾಗ ಸಂಕಲ್ಪವನ್ನುಮಾಡಿ, ಲಕ್ಷ್ಮಣನನ್ನು ಕುರಿ ತು, ನೀನು ಆಶ್ರಮಕ್ಕೆ ಹೋಗುವನೆಪದಿಂದ ಸೀತೆಯನ್ನು ಭಾಗೀರಥಿ

---

(1). ಯಥಾಮೇ ಹೃದಯಂನಿತ್ಯಂ ನಾಪಸರ್ಪತಿರಾಘುವಾತ್| ತಥಾಲೋಕ ಸ್ಯಸಾಕ್ಷೀಮಾಂ ಸರ್ವತಃಪಾತುಪಾವಕಃ||

ಯಥಾಮಾಂ ಶುದ್ಧಚಾರಿತ್ರಾಂ ದೃಷ್ಟ್ವಾಜಾನಾತಿರಾಘುವಃ| ತಥಾ ಲೋಕಸ್ಯಸಾಕ್ಷೀಮಾಂ ಸರ್ವತಃಪಾತುಪಾವಕಃ||

ಕರ್ಮಣಾ ಮನಸಾವಾಚಾ ಯಥಾನಾಭಿಚರಾಮ್ಯಹಂ| ರಾಘುವಂ ಸ ರ್ವಧರ್ಮಜ್ಞಂ ತಥಾಮಾಂಪಾತುಪಾವಕಃ||

ತೀರದಲ್ಲಿ ಪರಿತ್ಯಾಗಮಾಡಿಬಾರೆಂದನು. ಲಕ್ಷ್ಮಣನು ಅದೇಪ್ರಕಾರ ಸೀತೆಯನ್ನು ವನದಲ್ಲಿಬಿಟ್ಟು, ರಾಮನು ಪರಿತ್ಯಾಗಮಾಡಿರುತ್ತಾನೆಂದು ಹೇಳಿದ ನಿತಾಂತದಾರುಣವಾದ ವಾರ್ತಾಶ್ರವಣಮಾಡಿ, ಸೀತೆಯು ಕ್ಷಣಕಾಲ ಹತಚೇತನಳಾಗಿದ್ದು, ಸ್ವಲ್ಪಹೊತ್ತಿನಮೇಲೆ ಲಕ್ಷ್ಮಣನನ್ನು ಸಂಬೋಧಿಸಿ, ವತ್ಸ! ನಿರಂತರ ನಿತಾಂತ ದುಃಖ ಭೋಗಮಾಡುವದಕ್ಕೋಸ್ಕರವೇ ಈ ನನ್ನ ದೇಹವು ನಿರ್ಮಿತವಾಗಿದೆ, ನಾನು ಪೂರ್ವದಲ್ಲಿ ಯಾವಪಾಪಮಾಡಿದ್ದೆನೋ, ಯಾವ ಪತಿಪರಾಯಣಳಿಗೆ ಪತಿವಿಯೋಗ ಕರ್ಮವನಾಚರಿಸಿದ್ದೆನೋ ಇದು ಅದರ ಫಲವಾಗಿದೆ, ಇಲ್ಲಿದಿದ್ದರೆ, ನಿಷ್ಕಾರಣವಾಗಿ ರಾಮಚಂದ್ರನು ಯಾತಕ್ಕೆ ನನ್ನನ್ನು ಪರಿತ್ಯಾಗಮಾಡುತಲಿದ್ದನೆಂದು ಹೇಳಿ, ಪುನಃ, ಲಕ್ಷ್ಮಣನನ್ನು ಕುರಿತು, ಎಲೈ ಲಕ್ಷ್ಮಣ! ಶ್ರೀರಾಮಚಂದ್ರನು ಎಂತಾ ವ್ಯವಹಾರವನ್ನು ಮಾಡಿದರೂ ಅವನೇ ನನಗೆ ಪರಮಗತಿಯೆಂತಲೂ, ತನ್ನ ಸ್ವಂತಕೆಲಸಗಳಲ್ಲಿ ಸಮಾಧಾನಚಿತ್ತನಾಗಿರಬೇಕೆಂತಲೂ ಹೇಳಿದೆನೆಂದು ವಿಜ್ಞಾಪಿಸೆಂದು ಹೇಳಿ ಕಳುಹಿಸಿದಳು. ಇಂತಾ ಸಮಯದಲ್ಲಿಯೂ ಕೂಡ ಸಂಪೂರ್ಣವಾದ ಅಂತಃಕರಣದೊಡನೆ ಪತಿಯ ಕಲ್ಯಾಣವನ್ನು ಕೋರುವದು ಪ್ರಾಕೃತ ರಮಣಿಯರ ಕಾರ್ಯವಲ್ಲ. ಸೀತೆಯಮಾತಿನ ಪ್ರತಿ ಅಕ್ಷರವೂ ಅವಳ ಹೃದಯದ ಗಂಭೀರ ಭಾವವನ್ನು, ಅಲೌಕಿಕವಾದ ಪ್ರಣಯವನ್ನು ಸಹಾ ತೋರ್ಪಡಿಸುತ್ತದೆ.

ಅನಾಥಳಾದ ಸೀತೆಯು ತಾನೊಬ್ಬಳೇ ಪುನಃ ಹನ್ನೆರಡುವರ್ಷ ವನವಾಸಮಾಡಿದನಂತರ, ಋುಷಿಗಳು ಪುನಃ ಸೀತೆಯನ್ನು ಪರಿಗ್ರಹಿಸಬೇಕೆಂದು ರಾಮನನ್ನು ಅನುರೋಧಮಾಡಿದರು. ನಂತರ ರಾಮನು ಪುನಃ ಸರ್ವಸಮಕ್ಷದಲ್ಲಿ ಸೀತೆಯನ್ನು ಪರೀಕ್ಷೆದ್ವಾರಾ ಪರಿಗ್ರಹಿಸುವದಕ್ಕೆ ಸಂಕಲ್ಪಿಸಿ, ಅವಳು ಎದುರಿಗೆ ಬಂದೊಡನೆ, ಎಲೈ ಸೀತೆ! ಈ ತಡವೆ ಅಗ್ನಿಪರೀಕ್ಷೆಯಲ್ಲ, ಶಪಥಪರೀಕ್ಷೆಮಾಡೆಂದು ಹೇಳಿದನು. ಸೀತೆಯು ಸಭಾಮಧ್ಯದಲ್ಲಿ ತನ್ನ ಹೆಜ್ಜೆಗಳನ್ನು ನೋಡಿಕೊಳ್ಳುತ್ತಾ ನಿಂತುಕೊಂಡು ಇರುವಾಗ್ಯೆ ರಾಮನು ಹೇಳಿದ ಮಾತನ್ನುಕೇಳಿ, ಅವಳ

ಮನೋಭಾವವು ಯಾವರೀತಿ ಆಯಿತೆಂದು ಹೇಳುವದು ಅಸಾಧ್ಯವಾಗಿದೆ. ಆದರೂ ಅವಳ ಅಲೌಕಿಕ ಅನಿರ್ವಚನೀಯವಾದ ಪ್ರಣಯವು ಪೂರ್ವದಂತೆಯೇ ಇತ್ತು. ಅವಳಿಗೆ ಸಭಾಮಧ್ಯದಲ್ಲಿ ಪುನಃಪುನಃ ತಾನು ಶುದ್ಧಳೆಂದು ದೃಷ್ಟಾಂತರಮೂಲಕ ದೃಢಪಡಿಸುವದು ದಾರುಣವಾದ ಕಷ್ಟವಾಗಿ ತಿಳಿಯಬಂತು. ಪ್ರಾಚೀನ ರಮಣಿಯರು ಸುಲಭರಾಗಿದ್ದಾಗ್ಯೂ ಅತ್ಯಂತ ತೇಜಸ್ವಿನಿಗಳಾಗಿದ್ದರು. ಸೀತೆಯು ಸಭಾಪ್ರವೇಶವನ್ನುಮಾಡಿ ಯಾವಕಡೆಯನ್ನೂ ನೋಡದೆ ಸ್ವಲ್ಪಹೊತ್ತು ನಿಸ್ತಬ್ಧಳಾಗಿದ್ದು, ದೈನ್ಯಸ್ವರದಿಂದ ತನ್ನ ಜನನಿಯಾದ ಭೂದೇವಿಯನ್ನು ಕುರಿತು ಪ್ರಾರ್ಥಿಸಿದಳು. ಆಗಣ ಅವಳ ಅವಸ್ಥೆಯನ್ನು ಮನಸಾ ಆಲೋಚಿಸಿಕೊಂಡು ಅವಳ ಆ ಶೋಕಕಾಲದಲ್ಲಿ ಆಡಿದ ವಚನಗಳನ್ನು ಓದಿದರೆ ಕಲ್ಲಾದರೂ ಕರಗಿ ಹೋಗುತ್ತದೆ. ಸಹೃದಯರ ಹೃದಯದಲ್ಲಿ ಗಭೀರವಾದ ಶೋಕಸಾಗರವು ಉಕ್ಕಿಬರುವದು. ಅವಳು ಭೂದೇವಿಯನ್ನು ಪ್ರಾರ್ಥಿಸಿದ್ದೇನಂದರೆ–ಯಾವ ಕಾರಣದಿಂದ ನಾನು ರಾಮನನ್ನು ವಿನಾ ಮತ್ಯಾರನ್ನೂ ಮನಸ್ಸಿನಿಂದಲಾದರೂ ಯೋಚಿಸಿಲ್ಲವೋ, ಆ ಕಾರಣದಿಂದ ಹೇ ಭೂದೇವಿ! ನನಗೆ ವಿವರವನ್ನು ಕೊಡು; ಯಾವಕಾರಣ ನಾನು ಕಾಯಮನೋವಾಕ್ಕಗಳಿಂದ ಚಿರಕಾಲವಾಗಿ ರಾಮಪೂಜೆಯನ್ನೇ ಮಾಡಿದೆನೋ, ಅದುಕಾರಣದಿಂದ ಹೇ ಭೂದೇವಿ! ನನಗೆ ವಿವರವನ್ನು ಕೊಡು; ಯಾವ ಕಾರಣದಿಂದ ನಾನು ರಾಮನನ್ನು ಹೊರ್ತು ಮನಸಾ ಮತ್ಯಾರನ್ನೂ ಅರಿಯೆನೆಂದು ಸತ್ಯವಾಗಿ ಹೇಳುತ್ತೇನೋ, ಆ ಕಾರಣದಿಂದ, ಹೇ ಮಾಧವೀ! ನನಗೆ ವಿವರವನ್ನು ಕೊಡು (1) ಎಂದು ಪ್ರಾರ್ಥಿಸಿದಳು. ಈ

---

(1) ಯಥಾಹಂರಾಘುವಾದನ್ಯಂ ಮನಸಾಪಿನಚಿಂತ್ರಯೆ। ತಥಾಮೆಮಾಧವೀ ದೇವೀ ವಿವರಂದಾತುಮರ್ಹತಿ॥

ಮನಸಾಕರ್ಮಣಾವಾಚಾ ಯಥಾರಾಮಂಸಮರ್ಚಯೆ। ತಥಾಮೆಮಾಧವೀದೇವೀ ವಿವರಂದಾತುಮರ್ಹತಿ॥

ಯಥೈತತ್ಸತ್ಯಮುಕ್ತಂಮೆ ವೇದ್ಮಿರಾಮಾತ್ಪರಂನಚ। ತಥಾಮೆಮಾಧವೀದೇವೀ ವಿವರಂದಾತುಮರ್ಹತಿ॥

ಶೋಕದೀನ ವಚನಗಳನ್ನು ಕೇಳಿ ಸಭಾಸ್ಥ ಸಮಸ್ತ ಜನರೂ ಒಂದೇ ಕಾಲದಲ್ಲಿ ಸ್ತಬ್ಧರಾಗಿದ್ದರು; ಋಷಿಗಳೆಲ್ಲರೂ ಅಶ್ರುಜಲವಿಸರ್ಜನ ಮಾಡತೊಡಗಿದರು. ರಾಮಚಂದ್ರನು ಮೂರ್ಛಿತಪ್ರಾಯನಾಗಿ ಬಿದ್ದನು. ಭೂಗರ್ಭವು ವಿದೀರ್ಣವಾಗಿಹೋಯಿತು. ಆವೊಡನೆ ಅತ್ಯಂತ ಜಾಜ್ವಲ್ಯಮಾನವಾದ ಸಿಂಹಾಸನದೊಡನೆ ಭೂದೇವಿಯು ಆವಿರ್ಭೂತಳಾಗಿ ಸೀತೆಯನ್ನು ಸ್ನೇಹದಿಂದಾಲಿಂಗಿಸಿಕೊಂಡು ಭೂಮಧ್ಯದಲ್ಲಿ ಅಂತರ್ಹಿತಳಾದಳು.

ಶೇಷೋಕ್ತ ಶ್ರೇಣಿಯವರಾದ ರಮಣಿಯರಲ್ಲಿ ಜನಕತನಯಳಾದ ಸೀತೆಯು ಸರ್ವಪ್ರಧಾನಳು. ಅವಳ ಹಾಗೆ ಪತಿಪರಾಯಣರು ಇದ್ದರೆಂಬುವದು ಸಂದೇಹವಾಗಿರುತ್ತೆ. ಅವಳಹಾಗೆ ಮೋಸಕ್ಕೊಳಗಾದವರಿದ್ದರೆಂದು ಹೇಳುವದೂ ಸಂದೇಹವಾಗಿರುತ್ತೆ. ಅದೃಷ್ಟದೋಷದಿಂದ ಅವಳು ನಾನಾವಿಧವಾದ ಕಷ್ಟವನ್ನನುಭವಿಸಬೇಕಾಯಿತು. ಅವಳು ರಾಜನಂದಿನಿಯಾಗಿ, ಸಸಾಗರ ಧರಣೀಪತಿಯ ಮಹಿಷಿಯಾಗಿ, ಜನ್ಮಾವಧಿ ಏಕಪ್ರಕಾರ ದುಃಖವನ್ನನುಭವಿಸುತಲಿದ್ದಳು. ಪ್ರಥಮತಃ, ಪತಿಯೊಡನೆ ವನಗಮನ ಮಾಡಿದಳು. ಅಲ್ಲಿ ರಾವಣನು ಅವಳನ್ನು ಅಪಹರಿಸಿದನು. ನಂತರ ಅಸಹ್ಯವಾದ ಕಷ್ಟಾನುಭವವನ್ನು ಮಾಡಿದಳು. ಅವಳ ಪತಿಯು ಪುನಃ ಪರಿಗ್ರಹಿಸುವದಕ್ಕೆ ನಿರಾಕರಿಸಿದನು. ಆ ಅಪಾಯದಲ್ಲಿ ಹ್ಯಾಗೋ ಉದ್ಧಾರಮಾಡಿಕೊಂಡಳು. ಮಿಥ್ಯಾಪವಾದ ಭೀತನಾಗಿ ರಾಮಚಂದ್ರನು ಅವಳನ್ನು ಪುನಃ ತಿರಸ್ಕರಿಸಿದನು. ನಂತರ ಇವಳೊಬ್ಬಳೇ ವನವನದಲ್ಲಿ ಭ್ರಮಣ ಮಾಡಿದಳು. ಆದರೆ ಅವಳು ಅವಸಾನದಲ್ಲಿ ಸಶರೀರವಾಗಿ ಪೂಜ್ಯಳಾದ ಪೃಥ್ವಿಯೊಡನೆ ವೈಕುಂಠಗಮನ ಮಾಡಿದಳು.

ತೂಲನಾ—ಸೀತಾ ಮತ್ತು ಸಾವಿತ್ರಿ ಇವರಿಬ್ಬರೂ ಅದ್ವಿತೀಯರಾದ ರಮಣಿಯರು. ಪೃಥ್ವಿಮಂಡಲದಲ್ಲಿ ಯಾವ ದೇಶದಲ್ಲಿಯೂ ಯಾವ ಕವಿಯಾದರೂ ಸ್ವಂತ ಕಲ್ಪನಾಶಕ್ತಿಯಿಂದ ಇವರಹಾಗೆ ಸ

ರ್ವಗುಣಸಂಪನ್ನರಾದ ರಮಣಿಯರನ್ನು ವರ್ಣಿಸುವಷ್ಟು ಶಕ್ತನಾಗಿಲ್ಲ ವು. ಸೀತೆಯ ಸ್ನೇಹಪ್ರವೃತ್ತಿಯು ಅಲೌಕಿಕವಾದದ್ದು. ಸುಖ ದುಃಖವಿಪತ್ತು ಸಂಪತ್ತುಮೊದಲಾದ ಸಕಲ ಕಾಲದಲ್ಲಿಯೂ ಪತಿ ವಿ ಚಾರದಲ್ಲಿ ಅವಳ ಮನೋಭಾವವು ವಿಕಾರವನ್ನು ಹೊಂದದೆ ಅವಿಚ ಲಿತವಾಗಿತ್ತು. ಮೈದುನನಾದ ಲಕ್ಷ್ಮಣನಲ್ಲಿಯೂ ಪುತ್ರಸಮ ವಾ ತ್ಸಲ್ಯವನಿಟ್ಟಿದ್ದಳು. ಲಕ್ಷ್ಮಣನು ವನ ಮಧ್ಯದಲ್ಲಿ ಅವಳೊಬ್ಬಳ ನ್ನೇ ಬಿಟ್ಟುಬರುವಾಗಲೂ ಅವನನ್ನು ಆಶೀರ್ವದಿಸಿ ಗುರುಜನರಿಗೆ ಪ್ರಣಾಮವನ್ನು ತಿಳಿಸುವಂತೆ ಹೇಳಿದಳು. ಸಾವಿತ್ರಿಯು ಪತಿಯ ವಿಯೋಗ ಕಾಲದಲ್ಲಿ ತನ್ನ ಪ್ರಾಣವನ್ನು ಬಿಡುವದಕ್ಕೂ ಸಿದ್ಧಳಾಗಿ ದ್ದಳು. ಈ ಶ್ರೇಷ್ಠರಾದ ನಾರಿಯರಿಬ್ಬರ ಬುದ್ಧಿವೃತ್ತಿಯು ಸಮಾ ನಪ್ರಭೆಯುಳ್ಳದ್ದಾಗಿತ್ತು. ಸೀತೆಯು ರಾವಣನೊಂದಿಗೂ, ಸಾವಿತ್ರಿ ಯು ಯಮನೊಂದಿಗೂ ಆಡಿದ ಮಾತುಗಳಲ್ಲಿ ತಮ್ಮ ಬುದ್ಧಿವೃತ್ತಿ ಯ ವಿಲಕ್ಷಣವಾದ ಪರಿಚಯವನ್ನು ಕೊಟ್ಟಿರುತ್ತಾರೆ. ಆದರೆ ಸೀ ತೆಗಿಂತಲೂ ಸಾವಿತ್ರಿಯು ಕರ್ಮಕ್ಷಮತೆಯಲ್ಲಿ ಉತ್ಕೃಷ್ಟಳಾಗಿದ್ದ ಳು. ವಾಲ್ಮೀಕಿಯು ಯಾವ ಸ್ಥಳದಲ್ಲಿಯೂ ಸೀತೆಗೆ ಕರ್ಮಕ್ಷಮ ತೆಯನ್ನು ವರ್ಣಿಸಿರುವದಿಲ್ಲ. ಸೀತೆಯನ್ನು ಶಾಂತಸುಶೀಲ ಅತ್ಯಂತ ಧೀರಸ್ವಭಾವಳೆಂದು ವರ್ಣಿಸಿರುತ್ತಾನೆ. ಸಾವಿತ್ರಿಯು ಧೀರಸ್ವಭಾ ವಳು. ಸಮಯವು ಪ್ರಾಪ್ತವಾಗಿದ್ದರೆ ಅವಳು ಏನೇನೂ ಹಿಂಜರಿ ಯುತ್ತಿರಲಿಲ್ಲ. ಅವಳು ಸಹ್ಯಮಾಡದ ಕಷ್ಟವೇ ಇರಲಾರದು. ಆ ರಮಣಿಯರಿಬ್ಬರಿಗೂ ತೇಜಸ್ವಿತಾ ಇತ್ತು. ಯಮನೇ ಸಾವಿತ್ರಿಯ ತೇಜಸ್ವಿತೆಯನ್ನು ಮೆಚ್ಚಿದ್ದಾನೆ. ಸೀತೆಯೂ ತನ್ನ ಎರಡನೇ ಪರೀ ಕ್ಷಾಕಾಲದಲ್ಲಿ ಅವಳ ತೇಜಸ್ವಿತೆಯನ್ನು ತೋರಿಸಿರುತ್ತಾಳೆ. ಕರ್ಮ ಕ್ಷಮತಾ ವಿಚಾರದಲ್ಲಿ ಸಾವಿತ್ರಿಯು ಸೀತೆಗಿಂತಲೂ ಉನ್ನತಸ್ವಭಾವ ಳಾಗಿದ್ದರೂ ಅವಳ ಸ್ನೇಹ ಪ್ರವೃತ್ತಿಯು ಚನ್ನಾಗಿ ಪ್ರಕಾಶವಾಗಿಲ್ಲ. ಸೀತೆ ಮತ್ತು ಸಾವಿತ್ರಿ ಇವರಿಗೆ ಪ್ರಥಮ ಶ್ರೇಣಿಯವರಿಗಿಂತಲೂ ಔ ನ್ನತ್ಯವನ್ನು ಹೇಳುವದಕ್ಕೆ ಕಾರಣವೇನೆಂದರೆ, ಅವರಿಬ್ಬರ ಮಾನಸಿ ಕವೃತ್ತಿತ್ರಯವೂ ಒಂದೇ ಕಾಲದಲ್ಲಿ ಸಮುನ್ನತಿಯನ್ನು ಹೊಂದಿ ತ್ತು. ಇದರಿಂದಲೆ ಅವರು ಸರ್ವಶ್ರೇಷ್ಠರು.

# ಆರನೇ ಅಧ್ಯಾಯವು.

ಇದುವರಿವಿಗೆ ಉದಾಹೃತವಾಗಿರುವದೆಲ್ಲಾ ಪುರಾತನ ಗ್ರಂಥಾವಳಿಗಳಿಂದ ಉದ್ಧೃತವಾದ್ದಾಗಿರುತ್ತವೆ. ಆದರೆ ಕಾಳಿದಾಸಪ್ರಭೃತಿ ಕವಿಗಣಪ್ರಣೀತ ಗ್ರಂಥಾವಳಿಗಳಿಂದ ಕೆಲವು ಉದಾಹರಣೆಗಳನ್ನು ಎತ್ತಿ ಬರೆಯದ ಹೊರತು ಈ ಗ್ರಂಥವು ಪೂರ್ತಿಯಾದದಾಗಾಗುವದೆಂದು ಹೇಳುವದಕ್ಕಾಗುವದಿಲ್ಲವು. ಕಾಳಿದಾಸ ಭವಭೂತಿಪ್ರಭೃತಿ ಮಹಾ ಕವಿಗಳು ಋಷಿಗಳ ಅನೇಕ ಕಾಲಾನಂತರ ಅವತರಿಸಿದವರಾಗಿರುತ್ತಾರೆ. ಇವರ ದಿವಸದಲ್ಲಿಯೇ ಭಾರತವರ್ಷದಲ್ಲಿನ ಪೂರ್ವೀಕರ ನಡವಳಿತೆಗಳೆಲ್ಲವೂ ಬಹಳವುಟ್ಟಿಗೆ ಬದಲಾಯಿಸಿ ಹೋದವು. ಬೌದ್ಧಮತ ಉತ್ಪತ್ತಿಯಾಗಿ ಪ್ರಚಾರವಾಗಿ ವಿನಾಶವನ್ನೂ ಹೊಂದಿತು. ವೇದಸ್ಮೃತಿ ಪ್ರತಿಪಾದಿತ ಧರ್ಮಗಳೆಲ್ಲಾ ಲೋಪವಾದವು. ಪೌರಾಣಿಕರ ಪ್ರಭಾವವು ಅಭಿವೃದ್ಧಿಯಾಯಿತು. ಆರ್ಯರೆಲ್ಲರೂ ವಿಲಾಸಿಗಳಾಗಿ ಕುಸಂಸ್ಕಾರಿಗಳಾದರು; ಮತ್ತು ಅನೇಕ ವಿಷಯಗಳಲ್ಲಿ ಹೀನವೀರ್ಯರಾದರು. ಬ್ರಾಹ್ಮಣರು ಬ್ರಹ್ಮಚರ್ಯಾದಿ ಆಶ್ರಮಗಳನ್ನು ಕ್ರಮಕ್ರಮಶಃ ಆಚರಿಸುವದನ್ನು ಬಿಟ್ಟು ವ್ಯಾಪಾರಮುಂತಾದ ನಾನಾಕರ್ಮಗಳನ್ನು ಮಾಡತೊಡಗಿದರು. ಇದೇ ಕಾಲದಲ್ಲಿ ಸ್ತ್ರೀಯರ ನಡವಳಿತೆಗೂ ಅನೇಕ ಭೇದಗಳುಂಟಾದವು. ಅವರಿಗೋಸ್ಕರ ಅಂತಃಪುರವೂ ಸೃಷ್ಟಿಯಾಯಿತು. ಮಹಾಭಾರತದಲ್ಲಿ ಉಕ್ತರಾಗಿರುವ ಸ್ತ್ರೀಯರ ಹಾಗೆ ಅವರಿಗೆ ನಿರ್ಭೀಕತೆ ಇರಲಿಲ್ಲ. ಎಲ್ಲರೂ ತಮ್ಮ ಪತಿಗಳಿಗೆ ಸಖಿಗಳಾಗದೆ ದಾಸಿಯರಾದರು. ಪೂರ್ವದಲ್ಲಿ ರಾಜರು ನಿಮಿತ್ತಾಧೀನರಾಗಿ ಅನೇಕ ವಿವಾಹಗಳನ್ನು ಮಾಡಿಕೊಳ್ಳುತ್ತಿದ್ದರು; ಅದರ ಈಚೆಗೆ ಎಲ್ಲರೂ ಇಛ್ಛಾಧೀನರಾಗಿ ಅಸಂಖ್ಯಾಕ ವಿವಾಹವನ್ನು ಮಾಡಿಕೊಳ್ಳಲಾರಂಭಿಸಿದರು. ದಶಕುಮಾರ ಚರಿತ್ರೆಯನ್ನು ಓದಿದರೆ ಕ್ರಿಸ್ತಶಕ ಎಂಟುನೂರು ಒಂಭೈನೂರು ವರ್ಷಗಳ ಮಧ್ಯಕಾಲದಲ್ಲಿ, ವಿಶೇಷತಃ, ನಮ್ಮ ದೇಶದ

ಸ್ತ್ರೀಯರಿಗೆ ಪೂರ್ವ ನಡತೆಗಳೆಲ್ಲಾ ಹೋಗಿ, ಕ್ರಮಕ್ರಮಶಃ ಯಾವ ರೀತಿ ಶೋಚನೀಯ್ಯವಾದ ಅವಸ್ಥೆಯುಂಟಾಯಿತೆಂಬುವದನ್ನು ತಿಳಿಯಬಹುದು.

ಆಧುನಿಕ ಕವಿಪ್ರಣೀತ ಕಾವ್ಯನಾಟಕ ಮುಂತಾದ ಗ್ರಂಥಗಳು ಎರಡುಪ್ರಕಾರವಾಗಿವೆ. ಒಂದನೇದು, ಅವರ ಸ್ವಕಪೋಲಕಲ್ಪಿತವಾದದ್ದು; ಎರಡನೇದು, ಪ್ರಾಚೀನ ಗ್ರಂಥಗಳಾದ ರಾಮಾಯಣ ಭಾರತ ಮೊದಲಾದ ಉಪಾಖ್ಯಾನಗಳಿಂದ ಸಂಗ್ರಹೀತವಾದದ್ದು. ಅವರ ಸ್ವಕಪೋಲಕಲ್ಪಿತವಾದವುಗಳಲ್ಲಿ ಅವರವರ ಸಮಸಾಮಯಿಕ ಸಮಾಜದ ಅವಸ್ಥಾವರ್ಣನೆಯನ್ನು ಬಹಳಮಟ್ಟಿಗೆ ವರ್ಣಿಸಿರುತ್ತಾರೆ. ಅವರ ಸ್ವಕಪೋಲಕಲ್ಪಿತವುಗಳಲ್ಲಿ ರತ್ನಾವಳಿ, ಮಾಳವಿಕಾಗ್ನಿಮಿತ್ರ, ಮೃಚ್ಛಕಟಿ, ಮಾಲತೀಮಾಧವ ಇವುಗಳೇ ಮುಖ್ಯವಾದವುಗಳು. ದಶಕುಮಾರ ಚರಿತ್ರೆ, ಕಾದಂಬರಿ ಇವುಗಳೂ ಪೂರ್ವ ಗ್ರಂಥಗಳ ಉಪಾಖ್ಯಾನವಲ್ಲವು. ಯಾವ್ಯಾವು ಕವಿಗಳ ಸ್ವಕಪೋಲಕಲ್ಪಿತಗಳಾದವುಗಳಲ್ಲವೋ ಅಂತಾ ಗ್ರಂಥಗಳಲ್ಲಿಯೂ ಕೂಡ ಅವರವರ ಸಮಸಾಮಯಿಕ ಸ್ಥಿತಿಯನ್ನು ಶೇರಿಸಿ ವರ್ಣಿಸಿರುತ್ತಾರೆ. ವಾಲ್ಮೀಕಿವರ್ಣಿತ ಸೀತಾಚರಿತ್ರೆ, ಭವಭೂತಿವರ್ಣಿತ ಸೀತಾಚರಿತ್ರೆ, ಇವುಗಳೆರಡೂ ಭಿನ್ನ ಭಿನ್ನ ಕಾಲದಲ್ಲಿ ವರ್ಣಿತವಾದವುಗಳೆಂದು ಅವುಗಳಿಂದಲೇ ವ್ಯಕ್ತವಾಗುತ್ತದೆ. ವೇದವ್ಯಾಸ ಶಕುಂತಳಾ, ಕಾಳಿದಾಸ ಶಕುಂತಳಾ ಇವಿವುಗಳಿಗೆ ಅನೇಕಕಾಲ ಅಂತರಾಳವಿರುತ್ತದೆ.

ಕಾಳಿದಾಸಪ್ರಣೀತ ಮಾಳವಿಕಾಗ್ನಿಮಿತ್ರವೆಂಬ ನಾಟಕದಲ್ಲಿ ಉಕ್ತಳಾಗಿರುವ ಮಾಳವಿಕೆಯು ಆಧುನಿಕ ಕವಿಗಳ ವಿಶ್ವಾಸಕ್ಕೆ ಅತ್ಯಂತ ಪಾತ್ರಳಾದವಳು. ಅವಳ ಚರಿತ್ರೆಯು ಅಪವಿತ್ರವಾದ್ದಲ್ಲ. ಅವಳು ರಾಜನಂದಿನೀ. ಒಬ್ಬ ಸೇನಾಪತಿಯು ಅವಳನ್ನು ಒಬ್ಬ ಕಳ್ಳನ ಕೈಬಿಡಿಸಿ ರಾಜಪರಿವಾರಕ್ಕೆ ಕಳುಹಿಸಿದನು. ಅವಳು ರಾಜಮಂದಿರದಲ್ಲಿದು ನೃತ್ಯಗೀತಾದಿಗಳನ್ನು ಅಭ್ಯಾಸಮಾಡಿದಳು. ಆ ಕಾಲದ

ಲ್ಲಿ ಜನರು ಅತ್ಯಂತವಾಗಿ ವಿಲಾಸಪ್ರಿಯರಾಗಿದ್ದರು. ಮಾಳವಿಕೆಯು ವಿಲಾಸಪ್ರಿಯನಾದ ರಾಜನಿಗೂ ಮತ್ತು ಕರ್ಮಚಾರಿಗಳಿಗೂ ಪ್ರೀತ್ಯುತ್ಪಾದಕವನುಂಟುಮಾಡುವ ಸಕಲ ವಿದ್ಯವೂ ಅವಶ್ಯಕವಾಗಿದ್ದದ್ದರಿಂದ ಅಂತಾ ಸಕಲ ವಿದ್ಯಗಳಲ್ಲಿಯೂ ನಿಪುಣಳಾಗಿದ್ದಳು. ಈ ವಿಲಾಸ ವಿದ್ಯಾಪಾರಂಗತಳಾದ ಮಾಳವಿಕೆಯು ರಾಜನಿಗೆ ಪ್ರಣಯಿನಿಯಾದಳು. ಆದರೆ ರಾಜನ ಪ್ರಣಯವು ಪ್ರಕಾಶವಾಗದೆ ಅಂತರಂಗದಲ್ಲಿಯೇ ಇತ್ತು. ರಾಜನು ತನ್ನಲ್ಲಿ ಆಸಕ್ತನಾಗಿದ್ದಾನೆಂದು ಮಾಳವಿಕೆಯು ತಿಳಿದಿರಲಿಲ್ಲ. ಕೆಲವು ದಿನಗಳ ಮೇಲೆ ಗಾಂಧರ್ವವಿಧಾನವಾಗಿ ಇವಳಿಗೂ ರಾಜನಿಗೂ ವಿವಾಹವಾಯಿತು. ಮಾಳವಿಕೆಯು ಬಹಳಸುಂದರಿಯಾಗಿಯೂ, ನೃತ್ಯಗೀತೆಗಳಲ್ಲಿ ಕುಶಲಳಾಗಿಯೂ ಇದ್ದದ್ದರಿಂದ ಕವಿಗಳಿಗೆ ವರ್ಣನೀಯಳಾಗಿಯೂ, ಆ ಕಾಲದ ರಮಣಿಯರಿಗೆ ಆದರ್ಶಸ್ವರೂಪಳಾಗಿಯೂ ಇದ್ದಳು. ಮಾಳವಿಕೆಯು ತನ್ನ ಇಷ್ಟಾರ್ಥವನ್ನು ಸಂಪಾದಿಸಿಕೊಳ್ಳುವದಕ್ಕೆ ಬಹು ಕಷ್ಟ ಸಹನವನ್ನು ಮಾಡಿದಳು. ಅದು ಯಾವದಂದರೆ—ಸಮುದ್ರಮಧ್ಯದಲ್ಲಿ ನಿರ್ಮಿತವಾದ ಗೃಹದಲ್ಲಿ ನಿರ್ಬಂಧವಾಗಿ ವಾಸಮಾಡುತಲಿದ್ದಳು. ಈ ಸಂಕಟದಲ್ಲಿಯೂ ರಾಜನ ವಿಷಯದಲ್ಲಿನ ಇವಳ ಪ್ರಣಯವು ಅವಿಚಲಿತವಾಗಿತ್ತು. ಆಧುನಿಕ ಕವಿಗಳು ಹೃದಯಗಭೀರಭಾವಗಳನ್ನು ಯಥಾವತ್ತಾಗಿ ವರ್ಣಿಸುವದಕ್ಕೆ ಶಕ್ತರಾದವರಲ್ಲವಾದಕಾರಣ ಅವರು ಮಾಳವಿಕಾಸಮರಾದ ಸ್ತ್ರೀಯರ ವರ್ಣನೆಯಲ್ಲಿ ಮಾತ್ರ ಸಮರ್ಥರಾಗಿರುತ್ತಾರೆ. ಈ ಮಾಳವಿಕೆಯನ್ನು ಉತ್ಕೃಷ್ಟ ಚರಿತ್ರೆಯನುಳ್ಳ ನಾರೀ ಸಮೂಹದಲ್ಲಿ ಪರಿಗಣಿಸುವದನುಚಿತವಾದರೂ, ಅವಳು ಆ ಕಾಲದ ಕೆಲವು ರಮಣಿಯರ ಕುಲಕ್ಕೆ ಉದಾಹರಣೆ ಸ್ವರೂಪಳಾಗಿರುತ್ತಾಳೆಂದು ಪರಿಗಣಿಸಬಹುದು. ಪುರಾಣಕರ್ತೃಗಳಿಗೆ ಲೋಪಾಮುದ್ರೆಯಂತೆಯೂ, ಋಷಿಗಳಿಗೆ ಸೀತೆ ಮತ್ತು ಸಾವಿತ್ರಿಯಂತೆಯೂ, ಆಧುನಿಕ ಕವಿಗಳಿಗೆ ಮಾಳವಿಕೆಯು ಆದರಣೀಯಳಾಗಿದ್ದಳು. ಯಾವರೀತಿಯಾಗಿ ಕುಟುಂಬಿನೀಗಳಲ್ಲಿ

ಲೋಪಾಮುದ್ರೆಯು, ಬಾಲಕಿಯರಲ್ಲಿ ಶಿಲೆಯು, ಯುವತಿಯರಲ್ಲಿ ಸಾವಿತ್ರಿಯು, ಸರ್ವಾವಸ್ಥೆಯ ನಾರಿಯರಲ್ಲಿ ಸೀತೆಯು, ಉದಾಹರಣ ಸ್ವರೂಪರೋ, ಅದೇರೀತಿಯಾಗಿ ಮಾಳವಿಕೆಯೂ ಒಂದವಸ್ಥೆಯ ನಾರಿಯರಗಣಕ್ಕೆ ಉದಾಹರಣ ಸ್ವರೂಪಳಾಗಿದ್ದದ್ದರಿಂದ ಇಲ್ಲಿ ಅವಳ ಚರಿತ್ರೆಯನ್ನು ಸಂಕ್ಷೇಪವಾಗಿ ಹೇಳಲಾಯಿತು.

ಭವಭೂತಿ ಪ್ರಣೀತ ಮಾಲತೀ ಮಾಧವದಲ್ಲಿ ವರ್ಣಿತಳಾಗಿರುವ ಮಾಲತಿಯು ಭವಭೂತಿಯ ಕಲ್ಪನಾಶಕ್ತಿಗೆ ಪ್ರಥಮಾಂಕುರವಾಗಿರುತ್ತಾಳೆ. ಭವಭೂತಿಯು ಅವಳ ಚರಿತ್ರೆಯನ್ನು ಮತ್ತು ಪ್ರಣಯವನ್ನೂ ವರ್ಣನೆಮಾಡುವದರಲ್ಲಿ ತನ್ನ ಅಸಾಧಾರಣವಾದ ಕವಿತ್ವ ಶಕ್ತಿಯನ್ನು ತೋರಿಸಿರುತ್ತಾನೆ. ಆದರೆ ಅವಳ ಚರಿತ್ರೆಯಲ್ಲಿ ಸೀತಾ, ಸಾವಿತ್ರಿ, ಶಕುಂತಳಾ, ಇವರೊಡನೆ ಏಕತ್ರಸ್ಥಾನವನ್ನು ಹೊಂದುವಷ್ಟು ಉತ್ಕೃಷ್ಟ ಗುಣಾವಳಿಗಳೇನೂ ಕಾಣಬರುವದಿಲ್ಲ. ಮಾಳವಿಕಾಸದೃಶ ನಾರಿಯರಲ್ಲಿ ಇವಳೊಬ್ಬಳಾಗಿರುತ್ತಾಳೆ. ಮಾಲತೀ ಮಾಧವ ನಾಟಕದಲ್ಲಿ ಅದ್ಭುತಸ್ವಭಾವವನುಳ್ಳ ಮತ್ತೊಬ್ಬಳು ಹೆಂಗಸು ವರ್ಣಿತಳಾಗಿರುತ್ತಾಳೆ. ಇವಳ ಹೆಸರು ಕಾಮಂದಕಿ. ಇವಳ ಸಂಸಾರ ಕಾರ್ಯ ಚಾತುರ್ಯ, ಬುದ್ಧಿ ಕೌಶಲ್ಯ, ಶಾಸ್ತ್ರಜ್ಞಾನ, ಕರ್ತವ್ಯಕಾರ್ಯದಲ್ಲಿ ದೃಢಪ್ರತಿಜ್ಞತೆ, ಸುಹೃದ್ವರ್ಗಾನುರಾಗ, ಮಾಲತಿ ಮತ್ತು ಮಾಧವ ಇವರಮೇಲಿನ ಸ್ನೇಹ, ಇವುಗಳೆಲ್ಲವೂ ಅದ್ಭುತವಾದ ಗುಣಗಳಾಗಿರುತ್ತವೆ. ಇವಳ ಸಾಹಸವು ಪುರುಷನ ಸಾಹಸಕ್ಕೆ ಸಮಾನವಾದದ್ದು, ಇವಳ ಮನೋ ಬಲವು ಪುರುಷನ ಮನೋ ಬಲಕ್ಕೆ ಸಮಾನವಾದದ್ದು; ಇವಳು ಇಬ್ಬರು ಮಂತ್ರಿಗಳೊಡನೆ ಸಹಾಧ್ಯಾಯಿನಿಯಾಗಿದ್ದಳು. ವಿದ್ಯಾ ಬುದ್ಧಿಯಲ್ಲಿಯೂ ಅವರಿಗೆ ಸಮಾನವಾಗಿದ್ದಳು. ಆ ಇಬ್ಬರು ಮಂತ್ರಿಗಳೂ ಅವಳನ್ನು ಬಹಳ ಸನ್ಮಾನಮಾಡುತ್ತಾ ಅನೇಕ ಸಮಯದಲ್ಲಿ ಅವಳೊಡನೆ ಅನೇಕಾಂಶಗಳನ್ನು ಕುರಿತು ಆಲೋಚಿಸುತಲಿದ್ದರು. ಇವಳಾದ

ರೋ, ಸಂಸಾರದಲ್ಲಿ ವಿರಾಗಿಣಿಯಾಗಿ ಬೌದ್ಧಮತಾವಲಂಬಿನಿಯಾಗಿದ್ದಳು. ಮಾಳವಿಕಾಗ್ನಿಮಿತ್ರದಲ್ಲಿ ಉದಾಹೃತಳಾದ ಕೌಶಕೀಎಂಬ ಪಂಡಿತಳೂ, ಮಾಲತೀ ಮಾಧವದಲ್ಲಿನ ಕಾಮಂದಕಿಯೂ, ಕಾಳಿದಾಸ ಮತ್ತು ಭವಭೂತಿ ಇವರ ಕವಿತ್ವ ಶಕ್ತಿಗೆ ಆಧಾರಭೂತರಾಗಿರುತ್ತಾರೆ. ಪಂಡಿತ ಕೌಶಿಕಿಯು ಸಂಸಾರ ವ್ಯಾಪಾರವನ್ನು ಬಿಟ್ಟು ಕಾಷಾಯಾಂಬರ ಧಾರಣೆಯನ್ನು ಮಾಡಿದ್ದಳು. ಅವಳು ಒಬ್ಬ ಮಂತ್ರಿಯ ಸಹೋದರಿಯಾಗಿ ಅವಳ ಮಾನಸಿಕ ಬಲದಲ್ಲಿಯೂ, ವಿದ್ಯಾ ಬುದ್ಧಿಗಳಲ್ಲಿಯೂ ಪುರುಷರಿಗೆ ಸಮಾನಳಾಗಿದ್ದಳು. ರಾಜನೂ ಮತ್ತು ರಾಜಮಹಿಷಿಯಾದ ಧಾರಿಣಿಯೂ ಬಹಳ ವಿಶ್ವಾಸದಿಂದ ಅವಳ ಪರಾಮರಿಕೆಯನ್ನು ತೆಗದುಕೊಳ್ಳುತ್ತಿದ್ದರು. ಈ ಪಂಡಿತ ಕೌಶಿಕಿಯು, ನಾಟ್ಯಾಚಾರ್ಯರಾದ ಹರದತ್ತನಿಗೂ ಗಣದಾಸನಿಗೂ ನಡದ ವಿವಾದದಲ್ಲಿ ಮಧ್ಯಸ್ಥಗಾರಳಾಗಿದ್ದಳು. ತನ್ನ ಕಷ್ಟವನ್ನು ಅನುಭವಿಸುತಲಿದ್ದಾಗ್ಯೆ ತನ್ನ ಯಥಾರ್ಥ ಸ್ಥಿತಿಯನ್ನು ಒಬ್ಬರಿಗೂ ತೋರ್ಪಡಿಸಲಿಲ್ಲ. ಅನಂತರ ಕೆಲ ಕಾಲದಮೇಲೆ ತನ್ನ ಅಣ್ಣನು ಶತ್ರುಗಳನ್ನು ಪರಾಭವಮಾಡಿ, ತಾನೂ ರಾಜನ ವಿಶ್ವಾಸಪಾತ್ರಳಾದ ನಂತರ ತನ್ನ ಯಥಾರ್ಥ ಸ್ಥಿತಿಯನ್ನು ತಿಳಿಸಿದಳು. ಈ ಪಂಡಿತ ಕೌಶಿಕಿಯು ಹಿಂದೂಮತದವಳಾಗಿಯೂ, ಕಾಮಂದಕಿಯು ಬೌದ್ಧಮತದವಳಾಗಿಯೂ ಇದ್ದರು. ಪಂಡಿತ ಕೌಶಿಕಿಯ ಚರಿತ್ರೆಯೂ ಪರಿಶುದ ವಾದದ್ದು. ಕಾಮಂದಕಿಯು ಕಾರ್ಯಕುಶಲಳಾಗಿದ್ದಳು. ಅವಳು ತಾನು ಮಾಡತಕ್ಕ ಕೆಲಸದಲ್ಲಿ ಅಣುಮಾತ್ರವೂ ಆಸ್ಥಾಶೂನ್ಯಳಾಗುತ್ತಿರಲಿಲ್ಲವು. ಪ್ರಾಣಾಪತ್ತಿನಲ್ಲಿಯೂ ಕಾರ್ಯಸಿದ್ಧಿಯಲ್ಲಿ ಯತ್ನಪಡುತಲಿದ್ದಳು. ಪಂಡಿತ ಕೌಶಿಕಿಯು ಕೇವಲ ದೇವರ ಮೇಲೆ ಭಾರಬಿಟ್ಟು ತಾನು ತಟಸ್ಥಳಾಗಿರುತ್ತಿದ್ದಳು. ಕಾಮಂದಿಕಿಯು ಸಾಹಸಸಹಕಾರಿಯಾಗಿ ಕಾಲಿಕಾ ಪಾಲಿಕ ಅಘೋರಘಂಟೆಯೊಡನೆ ವಿವಾದ ಮಾಡಿ ಅವಳ ದುರಾಲೋಚನೆಯನ್ನು ನಿಷ್ಪಲವನ್ನಾಗಿ ಮಾಡಿಬಿಟ್ಟಳು. ಕೌಶಿಕಿಯು ಕಳ್ಳನ ಶೆರೆಯಿಂದ ತಪ್ಪಿ

ಸಿಕ್ಕೊಂಡು ಪಲಾಯನಮಾಡಿ ರಾಜಮಂದಿರವನ್ನು ಸೇರಿ ತನ್ನ ಪರಿಣಾಮವನ್ನು ನೋಡಿಕೊಂಡಳೇ ಹೊರತು, ತನ್ನೊಂದಿಗೆ ಇದ್ದ ರಾಜಕನ್ನಿಕೆಯರನ್ನುದ್ಧರಿಸುವ ಪ್ರಯತ್ನಕೂಡ ಮಾಡಲಿಲ್ಲ. ಆದರೂ, ಇವರಿಬ್ಬರೂ ಒಂದೇ ಶ್ರೇಣಿಯ ಸ್ತ್ರೀಯರೆಂದು ಹೇಳಬಹುದು. ಈ ಶ್ರೇಣಿಗೆ ಅರ್ಹರಾದ ಸ್ತ್ರೀಯರು ಈಗ ಯಾರೂ ಇಲ್ಲ. ಇವರು ಬೌದ್ಧಮತದಲ್ಲಿದ್ದು ಈ ಗುಣಗಳನ್ನು ಹೊಂದಿದರು. ಹಿಂದೂ ಮತಗಳಲ್ಲಿ ಪ್ರಕೃತ ಈದೃಶ ಸಂಸಾರವಿರಾಗಿಣಿಯಾದ ಒಬ್ಬಿಬ್ಬರು ರಮಣಿಯರನ್ನು ನೋಡಬಹುದಾದರೂ, ಈ ಕಾಲದಲ್ಲಿ ಅಂತಾ ಮತವೂ ಇಲ್ಲ, ಪಂಡಿತಕೌಶಿಕಿಯೂ ಇಲ್ಲ.

ಶೈಬ್ಯಾ—ಇವಳು ಹರಿಶ್ಚಂದ್ರನ ಪಟ್ಟಮಹಿಷಿಯು. ಇವಳು ಅತ್ಯಂತ ಪತಿಪ್ರಾಣಳಾಗಿ ರಮಣೀಕುಲಕ್ಕೆ ತಿಲಕಪ್ರಾಯಳಾಗಿದ್ದಳು. ಹರಿಶ್ಚಂದ್ರನು ಗುರುದಕ್ಷಿಣಾ ನಿಮಿತ್ತವಾಗಿ ವಿಶ್ವಾಮಿತ್ರನೊಂದಿಗೆ ಪ್ರತಿಜ್ಞೆಯನ್ನು ಮಾಡಿದ್ದಕ್ಕೋಸ್ಕರ, ತನ್ನ ಸರ್ವಸ್ವವೂ ಗುರುದಕ್ಷಿಣಾಮೌಲ್ಯಕ್ಕೆ ಸಾಕಾಗದೆ, ನಂತರ ತನ್ನ ದೇಹವನ್ನೂಕೂಡ ವಿಕ್ರಯಿಸುವದಕ್ಕೆ ಸಿದ್ಧನಾದನು. ಆಗ ಶೈಬ್ಯೆಯು ಪತಿಗೆ ಸಹಾಯಕಳಾಗಿ, ಹರಿಶ್ಚಂದ್ರನು ಎಷ್ಟು ನಿರೋಧಿಸಿದಾಗ್ಯೂ ಕೇಳದೆ, ಆರ್ಯಪುತ್ರ! ಸ್ವಾರ್ಥಪರನಾಗಬೇಡವೆಂದು ಹೇಳಿ, ಪತಿಯ ಮುಖವನ್ನು ನೋಡುತ್ತಿರಲಾಗಿ, ಹರಿಶಂದ್ರನ ಕಣ್ಣುಗಳಲ್ಲಿ ಅನರ್ಗಳವಾಗಿ ನೀರು ಸುರಿಯಲಾರಂಭಿಸಿತು. ಶೈಬ್ಯೆಯು ಪತಿಯನ್ನು ಕುರಿತು, ಹೇ ಆರ್ಯ! ನನ್ನನ್ನು ವಿಕ್ರಯಿಸಿಬಿಡು, ಪರ ಪುರುಷನ ಉಪಾಸನೆ ಮತ್ತು ಉಚ್ಛಿಷ್ಟ ಭೋಜನ ಇವೆರಡು ಹೊರತು, ಮಿಕ್ಕ ಸಕಲ ಕೆಲಸಗಳನ್ನೂ ಮಾಡುವೆನೆಂದು ಹೇಳಿದಳು. ಹರಿಶ್ಚಂದ್ರನು ಅದೇರೀತಿಯಾಗಿ ಹೆಂಡತಿಯನ್ನು ವಿಕ್ರಯಿಸಲು, ಅವಳನ್ನು ಒಬ್ಬ ಬ್ರಾಹ್ಮಣನು ಕೊಂಡುಕೊಂಡನು. ಶೈಬ್ಯೆಯು ಅದಕ್ಕೋಸ್ಕರ ಸ್ವಲ್ಪವೂ ಭಯಪಡದೆ ಮತ್ತು ದುಃಖಿಸದೆ ಹರ್ಷೋತ್ಫುಲ್ಲಲೋಚನಳಾಗಿ, ನನ್ನ ಸೌಭಾಗ್ಯಕ್ಕೆ ಕಡಮೆಯೇ ಇಲ್ಲವೆಂದು ಮನಸಾ ಯೋಚಿಸಿಕೊಂಡು, ಈ

ನನ್ನ ದೇಹವು ಈಗ ಸಾರ್ಥಕವಾಯಿತು; ನನ್ನ ಪತಿಯ ಪ್ರತಿಜ್ಞೆಯಲ್ಲಿ ಅರ್ಧಭಾಗ ಕಡನೆ ಮಾಡಿದೆನು; ನನ್ನನ್ನು ವಿಕ್ರಯಿಸಿದ್ದರಿಂದ ಅವನು ಮಾಡಿದ ಸಾಲದಲ್ಲಿ ಅರ್ಧಭಾಗ ತೀರಿದಹಾಗಾಯಿತೆಂದು ಬಹಳ ಹರ್ಷಿತಳಾದಳು. ಪತಿಯು ತನ್ನನ್ನು ವಿಕ್ರಯಿಸಿದ್ದರಿಂದ ತಾನು ಚಿರಕಾಲ ದಾಸೀವೃತ್ತಿಯಲ್ಲಿ ಇರಬೇಕಾಗುತ್ತೆಂಬ ವ್ಯಸನವೇ ಅವಳ ಸ್ಮರಣೆಗೆ ಬರಲಿಲ್ಲ. ಬ್ರಹ್ಮನು ಅವಳ ಅದೃಷ್ಟದಲ್ಲಿ ಇಷ್ಟಮಾತ್ರವೇ ಬರದಿರಲಿಲ್ಲ. ಕೆಲವು ದಿವಸಗಳಲ್ಲಿಯೇ ಅವಳಗಿದ್ದ ಒಬ್ಬ ಕುಮಾರನು ಸರ್ಪದಿಂದ ಕಚ್ಚಲ್ಪಟ್ಟು ಮೃತನಾದನು. ಈ ಪುತ್ರಶೋಕದಿಂದ ದುಃಖಪರವಶಳಾಗಿ ದೇಹತ್ಯಾಗವನ್ನು ಮಾಡಲು ಪ್ರಯತ್ನಪಟ್ಟು ಉಚ್ಚಸ್ವರದಿಂದ ರೋದನ ಮಾಡುತ್ತಿದ್ದದ್ದನ್ನು ಕೇಳಿದರೆ ಕಲ್ಲಾದರೂ ಕರಗಿಹೋಗುವದು. ಈ ಮೊದಲಾದ ದುರವಸ್ಥೆಗಳನ್ನೆಲ್ಲಾ ಮರತಮೇಲೆ ಬ್ರಹ್ಮನು ಪ್ರಸನ್ನನಾಗಿ, ಪುನಃ ಪತಿಯೊಡನೆ ಶೇರುವಹಾಗೆ ಮಾಡಿದನು.

ಪಾರ್ವತಿ—ಇವಳು ಮೊದಲಣ ತನ್ನ ಪ್ರಥಮಾವತಾರದಲ್ಲಿ ಪತಿನಿಂದಾಶ್ರವಣದಿಂದ ವ್ಯಾಕುಲ ಹೃದಯಳಾಗಿ ದೇಹವನ್ನು ಪರಿತ್ಯಗ ಮಾಡಿದ್ದಳು. ಈ ಜನ್ಮದಲ್ಲಿಯೂ ಮಹಾದೇವನಲ್ಲಿ ಅತ್ಯಂತ ಅನುರಾಗಿಣಿಯಾಗಿದ್ದಳು. ಮಹಾದೇವನು ಪ್ರಾಕೃತನಲ್ಲ. ದೇವನು. ಅವನಿಗೆ ತೃಪ್ತಿಯನ್ನುಂಟುಮಾಡಬೇಕಾದರೆ ಬಹಳ ತಪಸ್ಸು ಮತ್ತು ಪೂಜೆಯನ್ನು ಮಾಡಬೇಕು. ಪಾರ್ವತಿಯು ಪ್ರಥಮತಃ ಮಹಾದೇವನ ಪೂಜೆಯನ್ನು ಮಾಡಲಾರಂಭಿಸಿ, ಪ್ರತಿದಿವಸವೂ ತಾನೇ ಸ್ವಹಸ್ತದಿಂದ ಪುಷ್ಪಮಾಲಿಕೆಯನ್ನು ಕಟ್ಟಿ ಸಮರ್ಪಿಸುತ್ತಲೂ, ನಾನಾಪ್ರಕಾರವಾಗಿ ಉಪಚರಿಸುತ್ತಲೂ ಇದ್ದಳು. ಪಾರ್ವತಿ ವಿದ್ಯಾವಂತಳಾಗಿಯೂ, ರಾಜಕನ್ನಿಕೆಯಾಗಿಯೂ, ತಂದೆಯ ಸಂಪೂರ್ಣ ವಿಶ್ವಾಸಕ್ಕೆ ಪಾತ್ರಳಾಗಿಯೂ ಇದ್ದಳು. ಪಾರ್ವತಿಯು ಚಿಕ್ಕವಯಸ್ಕಳಾಗಿದ್ದರೂ ಅವಳಿಗೆ ಪತಿಯಲ್ಲಿದ್ದ ಪ್ರಣಯವು ಪ್ರಗಾಢವಾಗಿತ್ತು. ಅವಳ ಪ್ರಣಯವು ತಾರಾಮೈತ್ರಿಕ ಅಥವಾ ಚಕ್ಷೂರಾಗವಾದ್ದಲ್ಲವು.

ಪ್ರಣಯಕ್ಕೆ ಅವಳ ಹೃದಯವೇ ಆವಾಸಸ್ಥಾನವಾಗಿತ್ತು. ಒಬ್ಬ ಪ್ರಸಿದ್ಧನಾದ ಸಮಾಲೋಚಕನು, ಕಾಳಿದಾಸಾದಿ ಕವಿಗಳು ಪ್ರಣಯವರ್ಣನೆಯನ್ನು ಮಾಡುವದರಲ್ಲಿ ಸಮರ್ಥರಾದರೂ, ಅವರು ಮಾಡಿರುವ ಪ್ರಣಯವರ್ಣನೆಯು ವಾಲ್ಮೀಕಿ ವರ್ಣನೆಯೊಡನೆ ಸಮಾನವಾದದ್ದಲ್ಲವೆಂದು ಹೇಳುತ್ತಾನೆ. ಕಾಳಿದಾಸನ ಪ್ರಣಯವರ್ಣನೆಯಲ್ಲಿ ಐಹಿಕತೆಯೇ ಅಧಿಕವಾಗಿರುತ್ತದೆ. ಆದರೆ ಪಾರ್ವತಿಯ ಪ್ರಣಯವರ್ಣನೆಯನ್ನು ಮಾಡಿರುವ ಕಾಳಿದಾಸನು ಅವಳ ವಿಶುದ್ಧ ಪ್ರಣಯವನ್ನು ವರ್ಣನೆಮಾಡಲಸಮರ್ಥನಾಗಿರುತ್ತಾನೆಂದು ಹೇಳುವದು ಅಸಂಗತವಾದದ್ದು. ಪಾರ್ವತಿಯ ಪ್ರಣಯವು ಮಹಾದೇವನಲ್ಲಿ–ಮಹಾದೇವನಾದರೋ, ಯೋಗೀಶ್ವರನು. ಅವನು ಇತರ ಭಕ್ತರ ಪೂಜೆಯನ್ನು ಯಾವರೀತಿ ಅಂಗೀಕರಿಸುತಲಿದ್ದನೋ ಪಾರ್ವತಿಯ ಪೂಜೆಯನ್ನೂ ಅದೇರೀತಿಯಾಗಿ ಸಾಮಾನ್ಯವಾಗಿ ಅಂಗೀಕರಿಸುತಲಿದ್ದನು. ಮಹಾದೇವನ ಮನಸ್ಸು ಚಪಲವಾದದ್ದಲ್ಲ. ಆದ್ದರಿಂದಲೇ, ಅವನ ಚಿತ್ತಚಾಂಚಲ್ಯವನ್ನುಂಟುಮಾಡುವದಕ್ಕೋಸ್ಕರ ಕಾಮನೇ ಸಾಕ್ಷಾತ್ತಾಗಿ ಬಂದನು. ಇಷ್ಟಾದರೂ, ಅವನ ಮನಸ್ಸು ಒಂದು ಕ್ಷಣಕಾಲಮಾತ್ರ ಚಂಚಲವಾಗಿತ್ತು. ಆಗ ಮಹಾದೇವನು ಆ ಚಿತ್ತಚಾಂಚಲ್ಯವನ್ನು ನಿಗ್ರಹಿಸಿ ಕೋಪಕಟಾಕ್ಷದಿಂದ ಕಾಮನನ್ನು ಭಸ್ಮವನ್ನಾಗಿ ಮಾಡಿಬಿಟ್ಟನು. ಈರೀತಿ ಚಿತ್ತಚಾಂಚಲ್ಯವುಂಟಾಗುವ ಸ್ತ್ರೀಯರ ಸಾಮೀಪ್ಯವನ್ನೇ ಬಿಟ್ಟುಬಿಡಬೇಕೆಂಬ ಉದ್ದೇಶ್ಯದಿಂದ ಆ ಸ್ಥಳವನ್ನೇ ಬಿಟ್ಟು ಬೇರೆಸ್ಥಳಕ್ಕೆ ಹೊರಟುಹೋದನು. ನಂತರ ಪಾರ್ವತಿಯು ಭಗ್ನಮನೋರಥಳಾಗಿ ತನ್ನ ತಂದೆಯನ್ನು ತಪಸ್ಸು ಸಮಾಧಿಯನ್ನು ಮಾಡುವದಕ್ಕೆ ಅಪ್ಪಣೆ ಆಗಬೇಕೆಂದು ಪ್ರಾರ್ಥಿಸಿ ಅವನ ಅಪ್ಪಣೆ ಪಡದು ಘೋರತರ ತಪಸ್ಸಮಾಧಿಯನ್ನು ಮಾಡಲಾರಂಭಿಸಿದಳು. ಅತಿ ಕಠಿಣ ಶರೀರಿಗಳಾದ ಋಷಿಗಳೂ ಕೂಡ ಆಜನ್ಮಪರಿಶ್ರಮಮಾಡಿ ನಿರ್ವಹಿಸುವದಕ್ಕಸಾಧ್ಯವಾದ ನಿಯಮಗಳನ್ನೂ ಕೂಡ ಆಚರಿಸಿದಳು. ಒಂದುದಿನ

ಮಹಾದೇವನು ಇವಳನ್ನು ಪರೀಕ್ಷಿಸಬೇಕೆಂದು ಒಬ್ಬ ಬ್ರಾಹ್ಮಣ ವೇಷದಿಂದ ಬಂದು, ಪಾರ್ವತಿಯೊಡನೆ ಮಾತನಾಡುತಲಿರುವಾಗ್ಯೆ, ಮಹಾದೇವನನ್ನು ಅತ್ಯಂತವಾಗಿ ನಿಂದಿಸಲಾರಂಭಿಸಿದನು. ಪೂರ್ವ ದಲ್ಲಿ ಸ್ವಲ್ಪವಾದರೂ ಪತಿನಿಂದೆಯನ್ನು ಕೇಳಿ ಸಹಿಸಲಾರದೆ ದೇಹ ಪರಿತ್ಯಾಗವನ್ನು ಮಾಡಿದ ಪಾರ್ವತಿಯು ಈ ಅಸಹ್ಯತರವಾದ ವಾರ್ತೆ ಯನ್ನು ಕೇಳಲು ಇಷ್ಟವಿಲ್ಲದವಳಾಗಿ ಆಸ್ಥಳವನ್ನೇ ಪರಿತ್ಯಜಿಸಲುಪ ಕ್ರಮಿಸಿದಳು. ಆಗ ಮಹಾದೇವನು ಪ್ರಸನ್ನನಾಗಿ ತನ್ನ ನಿಜದೇಹ ಧಾರಣೆಯನ್ನುಮಾಡಿ ಅವಳೆದುರಾಗಿ ನಿಂತುಕೊಂಡನು. ಆ ಮ ಹಾದೇವನ ನಿಜಸ್ವರೂಪವನ್ನು ನೋಡಿ, ಪಾರ್ವತಿಗೆ ಕೋಪಪ್ರಣ ಯ ವಿಸ್ಮಯಾದಿ ನಾನಾಮನೋಭಾವವು ಒಂದೇತಡವೆ ಸಮುಲ್ಲಾಸ ವಾಗಿ ಅವಳಿಗುಂಟಾದ ಚಿತ್ತವಿಕಾರವನ್ನು ವರ್ಣಿಸಲು ಕಾಳಿದಾಸನ ನ್ನು ವಿನಾ ಮತ್ತ್ಯಾರು ಸಮರ್ಥರಾದಾರು? ಪಾರ್ವತಿಯು ಸಾಮಾಜಿ ಕಾವಸ್ಥೆಯನ್ನು ತಿಳಿದಿದ್ದರೂ, ತನ್ನ ಪ್ರಣಯವನ್ನು ಪ್ರಕಾಶಮಾ ಡುವದರಲ್ಲಿ ದೋಷಗಣನೆಯನ್ನು ಮಾಡಿರಲಿಲ್ಲ. ಪಾರ್ವತಿಯು ವಿ ದ್ಯಾವಂತಳಾಗಿಯೂ, ಗೃಹಕಾರ್ಯದಲ್ಲಿ ಚತುರಳಾಗಿಯೂ, ದೇವ ಪೂಜಾಧುರಂಧರಳಾಗಿಯೂ ಇದ್ದಳು. ಅತಿಥಿ ಸೇವೆಯಲ್ಲಿ ಉದಾ ಸೀನವನ್ನು ತೋರಿಸುವವಳಲ್ಲ. ಅವಳ ಪ್ರಣಯವು ಅವಿಚಲಿತವಾ ದದ್ದು. ದೃಢಪ್ರತಿಜ್ಞೆಯುಳ್ಳವಳು. ಇವಳಿಗೆ ಮದುವೆ ಆಗುವದ ಕ್ಕೆ ಮೊದಲು, ಮೇನಕೆಯು ಇವಳಲ್ಲಿಗೆ ಬಂದು, ನಿನ್ನ ತಂದೆಯು ಸಕಲ ದೇವತೆಯರ ಆವಾಸಸ್ಥಾನಕ್ಕೆ ಅರಸನಾಗಿರುತ್ತಾನೆ, ನೀನು ದೇವತೆಯರಲ್ಲಿ ಒಬ್ಬನನ್ನ ಯಾತಕ್ಕೆ ವರಿಸಬಾರದೆಂದು ಕೇಳಲು, ಅದಕ್ಕೆ ಪಾರ್ವತಿಯು ಪ್ರತ್ಯುತ್ತರವನ್ನ ಕೊಡದೆ ಮೌನವನ್ನೇ ಉ ತ್ತರವಾಗಿ ಕೊಟ್ಟಳು. ಒಬ್ಬಾನೊಬ್ಬ ಬ್ರಹ್ಮಚಾರಿಯು ಪಾರ್ವತಿ ಯನ್ನು ಕುರಿತು, ನಿನಗದೇನು ಮಹಾದೇವನಲ್ಲಿಯೇ ವಿಶ್ವಾಸವೆಂದು ಕೇಳಲು; ದೀರ್ಘನಿಶ್ವಾಸವನ್ನು ಬಿಟ್ಟು ಮೌನದಿಂದ ಇದ್ದಳು. ಮತ್ತು ತನ್ನ ತಂದೆಯು ವಿವಾಹ ಪ್ರಸ್ತಾಪವನ್ನು ಮಾಡಿದಾಗ್ಯೆ, ವಿಲಾ

ಸಾರ್ಥವಾಗಿ ಕೈಲಿ ಹಿಡಿದುಕೊಂಡಿದ್ದ ಕಮಲವನ್ನು ನೋಡುವ ವ್ಯಾಜದಿಂದ ಮೌನವಾಗಿದ್ದುಬಿಟ್ಟಳು. ಕುತ್ಸಿತಜನರ ಸಹವಾಸ ವನ್ನು ಮಾಡುತ್ತಿರಲಿಲ್ಲ. ಪ್ರಾಣಿಮಾತ್ರದಲ್ಲಿ ಸರ್ವಸಮಾನವಾದ ದಯಾರಸವನುಳ್ಳವಳಾಗಿದ್ದಳು. ರಮಣೀ ಚರಿತ್ರೆಯನ್ನು ಉತ್ಕೃ ಷ್ಟವೆಂದು ಹೇಳುವದಕ್ಕೆ ಯಾವ್ಯಾವ ಗುಣಗಳು ಬೇಕೋ, ಅವುಗ ಳೆಲ್ಲಾ ಇವಳಲ್ಲಿ ನೆಲೆಯಾಗಿದ್ದವು. ಸ್ತ್ರೀಯರ ಕುಲಕ್ಕೆ ತಿಲಕಾಯ ಮಾನಳಾಗಿ ಅವರ ಜಾತಿಗೆ ಗರ್ವಹೇತು ಭೂತಳಾಗಿದ್ದಳು. ಅವ ಳು ತಪಸ್ಸುಮಾಡುತಲಿದ್ದ ಸ್ಥಳವು ಈಗಲೂ ಯಾತ್ರಾರ್ಹವಾದ ಪು ಣ್ಯತೀರ್ಥವಾಗಿರುತ್ತೆ. ಜರೆಯನ್ನು ಹೊಂದಿ ಕೇವಲ ವಯೋವೃ ದ್ಧರಾದ ಋಷಿಗಳೂ ಇವಳಲ್ಲಿ ಧರ್ಮಶ್ರವಣ ಮಾಡುತಲಿದ್ದರು. ಇವಳ ಚರಿತ್ರೆಯು ತಪಸ್ವಿಗಳಿಗೂ ಉದಾಹರಣಸ್ವರೂಪವಾಗಿದೆ. ಇವಳ ಚರಿತ್ರೆಯನ್ನು ತದೇಕಾಯತ್ತರಾಗಿ ಓದಿದರೆ ವಿಸ್ಮಯ ಮಿಶ್ರ ವಾದ ಅದ್ಭುತ ರಸೋದ್ಗತವಾಗುತ್ತದೆ. ಕಾಳಿದಾಸಪ್ರಣೀತ ಕು ಮಾರಸಂಭವದಲ್ಲಿ ಅವಳ ವಿವಾಹಪರ್ಯಂತವಾಗಿಯೂ ಅವಳ ಕಥೆಯು ನಮಗೆ ತಿಳಿಯುಬರುತ್ತದೆ. ಇದರಲ್ಲಿ ಐಹಿಕತೆಯ ಲೇಶವರ್ಣನೆ ಯಾದರೂ ಇಲ್ಲ. ಅವಳ ಹಾಗೆ ಧರ್ಮದಲ್ಲಿಯೂ ದೇವರಲ್ಲಿಯೂ ಭಕ್ತಿಯೂ, ಮನುಪ್ರಭೃತಿಗಳ ವಚನಗಳಲ್ಲಿ ಆಸ್ಥೆಯೂ, ಹೃದಯ ದಲ್ಲಿಸರಳತಾ, ತಂದೆಯಲ್ಲಿಯೂ ಸ್ವಾಮಿಯಲ್ಲಿಯೂ ಭಕ್ತಿ, ಸ್ನೇಹಿ ತರಲ್ಲಿ ವಿಶ್ವಾಸ, ಆಶ್ರಮದಲ್ಲಿ ಉತ್ಕೃಷ್ಟವಾದ ಸಡಮಳತೆ ಈ ಮೊ ದಲಾದ ಗುಣಗಳುಳ್ಳ ನಾರಿಯರು ಲೋಕದಲ್ಲಿ ಅತಿವಿರಳರು. ಪಾ ರ್ವತಿಯಲ್ಲಿ ಇವೆಲ್ಲವೂ ನೆಲೆಗೊಂಡಿದ್ದವು. ನಾರಿಯರ ಚರಿತ್ರೆಯ ವಿ ಷಯದಲ್ಲಿ ಕವಿಗಳು ಎಷ್ಟು ಉತ್ಕೃಷ್ಟವಾಗಿ ವರ್ಣಿಸಿದ್ದರೂ, ಪಾ ರ್ವತಿಯ ಚರಿತ್ರೆಯಲ್ಲಿ ಅದು ಅತ್ಯುಕ್ತಿ ಎನಿಸಿಕೊಳ್ಳುವದಿಲ್ಲ.

ವಂಗ ದರ್ಶನಕಾರರು ವಾಲ್ಮೀಕಿ ರಾಮಾಯಣದ ಉಪಾಖ್ಯಾನ ವನ್ನು ಅವಲಂಬಿಸಿ ಪೂರ್ವ ಕವಿಗಳಿಂದ ರಚಿತವಾದ ಕಾವ್ಯ ಮತ್ತು ನಾಟಕದಲ್ಲಿ ಸೀತಾರಾಮ ಚರಿತ್ರೆಯನ್ನು ಉತ್ತಮರೀತಿಯಾಗಿ ವರ್ಣ

ಸಿರುವದಿಲ್ಲವೆಂತಲೂ, ಆ ವರ್ಣನೆಯೂ ಕ್ರಮಕ್ರಮವಾಗಿ ಮಾಂದ್ಯ ಹೊಂದುತ್ತ ಬಂದಿದೆಯೆಂತಲೂ ಹೇಳಿರುತ್ತಾರೆ. ಆದರೆ ಕಾಳಿದಾಸಪ್ರಣೀತ ರಾಮ ಮತ್ತು ಸೀತೆಯ ಚರಿತ್ರೆಗಳು ವಾಲ್ಮೀಕಿ ಪ್ರಣೀತ ರಾಮಾಯಣಕ್ಕಿಂತಲೂ ಉತ್ಕೃಷ್ಟವಾಗಿಲ್ಲದಿದ್ದರೂ ತದಪೇಕ್ಷೆಯಾ ನ್ಯೂನತೆಯನ್ನು ಹೊಂದಿರುವದಿಲ್ಲ. ವಾಲ್ಮೀಕಿಯ ಹಾಗೆಯೇ ಕಾಳಿದಾಸನೂ ಸೀತೆಯ ಶೈಶವಕಾಲದ ಚರಿತ್ರೆಯನ್ನು ವರ್ಣಿಸಿರುವದಿಲ್ಲ. ಮಹರ್ಷಿ ವಾಲ್ಮೀಕಿಗೆ ತಾನು ಸಮಾನನಲ್ಲವೆಂದು ಚನ್ನಾಗಿ ತಿಳಿದಿದ್ದನು. ಆದ್ದರಿಂದ, ಕಾಳಿದಾಸನು ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರಕಾಂಡ, ಮತ್ತು ಯುದ್ಧಕಾಂಡದ ಕಥೆಗಳನ್ನೆಲ್ಲಾ ಸಂಕ್ಷೇಪವಾಗಿ ಒಂದೇ ಸರ್ಗದಲ್ಲಿ ವರ್ಣಿಸಿರುತ್ತಾನೆ. ಈ ಸರ್ಗವು ನೀರಸವಾದಾಗ್ಯೂ ರಾಮಾಯಣದ ಐದು ಕಾಂಡಗಳ ಕಥಾಸಾರಾಂಶವನ್ನೂ ವಿದ್ಯುತ್ತ್ವರಿತಗತಿಯಿಂದ ವರ್ಣನೆ ಮಾಡಿರುವದೇ ಈ ಸರ್ಗಕ್ಕೆ ಅತ್ಯಂತ ಶೋಭಾವಹವಾಗಿರುತ್ತದೆ. ಕಾಳಿದಾಸನು ರಘುವಂಶದ ಹದಿನಾಲ್ಕನೇ ಸರ್ಗದಲ್ಲಿ ಸೀತೆಯ ಚರಿತ್ರೆಯನ್ನು ವರ್ಣಿಸಿರುತ್ತಾನೆ. ಶ್ರೀ ಈಶ್ವರ ಚಂದ್ರ ವಿದ್ಯಾಸಾಗರರು, ತಾವು ರಚಿಸಿರುವ ಸೀತಾ ವನವಾಸವೆಂಬ ಗ್ರಂಥದಲ್ಲಿ ಈ ಹದಿನಾಲ್ಕನೇ ಸರ್ಗದಿಂದಲೇ ಅನೇಕ ಭಾವಗಳನ್ನು ಉದ್ಧೃತಮಾಡಿ ಬರೆದಿರುತ್ತಾರೆ. ಸೀತಾದೇವಿಗೆ ಲಕ್ಷ್ಮಣನು ಘೋರಾಟವಿಯ ಮಧ್ಯದಲ್ಲಿ ಅತ್ಯಂತ ಭಯಂಕರವಾದ ರಾಮಚಂದ್ರನ ಆಪ್ಪಣೆಯನ್ನು ತಿಳಿಸಲು, ಸೀತೆಯ ಹೃದಯವು ವಿದಾರಣವಾಗಿ ಮೂರ್ಛಿತಳಾಗಿ ಬಿದ್ದಳು. ಸ್ವಲ್ಪ ಹೊತ್ತಿನಮೇಲೆ ಸಂಜ್ಞಾಲಾಭವನ್ನು ಹೊಂದಿ, ಸ್ಥಿರದುಃಖ ಭಾಗಿನಿಯಾದ ತನ್ನ ಅದೃಷ್ಟವನ್ನೇ ಪುನಃಪುನಃ ನಿಂದಿಸಿಕೊಂಡಳು. ಲಕ್ಷ್ಮಣನು ಸೀತೆಯ ಅಪ್ಪಣೆಯನ್ನು ಪಡೆದು ಅಯೋಧ್ಯೆಗೆ ಹೋಗುವದಕ್ಕೆ ಪೂರ್ವ ಅವಳಿಗೆ ಪ್ರದಕ್ಷಿಣ ಪ್ರಣಾಮವನ್ನು ಮಾಡಿ ಹಿಂದಿರಿಗಿ ಹೊರಡಲು ಅಪ್ಪಣೆಯನ್ನು ಕೇಳಿದನು. ಆಗ ಸೀತೆಯು ತನಗೆ ಪ್ರಣಾಮವನ್ನಾಚರಿಸಿದ ಲಕ್ಷ್ಮಣನ

ನ್ನು ಆಶೀರ್ವದಿಸಿ, ಎಲೈ ವತ್ಸ ಲಕ್ಷ್ಮಣ! ಈಗ ನಾನು ಅಂತಸ್ಸತ್ವೆಯಾಗಿಲ್ಲದಿದ್ದರೆ ನಿನ್ನೆದುರಿಗೆ ಈ ನಿಮಿಷದಲ್ಲೇ ಈ ಜಾಹ್ನವಿ ನದೀ ಪ್ರವಾಹದಲ್ಲಿ ಪ್ರವೇಶಮಾಡಿ ಪ್ರಾಣ ಪರಿತ್ಯಾಗವನ್ನು ಮಾಡುತಲಿದ್ದೆ. ನಾನು ಪ್ರಸವವಾದ ನಂತರ, ತೀಕ್ಷ್ಣ ಕಿರಣಗಳನುಳ್ಳ ಸೂರ್ಯನಗಭಿಮುಖವಾಗಿ ಕಣ್ಣುಗಳನ್ನು ತೆರದುಕೊಂಡು ತಪಸ್ಸು ಮಾಡುತ್ತಾ ಮುಂದಣ ಜನ್ಮಕ್ಕೂ ರಾಮನೇ ನನಗೆ ಪತಿಯಾಗಿ ಈ ವಿರಹ ಮಾತ್ರ ಆಗದಿರಲೆಂದು ದೇವರನ್ನು ಪ್ರಾರ್ಥಿಸುತಲಿರುತ್ತೇನೆ (1). ಶ್ರೀರಾಮನು ನನ್ನನ್ನು ಭಾರ್ಯಾತ್ವೇನ ಪರಿತ್ಯಾಗಮಾಡಿದ್ದರೂ ಸಾಮಾನ್ಯ ಪ್ರಜೆಯಲ್ಲಾಗಲಿ ನನ್ನನ್ನು ಪರಿಗಣಿಸಬೇಕು, ಅವರು ಸಸಾಗರ ಪೃಥ್ವೀಗೆ ಅಧಿಪತಿಗಳು, ಆದ್ದರಿಂದ ನಾನೆಲ್ಲಿದ್ದರೂ ಅವರ ಅಧಿಕಾರಕ್ಕೆ ಹೊರಗಾದವಳಲ್ಲವೆಂತಲೂ, ಶ್ರೀ ರಾಮಚಂದ್ರ ಮಹಾರಾಯರಿಗೆ ಹೇಳೆಂದು ಹೇಳಿ ಕಳುಹಿಸಿದಳು. ಮಹರ್ಷಿ ವಾಲ್ಮೀಕಿಯು ಸೀತೆಯನ್ನು ತಮ್ಮ ಆಶ್ರಮಕ್ಕೆ ಕರದುಕೊಂಡು ಹೋದನಂತರ ಸೀತೆಯು ಆಶ್ರಮದಲ್ಲಿ ಅತಿಥಿಸೇವೆಯಲ್ಲಿಯೂ ನಿರಂತರ ಸ್ನಾನಾದಿ ಧರ್ಮಕಾರ್ಯಗಳಲ್ಲಿಯೂ ಕಾಲಯಾಪನೆಯನ್ನು ಮಾಡುತ್ತಾ ವಾಸ ಮಾಡುತಲಿದ್ದಳು. ಇಂತಾ ಕಷ್ಟಾನುಭವವನ್ನು ಮಾಡುತಲಿದ್ದ ಕಾಲದಲ್ಲಿಯೂ, ಶ್ರೀರಾಮನು ಹಿರಣ್ಮಯವಾದ ಸೀತಾಪ್ರತಿಕೃತಿಯನ್ನು ಭಾರ್ಯಾಸ್ಥಾನದಲ್ಲಿಟ್ಟುಕೊಂಡು ತಾನು ಸಂಕಲ್ಪಿಸಿರುವ ಯಜ್ಞ ನಿರ್ವಾಹ ಮಾಡುತ್ತಾನೆಂಬ ವರ್ತಮಾನವನ್ನು ಕೇಳಿ ತಾನು ಅನುಭವಿಸುತಲಿದ್ದ ಕಷ್ಟವನ್ನು ಬಹಳ ಸುಲಭವಾದಂತೆ ತಿಳಿದುಕೊಂಡಳು. ಯಜ್ಞ ಸಮಾಪನವಾದ ನಂತರ ಅಲ್ಲಿ ಸೇರಿದ್ದ ಸಭಾ ಸಮಕ್ಷಮದಲ್ಲಿ, ರಾಮನು, ಸೀತೆಯು ಕೇವಲ ವಿನಯ ಭಾವದಿಂದ ಬಂದು ನಿಂತು

---

(1). ಸಾಹಂತಪಃಸೂರ್ಯನಿವಿಷ್ಟ ದೃಷ್ಟಿರೂರ್ಧ್ವಂ ಪ್ರಸೂತೇಶ್ಚರಿತುಂ ಯತಿಷ್ಯೇ ।
ಭೂಯೋಯಥಾಮೇ ಜನನಾಂತರೇಪಿ ತ್ವಮೇವಭರ್ತಾನಚ ವಿಪ್ರಯೋಗಃ ॥

ಕೊಂಡಿದ್ದಾಗ್ಯೂ ದಯಾಲೇಶವನ್ನಾದರೂ ತೋರಿಸದೆ, ಪುನಃ ಪರೀಕ್ಷಾವಿಚಾರವನ್ನು ಹೇಳಲಾಗಿ, ಸೀತೆಯು ಆಚಮನ ಮಾಡಿ, ಯಾವ ಕಾರಣದಿಂದ ಯಾವಾಗಲೂ ಯಾವ ಪ್ರಕಾರವಾಗಿಯೂ ಕಾಯ ಮನೋವಾಕ್ಯಗಳಿಂದ ನನ್ನ ಪ್ರಾಣನಾಥನಿಗೆ ಅಮಂಗಳಚಿಂತೆಯನ್ನು ಮಾಡಲಿಲ್ಲವೋ, ಆ ಕಾರಣದಿಂದ, ಹೇವಿಶ್ವಂಭರೆ! ನೀನು ನನ್ನನ್ನು ಕರದುಕೊಂಡು ಹೋಗೆಂದು ಪ್ರಾರ್ಥಿಸಿದಳು (1). ನಂತರ ಭೂದೇವಿಯು ಸೀತೆಯ ಪ್ರಾರ್ಥನೆಯನ್ನು ಶ್ರವಣ ಮಾಡಿದೊಡನೆ, ಬಂದು ಅವಳೊಡನೆ ಅಂತರ್ಧಾನವಾದಳು. ಪ್ರಮುಖರಾದ ಕವಿಗಳು ಯಾರೂ ಈ ವಿಚಾರವನ್ನು ಪುಂಖಾನು ಪುಂಖವಾಗಿ ವರ್ಣಿಸಿರುವದಿಲ್ಲ. ಭಾವ ಸಂಪೂರ್ಣವಾದ ಅಂಶವನ್ನು ಮಾತ್ರ ವರ್ಣಿಸಿ ತಟಸ್ಥರಾಗಿರುತ್ತಾರೆ.

ಸಂಸ್ಕೃತದಲ್ಲಿ ಕಾವ್ಯಗಳೂ ನಾಟಕಗಳೂ ಅನೇಕವಾಗಿವೆ. ಆ ವಿಶಿಷ್ಟ ಗ್ರಂಥಗಳಲ್ಲಿಯೂ ಉಕ್ತವಾಗಿರುವ ರಮಣಿಯರೆಲ್ಲರ ಚರಿತ್ರೆಯನ್ನೂ ಹೇಳಬೇಕಾದರೆ ಗ್ರಂಥವು ವಿಸ್ತಾರವಾಗುವದ್ದರಿಂದ ನಾಗಾನಂದ ರತ್ನಾವಳಿ ವಾಸವದತ್ತಾ ಪ್ರಸನ್ನ ರಾಘವ ಪ್ರಭತಿ ಮುಖ್ಯವಾದ ಗ್ರಂಥಗಳ ನಾಮ ಗ್ರಹಣವನ್ನು ಮಾತ್ರ ಮಾಡಿ, ಸಂಸ್ಕೃತ ಕವಿಕುಲ ಚೂಡಾಮಣಿಗಳಾದ ಕಾಳಿದಾಸ ಭವಭೂತಿ ಪ್ರಣೀತ ಸಾರ ಭೂತವಾದ ಅಭಿಜ್ಞಾನ ಶಕುಂತಳಾ ಮತ್ತು ಸೀತಾ ಚರಿತ್ರೆಯನ್ನು ಮಾತ್ರ ಸ್ವಲ್ಪ ಉದ್ಧೃತಮಾಡಿ ಈ ಗ್ರಂಥವನ್ನು ಪೂರ್ಣಮಾಡುತ್ತೇವೆ. ಈ ರಮಣಿಗಳಿಬ್ಬರ ಚರಿತ್ರೆಯ ವರ್ಣನೆಯಲ್ಲಿ ಕವಿಗಳು ತಮ್ಮ ತಮ್ಮ ಕಲ್ಪನಾಶಕ್ತಿಯ ಪರಾಕಾಷ್ಠತೆಯನ್ನು ತೋರಿಸಿರುತ್ತಾರೆ. ಈ ಇಬ್ಬರು ರಮಣಿಯರ ನಡವಳಿತೆಗೆ ಪರಸ್ಪರ ವೆತ್ಯಾಸ ಉಂಟು, ಹ್ಯಾಗಂದರೆ; ಸೀತೆಗೆ ವಿರಹ, ಶಕುಂತಳೆಗೆ ಪೂರ್ವ

---

(1). ವಾಙ್ಮನಃಕರ್ಮಭಿಃಪತ್ಯೌ ವ್ಯಭಿಚಾರೋ ಯಥಾನಮೇ।
ತಥಾವಿಶ್ವಂಭರೇದೇವಿ ಮಾಮಂತರ್ಧಾತುಮರ್ಹಸಿ॥

ರಾಗ; ಸೀತೆಯು ಯುವತಿ; ಶಕುಂತಳೆಯು ಬಾಲಿಕಾ; ಸೀತೆಯು ರಾಜನಂದಿನಿ; ಶಕುಂತಳೆಯು ತಪೋವನದಲ್ಲಿ ಪಾಲಿತಳು; ಉಭಯತ್ರರೂ ತಮ್ಮ ತಮ್ಮ ಪತಿಯಿಂದ ತಿರಸ್ಕೃತರಾದವರು; ನಾನಾ ವಿಧವಾದ ಮನಃಕ್ಲೇಶವನ್ನು ಹೊಂದಿದರು; ಉಭಯತ್ರರ ಚರಿತ್ರಯೂ ಸ್ತ್ರೀಯರ ಚರಿತ್ರೆಗೆ ಉತ್ಕೃಷ್ಟತರವಾದ ದೃಷ್ಟಾಂತರವಾಗಿರುತ್ತದೆ; ಇವರಿಬ್ಬರನ್ನೂ ದೇವತೆಗಳು ಋಷಿಗಳು ಸಹಾ ಇವರ ದುಃಖಕಾಲದಲ್ಲಿ ಸಮಾಧಾನಪಡಿಸಿ ಕೆಲ ಕಾಲದಮೇಲೆ ಅವರನ್ನು ಅವರವರ ಪತಿಗಳೊಡನೆ ಶೇರಿಸುವದಕ್ಕೆ ವಿಧಿಪೂರ್ವಕವಾಗಿ ಪ್ರಯತ್ನಪಟ್ಟರು. ಉಭಯತ್ರರೂ ಅನೇಕ ಕಾಲ ವನವಾಸವನ್ನು ಮಾಡಿದರೂ, ಆ ಕಾಲದಲ್ಲಿ ವನತರು, ವನಲತಾ, ವನಮಯೂರ, ವನ ಮೃಗ ಮೊದಲಾದವುಗಳು ಇವರಿಬ್ಬರಿಗೂ ಪ್ರೀತಿಪಾತ್ರಗಳಾಗಿದ್ದವು. ಉಭಯತ್ರರ ಹೃದಯವೂ ಸರಳತರವಾದದ್ದು; ಉಭಯತ್ರರ ಪ್ರಣಯವೂ ಪ್ರಗಾಢವಾದದ್ದು; ಉಭಯತ್ರರಿಗೂ ವನವಾಸಿಗಳಾದ ತಾಪಸಕನ್ನಿಕೆಗಳೊಡನೆ ಸಮಾನವಾದ ಸ್ನೇಹವಿತ್ತು. ಸೀತೆಯು ರಾವಣನಿಂದ ಪೀಡಿತಳಾಗಿ ಪುನಃ ರಾಜಧಾನಿಗೆ ಕರತರಲ್ಪಟ್ಟನಂತರ ರಾಜಮಹಿಷಿಯಾದಳು. ನಂತರವೂ ಅವಳ ಮುಗ್ಧಸ್ವಭಾವವು ಪೂರ್ವದಂತೆಯೇ ಇತ್ತು. ಅದು ಹ್ಯಾಗೆಂದರೆ; ಚಿತ್ರಿತವಾಗಿದ್ದ ರಾಮಚರಿತ್ರೆಯ ಚಿತ್ರವನ್ನು ನೋಡಿದಾಗ್ಯೆ ಅವಳು ತನ್ನ ಸಕಲ ಸ್ವಭಾವವೂ ವ್ಯಕ್ತವಾಗುವಹಾಗೆ, ವಿವಾಹಸಮಯದ ಚಿತ್ರವನ್ನು ನೋಡಿ ಬಹಳ ಹರ್ಷಿತಳಾದಳು. ಶೂರ್ಪನಖಾ ಚಿತ್ರವನ್ನು ನೋಡಿ ಹೃದಯದಲ್ಲಿ ಕಂಪಿತಳಾದಳು; ರಾಮಚಂದ್ರನ ವಿರಹಯಾತನಾ ಚಿತ್ರವನ್ನು ನೋಡಿ ಸಾಶ್ರುನಯನಳಾದಳು. ತಪೋವನ ಚಿತ್ರವನ್ನು ನೋಡಿ ಪುನಃ ಅಲ್ಲಿಗೆ ಹೋಗಬೇಂಕೆಂಬಿಚ್ಛೆಯುಳ್ಳವಳಾಗಿ, ರಾಮಚಂದ್ರನನ್ನು ತನ್ನೊಡನೆ ತಪೋವನಕ್ಕೆ ಬರಬೇಕೆಂದಳು. ಅದಕ್ಕೆ ರಾಮಚಂದ್ರನು, ಎಲೈ ಮುಗ್ಧೆ! ಈ ಮಾತನ್ನು ನೀನು ಹೇಳಬೇಕೆಯೆಂದು ಪ್ರತ್ಯುತ್ತರವನ್ನು ಕೊಟ್ಟನು. ಅವಳು ರಾಮಬಾಹುವ

ನ್ನು ಆಶ್ರೈಸಿ ನಿದ್ರೆಮಾಡುತಲಿರುವಾಗಲೂ ಅವಳ ಕೋಮಲ ಹೃದಯದಲ್ಲಿ ಚಿತ್ರದರ್ಶನದಿಂದ ಉಂಟಾಗಿದ್ದ ನಾನಾ ವಿಧವಾದ ಉದ್ವೇಗವು ಶಾಂತಿಯಾಗಿರಲಿಲ್ಲ; ಅವಳು ಸ್ವಪ್ನದಲ್ಲಿಯೂ, ಆರ್ಯಪುತ್ರ! ಇದೇ ನಿನ್ನ ಸಹವಾಸವನ್ನು ಬಿಟ್ಟು ತೊಲಗಿದ ಕಾಲವೆಂದು ಗಾಭರಿಯಾಗಿ ಕನವರಿಸಿದಳು. ವನಗಮನಕ್ಕೋಸ್ಕರ ಲಕ್ಷ್ಮಣನು ರಥವನ್ನು ತಂದು ನಿಲ್ಲಿಸಿದಾಗ್ಯೆ ತನ್ನ ಪತಿಯನ್ನು ಬಹಳವಾಗಿ ಪ್ರಶಂಸಿಸಿ ಲಕ್ಷ್ಮಣನೊಡನೆ ರಥಾರೋಹಣವನ್ನು ಮಾಡಿದಳು. ಲಕ್ಷ್ಮಣನು ಪಾಷಾಣವೃಷ್ಟಿಯ ಹಾಗಿರುವ ರಾಜಸಂದೇಶವನ್ನು ಅವಳಿಗೆ ತಿಳಿಸಿದಾಗ್ಯೆ ಅವಳಿಗೆ ಅಕಸ್ಮಾತ್ಪುನಃ ಪ್ರಾಪ್ತವಾದ ಶೋಕಾವೇಗವನ್ನು ಸಹಿಸಲಾರದೆ ಮೂರ್ಛಿತಳಾಗಿ ಬಿದ್ದಳು.

ಮುಖ್ಯವಾಗಿ ಹೇಳತಕ್ಕದ್ದೇನಂದರೆ, ಸೀತೆಯು ನಿತಾಂತ ಸುಶೀಲಳು, ಏಕಾಂತ ಸರಳ ಹೃದಯಳು. ಅವಳ ಹಾಗೆ ಪತಿ ಪರಾಯಣಳಾದ ರಮಣಿಯು ಶ್ರುತಿಗೋಚರ ಅಥವಾ ದೃಷ್ಟಿವಿಷಯ ಆಗಿರುವದಿಲ್ಲ. ಅವಳು ತನ್ನ ವಿಶುದ್ಧ ಚರಿತ್ರೆಯಲ್ಲಿ ತೋರಿಸಿರುವ ಪತಿಪರಾಯಣತೆಯ ಉತ್ಕರ್ಷವನ್ನು ಯೋಚಿಸಿದರೆ, ಮಾನವ ಮಂಡಲಿಗೆ ಪತಿವ್ರತಾ ಧರ್ಮವನುಪದೇಶಿಸುವದಕ್ಕೆ ಅವತರಿಸಿದ ಹಾಗೆ ಕಾಣುತ್ತದೆ. ಅವಳ ಹಾಗೆ ಸರ್ವಗುಣ ಸಂಪನ್ನಳಾದ ರಮಣಿಯು ಯಾವಕಾಲದಲ್ಲಿಯೂ ಭೂಮಂಡಲದಲ್ಲಿ ಅವತಾರವನ್ನು ಮಾಡಿರಲಿಲ್ಲ.

ಶಕುಂತಳೆಯೂ ಸೀತೆಯಹಾಗೆಯೇ ಮುಗ್ಧಸ್ವಭಾವವನುಳ್ಳವಳು. ಇವಳು ಮಹರ್ಷಿಕಣ್ವರಿಗೆ ದೃಷ್ಟಿ ಗೋಚರಳಾಗಲು ಅವರು ಅವಳನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡುಹೋಗಿ ಸ್ವಂತ ಮಗಳಿನ ಹಾಗೆ ಪ್ರತಿಪಾಲನೆಯನ್ನು ಮಾಡಿದರು. ಸ್ವಲ್ಪ ವಯಸ್ಸಿನಲ್ಲಿಯೇ ಗೃಹಕಾರ್ಯಗಳ ನಿರ್ವಾಹ ಮಾಡುವಷ್ಟು ಶಕ್ತಳಾಗಿ ವಿಲಕ್ಷಣವಾಗಿ ವಿದ್ಯಾಭ್ಯಾಸವನ್ನು ಮಾಡಿದಳು. ತಪೋವನದಲ್ಲಿರುವ ತರುಲತಾದಿ

ಗಳಿಗೆ ಪಾತಿಗಳನ್ನು ಕಟ್ಟುವದರಲ್ಲಿ ಬಹಳ ಆಸಕ್ತಿಯುಳ್ಳವಳಾಗಿದ್ದ ಳು. ಮಹರ್ಷಿ ಕಣ್ವರು ಸೋಮತೀರ್ಥಕ್ಕೆ ಪ್ರಯಾಣಮಾಡಿದ ಕಾಲದಲ್ಲಿ ವೃದ್ಧಳಾದ ಗೌತಮಿಯು ಆಶ್ರಮದಲ್ಲಿದ್ದರೂ ಅತಿಥಿ ಸೇವಾಕಾರ್ಯ ಭಾರವನ್ನು ಶಕುಂತಳೆಗೆ ವಹಿಸಿ ಹೊರಟುಹೋದರು. ತಪೋವನ ನಿವಾಸಿಗಳಾದ ಆಬಾಲವೃದ್ಧ ವನಿತೆಯರು ಅವಳಲ್ಲಿ ಅನುರಾಗವನುಳ್ಳವರಾಗಿದ್ದರು. ಸ್ನೇಹಿತರಿಗೆ ಸರ್ವಸ್ವಸ್ವರೂಪವಾಗಿದ್ದಳು. ಅವಳ ಸ್ನೇಹಿತರೆಲ್ಲರೂ ಅವಳ ಸೇವೆಯನ್ನೆ ಮಾಡುತ್ತಾ ಅವಳೊಂದಿಗೇನೇ ಸಾರ್ವದಾ ಕ್ರೀಡಿಸುತಲಿದ್ದರು; ಪುಷ್ಪ ಚಯನಮಾಡಿದರೆ ಅವಳಿಗೆ ಆಯಾಸವಾದೀತೆಂದು ತಾವೇ ಅವಳಿಗೋಸ್ಕರ ಪುಷ್ಪಾವಚಯನವನ್ನು ಮಾಡುತಲಿದ್ದರು; ತಾವೇ ಅವಳಿಗೋಸ್ಕರ ಪಾತಿಗಳಿಗೆ ಸೇಚನೆಯನ್ನು ಮಾಡುತಲಿದ್ದರು; ಅವಳು ತಮ್ಮನ್ನು ಅಗಲಿ ಪತಿಗೃಹಕ್ಕೆ ಹೋಗತಕ್ಕವಳೆಂದು ಮೊದಲೇ ಭಾವಿಸಿಕೊಂಡು ಸ್ನೇಹ ಬದ್ಧರಾಗಿ ರೋದನ ಮಾಡುತಲಿದ್ದರು. ಅವಳು ತನ್ನ ವಿವಾಹಪ್ರಯುಕ್ತವಾದ ಯೋಚನೆಯ ಲೇಶಾಂಶವನಾದರೂ ಮಾಡುತ್ತಿರಲಿಲ್ಲ. ಆದರೂ ಅಕಸ್ಮಾತ್ತಾಗಿ ನಯನ ವಿಷಯನಾದ ರಾಜನನ್ನೇ ಅನುಗುಣವಾದ ಪತಿಯೆಂದು ಭಾವಿಸಿದಳು. ಇವಳ ಸ್ನೇಹಿತರಿಗೆ ಇವಳ ಕ್ಷೇಮ ಚಿಂತನಯೇ ಮುಖ್ಯ ಕಾರ್ಯವಾಗಿತ್ತು. ಇವಳು ಪತಿವಿರಹಯಾತನೆಯಿಂದ ದೂರ್ವಾಸರು ಕೊಟ್ಟ ಶಾಪವನ್ನು ತಿಳಿಯದೆ ಸ್ತಬ್ಧಳಾಗಿದ್ದರೂ ಇವಳ ಸಖಿಯರು, ಆ ಕೋಪಭರಿತರಾದ ದೂರ್ವಾಸರ ಹಿಂದಟ್ಟಿಹೋಗಿ ಅವರ ಚರಣಕ್ಕೆರಗಿ ಅವರ ದಯೆಯನ್ನು ಸಂಪಾದಿಸಿ ಶಾಪವಿಮೋಚನೆಗೆ ಕಾರಣವನುಂಟುಮಾಡಿದರು. ಶಕುಂತಳೆಯು ರಾಜಮಂದಿರಕ್ಕೆ ಪ್ರಯಾಣಮಾಡಿ ಬಂದಾಗ್ಯೆ ಮುಂದಾಗಿಯೇ ಪತಿಪ್ರತ್ಯಾಖ್ಯಾನವಾಗುವದೆಂದು ಊಹಿಸಿ ಅದರ ನಿವಾರಣಕ್ಕೆ ತಕ್ಕ ಉಪಾಯವನ್ನು ಹೊರಡುವ ಕಾಲದಲ್ಲಿ ಅವಳಿಗೆ ಸೂಚಿಸಿದರು. ದೂರ್ವಾಸರು ಶಾಪಕೊಟ್ಟ ಕಾಲದಲ್ಲಿ ಈ ಸಖಿಯರು ಎಷ್ಟು ದುಃಖಪಟ್ಟರೆಂಬುವದನ್ನ ಹೇಳುವದು ಯಾರಿಗೆತಾನೇ

ಸಾಧ್ಯವಾದೀತು? ಅವಳಲ್ಲಿ ಸಖಿಯರಿಗೆ ಯಾವರೀತಿಯಾದ ವಿಶ್ವಾಸವಿತ್ತೋ ಶಕುಂತಳೆಯೂ ತನ್ನ ಸ್ನೇಹಿತರಮೇಲೆ ಅದೇರೀತಿಯಾದ ವಿಶ್ವಾಸವನುಳ್ಳವಳಾಗಿದ್ದಳು. ಮಹರ್ಷಿ ಕಣ್ವರ ಅಪ್ಪಣೆಯನ್ನನುಸರಿಸಿ ಪತಿಯ ಮಂದಿರಕ್ಕೆ ಪ್ರಯಾಣ ಬೆಳಸಿದಾಗ್ಯೆ ತನ್ನ ಸಖಿಯರನ್ನೂ ತನ್ನೊಂದಿಗೆ ಕಳುಹಿಸಬೇಕೆಂದು ಬಹಳ ವಿಶ್ವಾಸದೊಡನೆ ಕಣ್ವರನ್ನು ಪ್ರಾರ್ಥಿಸಿದಳು. ತನ್ನ ಸ್ನೇಹಿತರೇ ತಾನೆಂದು ತಿಳಿದುಕೊಂಡಿದ್ದಳು. ತನ್ನ ರಹಸ್ಯವಾದ ಮನೋಭಾವವನ್ನು ತನ್ನ ಸ್ನೇಹಿತರಲ್ಲಿ ಹೇಳುತ್ತಿದ್ದಳು. ಅವಳ ವಿಶ್ವಾಸವು ಅವರಲ್ಲಿ ನೆಲೆಗೊಂಡಿತ್ತು. ಸರಳಹೃದಯಳಾದ ಗೌತಮಿಯು ಅವಳಲ್ಲಿ ಅತ್ಯಂತ ವಿಶ್ವಾಸವಿಟ್ಟದ್ದಳು. ಮಹರ್ಷಿ ಕಣ್ವರು ಶಕುಂತಳೆಯು ಪಿತೃಸೇವಾತತ್ಪರಳೆಂದು ದೃಢವಾಗಿ ತಿಳಿದಿದ್ದು ತಮ್ಮ ಅತ್ಯಂತವಾದ ಅನುರಾಗವನ್ನು ಅವಳಲ್ಲಿಟ್ಟದ್ದರು. ಶಕುಂತಳೆಯು ರಾಜನ ಪ್ರಥಮ ದರ್ಶನಾವಧಿ ದುಃಖಾನುಭವವನ್ನು ಮಾಡಿದಳು. ಅವಳು ತಪ್ರೋವನವಾಸಿಯಾಗಿ ಪ್ರಣಯವು ತಪೋವನ ವಿರುದ್ಧಭಾವನೆಯೆಂತಲೂ ಅನುಚಿತವಾದದ್ದೆಂತಲೂ ತಿಳಿದಿದ್ದಳು. ಅತಏವ ತನ್ನ ಪ್ರಣಯವನ್ನು ಮರೆಮಾಚುವದಕ್ಕೆ ಪ್ರಯತ್ನಪಟ್ಟಳು. ಆದರೆ ಅವಳು ತನ್ನ ಭಾವವನ್ನು ಗೋಪನಮಾಡುವ ವಿದ್ಯೆಯನ್ನು ತಿಳಿದವಳಲ್ಲವಾದಕಾರಣ ಆ ಪ್ರಯತ್ನಗಳೆಲ್ಲಾ ಅದನ್ನು ವ್ಯಕ್ತಪಡಿಸುವದಕ್ಕೆ ಕಾರಣವಾಯಿತು. ಅಂತ್ಯದಲ್ಲಿ ಅಪಾರವಾದ ಚಿಂತೆಯಲ್ಲಿ ಮಗ್ನಳಾದಳು. ರಾಜನು ಗಾಂಧರ್ವವಿಧಾನದಿಂದ ವಿವಾಹ ಮಾಡಿಕೊಂಡ ನಂತರ ತ್ವರ್ಯವಾಗಿಯೇ ರಾಜಧಾನಿಗೆ ಹೊರಟು ಹೋದನು. ಅವನ ಪ್ರಣಯವು ಶಕುಂತಳೆಯಲ್ಲಿ ಅತ್ಯಂತ ಪ್ರಗಾಢವಾಗಿದ್ದಾಗ್ಯು ಅಲೌಕಿಕ ದೈವ ದುರ್ವಿಪಾಕ ಬಲಿಯದಿಂದ ಶಕುಂತಳೆಯ ರೂಪವನ್ನೇ ಶುದ್ಧವಾಗಿ ಮರತುಬಿಟ್ಟನು. ಮಹರ್ಷಿ ಕಣ್ವರು ಶಕುಂತಳೆಯು ಗಾಂಧರ್ವ ವಿಧಾನವಾಗಿ ರಾಜನನ್ನು ಪರಿಣಯಮಾಡಿಕೊಂಡಳೆಂದು ತಿಳಿದು ಪ್ರೀತರಾಗಿ ಅವಳನ್ನು ತಮ್ಮಿಬ್ಬರ ಶಿಷ್ಯರೊಡನೆ ಗೌತಮಿಯ ಜೊತೆ

ಮಾಡಿ ರಾಜವಾಟಿಗೆ ಕಳುಹಿಸಿಕೊಟ್ಟರು. ಶಕುಂತಳೆಯು ಪತಿಗೃಹಕ್ಕೆ ಹೊರಡುವ ಕಾಲದಲ್ಲಿ ತನ್ನ ಹರಿಣಶಿಶುವನ್ನು ಮರತಿರಲಿಲ್ಲ. ಎಲ್ಲರಲ್ಲಿಯೂ ಅಪ್ಪಣೆಯನ್ನು ಪಡದು ಅಶುಭಶಕ್ಷಣದಲ್ಲಿ ಆಶ್ರಮವನ್ನು ಬಿಟ್ಟು ಪ್ರಯಾಣಮಾಡಿದಳು.

ವೇದವ್ಯಾಸರು ಸಾಧ್ವೀಶಿರೋಮಣಿಗಳಾದ ರಮಣಿಗಳಿಗೆ ಸಾಹಸವಿತ್ತೆಂದು ವರ್ಣಿಶಿರುವ ಹಾಗೆ ಕಾಳಿದಾಸನೂ ಸ್ತ್ರೀಯರು ಸಾಹಸಯುಕ್ತರಾಗಿದ್ದರೆಂದು ವರ್ಣಿಸುವದಕ್ಕೆ ಆಗದೆ ಹೋಯಿತು. ಕಾಳಿದಾಸನ ಕಾಲದಲ್ಲಿ ಸಾಹಸಯುಕ್ತರಾದ ಹೆಂಗಸರು ಅಷ್ಟು ಮಾನನೀಯರಾಗಿದ್ದರೆಂದು ತೋರುವದಿಲ್ಲ. ಯಾತಕ್ಕೆಂದರೆ, ಮಹಾಭಾರತದಲ್ಲಿ ಶಕುಂತಳೆಯು ರಾಜಮಂದಿರಕ್ಕೆ ಹೋಗಿ ಸಾಕ್ಷಾತ್ತಾಗಿ ರಾಜನೆದುರಿಗೆ ತನ್ನ ವೃತ್ತಾಂತವನೆಲ್ಲಾ ತಿಳಿಸಿದಳೆಂದು ಉಕ್ತವಾಗಿರಲಾಗಿ, ಕಾಳಿದಾಸನ ಕೃತಿಯಲ್ಲಿ ಅವಳಾಡಿದ ಮಾತುಗಳನ್ನೆಲ್ಲಾ ರಾಜನಿಗೆ ತಿಳಿಯಪಡಿಸುವದಕ್ಕೋಸ್ಕರ ಇಬ್ಬರು ಶಿಷ್ಯರನ್ನು ಕಳುಹಿಸಿದ್ದಾಗಿ ವರ್ಣಿಸಬೇಕಾಯಿತು. ಆಗಿನ ಸಾಮಾಜಿಕಾವಸ್ಥೆಯು ಹಾಗಿತ್ತು. ಮರ್ಯಾದೆಯುಳ್ಳ ಹೆಂಗಸರು ಕಾಳಿದಾಸನ ಸಮಯದಲ್ಲಿ ಬಹಿರಂಗದಲ್ಲಿ ರಾಜನೆದುರಿಗೆ ಧೈರ್ಯವಾಗಿ ಒಬ್ಬಳೇ ಹೋಗಿ ಮಾತನಾಡುವದು ಅವರಿಗೆ ಉಚಿತ ವ್ಯವಹಾರವಾಗಿ ಭಾವಿಸಲ್ಪಟ್ಟಿರಲಿಲ್ಲವೆಂದು ವ್ಯಕ್ತವಾಗುತ್ತದೆ. ರಾಜನು ದೂರ್ವಾಸರ ಶಾಪಕ್ಕೆ ಅಧೀನವಾಗಿದ್ದದ್ದರಿಂದ ಶಕುಂತಳೆಯ ಆಗಮನ ವೃತ್ತಾಂತವನ್ನು ಕೇಳಿ ಅವನ ಮನಸ್ಸು ಕಾತರಗೊಂಡಿತು. ಅವಳು ಎದುರಿಗೆ ಬಂದಾಗ ಅವಳ ಗುರುತನ್ನು ಲೇಶವಾದರೂ ಕಂಡುಹಿಡಿಯುವದಕ್ಕೆ ಸಮರ್ಥನಾಗದೆ ಅತಿ ನಿಷ್ಠುರವಾದ ಮಾತುಗಳನ್ನಾಡಿದನು. ಆದರೂ ಶಕುಂತಳೆಯು ಮಹಾ ಉದಾರ ಹೃದಯಳಾದದ್ದರಿಂದ ಅವಳಾಡಿದ ಮಾತುಗಳೆಲ್ಲವೂ ಸರಳವಾಗಿಯೇ ಇತ್ತು. ದೈವದುರ್ವಿಪಾಕವು ಅತ್ಯಂತ ಬಲೀಯವಾಗಿರಲಾಗಿ ಇವಳಾಡಿದ ಮಾತುಗಳೆಲ್ಲಾ ಏನು ಫಲವನ್ನು ಹೊಂದ್ಯಾವು? ಅವಳು ರಾಜನಿಗೆ ಹರಿಣ ಶಿಶುವನ್ನು ಜ್ಞಾಪಿಸಿದಳು.

ಅವನಾಡಿದ ಮಿಥಸ್ಸಲ್ಲಾಪಗಳನ್ನೆಲ್ಲಾ ವಿವರಿಸಿದಳು. ರಾಜನಿಗಾದ ರೋ ಇವುಗಳಿಂದ ಏನೇನೂ ಜ್ಞಾಪಕಕ್ಕೆ ಬರಲಿಲ್ಲ. ಶಕುಂತಳೆಯು ಸ್ಮರಣ ಸೂಚಕವಾದ ವಿನಯ ವಚನಗಳನ್ನೂ ರಾಜನ ಅನ್ಯಾಯ ವಾದ ಪ್ರತ್ಯಾಖ್ಯಾನವನ್ನು ಕೇಳಿ ಶಾರ್ಙರವನು ಕುಪಿತನಾದನು. ಇದನ್ನು ನೋಡಿ ಶಕುಂತಳೆಯು ಭಯಚಕಿತಳಾದಳು. ಗೌತಮಿ ಯು ಅವಳ ದುಃಖವನ್ನು ನೋಡಿ ಕಾತರಳಾದಳು. ನಂತರ ಸಭಾ ಸ್ಥಸಭ್ಯರೆಲ್ಲರೂ ಐಕಮತ್ಯರಾಗಿ ಅವಳು ಪ್ರಸವಕಾಲ ಪರ್ಯಂತ ಪು ರೋಹಿತನ ಮನೆಯಲ್ಲಿ ವಾಸವಾಗಿರಬೇಕೆಂದು ಇತ್ಯರ್ಥವನ್ನು ಮಾ ಡಿದರು. ಶಕುಂತಳೆಯು ದುಃಖಾರ್ಣವದಲ್ಲಿ ಮುಳಗಿ ತನ್ನ ಅದೃಷ್ಟ ವನ್ನೇ ನಿಂದಿಸುತ್ತಾ ಪುರೋಹಿತನನ್ನು ಹಿಂಬಾಲಿಸಿ ಹೋಗುತಲಿರು ವಾಗ್ಯೆ ತೇಜೋಮಯವಾದ ಸ್ತ್ರೀರೂಪಧಾರಿಯಾದ ಒಂದು ವ್ಯಕ್ತಿ ವಿಶೇಷವು ಆವಿರ್ಭವಿಸಿ ಅವಳನ್ನು ಕರದುಕೊಂಡು ಹೋಯಿತು. ನಂತರ ಅವಳು ಬಹಳಕಾಲ ಹಿಮಾಚಲದಲ್ಲಿ ಮಹರ್ಷಿಕಶ್ಯಪರ ಆ ಶ್ರಮದಲ್ಲಿ ವಾಸವಾಗಿದ್ದಳು. ಅಲ್ಲಿಯೂ ಪತಿವಿರಹಯಾತನಾನುಭ ವವನ್ನು ಮಾಡುತ್ತಾ ಪತಿವ್ರತಾ ಧರ್ಮವನ್ನು ಶ್ರವಣಮಾಡುತ್ತಾ, ತನ್ನ ಶಿಶುವನ್ನು ಲಾಲನ ಪಾಲನೆಯನ್ನು ಮಾಡುತ್ತಾ ಕಾಲವನ್ನು ಕ ಳಿಯುತಲಿದ್ದಳು. ದೈವಾನುಗ್ರಹದಿಂದ ರಾಜನು ಅಲ್ಲಿಗೆ ಬಂದಾಗ ಶಕುಂತಳಾ ವೃತ್ತಾಂತವೆಲ್ಲಾ ಆಮೂಲಾಗ್ರವಾಗಿ ಸ್ಮರಣೆಗೆ ಬಂತು– ಶಾಪವು ವಿಮೋಚನೆಯಾಗಿ ಹೋಗಿತ್ತು. ರಾಜನು ಶಕುಂತಳೆಯ ನ್ನು ನೋಡಿದಮಾತ್ರದಿಂದಲೇ ಗುರುತು ಹಿಡಿದು ತನ್ನ ಅಪರಾಧಮಾ ರ್ಜನೆಯನ್ನು ಮಾಡಬೇಕೆಂದು ಅವಳನ್ನು ಬೇಡಿದನು. ಶಕುಂತಳೆ ಯು ಅಂತಾ ಸಮಯದಲ್ಲಿಯೂ ತನ್ನ ಅದೃಷ್ಟವೇ ತನಗೆ ವಿರೋಧ ವಾಗಿತ್ತೆಂತಲೂ, ಹಾಗಿಲ್ಲದಿದ್ದರೆ, ಆರ್ಯಪುತ್ರನು ದಯಾಯುಕ್ತನಾಗಿ ಇದ್ದಕ್ಕಿದ್ದಹಾಗೆ ವಿಕಲ ಚಿತ್ತನಾಗುವದಕ್ಕೆ ಕಾರಣವಿಲ್ಲವೆಂತಲೂ, ಮುಂದೆ ತಾನು ಸುಖವನ್ನು ಪಡಿಯುವೆನೆಂತಲೂ ಹೇಳುತಲಿದ್ದಳು. ರಾಜನು ಪುನಃ ಉಂಗುರವನ್ನು ಅವಳ ಬೆರಳಿಗೆ ಇಡುವದಕ್ಕೆ ಪ್ರಯ

ತ್ನಪಡಲು, ಭೀರುಸ್ವಭಾವಳಾದ ಶಕುಂತಳೆಯು ಅದರಿಂದ ತನಗೆ ಪ್ರಯೋಜನವಿಲ್ಲವೆಂದು ಹೇಳಿದಳು. ಶಾಪ ಪ್ರಯುಕ್ತವಾಗಿಯೇ ರಾಜನಿಗೆ ತನ್ನ ವೃತ್ತಾಂತವು ಸ್ಮರಣೆಗೆ ಬರಲಿಲ್ಲವೆಂದು ವ್ಯಕ್ತವಾದಾಗ ಶಕುಂತಳೆಯ ಹರ್ಷಕ್ಕೆ ಪಾರವೇ ಇರಲಿಲ್ಲ. ಅವಳಾನಂದವು ತರಂಗದಹಾಗೆ ಹೆಚ್ಚಾಗುತ್ತಾ ಬಂತು. ಆರ್ಯ ಪುತ್ರನು ತನ್ನನ್ನು ಪರಿತ್ಯಾಗವಮಾಡಿದ್ದು ಅಕಾರಣವಲ್ಲವೆಂದು ತಿಳಿದುಕೊಂಡಳು. ಆರ್ಯ ಪುತ್ರನು ನಿರ್ದೋಷಿಯೆಂದು ತಿಳಿದೊಡನೆ ಅವಳಿಗೆ ಅತ್ಯಂತ ಸಂತೋಷವುಂಟಾಯಿತು. ನಂತರ ಕಶ್ಯಪ ಋಷಿಗಳಿಗೆ ನಮಸ್ಕಾರವನ್ನು ಮಾಡಿ ಆರ್ಯಪುತ್ರನೊಡನೆ ರಾಜನಗರಿಗೆ ಪ್ರತ್ಯಾಗಮನಮಾಡಿದಳು.

ಕಾಳಿದಾಸ ವರ್ಣಿತ ಶಕುಂತಳೆ ಮತ್ತು ಪಾರ್ವತಿ, ಭವಭೂತಿ ವರ್ಣಿತ ಸೀತಾ, ವೇದವ್ಯಾಸ ವರ್ಣಿತ ಸಾವಿತ್ರಿ ಈ ಮುಂತಾದ ರಮಣಿಯರ ಚರಿತ್ರೆಯನ್ನು ಓದಿದರೆ ಪ್ರಾಚೀನ ನಾರೀಮಣಿಯರ ಚರಿತ್ರೆಯ ವಿಷಯದಲ್ಲಿ ಭಾರತವರ್ಷದ ಗ್ರಂಥಕಾರರು ಎಷ್ಟು ದೂರ ಉನ್ನತಿ ಕಲ್ಪನೆಯನ್ನು ಮಾಡಿರುತ್ತಾರೆಂಬುವದು ಸಂಪೂರ್ಣವಾಗಿ ಗೊತ್ತಾಗುತ್ತದೆ. ಈ ರಮಣಿಯರೆಲ್ಲರೂ ನಾರೀಕುಲಕ್ಕೆ ರತ್ನಸ್ವರೂಪರಾಗಿರುತ್ತಾರೆ, ಚಿರಕಾಲದಿಂದ ಭಾರತ ನಿವಾಸಿಗಳಿಗೆ ದೃಷ್ಟಾಂತಸ್ವರೂಪರಾಗಿರುತ್ತಾರೆ. ಈಶ್ವರಚಂದ್ರ ವಿದ್ಯಾಸಾಗರರು ಪತಿಪರಾಯಣತಾ ಗುಣದಲ್ಲಿ ಸೀತೆಯು ಪರಾಕಾಷ್ಠತೆಯನ್ನು ತೋರಿಸಿರುತ್ತಾಳೆಂದು, ಹೇಳಿರುತ್ತಾರೆ. ಸಾವಿತ್ರಿ, ಪಾರ್ವತಿ, ಶಕುಂತಳಾ ಮುಂತಾದ ಕಾಮಿನೀಯರೂ ಅದೇರೀತಿಯಾಗಿ ಪತಿಪರಾಯಣತಾ ಪರಾಕಾಷ್ಠತೆಯನ್ನು ತೋರಿಸಿರುತ್ತಾರೆ. ಮಾನಸಿಕ ವೃತ್ತಿಯು ಪ್ರಾಯಶಃ ಇವರೆಲ್ಲರಿಗೂ ಸಮಾನವಾಗಿತ್ತು; ಆದರೆ ಭಿನ್ನರೂಪವಾಗಿ ಪರಿಣಮಿಸಿತ್ತು. ಸರ್ವಕಾಲದಲ್ಲಿಯೂ ಸರ್ವಾವಸ್ಥೆಯಲ್ಲಿಯೂ ಈ ರಮಣಿಯರಲ್ಲಿ, ಇತರ ರಮಣಿಯರಿಗೆ ಅಲಂಕಾರ ಭೂತವಾದ ದಯಾ, ದಾಕ್ಷಿಣ್ಯ ಸೌಜನ್ಯ ಮುಂತಾದ ಸಕಲ ಸದ್ಗುಣಗಳೂ ಅಧಿಕ ಪರಿಮಾಣವನ್ನು ಹೊಂದಿದ್ದವು. ಮನುಷ್ಯ ಹೃ

ದಯಕ್ಕೆ ಮಹಾ ರತ್ನಸ್ವರೂಪವಾದ ಪ್ರಣಯಕ್ಕೆ ಇವರು ಆಧಾರ ಭೂತರಾಗಿದ್ದರು. ಮಹಾ ಕವಿಗಳು ವರ್ಣಿಸುವ ಸಮಯದಲ್ಲಿ ಸ್ಮೃತಿ ಶಾಸ್ತ್ರಗಳನ್ನೇ ಅವಲಂಬಿಸಿ ನಾರಿಯರ ಗುಣವನ್ನು ವರ್ಣಿಸ ಬೇಕಾದ ಅವಶ್ಯಕವಿಲ್ಲ. ಅವರು ಇಚ್ಛಾಮತವಾಗಿ ವರ್ಣಿಸುವ ದರಲ್ಲಿಯೇ ಸ್ಮೃತಿ ಶಾಸ್ತ್ರೋಕ್ತ ನಾರೀಗುಣಗಳೆಲ್ಲವೂ ನಿರರ್ಗಳವಾಗಿ ವರ್ಣಿತವಾಗುತ್ತವೆ. ಪೂರ್ವೋಕ್ತ ರಮಣಿಯರಲ್ಲಿ ಪ್ರಮಾದ, ಉನ್ಮಾದ, ಕೋಪ, ಈರ್ಷೆ, ವಂಚನೆ, ಅಭಿಮಾನ, ಹಿಂಸೆ, ವಿದ್ವೇಷ, ಅಹಂಕಾರ, ಧೂರ್ತತಾ ಈ ಮುಂತಾದ ದುರ್ಗುಣಗಳು ಲೇಶವೂ ಇರಲಿಲ್ಲ. ಧಾರಿಣಿ, ಕೌಶಲ್ಯಾ, ಚಾರುದತ್ತ-ವನಿತಾ ಇವರ್ಯಾರಲ್ಲಿಯೂ ಈರ್ಷ್ಯೆ ಇರಲಿಲ್ಲ. ಪತಿಯು ಪರಿತ್ಯಾಗ ಮಾಡಿದನೆಂದು ಸೀತಾ ಶಕುಂತಳಾ ಇವರ್ಯಾರೂ ಕೋಪ ಅಥವಾ ಅಸೂಯೆಯುಳ್ಳವರಾಗಲಿಲ್ಲ. ತಮ್ಮ ತಮ್ಮ ಅದೃಷ್ಟವನ್ನೇ ನಿಂದಿಸಿಕೊಂಡರು. ಪುನಃ ಪತಿಯನ್ನು ನೋಡಿದಾಗ್ಯೆ ಶಕುಂತಳೆಯು ಒಂದೇ ತಡವೆಗೆ ಅವನು ತನ್ನವನೆಂದು ಅಂಗೀಕರಿಸಿದಳು. ಸೀತೆಯು ಪತಿಯು ಕೋಪಿಸಿಕೊಂಡಾನೆಂದು ವ್ಯಾಕುಲಳಾಗಿದ್ದಳು. ದಕ್ಷಪ್ರಜಾಪತಿಯು, ಸಾಧ್ವೀ ರಮಣಿಯನ್ನು ಭಾರ್ಯೆಯನ್ನಾಗಿ ಪಡೆಯುವವನಿಗೆ ಪೃಥ್ವಿಯೇ ಸ್ವರ್ಗ, ಇದಕ್ಕೆ ಸಂದೇಹವಿಲ್ಲವೆಂದು ಹೇಳಿರುತ್ತಾನೆ. ಬಹಳ ಸೌಭಾಗ್ಯಶಾಲಿಗಳಲ್ಲದೆ ಇತರರಿಗೆ ಸಾವಿತ್ರಿ ಶಕುಂತಳಾ ಸದೃಶ ರಮಣಿಗಳು ಭಾರ್ಯೆಗಳಾಗಿ ಲಭಿಸುವದು ಅಸಾಧ್ಯವಾದದ್ದಾಗಿದೆ.



## ಏಳನೇ ಅಧ್ಯಾಯ.

ಪ್ರಥಮಾಧ್ಯಾಯದಲ್ಲಿ ಸ್ತ್ರೀಯರಿಗೆ ಅತ್ಯಂತ ಸ್ನೇಹಪ್ರವೃತ್ತಿಯೊಡನೆ ತಕ್ಕಮಟ್ಟಿಗೆ ಬುದ್ಧಿವೃತ್ತಿಯೂ ಮತ್ತು ಕರ್ಮಕ್ಷಮತೆಯೂ ಇದ್ದರೆ ಅವರ ಚರಿತ್ರೆಯ ಉತ್ಕರ್ಷತೆಗೆ ಸರ್ವಾಂತಪರಿಮಿತಿಯಾಗಿರುತ್ತದೆಂತಲೂ, ಮತ್ತು ಸಾಮಾಜಿಕಾವಸ್ಥೆ, ಜಾತಿಸ್ವಭಾವ, ಕವಿಸ್ವಭಾವ, ಈ ಮೂರು ಪ್ರತಿಬಂಧಕಗಳಿಂದ ಇಂತಾ ಉನ್ನತಿ ಚರಿತ್ರೆಯುಳ್ಳ ನಾರಿಯರನ್ನು ವರ್ಣನೆಮಾಡಲು ಕವಿಗಳು ಸಮರ್ಥರಾಗಿರುವದಿಲ್ಲವೆಂತಲೂ ಹೇಳಲ್ಪಟ್ಟದೆ. ಮತ್ತು ಋಷಿಗಳು, ಪೌರಾಣೀಕರು, ಕವಿಗಳು ಇವರ ಕಾಲದಲ್ಲಿ ಭಾರತವರ್ಷದ ಸ್ತ್ರೀಯರ ಸಾಮಾಜಿಕಾವಸ್ಥೆಯು ಯಾವರೀತಿ ಇತ್ತೆಂಬುವದು ವಿಶದವಾಗಿ ಉದಹರಿಸಲ್ಪಟ್ಟರುತ್ತದೆ. ಇವುಗಳನ್ನೆಲ್ಲಾ ಚನ್ನಾಗಿ ಆಲೋಚಿಸಿದರೆ ಪೂರ್ವ ಸಾಮಾಜಿಕಾವಸ್ಥೆಯಲ್ಲಿ ವಾಲ್ಮೀಕಿ ಪ್ರಭೃತಿಮಹಾ ಕವಿಗಳೆಲ್ಲರೂ ಅವರವರ ಅದ್ಭುತವಾದ ಕವಿತ್ವ ಶಕ್ತಿಯಿಂದ ವಿವರಿಸಿರುವ ರಮಣೀಯರ ಚರಿತ್ರೆಗಿಂತಲೂ ಉತ್ಕೃಷ್ಟವಾದ ರಮಣೀಚರಿತ್ರೆಯನ್ನು ಯೋಚಿಸುವದು ಕೂಡ ಅಸಾಧ್ಯವಾಗಿದೆ. ಪೂರ್ವೀಕರಿಂದ ವರ್ಣಿತರಾದ ರಮಣೀಯರಲ್ಲಿ ಸೀತಾ, ಸಾವಿತ್ರಿ, ಶಕುಂತಳಾ ಇವರು ಸರ್ವಪ್ರಧಾನರಾಗಿರುತ್ತಾರೆ. ಶಕುಂತಳೆಯು ಸ್ನೇಹಪ್ರವೃತ್ತಿಯ ಮೂರ್ತಿಮತೀ ಪ್ರತಿಕೃತಿಯಾಗಿರುತ್ತಾಳೆ. ಇವಳ ಸ್ನೇಹಪ್ರವೃತ್ತಿಯು ಸರ್ವತೊಮುಖಸಮುನ್ನತಿ ಲಾಭವನ್ನು ಹೊಂದಿತ್ತು. ಶಕುಂತಳೆಗೂ, ಪಾರ್ವತಿಗೂ ಸರ್ವಭೂತದಲ್ಲಿಯೂ ಸಮಾನವಾದ ಸ್ನೇಹಪ್ರವೃತ್ತಿ ಯಿದ್ದಹಾಗೆ ಮತ್ಯಾರಲ್ಲಿಯೂ ಕಾಣಬರುವದಿಲ್ಲ. ಪಶು, ಪಕ್ಷಿ, ಮಾನವ, ಸಖಿ, ಸ್ವಾಮಿ ಈ ಎಲ್ಲಾದರಲ್ಲಿಯೂ ಇವರಿಬ್ಬರಿಗಿದ್ದ ಸ್ನೇಹವು ಅತ್ಯುತ್ಕೃಷ್ಟವಾಗಿತ್ತು. ಆದರೆ ಇವರಿಬ್ಬರಲ್ಲಿ ಶಕುಂತಳೆಯ ಸ್ನೇಹಪ್ರವೃತ್ತಿಯು ಅಧಿಕತರ ಬಲವತ್ತಾದ್ದು. ಕಾಳಿದಾಸನು ಶಕುಂತಳೆಯ ಬುದ್ಧಿವೃತ್ತಿ ಮತ್ತು ಕರ್ಮಕ್ಷಮತೆಯು

ನ್ನು ಅಷ್ಟು ಉತ್ತೇಜಿತವಾಗಿ ವರ್ಣಿಸಲು ಯತ್ನಪಡಲಿಲ್ಲ. ತನ್ನ ಯಾವ ಚಟುಕಿತ್ತಿಯನ್ನೂ ಅವಳ ಅಂಗಶೋಭಾವರ್ಣನೆಗೆ ವ್ಯಯಮಾಡಿದ್ದಾನೆ. ಭವಭೂತಿಪ್ರಣೀತ ಸೀತಾ ಚರಿತ್ರೆಯು ಶಕುಂತಳಾ ಚರಿತ್ರೆಯ ಛಾಯಾಮಾತ್ರವಾಗಿದೆ. ಕಾಳಿದಾಸಕೃತ ಶಕುಂತಳಾ ನಾಟಕದಲ್ಲಿ ಅವಳ ಬುದ್ಧಿವೃತ್ತಿ ಮತ್ತು ಕರ್ಮಕ್ಷಮತೆಯನ್ನು ಅಷ್ಟು ಪ್ರಕಾಶವಾಗುವಹಾಗೆ ವರ್ಣಿಸಿರುವದಿಲ್ಲ. ಆದರೂ ಅವಳ ಕೋಮಲವಾದ ಸಕಲ ವೃತ್ತಿಗಳೂ ಅತಿ ಸುಂದರವಾಗಿ ಅಂಕಿತವಾಗಿರುವದ್ದರಿಂದ, ಬುದ್ಧಿವೃತ್ತಿ ಮತ್ತು ಕರ್ಮಕ್ಷಮತೆ ಇವುಗಳ ವರ್ಣನೆ ಇಲ್ಲದಿದ್ದರೂ ಆ ಅಭಾವವು ಗೋಚರಕ್ಕೆ ಬರುವದಿಲ್ಲ. ಅವಳ ಸರಳತಾ ವಿಶ್ರಸಹಿಷ್ಣುತೆಯೇ ನಮ್ಮ ಮನಸ್ಸಿನಲ್ಲಿ ಅತ್ಯಂತ ಆನಂದವನುಂಟುಮಾಡುತ್ತದೆ.

ಸೀತೆಯ ಬುದ್ಧಿವೃತ್ತಿಯು ಮತ್ತು ಸ್ನೇಹಪ್ರವೃತ್ತಿಯು ಸಹಾ ಅತ್ಯಂತ ಬಲವತ್ತಾದದ್ದು. ಅವಳ ಕರ್ಮಕ್ಷಮತೆಯು ಅಷ್ಟು ಪ್ರಕಾಶವಾಗಿಲ್ಲ. ಅವಳ ಸಹಿಷ್ಣುತೆಯೇ ನಮಗೆ ಮನೋರಂಜನೆಯನ್ನುಂಟು ಮಾಡುತ್ತದೆ. ಇವಳ ಪತಿಪರಾಯಣತೆಯಾದರೋ, ಸರ್ವಾಪೇಕ್ಷಯಾ ಅಧಿಕವಾದದ್ದು. ಇವಳು ನಮ್ಮ ದೇಶದ ಆಬಾಲವೃದ್ಧರಿಗೂ ಪ್ರಿಯಪಾತ್ರಳಾಗಿರುತ್ತಾಳೆ. ಇದಕ್ಕೆ ಅವಳ ಸರಳತೆಯೂ ನೈಜಗುಣಗಳೂ ಕಾರಣವಾಗಿರುತ್ತವೆ. ಅವಳು ನಿರ್ದೋಷಿಯಾಗಿ ಸರ್ವಗುಣಸಂಪನ್ನಳಾಗಿದ್ದರೂ ನಾನಾವಿಧವಾದ ಕಷ್ಟಭೋಗ ಮಾಡಿರುವದ್ದರಿಂದ ಅವಳ ಚರಿತ್ರೆಯನ್ನು ಓದುವವರ ಚಿತ್ತವು ಅದರೊಡನೆ ಸಹಾನುಭೂತಿಯುಳ್ಳದಾಗುತ್ತದೆ.

ಸಾವಿತ್ರಿಯ ಚರಿತ್ರೆಯಲ್ಲಿ ವೃತ್ತಿತ್ರಯವೂ ಉಚಿತತಮವಾಗಿ ಸಮುನ್ನತಿಯನ್ನು ಹೊಂದಿದ್ದಹಾಗೆ ಕಾಣುತ್ತದೆ. ಅವಳಿಗೆ ಬುದ್ಧಿವೃತ್ತಿಯುಂಟೆಯೋ, ಸ್ನೇಹಪ್ರವೃತ್ತಿಯೂ ಕರ್ಮಕ್ಷಮತೆಯೂ ಕೂಡ ಇಷ್ಟವು. ಆದರೆ ಸ್ನೇಹಪ್ರವೃತ್ತಿಯು ಯಾವರೀತಿ ಪ್ರಾಧಾನ್ಯವನ್ನು ಹೊಂದಿರಬೇಕಾಗಿತ್ತೋ, ಅವಳ ಚರಿತ್ರೆಯಲ್ಲಿ ಅಷ್ಟು ಸ್ಫುಟವಾಗಿ

ವರ್ಣಿತವಾಗಿರುವದಿಲ್ಲ. ಮೊದಲೇ ಅವಳ ಚರಿತ್ರೆಯು ಸಮಾಲೋಚಿತವಾಗಿರುತ್ತದೆ. ಇಲ್ಲಿ ಪುನಃ ಹೇಳಬೇಕಾದ ಅವಶ್ಯಕವಿಲ್ಲ.

ಪಾರ್ವತೀ ಚರಿತ್ರೆಯಲ್ಲಿಯೂ ಸ್ನೇಹಪ್ರವೃತ್ತಿಯೇ ಅತ್ಯಂತ ಪ್ರಧಾನವಾದದ್ದು. ಅವಳ ಅವಿಚಲಿತ ಪ್ರಣಯಕ್ಕೆ ಮಹಾದೇವನೇ ಅಧಿಕಾರಿ. ಅವಳ ದಯೆಗೆ ಆಶ್ರಮ, ವೃಕ್ಷ, ಮೃಗ, ಚಕ್ರವಾಕ ದಂಪತಿ, ಸ್ಥಾವರ ಜಂಗಮಗಳೆಲ್ಲವೂ ಅಧಿಕಾರಿಗಳು. ತನ್ನ ಸಂಕಲ್ಪಕ್ಕೆ ಸ್ವಲ್ಪ ಕ್ಷತಿಯಾಗುವಂತೆ ಕಂಡುಬಂದರೂ ಅದನ್ನು ಸಾಧಿಸುವ ಪ್ರಯತ್ನಮಾಡುವಳೇ ಹೊರತು, ಶಕುಂತಳೆ, ಪ್ರಿಯಂವದೆ, ಅನಸೂಯೆ ಇವರ ಹಾಗೆ ಮೌನವಾಗಿರುವವಳಲ್ಲ. ಪರಮೇಶ್ವರನು ಸ್ತ್ರೀಯರ ಸಂಪರ್ಕವನ್ನು ಬಿಡಬೇಕೆಂದು ಬೇರೆ ಸ್ಥಳಕ್ಕೆ ಹೊರಟುಹೋದಾಗ್ಯೆ, ಇವಳು ಅಷ್ಟಕ್ಕೇನೇ ಆಶಾಭಗ್ನಳಾಗದೆ, ಪುನಃ, ಸ್ಥಿರಸಂಕಲ್ಪಮಾಡಿ ಕಟೂಗ್ರವಾದ ತಪೋನುಷ್ಠಾನವನ್ನು ಮಾಡಿದಳು. ಪಾರ್ವತಿಯ ಬುದ್ಧಿವೃತ್ತಿ ಮತ್ತು ಕರ್ಮಕ್ಷಮತೆ ಇವೆರಡೂ ವಿಲಕ್ಷಣವಾಗಿ ಪ್ರಕಾಶವಾಗಿದ್ದವು. ಪ್ರಾಯಃ, ಆರ್ಯಗ್ರಂಥಾವಳಿಗಳ ಪ್ರಬಂಧಗಳನ್ನು ಅನುಸರಿಸಿ ಕಾವ್ಯರಚನೆ ಮಾಡಿದರೆ, ಸ್ತ್ರೀ ಚರಿತ್ರೆ ವರ್ಣನೆಯು ರಸವತ್ತಾಗುವದಿಲ್ಲವಾದರೂ, ಕಾಳಿದಾಸನು, ತತ್ರಾಪಿ, ಪಾರ್ವತೀ ಚರಿತ್ರೆಯನ್ನು ಅವಲಂಬಿಸಿ ಅಧಿಕತರವಾದ ಸೌಂದರ್ಯವನ್ನು ತೋರ್ಪಡಿಸಿರುವದು ಅತ್ಯಾಶ್ಚರ್ಯವಾಗಿದೆ. ಪಾರ್ವತಿಯ ಚರಿತ್ರೆಯನ್ನು ಓದಿದರೆ ಮನಸ್ಸಿನಲ್ಲಿ ಉಂಟಾಗುವ ವಿಸ್ಮಯ ಮಿಶ್ರಿತ ಅದ್ಭುತರಸೋದಯದ ಹಾಗೆ ಸಂಸ್ಕೃತ ಇತರ ಕವಿಗಳ ಯಾವ ನಾರೀ ಚರಿತ್ರೆಯಲ್ಲಿಯೂ ಆಗುವದಿಲ್ಲವು.

ಈ ನಾಲ್ಕು ಜನ ರಮಣೀಯರ ಚರಿತ್ರೆಯು ಆರ್ಯಕವಿಕಲ್ಪನಾ ತರುವಿಗೆ ಅಮೃತಮಯವಾದ ಫಲಸ್ವರೂಪವಾಗಿದೆ. ಇವರ ನಡವಳಿಕೆಯಲ್ಲಿ ಪರಸ್ಪರ ಅಲ್ಪಸ್ವಲ್ಪ ತಾರತಮ್ಯವಿದ್ದರೂ ಬಾಧಕವೇನೂ ಇಲ್ಲ. ಆರ್ಯಕವಿಕಲ್ಪಿತ ನಾರೀ ಚರಿತ್ರೆಗಳಲ್ಲಿ ಇವರ ಚರಿತ್ರೆಯೇ ಉತ್ಕರ್ಷಸೀಮಾವಧಿಯಾಗಿರುತ್ತದೆ. ಇವರ ಚರಿತ್ರೆಯನ್ನು

ಓದಿದರೆ ಕಾವ್ಯಪಾಠದಿಂದ ಉಂಟಾಗುವ ಆನಂದಲಾಭಮಾತ್ರವಲ್ಲದೆ, ಹೃದಯದ ಪ್ರಶಸ್ತತೆಯೂ, ಧರ್ಮದಲ್ಲಿ ಬುದ್ಧಿಯೂ, ದುಃಖಸಮಯದಲ್ಲಿ ಸಹಿಷ್ಣುತೆಯೂ, ನಾನಾ ವಿಷಯದಲ್ಲಿ ನಾನಾ ಸಮಯದಲ್ಲಿ ಶಿಕ್ಷಾಲಾಭವೂ ಉಂಟಾಗುತ್ತವೆ.

ನಮ್ಮ ದೇಶದ ಪ್ರಾಚೀನ ರಮಣೀಯರ ಚರಿತ್ರೆಯ ವರ್ಣನೆಯು ಸಂಪೂರ್ಣವಾಯಿತು. ಸ್ಮೃತಿಕರ್ತರು ಸ್ತ್ರೀ ಚರಿತ್ರೆಯನ್ನು ಚಿತ್ರಿಸಿರುವದಕ್ಕಿಂತಲೂ ಹೆಚ್ಚಾದ ಸುಂದರ ಚರಿತ್ರೆಯನ್ನು ಜಗತ್ತಿನಲ್ಲಿ ನೋಡುವದು ಅಸಾಧ್ಯವಾಗಿದೆ. ಯಾವ ದೇಶದ ಸ್ಮೃತಕರ್ತರೇ ಆಗಲಿ ಇದಕ್ಕಿಂತಲೂ ಉತ್ಕೃಷ್ಟ ಚರಿತ್ರೆಯನ್ನೂ, ಇದಕ್ಕಿಂತಲೂ ಉತ್ಕೃಷ್ಟತರವಾದ ನಿಯಮಾವಳಿಗಳನ್ನೂ ಪ್ರಚುರಪಡಿಸುವದಕ್ಕೆ ಸಮರ್ಥರೆಂದು ತಿಳಿಯುವದಸಾಧ್ಯವಾದದ್ದು. ಯೂರೋಪ್ ದೇಶದವರ ಸಾಹಿತ್ಯ ಭಾಂಡಾರದಲ್ಲಿ ಕದಾಚಿತ್ ಶಕುಂತಳಾ, ದಮಯಂತಿ ಇವರಿಗೆ ಸ್ವಲ್ಪ ಹೆಚ್ಚುಕಡಮೆಯಾಗಿ ಸರಿಯಾದ ನಾರೀ ಚರಿತ್ರೆಯನ್ನು ನೋಡ ಬಹುದು. ಆದರೆ ಸೀತಾ, ಪಾರ್ವತಿ, ಸಾವಿತ್ರಿ, ಇವರನ್ನು ನೋಡುವವೆಂದು ಯೋಚಿಸುವದಸಾಧ್ಯವು. ವಾಲ್ಮೀಕಿ ವೇದವ್ಯಾಸರನ್ನು ವಿನಾ ಯಾವ ಕಾಲದ ಯಾವ ದೇಶದ ಕವಿಯೂ ಈರೀತಿಯಾದ ವರ್ಣನೆಯನ್ನು ಮಾಡಿ ಕೃತಕಾರ್ಯರಾಗಲಾರರು.

ಇದುವರಿಗೆ ಪುರಾತನರಾದ ಕವಿಗಳ ಕಲ್ಪನೆಗಳಲ್ಲಿ ಉಕ್ತರಾದ ರಮಣೀಯರ ಗುಣಾವಳಿಗಳನ್ನು ನೋಡಿದ್ದಾಯಿತು. ಇದನ್ನು ಬಿಟ್ಟು ಆಧುನಿಕರಿಂದ ಲಿಖಿತವಾಗಿರುವ ಚರಿತ್ರಗಳನ್ನು ನೋಡಿದರೆ ಅದರಲ್ಲಿಯೂ ಅಸಾಧಾರಣಕ್ಷಮತಾಯುಕ್ತರಾದ ರಮಣೀಗಳನ್ನು ವಿಶೇಷವಾಗಿ ನೋಡಬಹುದು; ಒಬ್ಬಿಬ್ಬರು ಹೆಂಗಸರು ಪಂಡಿತ ಮಂಡಲಿಯಲ್ಲಿ ರತ್ನಸ್ವರೂಪರಾಗಿದ್ದಾರೆ; ಒಬ್ಬಿಬ್ಬರು ಯುದ್ಧಕಾರ್ಯದಲ್ಲಿ ದಕ್ಷತೆಯನ್ನು ತೋರಿಸಿರುತ್ತಾರೆ; ನಾಲ್ಕಾರುಮಂದಿ ರಾಜನೀತಿಯಲ್ಲಿ ಪಾರದರ್ಶಿತೆಯನ್ನು ತೋರಿಸಿರುತ್ತಾರೆ. ಕರ್ನಾಟಕ ರಾಜಮಹಿಷೀ,

ವಿಶ್ವದೇವಿ, ಲಕ್ಷ್ಮೀದೇವಿ, ಖನ್ನಾ ಲೀಲಾವತಿ, ಇವರೆಲ್ಲರೂ ಪ್ರಥ ಮ ಶ್ರೇಣಿಯಲ್ಲಿ ಸೇರತಕ್ಕವರಾಗಿದ್ದಾರೆ. ದುರ್ಗಾವತಿ, ಲಕ್ಷ್ಮೀ ಬಾಯಿ, ಯಶವಂತರಾಯನ ಹೆಂಡತಿ, ಇವರೆಲ್ಲರೂ ಸ್ವಯಂಯುದ್ಧ ದಲ್ಲಿ ಪ್ರವರ್ತಕರಾಗಿದ್ದರು. ತಾರಾಬಾಯಿ, ಅಹಲ್ಯಾಬಾಯಿ, ಸಾ ವಿತ್ರೀಬಾಯಿ, ತುಳಸೀಬಾಯಿ, ಇವರೆಲ್ಲರೂ ಅನೇಕ ದಿವಸ ಮ ಹರಾಷ್ಟ್ರದ ರಾಜ್ಯಭಾರವನ್ನು ಮಾಡಿರುತ್ತಾರೆ. ಇವರಲ್ಲಿ ಅಹ ಲ್ಯಾಬಾಯಿಯು ಸರ್ವಗುಣ ವಿಭೂಷಿತಳಾದವಳು. ಅವಳ ದಯೆ, ದಾನ ಶೌಂಡತೆ, ರಾಜನೀತಿ ಚಾತುರ್ಯಗಳನ್ನು ಭಾರತವರ್ಷದ ಇತಿ ಹಾಸದಲ್ಲಿ ಬಹುವಿಧವಾಗಿ ಕೊಂಡಾಡಿರುತ್ತಾರೆ. ರಾಣೀಭವಾನಿ ಯು ವಂಗದೇಶವಿಖ್ಯಾತ ರಮಣೀಗಳಲ್ಲಿ ಒಬ್ಬಳಾಗಿದ್ದಳು. ಈಗ ಲೂ ಸಂವಾದ ಪತ್ರಿಕೆಗಳಲ್ಲಿ ನಾನಾ ಗುಣವತಿಯಾದ ಮಹಾರಾಣಿ ಸ್ವರ್ಣಮಯಿಯನ್ನು ಕೊಂಡಾಡುತಲಿರುವದನ್ನು ನಾವು ಪ್ರತ್ಯಹದ ಲ್ಲಿಯೂ ಕೇಳುತಲಿರುತ್ತೇವೆ.

ಭಾರತವರ್ಷಕ್ಕೆ ಮಧ್ಯಕಾಲದಲ್ಲಿ ಉಂಟಾದ ರಾಜ ಪೀಡಾನಿ ಮಿತ್ತ ದುರವಸ್ಥೆಯಿಂದ ಸ್ತ್ರೀಯರ ಸಾಮಾಜಿಕಾವಸ್ಥೆಯು ಬಹಳ ಹೀನಸ್ಥಿತಿಯನ್ನು ಹೊಂದಿತು. ಆ ಕ್ಷತಿನಿವಾರಣಾರ್ಥವಾಗಿ ನಾನಾ ವಿಧ ಪ್ರಯತ್ನಗಳು ನಡಸಲ್ಪಡುತಲಿವೆ. ಇನ್ನೊಂದು ಶತಾಬ್ದದೊ ಳಗೆ ನಾವೂ ನಮ್ಮ ದೇಶದಲ್ಲಿ ಬಹಳ ಉತ್ಕೃಷ್ಟ ಚರಿತ್ರೆಯನುಳ್ಳ ಅನೇಕ ನಾರಿಯರ ನಾಮಶ್ರವಣವನ್ನು ಮಾಡಬಹುದು. ಸ್ತ್ರೀಯರು ಪುರುಷರೊಡನೆ ಸೇರಿ ದೇಶಕ್ಕೆ ಉನ್ನತಿಯನುಂಟುಮಾಡುವ ಕಾರ್ಯ ದಲ್ಲಿ ಪ್ರವರ್ತಕರಾದರೆ ಅನೇಕ ಉಪಕಾರ ವುಂಟಾಗುವದು.

ವಿಖ್ಯಾತನಾದ ಮಿಲ್ ಎಂಬುವನು ತಾನು ಅರ್ಥವ್ಯವಹಾರ ಶಾಸ್ತ್ರ ವನ್ನು ಮಾಡುವಕಾಲದಲ್ಲಿ ತನ್ನ ಹೆಂಡತಿಯು ಬಹಳ ಸಹಾಯ ಮಾ ಡಿದಂತೆ ಹೇಳಿರುತ್ತಾನೆ. ನಾವೂ ಸ್ವಲ್ಪ ದಿವಸದಲ್ಲಿಯೇ ಅಂತಾ ಗು ಣವತಿಗಳಾದ ರಮಣೀಗಳನ್ನು ನಮ್ಮ ದೇಶದಲ್ಲಿ ನೋಡುವವೆಂದು ದೃ

ಢದಾಗಿ ನಂಬುತ್ತೇವೆ. ಸಮಾಜ[illegible]ಸ್ತ್ರೀಯು ಅಧೈರ್ಯಕ, ಪುರುಷನು ಅಧೈರ್ಯಕ, ಅಧೈರ್ಯಕರಾದ ಸ್ತ್ರೀಯರು ಅಕರ್ಮಣ್ಯರಾದರೆ ಅವರ ಅಧೈರ್ಯಕರಾದ ಪುರುಷರಿಂದ ಸಮಾಜದ ಸಮಸ್ತ ಹಿತಸಾಧನವಾದೀತೆಂದು ನಂಬುವದು ಯಾವಾಗಲೂ ಆಗಲಾರದು.

ಸಮಾಪ್ತವು.

THE

# Karnataka Granthamala

Series No. 21.

# * ವಿಷವೃಕ್ಷ *

ಅಡವಿಯಹುಡುಗಿ, ಅಹಲ್ಯಾಬಾಯಿ, ಆನಂದಮಠ, ಇಂದಿರಾ,
ಕಮಲಾಕಾಂತ, ಕಪಾಲಕುಂಡಲಾ, ಚೌಧುರಾಣೀ,
ದುರ್ಗೇಶನಂದಿನೀ, ಪ್ರಾಚೀನನವೀನ ಸ್ತ್ರೀಪುರು
ಷರು, ಭ್ರಾಂತಿವಿಲಾಸ, ಭಾರತಮಹಿಳಾ,
ಮಾಧವೀಲತಾ, ಯುಗಳಾಂಗುರೀಯ,
ರಜನೀ, ರಾಜಸಿಂಹ, ರಾಧಾರಾಣೀ,
ಲೋಕರಹಸ್ಯ, ಶಕುಂತಳಾ,
ಶಾಂತೀ, ಸೀತಾವನವಾಸ,
ಮುಂತಾದ
ಗ್ರಂಥಪ್ರಣೇತರಾದ

ಬಿ. ವೆಂಕಟಾಚಾರ್ಯರಿಂದ
ವಿರಚಿಸಲ್ಪಟ್ಟುದು.

ಮೈಸೂರು;
ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್ ಪ್ರೆಸ್
೧೯೦೦.



(ಕ್ರಯ ರೂ. ೧—೮—೦)

TO

HORMASJI JEHANGIR BHABHA, ESQUIRE, M. A., F. B. U., F. M. U.

INSPECTOR GENERAL OF EDUCATION, MYSORE,

WHOSE ADVENT INTO THE PROVINCE,

AS THE HEAD OF THE EDUCATIONAL DEPARTMENT,

GAVE A NEW ERA TO THE REVIVAL OF,

AND TO THE INTRODUCTION OF NEW BLOOD INTO,

THE VERNACULAR LITERATURE OF THE COUNTRY,

DURING THE CLOSING DECADE OF THE LAST CENTURY,

THIS WORK

IS RESPECTFULLY DEDICATED

AS A TOKEN OF PERSONAL

HIGH REGARD AND ESTEEM

BY THE AUTHOR.

# ವಿಜ್ಞಾಪನೆ.

---

ಈ ಗ್ರಂಥವಿಷಯದಲ್ಲಿ ವಿಶೇಷ ವಿಜ್ಞಾಪಿಸಬೇಕಾದುದೇನೂ ಉಳಿದಿಲ್ಲ. ಶ್ರೀ ಬಂಕಿಂಕಂದ್ರಚಟ್ಟೋಪಾಧ್ಯಾಯರವರಿಂದ ರಚಿತವಾಗಿರುವ ಮೂಲಗ್ರಂಥವನ್ನವಲಂಬಿಸಿ ಈ ಗ್ರಂಥವು ರಚಿತವಾಗಿದೆ. ಮೂಲಗ್ರಂಥವನ್ನು ಕುರಿತು ದೇಶವಿದೇಶಗಳ ವಿಜ್ಞರಾದ ಅನೇಕ ಮಹನೀಯರಾದ ಪಂಡಿತರು ಬಹುವಿಧವಾಗಿ ಕೊಂಡಾಡಿದ್ದಾರೆ.

ಈ ಗ್ರಂಥವು ಪ್ರಾರಂಭವಾದುದಕ್ಕೂ ಸಮಾಪ್ತವಾದುದಕ್ಕೂ ಮಧ್ಯೆ ಬಹಳ ಕಾಲ ಹಿಡಿಯಿತು. ಈ ಮಧ್ಯೆ ಅನೇಕರು ಗ್ರಂಥವನ್ನು ಬೇಕೆಂದಪೇಕ್ಷಿಸಿದರು. ಸಾಮಯಿಕ ಪತ್ರಿಕೆಯಲ್ಲಿ ಗ್ರಂಥವು ಪ್ರಚಾರವಾಗುತಲಿದ್ದ ಕಾರಣ ಕೇಳಿದವರಿಗೆ ಪುಸ್ತಕವನ್ನು ಕಳುಹಿಸಲಸಮರ್ಥರಾದೆವು. ಈ ಅನಿವಾರ್ಯವಾದ ಸಾವಕಾಶಕ್ಕೆ ಮನಸ್ಸಿನಲ್ಲಿ ಅವಕಾಶಕೊಡದೆ ವಿಜ್ಞರು ನನ್ನ ಇತರ ಗ್ರಂಥಗಳನ್ನು ಆದರಿಸಿರುವ ಹಾಗೆ ಈ ಗ್ರಂಥಕ್ಕೂ ಆಶ್ರಯವನ್ನು ಕೊಟ್ಟು ನನ್ನ ಶ್ರಮವನ್ನು ಸಾರ್ಥಕಮಾಡಬೇಕೆಂದು ಕೋರುತ್ತೇನೆ. ಇತಿ.

ಮೈಸೂರು.
೨—೨—೧೯೦೦
ಶುಕ್ರವಾರ.

ಬಿ. ವೆಂಕಟಾಚಾರ್ಯ.

ಶ್ರೀಯೈನಮಃ.

# ವಿ ಷ ವೃ ಕ್ಷ .

## ಪ್ರಥಮಪರಿಚ್ಛೇದ.



### ನಾಗೇಂದ್ರನಾಥನ ನೌಕಾಯಾತ್ರೆ.

ನಾಗೇಂದ್ರನಾಥದತ್ತನು ಗಂಗಾನದಿಯಲ್ಲಿ ದೋಣಿಯಲ್ಲಿ ಪ್ರಯಾಣವನ್ನು ಮಾಡುತಲಿದ್ದನು. ಆಗ ಜ್ಯೇಷ್ಠಮಾಸವಾದುದರಿಂದ ಬಿರುಗಾಳಿಯುಂಟಾಗುವ ಕಾಲವಾಗಿತ್ತು. ಅದುಕಾರಣ ಅವನು ಹೊರಡುವುದಕ್ಕೆ ಮುಂಚೆಯೇ ಅವನ ಹೆಂಡತಿಯಾದ ಸೂರ್ಯಮುಖಿಯು ಗಂಡನನ್ನು ಕುರಿತು, ಬಹು ಜಾಗರೂಕರಾಗಿರಬೇಕು, ಬಿರುಗಾಳಿಯು ಎದ್ದರೆ ದೋಣಿಯಲ್ಲಿರದೆ ದಡಕ್ಕೆ ಬಂದು ದೋಣಿಯನ್ನು ಗೂಟಕ್ಕೆ ಕಟ್ಟಿಬಿಡಬೇಕೆಂದು ಅನೇಕವಿಧವಾಗಿ ತನ್ನ ಮೇಲೆ ಆಣೆಗಳನ್ನು ಇಟ್ಟುಕೊಂಡು ಅತಿ ವಿನಯದಿಂದ ಕೇಳಿಕೊಂಡಿದ್ದಳು.

ನಾಗೇಂದ್ರನಾಥನು ಹಾಗೆಯೇ ಮಾಡುವೆನೆಂದೊಪ್ಪಿಕೊಂಡು ಹೊರಟಿದ್ದನು. ನಾಗೇಂದ್ರನು ಹಾಗೆಯೇ ಒಪ್ಪದಿದ್ದರೆ ಸೂರ್ಯಮುಖಿಯು ಈ ಪ್ರಯಾಣಕ್ಕೆ ಸಮ್ಮತಿಸುತ್ತಿರಲಿಲ್ಲ. ನಾಗೇಂದ್ರನು ಕಲಿಕತ್ತಾಕ್ಕೆ ಹೋಗದಿರಲು ಸಾಧ್ಯವಾಗಿರಲಿಲ್ಲ. ಅಲ್ಲಿ ವಿಶೇಷ ಕೆಲಸವಿತ್ತು.

ನಾಗೇಂದ್ರನಾಥದತ್ತನು ಒಬ್ಬ ಅತುಳೈಶ್ವರ್ಯವುಳ್ಳ ಜಮೀನ್ದಾರನಾಗಿದ್ದನು. ಗೋವಿಂದಪುರವು ಅವನವಾಸಸ್ಥಾನ. ಆ ಗ್ರಾಮವು ಯಾವ ಜಿಲ್ಲೆಗೆ ಸೇರಿದ್ದೋ ಅದನ್ನು ಪ್ರಕೃತ ವ್ಯಕ್ತಪಡಿಸಬೇಕಾದಸಂಭವವಿಲ್ಲವಾದರೂ, ಹರಿಪುರವೆಂದು ಹೇಳಿ ವರ್ಣಿಸುವೆವು. ನಾಗೇಂದ್ರನು ಯಾ

ವನಪುರುಷನಾಗಿದ್ದನು. ವಯಸ್ಸಿನಲ್ಲಿ ಮೂವತ್ತು ವರುಷಗಳಿಗೆ ಮೀರಿರಲಿಲ್ಲ. ನಾಗೇಂದ್ರನು ತನ್ನ ಸ್ವಂತ ದೋಣಿಯಲ್ಲಿ ಪ್ರಯಾಣವನ್ನು ಮಾಡುತಲಿದ್ದನು. ಮೊದಲೆರಡನೆಯ ದಿನಗಳು ಪ್ರಯಾಣವು ನಿರ್ವಿಘ್ನವಾಗಿ ನಡೆಯಿತು. ನದಿಯ ಜಲವು ಹರಿದುಹರಿದು ಅವಿರಳವಾಗಿ ಹೋಗುತ್ತ ಏರುತಗ್ಗುಗಳಲ್ಲಿ ನೊರೆನೊರೆಯಾಗಿ ಬಿದ್ದೇಳುತ್ತ ಗಾಳಿಯಲ್ಲಿ ಕುಣಿದಾಡುತ್ತ ಬಿಸಿಲಿನಲ್ಲಿ ನಗುತ ನಗುತ ಅಲ್ಲಲ್ಲಿ ಸುಳಿ ಸುಳಿಯಾಗಿ ಸುತ್ತುತ್ತ ಘನಘನ ಗರ್ಜನೆ ಮಾಡುತ್ತ ಪ್ರವಹಿಸುತಲಿತ್ತು. ಇಂತಹ ಗಂಗಾಪ್ರವಾಹದಲ್ಲಿ ನಾಗೇಂದ್ರನು ಪ್ರಯಾಣವನ್ನು ಮಾಡುತಲಿದ್ದನು. ಜಲರಾಶಿಯು ಅಶ್ರಾಂತವಾಗಿ ಅನಂತವಾಗಿ ಕ್ರೀಡಾಮಯವಾಗಿ ಅತ್ಯಂತವಿಸ್ಮಯಾನಂದಜನಕವಾಗಿತ್ತು. ನದಿಯ ದಡದಲ್ಲಿದ್ದ ಹೊಲಗಳಲ್ಲಿ ದನಾಕಾಯುವವರು ದನಗಳನ್ನು ಮೇಯಿಸುತಲಿದ್ದರು. ಒಬ್ಬನು ಮರದ ನೆರಳಿನಲ್ಲಿ ಕೂತುಕೊಂಡು ಹಾಡುವನು. ಒಬ್ಬನು ಹೊಗೆಸೊಪ್ಪನ್ನು ಬಾಯಿಯಲ್ಲಿಟ್ಟುಕೊಂಡು ಉಗುಳನ್ನು ತುಪ್ಪನೆ ಉಗುಳುತ್ತಿರುವನು. ಒಬ್ಬನು ಹೊಗೇಬತ್ತಿಯನ್ನು ಸೇದುತ್ತ ತಡವೆತಡವೆಗೆ ತಲೆಯನ್ನೆತ್ತಿ ಅರ್ಧಸಂಕುಚಿತವಾದ ಬಾಯಿಯಿಂದ ಮೇಘಾಕಾರವಾಗಿ ಪಸರಿಸುವ ಹೊಗೆಯನ್ನು ಆಕಾಶಮಾರ್ಗಕ್ಕೆ ಊದಿ, ಅದರ ವಿಕೃತಿಪ್ರಕೃತಿಯನ್ನು ನೋಡುತ್ತ ಆನಂದಭರಿತನಾಗುವನು. ಅಲ್ಲಲ್ಲಿ ಕೆಲವರು ವೃದ್ಧರಾದ ತಾಯಿತಂದೆ, ಅಕ್ಕತಂಗಿ ಹೆಂಡಂದಿರ ಹೆಸರಗಳನ್ನು ತೆಗೆದುಕೊಂಡು ಪರಸ್ಪರ ಬೈದಾಡುತ್ತ ಕಲಹವನ್ನು ಮಾಡುತಲಿದ್ದರು. ಕೆಲವರು ನದಿಯ ದಡದಲ್ಲಿ ಬುತ್ತಿಯನ್ನು ಬಿಚ್ಚಿಟ್ಟುಕೊಂಡು ಗಂಗಾಜಲ ಸೇಚನೆಯಿಂ ಮಾಡಿ ಗುಕ್ಕುಗುಕ್ಕಾಗಿ ತೆಗೆದುಕೊಂಡು ಸಾವಕಾಶವಾಗಿ ಮೆಲ್ಲುತ್ತಿರುವರು. ಅಲ್ಲಲ್ಲಿ ರೈತರು ಹೊಲಗಳಲ್ಲಿ ಉಳುತ್ತಿದ್ದರು; ಕೆಲವು ಸ್ಥಳಗಳಲ್ಲಿ ಎತ್ತುಗಳು ಹೆಜ್ಜೆಯಮೇಲೆ ಹೆಜ್ಜೆಯನ್ನಿಡುತ್ತ ಭೂಮಿಯ ಬಾಯಿಬಿಡಿಸುವ ಭಾರವಾದ ನೇಗಲನ್ನೆಳೆಯಲಾರದೆ ವಿಶ್ರಾಂತಿಗೆ ನಿಲ್ಲುತ್ತಲೇ

ರೈತನು ಅವುಗಳನ್ನು ಸಾಕಿದವರ ಹೆಂಡಂದಿರ ಹೆಸರುಗಳನ್ನು ಕುರಿತು ಬೈಯುತ್ತಲಿರುವುನು; ಎತ್ತುಗಳ ಹೆಸರುಗಳನ್ನು ಹಿಡಿದು ಕೂಗುತ್ತ ಕಡ್ಡಿಯಿಂದ ಹೊಡೆಯುವುನು. ಅಲ್ಲಿ ನದಿಯ ಘಾಟಿಗಳಲ್ಲಿ ರೈತರ ಹೆಂಡಂದಿರು ಕೆಲವರು ಕೊಡಗಳನ್ನು ತಲೆಯಮೇಲಿಟ್ಟುಕೊಂಡು, ಕೆಲವರು ಕಂಥೆ ಕೌದಿ ಮುಂತಾದವುಗಳನ್ನು ಕೊಂಕುಳಲ್ಲಿರಿಸಿಕೊಂಡು ಚಿನ್ನದ ಮೂಗತಿ ಬೆಳ್ಳಿಸಲಿಗೆ ತೋಳುಬಳೆ ಕಡಗ ಹಿತ್ತಾಳೆಪೌಂಚಿಗಳಿಂದಲಂಕೃತರಾಗಿ ಮಾಸಾಂತರಕ್ಕೆ ಹಿಂದೆ ನೀರಿಗೆ ಹಾಕಿದ್ದ ಶೀರೆಗಳನ್ನುಟ್ಟು ಮಸಿಯನ್ನು ನಿಂದಿಸುವ ದೇಹಕಾಂತಿಯುಳ್ಳವರಾಗಿ ಋಕ್ಷಕೇಶರಾಗಿ ಗುಂಪುಗುಂಪಾಗಿ ವಿರಾಜಿಸುತಲಿರುವುರು. ಅವರಲ್ಲಿ ಒಬ್ಬ ಸುಂದರಿಯು ಗಂಗಾಮೃತ್ತಿಕೆಯನ್ನು ತಲೆಗೆ ಹಾಕಿ ತಿಕ್ಕುತ್ತಿದ್ದಳು; ಒಬ್ಬಳು ಹುಡುಗನನ್ನು ಹೊಡಿಯುತಲಿದ್ದಳು; ಒಬ್ಬಳು ನೆರೆಮನೆಯವಳ ಸಂಗಡ ಯಾರೋ ಒಬ್ಬ ಪುರುಷನನ್ನು ಕುರಿತು ಹೀನಾಯವಾಗಿ ಬೈಯುತ್ತ ಮಾತುನಾಡುತ್ತಿದ್ದಳು; ಮತ್ತೊಬ್ಬಳು ಹಲಿಗೆಯನ್ನಿಟ್ಟುಕೊಂಡು ಅದರಮೇಲೆ ಬಟ್ಟೆಯನ್ನು ಒಗೆಯುತ್ತಿದ್ದಳು. ಕೆಲವು ದೊಡ್ಡದೊಡ್ಡಗ್ರಾಮಗಳಲ್ಲಿ ಕುಲಕಾಮಿನಿಯರು ನದಿಯ ಸೋಪಾನಾವಳಿಗಳನ್ನಲಂಕರಿಸುವರು. ಅವರಲ್ಲಿ ವೃದ್ಧರಾದವರು ಉಪನ್ಯಾಸಗಳನ್ನು ಮಾಡುತಲಿದ್ದರು. ಶ್ರೋತೃಗಳು ಅವರ ವಕ್ತೃತೆಯಿಂದ ಬೆರಗಾಗುತಲಿದ್ದರು. ಮಧ್ಯವಯಸ್ಕರಾದವರು ತಮ್ಮ ಇಷ್ಟದೇವತಾ ಪೂಜೆಯನ್ನು ಮಾಡುತಲಿದ್ದರು. ಯುವತಿಯರು ಮುಖಪರದೆಯ ಸಹಿತವಾಗಿ ನದಿಯಲ್ಲಿ ಸ್ನಾನಮಾಡಲು ಮುಳುಗುಹಾಕುತಲಿದ್ದರು. ಹುಡುಗರು ಕೂಗುತ್ತ ಮರಳಿನಲ್ಲಿ ಆಡುತ್ತ ಒಬ್ಬರಮೇಲೊಬ್ಬರು ನೀರೆರಚಾಡುತ್ತ ಹೆಂಗಸರು ಧ್ಯಾನದಲ್ಲಿ ಮುದಿತನಯನರಾಗಿ ಎದುರಿಗೆ ಇಟ್ಟುಕೊಂಡಿದ್ದ ಹಣ್ಣುಮುಂತಾದ ಪೂಜೆಯ ಸಾಮಗ್ರಿಗಳನ್ನು ತೆಗೆದುಕೊಂಡು ಓಡಿಹೋಗುತಲಿದ್ದರು. ಬ್ರಾಹ್ಮಣಮಹಾಜನರು ನಿರೀಹಸತ್ಪುರುಷರೋಪಾ

ದಿಯಲ್ಲಿ ಬಾಯಿಯಲ್ಲಿ ಗಂಗಾಸ್ತವವನ್ನು ಹೇಳುತ್ತ ಕೈಯಿಂದ ಪೂಜೆಯನ್ನು ಮಾಡುತ್ತ ಹಾಗೆಯೇ ಬಂದೊಂದುಸಲ ನದಿಯಲ್ಲಿ ಆಗ್ರೀವನಿಮಜ್ಜಿತಳಾದ ಯುವತಿಯನ್ನು ಯಾರೂ ಕಾಣಿಸದ ಹಾಗೆ ಓರೆನೋಟದಿಂದ ಕುತೂಹಲ ವಿಶಿಷ್ಟರಾಗಿ ನೋಡುತಲಿದ್ದರು. ಆಕಾಶದಲ್ಲಿ ಸಾಮಾನ್ಯವಾದ ಬೆಳ್ಮೋಡವು ಬಿಸಿಲಿನಲ್ಲಿ ಕಾದು ತೇಲುತಲಿತ್ತು. ಅದರ ಕೆಳಗಡೆ ಕಪ್ಪಾದ ಚುಕ್ಕಿಯ ಹಾಗೆ ಹಕ್ಕಿಯು ಹಾರುತಲಿತ್ತು. ತೆಂಗಿನಮರದಮೇಲೆ ಹದ್ದುಕೂತುಕೊಂಡು ವೃದ್ಧರಾದ ರಾಜಮಂತ್ರಿಗಳ ಹಾಗೆ ನಾಲ್ಕು ದಿಕ್ಕುಗಳನ್ನು ನೋಡುತ್ತ ಯಾವದರಮೇಲೆ ಬಿದ್ದು ಅದನ್ನ ಅಪರಿಹರಿಸಿಕೊಂಡು ಹಾರಿಹೋಗೋಣವೆಂದು ಯೋಚನೆಯನ್ನು ಮಾಡುತಲಿತ್ತು, ಬಕವು ಸಣ್ಣಮನುಷ್ಯರ ಹಾಗೆ ಕೆಸರಿನಲ್ಲಿ ತುಳದಾಡಿಕೊಂಡು ಅಲ್ಲಲ್ಲಿ ನಡೆಯುತಲಿತ್ತು. ಲಾವುಕ ಹಕ್ಕಿಯು ರಸಿಕರ ಹಾಗೆ ಜಲದಲ್ಲಿ ಮುಳುಗೇಳುತ್ತ ಕ್ರೀಡಿಸುತಲಿತ್ತು. ಬೇರೆಪಕ್ಷಿಗಳು ಸಾಮಾನ್ಯ ಜನರಹಾಗೆ ಅಲ್ಲಲ್ಲಿ ಓಡಾಡುತಲಿದ್ದವು. ವರ್ತಕರ ದೋಣಿಗಳು ಸ್ವಂತಪ್ರಯೋಜನಾರ್ಥವಾದುದರಿಂದ ಬೇಗಬೇಗನೆ ಹೋಗುತಲಿದ್ದವು. ಬಾಡಿಗೆ ದೋಣಿಗಳು ಅನ್ಯರ ಪ್ರಯೋಜನಾರ್ಥವಾದುದರಿಂದ ಗಜೇಂದ್ರಗಮನದಲ್ಲಿ ಹೋಗುತಲಿದ್ದವು. ಸ್ವಂತದೋಣಿಗಳು ಪ್ರಭುವಿನ ಪ್ರಯೋಜನಾರ್ಥವಾದುದರಿಂದ ಶುದ್ಧವಾಗಿ ಹೋಗುತ್ತಿರಲಿಲ್ಲ.

ಇವುಗಳನ್ನೆಲ್ಲ ನೋಡುತ್ತ ನಾಗೇಂದ್ರನು ಮೊದಲು ಎರಡನೆಯ ದಿನಗಳು ಪ್ರಯಾಣಮಾಡಿದನು. ಮೂರನೆಯದಿನ ಆಕಾಶದಲ್ಲಿ ಮೇಘಗಳು ಮುಸುರಿ ಕ್ರಮಕ್ರಮವಾಗಿ ಮುಸುಕುತಬಂತು. ನದಿಯ ಜಲರಾಶಿಯು ಕಪ್ಪಾಯಿತು. ಮರದೆಲೆಗಳು ಬಾಡಿದಹಾಗೆ ಬೊಗ್ಗಿ ನಿಷ್ಕಂಪವಾದವು. ಪಕ್ಷಿಗಳು ಗಗನಕ್ಕೆ ಮೇಘಮಂಡಲದವರೆಗೂ ಹಾರಿದವು. ನದಿಯು ನಿಷ್ಪಂದವಾಯಿತು.. ನಾಗೇಂದ್ರನು ದೋಣಿಯನ್ನು ನಡೆಸುತಲಿದ್ದವನನ್ನು ಕುರಿತು ದೋಣಿಯನ್ನು ದಡಕ್ಕೆ ತಂದು ಕಟ್ಟಿಹಾಕೆಂದು ಆಜ್ಞಾಪಿಸಿದನು. ದೋಣಿ

ಯನ್ನು ನಡೆಸುತಲಿದ್ದ ರಹಮತವೊಲ್ಲಾ ಎಂಬುವನು ಆಗ ನವಾಜು ಮಾಡುತಲಿದ್ದ ಕಾರಣ ನಾಗೇಂದ್ರನ ಅಪ್ಪಣೆಗೆ ಉತ್ತರವನ್ನು ಕೊಡಲಿಲ್ಲ. ರಹಮತನು ಯಾವಾಗಲೂ ಅಂಬಿಗನ ಕೆಲಸವನ್ನು ಮಾಡಿದವನಲ್ಲ. ಇವನ ಮಾತಾಮಹನ ತಂಗಿಯು ಒಬ್ಬ ಅಂಬಿಗರರಸನ ಮಗಳಾಗಿದ್ದಳು ; ಆ ಗರ್ವದಿಂದ ಅಂಬಿಗತನಕ್ಕೆ ಉಮೇದವಾರನಾಗಿದ್ದು ಅದೃಷ್ಟಬಲದಿಂದ ಸಿದ್ಧಕಾಮನಾದನು. ಆದರೆ ದೋಣಿಯನ್ನು ನಡಿಸುವುದರಲ್ಲಿ ಹೆಚ್ಚು ಅನುಭವವಿರಲಿಲ್ಲ. ನವಾಜು ಪೂರೈಸಿದಮೇಲೆ ಯಜಮಾನನಕಡೆ ತಿರುಗಿಕೊಂಡು ಸ್ವಾಮಿ ! ಭಯವೇನು ಬಂದದ್ದು ; ತಾವು ನಿಶ್ಚಿಂತರಾಗಿರಬಹುದೆಂದನು. ದಡವು ಒಂದೆರಡು ಮಾರು ದೂರದಲ್ಲಿದ್ದಕಾರಣ ರಹಮತನಿಗೆ ಇಷ್ಟು ಧೈರ್ಯವುಂಟಾಯಿತು. ಕಡೆಗೆ ಹಾಗೂಹೀಗೂ ಹುಟ್ಟುಹೊಡೆದು ದೋಣಿಯನ್ನು ದಡಕ್ಕೆ ಸೇರಿಸಿದನು.

ರಹಮತನಿಗೂ ವರುಣವಾಯುದೇವರುಗಳಿಗೂ ಸ್ವಲ್ಪ ಮನಸ್ತಾಪವಿದ್ದ ಹಾಗೆ ತೋರುತ್ತೆ. ಬಿರುಗಾಳಿಯೆದ್ದಿತು. ಗಾಳಿಯುಬಂದು ಮರಗಳ ಸಂಗಡ ಮಲ್ಲಯುದ್ಧವನ್ನು ಮಾಡಿ ಸಹೋದರ ವೃಷ್ಟಿಯನ್ನು ಕರೆತಂದು ಎರಡೂ ಸೇರಿ ಬಹಳ ಅವಾಂತರ ಮಾಡಲಾರಂಭಿಸಿ, ವೃಷ್ಟಿಯು ಗಾಳಿಯಮೇಲೆ ಏರಿಕೊಂಡು ಮರಗಳನ್ನು ಬೊಗ್ಗಿಸಿ ರೆಂಬೆಗಳನ್ನು ಮುರಿದು ಲತೆಗಳನ್ನುಹರಿದು ಪುಷ್ಪಗಳನ್ನುತೂರಿ ನದಿಯ ಜಲವನ್ನು ಅಲ್ಲೋಲಕಲ್ಲೋಲಮಾಡಿ ನಾನಾಉತ್ಪಾತಗಳನ್ನು ಮಾಡಿದವು. ಒಂದು ರಹಮತನ ಟೋಪಿಯನ್ನು ಹಾರಿಸಿಕೊಂಡು ಹೋಯಿತು. ಮತ್ತೊಂದು ಅವನ ದಾಡಿಯಲ್ಲಿ ಪ್ರವಾಹವನ್ನುಂಟುಮಾಡಿತು. ಅಂಬಿಗರು ದೋಣಿಯ ಪಟವನ್ನು ಇಳಿಸಿ ಕೂತರು. ನಾಗೇಂದ್ರನು ದೋಣಿಯ ಕಿಟಕೀಬಾಗಿಲಗಳನ್ನು ಹಾಕಿದನು. ಸೇವಕರು ಸಾಮಾನುಗಳನ್ನೆಲ್ಲ ಮರೆಯಲ್ಲಿಟ್ಟರು.

ನಾಗೇಂದ್ರನಿಗೆ ವಿಷಮಸಂಕಟ ಪ್ರಾಪ್ತವಾಯಿತು. ಬಿರುಗಾಳಿಯ

ಭಯಕ್ಕೆ ದೋಣಿಯಿಂದಿಳಿದರೆ ಅಂಬಿಗರು ನಕ್ಕು ಹೇಡಿಯೆಂದು ಹೇಳುವರು. ಇಳಿಯದಿದ್ದರೆ ಸೂರ್ಯಮುಖಿಯಲ್ಲಿ ಮಿಥ್ಯಾವಾದಿಯಾಗುವನು. ಮಿಥ್ಯಾವಾದಿಯಾದರೆ ಬಾಧಕವೇನೆಂಬು ಪಾಠಕರಲ್ಲಿ ಅನೇಕರು ಚರ್ಚಿಸುವರು. ಅದರಿಂದ ಬಾಧಕವೇನೋ ನಾವರಿಯೆವು. ನಾಗೇಂದ್ರನು ಅದರಿಂದ ಬಾಧಕವೆಂದು ಗ್ರಹಿಸಿದ್ದನು. ಈ ಸಮಯದಲ್ಲಿ ರಹಮತನು ನಾಗೇಂದ್ರನನ್ನು ಕುರಿತು ಸ್ವಾಮಿ ! ಹಗ್ಗವು ಹಳದಾಗಿದೆ, ಏನಾಗುವುದೋ ಗೊತ್ತಾಗಿ ಹೇಳಲಾಗದು, ಗಾಳಿಯು ಪ್ರಬಲವಾಗುತಲಿದೆ, ದೋಣಿಯಿಂದ ಇಳಿದು ಹೋಗುವುದು ಒಳ್ಳೇದಾಗಿ ಕಾಣುತ್ತದೆಂದು ಹೇಳಿದನು. ಆಗ ನಾಗೇಂದ್ರನು ದೋಣಿಯಿಂದಿಳಿದು ದಡಕ್ಕೆ ಹೋದನು. ನಿರಾಶ್ರಯವಾಗಿ ನದೀತೀರದಲ್ಲಿ ನಿಂತಿರುವುದು ಯಾರಿಗೂ ಸುಲಭಸಾಧ್ಯವಲ್ಲ. ಆಗಲೇ ಅಸ್ತಮಯವಾಗುತ್ತಬಂತು. ಮಳೆಯು ನಿಲ್ಲಲಿಲ್ಲವಾದ ಕಾರಣ ನಾಗೇಂದ್ರನು ನಿಲ್ಲುವುದಕ್ಕೆ ಸ್ಥಳವನ್ನು ನೋಡಿಕೊಳ್ಳುವುದು ಕರ್ತವ್ಯವೆಂದು ಯೋಚಿಸಿ ಗ್ರಾಮಾಭಿಮುಖವಾಗಿ ಹೊರಟನು. ನದಿಯಿಂದ ಗ್ರಾಮವು ಸ್ವಲ್ಪ ದೂರವಾಗಿತ್ತು. ನಾಗೇಂದ್ರನು ನಡೆದುಕೊಂಡು ಹೋದನು. ಮಾರ್ಗದಲ್ಲಿ ಕೆಸರು, ಇತ್ತು ; ಮಳೆಯು ನಿಂತಿತು, ಗಾಳಿಯು ಸ್ವಲ್ಪ ಕಡಮೆಯಾಯಿತು.

ಆದರೆ ಆಕಾಶವು ಮೇಘಪರಿಪೂರ್ಣವಾಗಿತ್ತಾದುದರಿಂದ ಪುನಃ ಬಿರುಮಳೆಯು ಬರುವ ಸಂಭವವಿತ್ತು. ಅದು ಕಂಡು ನಾಗೇಂದ್ರನು ಮುಂದೆ ಗ್ರಾಮಾಭಿಮುಖವಾಗಿ ಹೋದನು. ಹಿಂದಿರುಗಲಿಲ್ಲ.

ಆಕಾಶದಲ್ಲಿ ಕಾರ್ಮೋಡವು ಅತಿಯಾಗುತ್ತಬಂದು ಪ್ರದೋಷ ಕಾಲದಲ್ಲಿಯೇ ಕಾರ್ಮೊಬ್ಬು ಕವಿತುಕೊಂಡಿತು. ಊರು, ಮನೆ, ದಾರಿ, ನದಿ, ಯಾವದೂ ಕಾಣಿಸದು. ವನದವೃಕ್ಷಗಳು ಮಾತ್ರ ಮಾಲಾಕಾರವಾಗಿ ಮಿಂಚಿನ ಹುಳುಗಳಿಂದಲಂಕೃತವಾಗಿ ವಜ್ರಖಚಿತವಾದ ಕೃತ್ರಿಮವೃಕ್ಷಗಳಂತೆ ಶೋಭಾಯಮಾನವಾಗಿ ಮಿನುಗುವವು. ಗರ್ಜನವಿಹೀನವಾದ ಶ್ವೇತ

ಕೃಷ್ಣಕಾಂತಿಯನ್ನು ತಾಳಿದ ಮುಗಿಲುಮಾಲೆಗಳ ಮಧ್ಯದಲ್ಲಿ ಒಂದು ತಡ ವಿಗೆ ಹಾಸ್ಯಸನನ್ನು ಹೊಂದದ ಮುಗುದೆಯರ ಕೋಪದಂತೆ ಹ್ರಸ್ವದೀಪ್ತ ವಾದ ಮುಗಿಲ್ವೆಳಗು ತಡವೆತಡವಿಗೆ ಚಮಕಿಸುತಲಿತ್ತು. ಕಪ್ಪೆಗಳು ನವ ವಾರಿಸಮಾಗಮದಿಂದ ಪ್ರಫುಲ್ಲವಾದ ಚಿತ್ತವುಳ್ಳವುಗಳಾಗಿ ಅಸ್ಪಷ್ಟವಾದ ಧ್ವನಿಗಳನ್ನು ಮಾಡುತ್ತ ಪ್ರಬಂಧಗಳನ್ನು ಪಾರಾಯಣಮಾಡುವ ಬ್ರಾ ಹ್ಮಣ ಮಂಡಲಿಯನ್ನು ಹೋಲುತಲಿದ್ದವು. ಝಿಲ್ಲಿಕೆಯುಶಿಳ್ಳು ಹಾಗೆಯೇ ಕಿವಿಕೊಟ್ಟು ಕೇಳಿದರೆ ರಾವಣನ ಚಿತಿಯು ಹಾಗೆ ಅಶ್ರಾಂತವಾಗಿ ಜೀಯ್ಯ ಜೀಯ್ಯನೆ ಝೇಂಕಾರಧ್ವನಿಯು ಹಾಗಿರುವುದು. ಆದರೆ ಗಮನ ಕೊಡದಿದ್ದರೆ ಅದು ಕಿವಿಗೆ ಬೀಳದು. ಈ ಶಬ್ದಗಳ ಮಧ್ಯದಲ್ಲಿ ಮರಗಳ ತುದಿಯಿಂದ ಮರದೆಲೆಗಳ ಮೇಲೆ ಬೀಳುವ ಮಳೆನೀರಿನ ತೊಟಗುಟ್ಟುವ ಶಬ್ದ, ಮರ ಗಳ ಬುಡದಲ್ಲಿ ನಿಂತಿದ್ದ ನೀರಿನಲ್ಲಿ ಎಲೆಗಳಿಂದ ಬೀಳುವ ನೀರುಹನಿಗಳ ಪತನದ ಶಬ್ದ, ಮಾರ್ಗದಲ್ಲಿ ನಿಂತಿದ್ದ ನೀರಿನಲ್ಲಿ ಓಡಿಹೋಗುವ ನರಿಗಳ ಪದಸಂಚಾರದ ಶಬ್ದ, ಅಲ್ಲಲ್ಲಿ ಒಂದೊಂದುತಡವೆ ಮರದ ಮೇಲೆ ಕೂತಿ ರುವ ಹಕ್ಕಿಯು ತೊಯಿದ ರೆಕ್ಕೆಯ ನೀರನ್ನೊದರಿಕೊಳ್ಳಲು ಮಾಡುವ ರೆಕ್ಕೆಬಡಿತದ ಶಬ್ದ, ಆಗಿಂದಾಗ ನಿಂತುಹೋದಹಾಗಿದ್ದ ಗಾಳಿಯು ಕ್ಷಣಿಕ ತರ್ಜನೆ, ಅದರೊಂದಿಗೆ ಮರದೆಲೆಗಳಿಂದ ಏಕಕಾಲದಲ್ಲಿ ಬೀಳುವ ಸಾವಿ ರಾರು ನೀರು ಹನಿಗಳ ಪತನದ ಶಬ್ದ—ಈ ಶಬ್ದಗಳನ್ನು ಕೇಳುತ್ತ ನಾಗೇಂದ್ರನು ಮರದ ಹನಿಯಿಂದ ತೋಯುತ್ತ ನೀರುಮುಣುಗಿದ ಹಾದಿ ಯೊಳಗಡಿಗಡಿಗೆ ಜಾರಿಜಾರಿ ಬಿದ್ದೇಳುತ್ತ ಬರುತ್ತ ದೂರದಲ್ಲಿ ಒಂದು ಬೆಳ ಕನ್ನು ಕಂಡನು. ಆ ಬೆಳಕನ್ನು ಕಂಡು ಅದಕ್ಕೆ ಇದಿರಾಗಿ ಹೋದನು. ಬಹಳ ಹೊತ್ತಿನ ಮೇಲೆ ಶ್ರಮಪಟ್ಟುಕೊಂಡು ಬಂದು ನೋಡಲಾಗಿ ಆ ಬೆಳಕು ಸುಟ್ಟ ಇಟ್ಟಿಗೆಯಿಂದ ಕಟ್ಟಲ್ಪಟ್ಟಿದ್ದ ಒಂದು ಹಳೇಮನೆಯಿಂದ ಬರುತಲಿತ್ತು. ಮನೆಯ ಬಾಗಲು ತೆರದಿತ್ತು. ನಾಗೇಂದ್ರನು ಭೃತ್ಯನನ್ನು

ಬಾಗಿಲಹೊರಗೆ ಇಟ್ಟು ಮನೆಯೊಳಗೆ ಹೋದನು. ಒಳಗೆ ನೋಡಲಾಗಿ ಮನೆಯ ಅವಸ್ಥೆಯು ಬಹಳ ಭಯಂಕರವಾಗಿತ್ತು.

## ಎರಡನೆಯ ಪರಿಚ್ಛೇದ.

### ದೀಪನಿರ್ವಾಣ

ಮನೆಯು ಕೇವಲ ಸಾಮಾನ್ಯವಾದುದಾಗಿರಲಿಲ್ಲ. ಆದರೆ ಪ್ರಕೃತ ಸ್ಥಿತಿಯಲ್ಲಿ ಅದರಲ್ಲಿ ಐಶ್ವರ್ಯದ ಲಕ್ಷಣಗಳ್ಯಾವದೂ ಕಾಣಲಿಲ್ಲ. ಕೊಠಡಿಗಳೆಲ್ಲ ಬಿದ್ದುಹೋಗಿ ಮಲಿನವಾಗಿ ಮನುಷ್ಯಸಮಾಗಮದ ಚಿನ್ಹೆಗಳೊಂದೂ ಕಂಡುಬರಲಿಲ್ಲ. ಇಲಿಗಳು ಹುಳುಗಳು ತುಂಬಿದ್ದವು. ಒಂದು ಕೊಠಡಿಯಲ್ಲಿಮಾತ್ರ ದೀಪವೊಂದು ಉರಿಯುತಲಿತ್ತು. ಆ ಕೊಠಡಿಗೆ ನಾಗೇಂದ್ರನು ಪ್ರವೇಶಿಸಿದನು. ಅದರಲ್ಲಿ ಸಂಸಾರಕ್ಕೆ ಉಪಯೋಗವಾದ ಒಂದೆರಡು ಸಾಮಾನುಗಳಿದ್ದವು. ಅವೂಕೂಡ ದಾರಿದ್ರ್ಯವ್ಯಂಜಕವಾಗಿದ್ದವು. ಒಂದೆರಡು ತಪಲೆಗಳು, ಒಂದು ಬಿದ್ದುಹೋಗಿದ್ದ ಒಲೆ, ಮೂರು ನಾಲ್ಕು ಹರಿವಾಣಗಳು, ಇಷ್ಟುಮಾತ್ರ ಕೊಠಡಿಯನ್ನಲಂಕರಿಸಿದ್ದವು. ಗೋಡೆಗಳೆಲ್ಲ ಕಪ್ಪಾಗಿದ್ದವು. ಮೂಲೆಗಳಲ್ಲಿ ಜಾಡನ ಪರೆಗಳು ನೇತಾಡುತಲಿದ್ದವು. ನಾಲ್ಕುಕಡೆಗಳಲ್ಲಿಯೂ ಜರಡೆ, ಜಾಡಹುಳ, ಹಲ್ಲಿ, ಇಲಿಮುಂತಾದವುಗಳು ಓಡಾಡುತಲಿದ್ದವು. ಒಂದು ಹಳೇ ಹಾಸಿಕೆಯ ಮೇಲೆ ಒಬ್ಬ ವೃದ್ಧನು ಮಲಗಿದ್ದನು. ನೋಡಿದರೆ ಅವನ ಅಂತಿಮಕಾಲವು ಸಮೀಪವಾಗುತಲಿದ್ದಹಾಗೆ ಕಂಡಿತು. ಕಣ್ಣುಗಳು ಕಂಗೆಟ್ಟು, ನಿಶ್ವಾಸವು ಪ್ರಬಲವಾಗಿ ಓಷ್ಟವು ಕಂಪಿತವಾಗುತಲಿತ್ತು. ಪಾರ್ಶ್ವದಲ್ಲಿ ಗೋಡೆಯಿಂದ ಬಿದ್ದಿದ್ದೊಂದು ಇಟ್ಟಿಗೆಯ ತುಂಡಿನ ಮೇಲೆ ಒಂದು ಮಣ್ಣಿನ ಹಣತೆಯಲ್ಲಿ ದೀಪವು

ಉರಿಯುತಲಿತ್ತು. ಅದರಲ್ಲಿ ತೈಲಾಭಾವವಿತ್ತು. ಹಾಸಿಗೆಯಮೇಲೆ ಮಲಗಿದ್ದ ನರದೇಹದಲ್ಲಿಯೂ ಹಾಗೆಯೇ ಆಗಿತ್ತು. ಹಾಸಿಗೆಯಪಾರ್ಶ್ವದಲ್ಲಿ ಮತ್ತೊಂದು ಪ್ರದೀಪವು ಪ್ರಕಾಶಿಸುತಲಿತ್ತು–ಅನಿಂದಿತವಾದ ಗೌರಕಾಂತಿಯನುಳ್ಳ ಸ್ನಿಗ್ಧವಾದ ಜ್ಯೋತಿರ್ಮಯರೂಪಿಣಿಯಾದ ಬಾಲಿಕೆಯೊಬ್ಬಳು ಕುಳಿತಿದ್ದಳು.

ತೈಲಹೀನವಾದ ಪ್ರದೀಪದ ಪ್ರಕಾಶವು ಕಡಮೆಯಾದುದರಿಂದಲೋ ಅಥವಾ ಗೃಹವಾಸಿಗಳಾದ ಆ ಯೆರಡು ಜನರಿಗೂ ಸನ್ನಿಹಿತವಾಗಿದ್ದ ವಿರಹಚಿಂತೆಯಿಂದುಂಟಾದ ಉದ್ವಿಗ್ನವಾದ ಚಿತ್ತಸ್ಥಿತಿಯಿಂದಲೋ ನಾಗೇಂದ್ರನು ಅಲ್ಲಿಗೆ ಪ್ರವೇಶಮಾಡಿದುದನ್ನು ಅವರಲ್ಲಿ ಯಾರೂ ನೋಡಲಿಲ್ಲವಾಗಿ ಅವನು ಬಾಗಿಲನಲ್ಲಿ ನಿಂತುಕೊಂಡು ಆ ವೃದ್ಧನ ಮುಖದಿಂದ ಹೊರಟ ಅವನ ಮರಣಕಾಲದ ದುಃಖಪರಿಪೂರ್ಣವಾದ ಮಾತುಗಳನ್ನು ಕೇಳುತ್ತ ನಿಂತಿದ್ದನು. ಆ ಪ್ರಾಚೀನನೂ ಆ ಬಾಲೆಯೂ ಸಹ ಬಹುಲೋಕಪೂರ್ಣವಾದ ಈ ಲೋಕಾಲಯದಲ್ಲಿ ನಿಸ್ಸಹಾಯಕರಾಗಿದ್ದರು. ಮೊದಲು ಇವರು ಐಶ್ವರ್ಯವಂತರಾಗಿದ್ದರು. ಬಂಧುಬಳಗದವರು, ದಾಸದಾಸಿಯರು, ಇದ್ದರು. ಎಲ್ಲಾ ಸಹಾಯಸೌಷ್ಠವವೂ ಇತ್ತು. ಆದರೆ ಚಂಚಲಳಾದ ಕಮಲೆಯು ಕೈಬಿಟ್ಟು ಹೋಗಿ ಎಲ್ಲವೂ ಬಂದರಹಿಂದೆ ಬಂದು ಹೋಗಿಬಿಟ್ಟು ಕಾಲಿಟ್ಟುಬಂದ ಈ ದಾರಿದ್ರ್ಯದ ಪೀಡನದಿಂದ ಪುತ್ರಕನ್ಯೆಯರ ಮುಖಮಂಡಲಗಳು ಹಿಮವು ಬಿದ್ದು ಮಡಿದ ಕಮಲದಂತ ದಿನೇದಿನೇ ಮ್ಲಾನವಾಗುತ್ತ ಬಂದುದನ್ನು ನೋಡಿ ಸಹಿಸಲಾರದೆ ಗೃಹಿಣಿಯಾದವಳು ಮೊದಲೇ ನದಿಯ ಸೈಕತಶಯ್ಯೆಯಲ್ಲಿ ಶಯನಮಾಡಿದಳು. ಆ ಚಂದ್ರನೊಂದಿಗೆ ಮಿಕ್ಕತಾರೆಗಳೆಲ್ಲ ಬಂದೊಂದಾಗಿ ಅಸ್ತಮಿತವಾಗಿ ಹೋದವು. ತಾಯಿಗೆ ಕಣ್ಣದಿರಸ್ವರೂಪನಾಗಿಯೂ ಪಿತನ ವಾರ್ಧಕಕ್ಕೆ ಯಷ್ಟಿಸ್ವರೂಪನಾಗಿಯೂ ಇದ್ದ ವಂಶಧರನಾದ ಪುತ್ರನು ಪಿತನ ಕಣ್ಣುಗಳೆದುರಾಗಿ ಚಿತಾರೋಹಣವನ್ನು ಮಾಡಿಬಿಟ್ಟನು. ಯಾರೂ

ಉಳಿಯಲಿಲ್ಲ. ಕೇವಲಾವೃದ್ಧನಾದ ಪಿತನು ಮತ್ತು ಈ ಲೋಕವನ್ನೇ ಮೋಹಿನಿಯಾದ ಮಗಳು; ಇವರಿಬ್ಬರುಮಾತ್ರ ಆ ವಿಜನವಾದ ವನಮಧ್ಯದಲ್ಲಿದ್ದ ಭಗ್ನಾಲಯದಲ್ಲಿ ವಾಸಮಾಡುತಲಿದ್ದರು. ಪಿತನಿಗೆ ಮಗಳು, ಮಗಳಿಗೆ ಪಿತನು, ಹೀಗೆ ಪರಸ್ಪರ ಸಹಾಯಕರಾಗಿದ್ದರು. ಕುಂದನಂದಿನಿಗೆ ವಿವಾಹದ ವಯಸ್ಸು ಮೀರಿಹೋಗಿತ್ತು. ಆದರೆ ಕುಂದಳು ಪಿತನ ಅಂಧತ್ವಕ್ಕೆ ಯಷ್ಟಿಸ್ವರೂಪಳಾಗಿಯೂ, ಅವನಿಗೆ ಇಹಸಂಸಾರದ ಬಂಧನಕ್ಕೆ ಏಕಮಾತ್ರ ಗ್ರಂಥಿಸ್ವರೂಪಳಾಗಿಯೂ ಇದ್ದಳು. ವೃದ್ಧನು ಇಂತಹವಳನ್ನು ಹೇಗೆತಾನೇ ಪರಹಸ್ತದಲ್ಲಿ ಸಮರ್ಪಣಮಾಡಬಲ್ಲನು? ವೃದ್ಧನು ಅವಳ ವಿವಾಹದ ವಿಷಯವು ಮನಸ್ಸಿಗೆ ಹೊಳೆದಾಗ, ಇನ್ನೂ ಕೆಲದಿನಗಳು ಹೋಗಲಿ, ಕುಂದಳನ್ನು ಮದುವೆಮಾಡಿಕೊಟ್ಟು ಕಳುಹಿಸಿಬಿಟ್ಟು ನಾನೆಲ್ಲಿರಲಿ, ಹೇಗೆ ಇರಲಿ, ಎಂದು ಮುಂತಾಗಿ ಭಾವಿಸಿಕೊಳ್ಳುತ್ತಿದ್ದನೇ ಹೊರ್ತು ತನಗೆ ಕಡೆಗಾಲಬಂದಾಗ ಕುಂದಳನ್ನು ಎಲ್ಲಿಬಿಟ್ಟು ಹೋಗಬೇಕೋ, ಅವನದನ್ನು ಯೋಚಿಸಲಿಲ್ಲ. ಈ ಹೊತ್ತು ಇದ್ದಕ್ಕಿದ್ದಹಾಗೆ ಯಮದೂತರು ಬಂದು ಹಾಸಿಗೆಯ ಪಾರ್ಶ್ವದಲ್ಲಿ ನಿಂತಿದ್ದಾರೆ. ಅವನು ಹೊರಟುಹೋಗುತ್ತಾನೆ. ಕುಂದನಂದಿನಿಯು ನಾಳೆ ಎಲ್ಲಿರಬೇಕು?

ಈ ಗಭೀರವಾದ ಅನಿವಾರ್ಯವಾದ ಸಂಕಟಕರವಾದ ಚಿಂತೆಯು ಮುಮೂರ್ಷುವಿನ ಪ್ರತಿನಿಶ್ವಾಸದಲ್ಲಿಯೂ ವ್ಯಕ್ತವಾಗುತಲಿತ್ತು. ಅವನ ಮುದಿತೋನ್ಮುಖವಾದ ಕಣ್ಣುಗಳಿಂದ ವಾರಿಧಾರೆಯು ಅವಿರಳವಾಗಿ ಸುರಿಯುತಲಿತ್ತು. ಅವನ ತಲೆಪಾರ್ಶ್ವದಲ್ಲಿ ಪ್ರಸ್ತರನಿರ್ಮಿತವಾದ ಮೂರ್ತಿಯಹಾಗೆ ಆ ಹದಿಮೂರುವರುಷದ ಬಾಲೆಯು ಸ್ಥಿರವಾದ ದೃಷ್ಟಿಯಿಂದ ಮೃತ್ಯುಮೇಘಾಚ್ಛನ್ನವಾದ ಪಿತನ ಮುಖವನ್ನು ನೋಡುತಲಿದ್ದಳು. ತನ್ನನ್ನು ತಾನು ಮರೆತುಕೊಂಡು, ತಾನು ನಾಳೆದಿನ ಎಲ್ಲಿರಬೇಕೊ ಅದರ ಯೋಚನೆಯೂ ಇಲ್ಲದೆ ಗಮನೋನ್ಮುಖನಾದ ಪಿತನ ಮುಖವನ್ನು ನೋ

ಡುತಲಿದ್ದಳು. ಕ್ರಮಕ್ರಮವಾಗಿ ವೃದ್ಧನಿಗೆ ಮಾತು ನಿಂತುಹೋಗುತ್ತ ಬಂತು. ಶ್ವಾಸವು ಕಂಠಗತವಾಗುತ್ತ ಬಂತು. ಕಣ್ಣುಗಳ ಹೊಳಪು ಹೋಯಿತು. ಸಂಕಟಪಡುತಲಿದ್ದ ಪ್ರಾಣಕ್ಕೆ ಸಂಕಟವು ನಿಂತುಹೋಯಿತು. ಆ ಯಾರೂ ಇಲ್ಲದ ಕೊಠಡಿಯಲ್ಲಿ ಅಸ್ಥಿಮಿತವಾದ ದೀಪದ ಬೆಳಕಿನಲ್ಲಿ ಕುಂದನಂದಿನಿಯು ಏಕಾಕಿನಿಯಾಗಿ ತಂದೆಯ ಶವವನ್ನು ತೊಡೆಯಮೇಲೆ ತೆಗೆದಿಟ್ಟುಕೊಂಡು ಕುಳಿತಿದ್ದಳು. ರಾತ್ರಿ ಗಾಢಾಂಧಕಾರ. ಹೊರಗೆ ಇನ್ನೂ ಮಳೆಯು ಹನಿಹಾಕುತ್ತ ಮರದೆಲೆಗಳಮೇಲೆ ಬಿದ್ದು ಶಬ್ದವಾಗುತಲಿತ್ತು ಗಾಳಿಯು ನಿಂತುನಿಂತು ಗರ್ಜನೆಮಾಡುತ್ತ ಬೀಸುತಲಿತ್ತು. ಬಿದ್ದುಹೋಗಿದ್ದ ಹಳೇಮನೆಯ ಬಾಗಲುಗಳೆಲ್ಲ ಗಾಳಿಗೆ ಹೊಡೆದಾಡುತ್ತ ಶಬ್ದವಾಗುತಲಿದ್ದವು ಮನೆಯಲ್ಲಿದ್ದ ನಿರ್ವಾಣೋನ್ಮುಖವಾದ ಚಂಚಲವಾದ ಕ್ಷೀಣಿಸುತಲಿದ್ದ ದೀಪದ ಪ್ರಕಾಶವು ಕ್ಷಣಕ್ಷಣ ಶವದ ಮುಖದಮೇಲೆ ಬೀಳುತ್ತ ಅಂಧಕಾರವನ್ನು ಕ್ಷಣಕ್ಷಣ ಹೆಚ್ಚುಮಾಡುತಲಿತ್ತು. ಆ ದೀಪಕ್ಕೆ ಎಣ್ಣೆಯನ್ನು ಹಾಕುತ್ತಿರಲಿಲ್ಲವಾದ ಕಾರಣ ಈ ಸಮಯಕ್ಕೆ ಸರಿಯಾಗಿ ಉರಿಯು ಎರಡು ಮೂರುಸಲ ಉಜ್ವಲತರವಾಗಿ ಎದ್ದು ದೀಪವು ನಂದಿ ಹೋಯಿತು.

ಆಗ ನಾಗೇಂದ್ರನು ನಿಶ್ಶಬ್ದವಾಗಿ ಕೊಠಡಿಯ ಬಾಗಿಲನಿಂದ ಸರಿದು ಹೊರಟುಹೋದನು.

---

## ಮೂರನೆಯ ಪರಿಚ್ಛೇದ.

### ಛಾಯಾ ಅಗ್ರಗಾಮಿ;—

ಅರ್ಧರಾತ್ರಿಯ ಸಮಯ—ಆ ಮುರುಕುಮನೆಯಲ್ಲಿ ಕುಂದನಂದಿನಿ ಮತ್ತು ಅವಳ ತಂದೆಯ ಶವ—ಕುಂದಳು, ಅಪ್ಪಾ! ಎಂದು ಕರೆದಳು. ಯಾರೂ ಉತ್ತರವನ್ನು ಕೊಡಲಿಲ್ಲ. ಒಂದುಸಲ ಅವಳು ತಂದೆಯು

ಮಲಗಿದ್ದಾನೆಂದು ಭಾವಿಸಿಕೊಂಡಳು. ಪುನಃ ಸತ್ತು ಇರಬೇಕೆಂದು ಯೋಚಿಸಿದಳು. ಆದರೆ ಆ ಮಾತನ್ನು ಬಾಯಿಂದ ಹೇಳಳು. ಪುನಃ ತಂದೆಯನ್ನು ಕೂಗಳು. ಯೋಚಿಸಲಾರದೆಯೂ ಹೋದಳು. ಅಂಧಕಾರದಲ್ಲಿ ಕೈಯಲ್ಲಿ ಬೀಸಣಿಗೆಯನ್ನುಳ್ಳವಳಾಗಿ ಸ್ವಲ್ಪಹೊತ್ತಿಗೆಮುಂಚೆ ಸಜೀವನಾಗಿ ಮಲಗಿದ್ದು ಪ್ರಕೃತದಲ್ಲಿ ನಿರ್ಜೀವನಾಗಿ ಬಿದ್ದಿರುವ ತನ್ನ ತಂದೆಗೆ ಬೀಸುತ್ತ ಕುಳಿತುಕೊಂಡು ನಿದ್ರೆಮಾಡುತ್ತಾನೆಂತಲೇ ತಿಳಿದುಕೊಂಡಳು. ಮೃತನಾಗಿದ್ದರೆ ಅವಳಗತಿ ಏನಾಗಬೇಕು ? ಹಗಲು ರಾತ್ರಿ ಸಹ ಜಾಗರಣೆಯನ್ನು ಮಾಡಿ ಶ್ರಮಪಟ್ಟಿದ್ದ ಹುಡುಗಿಗೆ ಹಾಗೆಯೇ ಸ್ವಲ್ಪ ನಿದ್ರೆಯು ಬಂತು. ಹಗಲೂ ರಾತ್ರಿ ಜಾಗರಿತಳಾಗಿ ತಂದೆಯ ಸೇವೆಯಲ್ಲಿ ನಿರತಳಾಗಿದ್ದಳು. ನಿದ್ರೆಯು ಹತ್ತುತ್ತಲೇ ಆ ತಾಳೇಓಲೆಯ ಬೀಸಣಿಗೆಯು ಕೈಲಿದ್ದಹಾಗೆ ಆ ಕಠಿಣವಾದ ತನುವಾದ ಬರೇನೆಲದಮೇಲೆ ಮೃಣಾಳವನ್ನು ನಿಂದಿಸುತ್ತಿರುವ ತನ್ನ ತೋಳಿನಮೇಲೆ ತಲೆಯನ್ನಿಟ್ಟುಕೊಂಡು ಮಲಗಿದಳು.

ಆಗ ಕುಂದನಂದಿನಿಯು ಸ್ವಪ್ನವನ್ನು ಕಂಡಳು. ಸ್ವಪ್ನವನ್ನು ಕಂಡದ್ದರಲ್ಲಿ, ರಾತ್ರಿಯಲ್ಲಿ ಬೆಳದಿಂಗಳು ಅತಿ ಪರಿಷ್ಕಾರವಾಗಿತ್ತು. ಆಕಾಶವು ಉಜ್ವಲವಾಗಿ ನೀಲವರ್ಣ; ಆಪ್ರಭಾಮಯವಾದ ನೀಲಾಕಾಶಮಂಡಲದಲ್ಲಿ ಒಂದು ದೊಡ್ಡದಾದ ಚಂದ್ರಮಂಡಲವು ಪ್ರಕಾಶವಾಯಿತು. ಅಷ್ಟು ದೊಡ್ಡದಾದ ಚಂದ್ರಮಂಡಲವನ್ನು ಕುಂದಳು ಎಂದೂ ನೋಡಿರಲಿಲ್ಲ. ಅದರ ಕಾಂತಿಯು ಅತಿಶಯವಾಗಿ ಕಣ್ಣುಗೊಳದು, ಆದರೆ ಆ ರಮಣೀಯವಾದ ದೊಡ್ಡದಾದ ಚಂದ್ರಮಂಡಲ ಮಧ್ಯದಲ್ಲಿ ಚಂದ್ರನಿರಲಿಲ್ಲ. ಚಂದ್ರನಿಗೆ ಬದಲಾಗಿ ಮಂಡಲಮಧ್ಯದಲ್ಲಿ ಅಪೂರ್ವವಾದ ಜ್ಯೋತಿರ್ಮಯವಾದ ಒಂದು ದೇವೀಮೂರ್ತಿಯನ್ನು ಕಂಡಳು. ಆ ದೇವೀಮೂರ್ತಿಯನುಳ್ಳ ಚಂದ್ರಮಂಡಲವು ಮೂರ್ತಿಯಸಮೇತವಾಗಿ ಉಚ್ಚವಾದ ಗಗನಮಂಡ

ಲವನ್ನು ಬಿಟ್ಟು ಕ್ರಮವಾಗಿ ಮೆಲ್ಲಮೆಲ್ಲಗೆ ಇಳಿಯುತ್ತ ಬಂತು. ಬರುತ್ತ ಸಹಸ್ರಾರು ಶೀತಲವಾದ ಕಿರಣಗಳನ್ನು ಬೀರುತ್ತ ಕುಂದನಂದಿನಿಯ ತಲೆಯ ಮೇಲುಗಡೆ ಬಂದು ನಿಂತಿತು. ಆಗ ನೋಡಲಾಗಿ ಮಂಡಲಮಧ್ಯ ದಲ್ಲಿ ಪ್ರಕಾಶಿಸುತಲಿದ್ದ ಮೂರ್ತಿಯು ಒಬ್ಬ ಹೆಂಗಸಿನ ಆಕೃತಿಯುಳ್ಳ ದ್ದಾಗಿ ಜ್ಯೋತಿರ್ಮಯವಾಗಿ ಕಿರೀಟ ಕುಂಡಲಾದಿ ತೊಡಗೆಗಳಿಂದಲಂಕೃತ ವಾಗಿತ್ತು. ರಮಣೀಯವಾದ ಕಾರುಣ್ಯಪರಿಪೂರ್ಣವಾದ ಮುಖಮಂಡಲ; ಸ್ನೇಹಪರಿಪೂರ್ಣವಾದ ನಗುವಿನಿಂದ ಅಧರವು ಸ್ಫುರಿತವಾಗುತಲಿತ್ತು. ಆಗ ನೋಡಲಾಗಿ ಆ ಕರುಣಾಮಯಳಾದ ಹೆಂಗಸು ಬಹುಕಾಲಕ್ಕೆ ಮುಂಚೆ ಮೃತಳಾಗಿದ್ದ ತನ್ನ ತಾಯಿಯ ಅವಯವವುಳ್ಳವಳಾಗಿದ್ದಳು. ಭಯ ದಿಂದಲೂ ಆನಂದದಿಂದಲೂ ನೋಡಿ ತನ್ನ ತಾಯಿಯೆಂದು ತಿಳಿದಳು. ಆ ಜ್ಯೋತಿರ್ಮಯಳಾದವಳು ಕುಂದಳನ್ನು ಸ್ನೇಹಪುರಸ್ಸರವಾಗಿ ಎತ್ತಿ ತೊಡೆಯಮೇಲೆ ಕುಳ್ಳಿರಿಸಿಕೊಂಡಳು. ಮಾತೃಹೀನಳಾದ ಕುಂದಳು ಬಹಳಕಾಲದಮೇಲೆ ಅಮ್ಮಾ! ಎಂದು ಬಾಯಿಯಿಂದ ಹೇಳಿ ಚರಿತಾರ್ಥ ಳಾದಳು. ಅನಂತರ ಜ್ಯೋತಿರ್ಮಂಡಲದಲ್ಲಿದ್ದವಳು ಕುಂದಳನ್ನು ಮು ದ್ದಾಡಿ, ಮಗು! ನೀನು ಅಪಾರವಾದ ದುಃಖಕ್ಕೆ ಗುರಿಯಾದೆ, ಮತ್ತು ಗುರಿ ಯಾಗುವೆ ಎಂತಲೂ ಕಾಣುತ್ತದೆ. ನೀನು ಇನ್ನೂ ಬಾಲೆಯು. ನಿನ್ನ ಶರೀರವೋ, ಕುಸುಮಕೋಮಲವಾದುದು. ಇಂತಹ ಶರೀರದವಳು ಅಂತಹ ದುಃಖವನ್ನು ಸಹಿಸಲಾರೆಯಾಗಿ ನೀನು ಇಲ್ಲಿರಬೇಡ. ಈ ಪ್ರಪಂಚವನ್ನು ಬಿಟ್ಟು ನನ್ನ ಜೊತೆಯಲ್ಲಿ ಬಂದುಬಿಡೆಂದು ಹೇಳಿದುದನ್ನು ಕೇಳಿ ಕುಂದಳು ಎಲ್ಲಿಗೆ ಬರಲೆಂದು ಕೇಳಿದ್ದಕ್ಕೆ, ಅವಳ ತಾಯಿಯು ಉಜ್ವಲವಾಗಿ ಪ್ರಜ್ವ ಲಿಸುತಲಿದ್ದ ನಕ್ಷತ್ರಲೋಕವನ್ನು ಬೆರಳುನಿಂದ ತೋರಿಸಿ ಅಲ್ಲಿಗೆ ನಡೆ ಎಂದಳು. ಕುಂದಳು ಬಹುದೂರವಾಗಿದ್ದು ವೇಲಾವಿಹೀನವಾದ ಅನಂತ ವಾದ ಸಮುದ್ರದ ಆಚೆ ಇದ್ದಹಾಗೆ ಕಂಡಬಂದ ಅಪರಿಚಿತವಾದ ನಕ್ಷತ್ರ

ಲೋಕವನ್ನು ನೋಡಿ, ನಾನು ಅಷ್ಟುದೂರ ಬರಲಾರೆ, ನನಗೆ ಬಲ ವಿಲ್ಲವೆಂದಳು. ಆಗ ಕಾರುಣ್ಯದಿಂದ ಪ್ರಫುಲ್ಲವಾದ ಗಂಭೀರವಾದ ತಾಯಿಯ ಮುಖಮಂಡಲದಲ್ಲಿ ಸ್ವಲ್ಪ ಬೇಸರದಿಂದುಂಟಾದ ಭ್ರೂಭಂಗಿಯು ತೋರ್ಪ ಟ್ಟಿತು. ಅದರಮೇಲೆ ತಾಯಿಯು, ಮಗು! ನಿನ್ನ ಇಷ್ಟಬಂದಹಾಗೆ ಮಾಡು. ಆದರೆ ನನ್ನ ಜತೇಲಿ ಬಂದರೆ ಒಳ್ಳೇದು, ಮುಂದೆ ನನ್ನೊಂದಿಗೆ ಬರಲಿಲ್ಲವೆಂದು ಪರಿತಾಪಪಡುವೆ, ಕಡೆಗೆ ನೀನಾಗಿಯೇ ಆ ನಕ್ಷತ್ರಲೋ ಕಕ್ಕೆ ಹೋಗಬೇಕೆಂದು ಆಶೆಪಡುವೆ. ನಾನು ಇನ್ನೊಂದುಸಾರಿ ನಿನ್ನನ್ನು ನೋಡುವೆನು; ಆಗ ನೀನು ಮನಸ್ಸಿನ ವ್ಯಥೆಯಿಂದ ಪೀಡಿತಳಾಗಿ ಧೂಳಿ ಯಲ್ಲಿ ಉರುಳಾಡುತ್ತ ನನ್ನನ್ನು ಜ್ಞಾಪಿಸಿಕೊಂಡು ನನ್ನ ಸಂಗಡ ಬರಲು ರೋದನವನ್ನು ಮಾಡುವೆ. ಈಗ ನಾನು ಬೆರಳನ್ನು ತೋರಿಸುವ ದಿಕ್ಕಿ ನಲ್ಲಿ ಆಕಾಶವನ್ನು ನೋಡು; ಅಲ್ಲಿ ಕಂಡುಬರುವ ಇಬ್ಬರೂ ನಿನ್ನ ಶುಭಾ ಶುಭಕ್ಕೆ ಕಾರಣರಾಗುವರು. ನೀನು ಇವರಿಬ್ಬರನ್ನು ಕಂಡರೆ ವಿಷಧರ ಸರ್ಪವನ್ನು ಕಂಡರೆ ಹೇಗೋ ಹಾಗೆ ತ್ಯಜಿಸಬೇಕು. ಅವರು ಹೋಗುವ ಮಾರ್ಗದಲ್ಲಿ ಹೋಗಬೇಡವೆಂದು ಮುಂತಾಗಿ ಹೇಳಿ ಆ ಜ್ಯೋತಿರ್ಮಯ ಳಾದ ಹೆಂಗಸು ಬೆರಳಿನಿಂದ ನಿರ್ದೇಶಮಾಡಿ ಗಗನವನ್ನು ತೋರಿಸಿದಳು. ಕುಂದನಂದಿನಿಯು ಆ ಬೆರಳತೋರಿಸಿದ ಕಡೆ ನೋಡಲಾಗಿ, ಗಗನದಲ್ಲಿ ದೇ ವತೆಗಳನ್ನು ನಿಂದಿಸುವ ಪುರುಷಾಕಾರಮೂರ್ತಿಯೊಂದನ್ನು ನೋಡಿದಳು. ಆ ಪುರುಷಮೂರ್ತಿಯ ಲಲಾಟವು ಉನ್ನತವಾಗಿಯೂ ಪ್ರಶಸ್ತವಾಗಿಯೂ ಪ್ರಶಾಂತವಾಗಿಯೂ ಇತ್ತು. ಕಟಾಕ್ಷವು ಸರಳವಾಗಿ ಕರುಣೆಯಿಂದ ಕೂ ಡಿತ್ತು. ಕಂಠದೇಶವು ಮರಾಳದ ಹಾಗೆ ದೀರ್ಘವಾಗಿ ಸ್ವಲ್ಪ ಬೊಗ್ಗಿತ್ತು. ಮತ್ತು ಆ ಮೂರ್ತಿಯ ಇತರ ಮಹಾಪುರುಷ ಲಕ್ಷಣಗಳನ್ನು ನೋಡಿದರೆ ಅಂತಹ ಪುರುಷನಿಂದ ಅನಿಷ್ಟವುಂಟಾಗುವುದೆಂದು ಯಾರಿಗೂ ನಂಬಿಗೆಯುಂ ಟಾಗದು. ಸ್ವಲ್ಪದರಲ್ಲಿಯೇ ಆ ಮೂರ್ತಿಯು ನೀರಿನಗುಳ್ಳೆಯಹಾಗೆ ಗಗನ

ಪಟವಲ್ಲಿ ವಿಲೀನವಾಗಿ ಹೋಯಿತು. ಆಗ ತಾಯಿಯು ಕುಂದನಂದಿನಿಯನ್ನು ಕುರಿತು ಇವನ ದೇವಸದೃಶವಾದ ಕಾಂತಿಯನ್ನೂ ರೂಪವನ್ನೂ ನೋಡಿ ಮೈಮರೆತು ಹೋಗಬೇಡ. ಇವನು ಮಹಾಶಯನಾಗಿ ಕಂಡರೂ ಇವನು ನಿನ್ನ ಅಮಂಗಳಕ್ಕೆ ಕಾರಣನಾಗುವನಾಗಿ ಇವನನ್ನು ನೋಡಿದರೆ ವಿಷಧರ ದೋಷಾದಿಯಲ್ಲಿ ತಿಳದು ದೂರಹೋಗಬೇಕೆಂದು ಹೇಳಿ ಪುನಃ ಅವಳು ಮತ್ತೊಂದನ್ನು ನೋಡೆಂದು ಗಗನದಲ್ಲಿ ಬೆರಳನ್ನು ತೋರಿಸಿದಳು. ಕುಂದ ನಂದಿನಿಯು ಅತ್ತಕಡೆ ನೋಡಲಾಗಿ ನೀಲಾಕಾಶದಲ್ಲಿ ಮತ್ತೊಂದು ಮೂರ್ತಿಯು ಚಿತ್ರಿತವಾಗಿತ್ತು. ಈಸಲ ಪುರುಷಮೂರ್ತಿಯಾಗಿರಲಿಲ್ಲ. ಅದು ಒಂದು ಉಜ್ವಲಶ್ಯಾಮಾಂಗಿಯಾದ ಪದ್ಮಪಲಾಶನಯನಳಾದ ಯುವತಿಯ ಮೂರ್ತಿಯಾಗಿತ್ತು. ತಾಯಿಯು, ಈ ಶ್ಯಾಮಾಂಗಿಯು ನಾರೀವೇಷದಲ್ಲಿ ರಾಕ್ಷಸಿ; ಇವಳನ್ನು ಕಂಡರೆ ದೂರ ಓಡಿಹೋಗಬೇಕೆಂದಳು.

ಇಷ್ಟು ಹೇಳುತಲಿದ್ದಹಾಗೆ ಆಕಾಶವು ಅಂಧಕಾರಮಯವಾಯಿತು. ಆ ದೊಡ್ಡದಾದ ಚಂದ್ರಮಂಡಲವು ಅಂತರ್ಹಿತವಾಗಿ ಅದರೊಂದಿಗೆ ಅದರ ಮಧ್ಯದಲ್ಲಿದ್ದ ತೇಜೋಮಯವಾದ ಮೂರ್ತಿಯೂ ಹೋಗಿಬಿಟ್ಟಿತು. ಆಗ ಕುಂದನಂದಿನಿಗೆ ನಿದ್ರಾಭಂಗವಾಯಿತು.

---

## ನಾಲ್ಕನೆಯ ಪರಿಚ್ಛೇದ.

### ಇವನೇ ಅವನು.

ನಾಗೇಂದ್ರನು ಗ್ರಾಮದೊಳಗೆ ಹೋಗಿ ವಿಚಾರಿಸಲಾಗಿ ಗ್ರಾಮದ ಹೆಸರು ಝುಮಝುಮಪುರವೆಂದು ಹೇಳಿದರು. ನಾಗೇಂದ್ರನು ನೋಡಿದ್ದ ಸಂಗತಿಯನ್ನು ಹೇಳಿ ಖರ್ಚಿಗೆ ಕೊಟ್ಟದ್ದರಮೇಲೆ ಗ್ರಾಮಸ್ಥರು ಕೆಲವರು

ಬಂದು ಮೃತನ ಸತ್ಕಾರವನ್ನು ಮಾಡಲುಪಕ್ರಮಿಸಿದರು. ನೆರೆಯವಳಾದ ವಳೊಬ್ಬಳು ಹೆಂಗಸು ಕುಂದನಂದಿನಿಯಬಳಿಯಲ್ಲಿ ಬಂದಿದ್ದಳು. ಕುಂದ ನಂದಿನಿಯು ಪಿತನನ್ನು ಸತ್ಕಾರಕ್ಕೆ ತೆಗೆದುಕೊಂಡುಹೋದಮೇಲೆ ಅವನು ಮೃತನಾದನೆಂದು ಕೃತನಿಶ್ಚಯಳಾಗಿ ಅವಿರತವಾಗಿ ರೋದನಮಾಡಲಾ ರಂಭಿಸಿದಳು.

ಬೆಳಗಾಗುತ್ತಲೇ ನೆರೆಯವಳು ತನ್ನ ಮನೆಯ ಕೆಲಸಕ್ಕೆ ಹೊರಟು ಹೋಗಿ, ಕುಂದನಂದಿನಿಯ ಜತೇಲಿದ್ದುಕೊಂಡಿರುವುದಕ್ಕೆ ತನ್ನ ಮಗಳಾದ ಚಂಪಕಳೆಂಬುವಳನ್ನು ಕಳುಹಿಸಿಕೊಟ್ಟಳು. ಚಂಪಕೆಯು ಅವಳ ಸಮ ವಯಸ್ಕಳಾಗಿ ಸಂಗಾತಿಯಾಗಿಯೂ ಇದ್ದಳು. ಚಂಪಕೆಯು ಬಂದು ಅವಳ ಸಂಗಡ ನಾನಾವಿಧವಾದ ಮಾತುಕಥೆಯನ್ನಾಡುತ್ತ ಅವಳನ್ನು ಸಮಾಧಾನಪ ಡಿಸುವ ಪ್ರಯತ್ನವನ್ನು ಮಾಡತೊಡಗಿದಳು. ಆದರೆ ಕುಂದನಂದಿನಿಯು ಯಾವದರಿಂದಲೂ ಸಮಾಧಾನವಾಗದೆ ರೋದನವನ್ನು ಮಾಡುತ್ತ ತಡೆವೆತಡ ವೆಗೆ ಏನೋ ಪ್ರತ್ಯಾಶಾಪನ್ನಳೋಪಾದಿಯಲ್ಲಿ ಮೇಲಕ್ಕೆ ತಲೆಯನ್ನೆತ್ತಿ ಆಕಾ ಶವನ್ನು ನೋಡುತಲಿದ್ದಳು. ಚಂಪಕೆಯು ಕುತೂಹಲದಿಂದ, ಅದೇತಕ್ಕೆ ನಿಮಿಷಕ್ಕೊಂದಾವರ್ತಿ ಆಕಾಶವನ್ನೇ ನೋಡುತ್ತೀ? ಎಂದು ಕೇಳಿದಳು.

ಕುಂದನಂದಿನಿ—ನೆನ್ನೇರಾತ್ರಿ ಆಕಾಶದಿಂದ ನಮ್ಮ ತಾಯಿಯು ಬಂದಿ ದ್ದಳು. ಬಂದವಳು ನನ್ನಸಂಗಡ ಬಾ ಎಂದು ಹೇಳಿದಳು. ನಾನು ಬುದ್ಧಿ ಯಿಲ್ಲದೆ ಭಯಪಟ್ಟು ಅವಳ ಜತೇಲಿ ಹೋಗಲಿಲ್ಲ. ಬುದ್ಧಿಯಿಲ್ಲದೆ ಏತಕ್ಕೆ ಹೋಗಲಿಲ್ಲವೋ ಎಂದು ಈಗ ಯೋಚನೆಯು ಹುಟ್ಟಿದೆ. ಈಗ ಅವಳು ಬಂದರೆ ಅವಳಸಂಗಡ ಹೋಗಬೇಕೆಂದಿದ್ದೇನೆ. ಆದುದರಿಂದ ಆಕಾಶವನ್ನು ನೋಡುತಲಿದ್ದೇನೆಂದು ಹೇಳಿದಳು.

ಚಂಪಕೆ—ಅದಕ್ಕೇ ನೋಡುವುದು? ಸತ್ತಹೋದವರು ಪುನಃ ಬರು ತ್ತಾರೆಯೆ?

ಆಗ ಕುಂದಳು ತಾನು ಕನಸಿನಲ್ಲಿ ಕಂಡದುದನೆಲ್ಲಾ ಹೇಳಿದಳು. ಕೇಳಿ ಚಂಪಕೆಯು ಆಶ್ಚರ್ಯಪಟ್ಟು, ಆ ಆಕಾಶಪಟವಲ್ಲಿ ನೋಡಿದ ಪುರುಷನನ್ನೂ ಹೆಂಗಸನ್ನೂ ಸಹ ನೀನು ಬಲ್ಲೆಯಾ? ಎಂದು ಕೇಳಿದಳು.

ಕುಂದ—ಇಲ್ಲ. ಅವರನ್ನು ನಾನೆಂದೂ ನೋಡಿದವಳಲ್ಲ. ಅಂತಹ ಸುಂದರಪುರುಷನು ಎಲ್ಲಿಯೂ ಇಲ್ಲ. ಅಂತಹ ರೂಪಶಾಲಿಯನ್ನು ನಾನೆಂದೂ ನೋಡಿರಲಿಲ್ಲ.

ಇತ್ತಲಾಗಿ ನಾಗೇಂದ್ರನು ಬೆಳಗಾಗುತ್ತಲೇ ಎದ್ದು ಗ್ರಾಮಸ್ಥರನ್ನೆಲ್ಲ ಕರೆಸಿ, ಈ ಸತ್ತುಹೋದವನ ಮಗಳು ಏನಾಗಬೇಕು? ಎಲ್ಲಿರುವುಳು? ಅವಳಿಗೆ ಯಾರು ಇದಾರೆ? ಎಂದು ಕೇಳಿದನು. ಅವರು ಇವಳಿಗೆ ಯಾರೂ ಇಲ್ಲವೆಂದರು.

ನಾಗೇಂದ್ರ—ಹಾಗಾದರೆ ನೀವು ಯಾರಾದರೂ ಅವಳನ್ನು ಮನೆಯುಲ್ಲಿಟ್ಟುಕೊಂಡು ಒಬ್ಬ ವರನಿಗೆ ಕೊಟ್ಟು ಮದುವೆಮಾಡಿರಿ. ಅದರ ಖರ್ಚನ್ನು ನಾನು ಕೊಡುತ್ತೇನೆ. ಅದುವರೆಗೆ ಅವಳು ನಿಮ್ಮ ಮನೆಯಲ್ಲಿದ್ದಷ್ಟು ದಿವಸಕ್ಕೆ ತಿಂಗಳಿಗೇನಾಗುವದೋ ಅದನ್ನೂ ಸಹ ಕೊಡುವೆನು.

ನಾಗೇಂದ್ರನು ನಗದಾಗಿ ಏನಾದರೂ ಹಣವನ್ನು ಆಗಲೇ ಕೊಟ್ಟಿದ್ದರೆ ಅನೇಕರು ಅವನ ಮಾತಿಗೆ ಒಪ್ಪಿಕೊಳ್ಳುತ್ತಿದ್ದರಲ್ಲದೆ, ರೂಪಾಯಿಗಳನ್ನು ಇಟ್ಟುಕೊಂಡು ಬಿಟ್ಟು, ನಾಗೇಂದ್ರನು ಹೊರಟುಹೋದಮೇಲೆ ಕುಂದಳನ್ನು ಮನೆಯಿಂದ ಹೊರಡಿಸುತಲಿದ್ದರು, ಅಥವಾ ಅವಳಿಂದ ಕೂಲೀ ಕೆಲಸವನ್ನು ಮಾಡಿಸುತಲಿದ್ದರು. ಆದರೆ ನಾಗೇಂದ್ರನು ಅಂತಹ ಮುಟ್ಠಾಳು ಕೆಲಸವನ್ನು ಮಾಡಲಿಲ್ಲವಾಗಿ, ನಗದುರೂಪಾಯಿಗಳನ್ನು ನೋಡದೆ ಅವನ ಮಾತಿಗೆ ಯಾರೂ ಒಪ್ಪಲಿಲ್ಲ; ಅವನ ಮಾತನ್ನು ಯಾರೂ ನಂಬಲೂ ಇಲ್ಲ.

ನಾಗೇಂದ್ರನಿಗೆ ಏನೂ ತೋಚದೆಹೋದುದನ್ನು ಕಂಡು, ಗ್ರಾಮಸ್ಥರಲ್ಲೊಬ್ಬನು, ಶ್ಯಾಮಬಜಾರಿನಲ್ಲಿ ಹುಡುಗಿಯ ಸೋದರ ಅತ್ತೆಯ ಮನೆ

ಯಿದೆ. ವಿನೋದಘೋಷನು ಇವಳಿಗೆ ಸೋದರಮಾವನಾಗಬೇಕು. ತಾವು ಕಲಿಕತ್ತೆಗೆ ಹೋಗುವವರಾಗಿದ್ದೀರಿ; ಸಂಗಡ ಅವಳನ್ನೂ ಕರೆದುಕೊಂಡು ಹೋಗಿ ಅಲ್ಲಿ ಬಿಟ್ಟರೆ ಆ ಕಾಯಸ್ಥರ ಹುಡುಗಿಗೆ ಒಂದು ದಿಕ್ಕಾದ ಹಾಗಾಗುತ್ತದೆಯಲ್ಲದೆ ತಾವೂ ಸ್ವಜಾತಿಯವಳಿಗೆ ಸ್ವಲ್ಪ ಉಪಕಾರವನ್ನು ಮಾಡಿದ ಹಾಗೂ ಆಗುವದು ಎಂದು ಹೇಳಿದನು.

ಬೇರೆ ಉಪಾಯವು ತೋರದೆ ನಾಗೇಂದ್ರನು ಹಾಗೆಯೇ ಮಾಡುವುದಾಗಿ ಹೇಳಿ, ಕುಂದಳಿಗೆ ಇದನ್ನು ತಿಳಿಸುವುದಕ್ಕೆ ಅವಳನ್ನು ಕರಸಿದನು. ಚಂಪಕೆಯು ಅವಳನ್ನು ಕರೆತಂದಳು.

ಬರುತ್ತಿದ್ದ ಹಾಗೆ ದೂರದಿಂದ ನಾಗೇಂದ್ರನನ್ನು ನೋಡಿ ಕುಂದಳು ಇದ್ದಕಿದ್ದ ಹಾಗೆ ಸ್ತಂಭಿತಳಾಗಿ ನಿಂತುಕೊಂಡಳು. ಮುಂದಕ್ಕೆ ಹೆಜ್ಜೆಯನ್ನ ಇಡಲಿಲ್ಲ. ಅವಳು ಆಶ್ಚರ್ಯದಿಂದ ವಿಸ್ಫಾರಿತವಾದ ಕಣ್ಣುಗಳುಳ್ಳವಳಾಗಿ ನಾಗೇಂದ್ರನನ್ನು ಹುಚ್ಚಳ ಹಾಗೆ ಬಿರಿಗಣ್ಣುಗಳಿಂದ ನೋಡುತ್ತ ನಿಂತಳು.

ಚಂಪಕೆ—ಅದೇತಕ್ಕೆ ನಿಂತುಕೊಂಡೆ?

ಕುಂದಳು—ಬೆರಳುನಿಂದ ತೋರಿಸುತ್ತ 'ಅವನೇ ಇವನು' ಎಂದಳು.

ಚಂಪಕೆ—ಅವನೆಂದರೆ ಯಾರು?

ಕುಂದ—ನಮ್ಮ ತಾಯಿಯು ನೆನ್ನೆ ರಾತ್ರಿಯಲ್ಲಿ ಆಕಾಶಪಟದಲ್ಲಿ ಯಾರನ್ನು ತೋರಿಸಿದ್ದಳೋ ಅವನೇ ಇವನು.

ಆಗ ಚಂಪಕೆಯೂ ಆಶ್ಚರ್ಯಪಟ್ಟು ಶಂಕಿತಳಾಗಿ ಅಲ್ಲಿಯೇ ನಿಂತಳು. ಬಾಲೆಯರಿಬ್ಬರೂ ಮುಂದೆ ಬರುವುದಕ್ಕೆ ಸಂಕೋಚಪಡುವುದನ್ನು ಕಂಡು ನಾಗೇಂದ್ರನೇ ಅವರ ಹತ್ತಿರ ಬಂದು ಕುಂದಳಿಗೆ ಎಲ್ಲಾ ಸಂಗತಿಗಳನ್ನು ತಿಳಿಸಿದನು. ಕುಂದಳು ಏನೊಂದುತ್ತರವನ್ನೂ ಕೊಡಲಾರದೆ ಕೇವಲ ವಿಸ್ಮಯೋತ್ಫುಲ್ಲಲೋಚನೆಳಾಗಿ ನಾಗೇಂದ್ರನನ್ನು ದೃಷ್ಟಿಸಿ ನೋಡಿಕೊಂಡು ನಿಂತಿದ್ದಳು.

# ಐದನೆಯ ಪರಿಚ್ಛೇದ.

## ಅನೇಕ ಪ್ರಸ್ತಾಪಗಳು.

ನಾಗೇಂದ್ರನಾಥನು ಉಪೋದ್ಘಾತರವಿಲ್ಲದೆ ಕುಂದಳನ್ನು ಸಂಗಡ ಕಲಿಕತ್ತಾಕ್ಕೆ ಕರೆದುಕೊಂಡು ಬಂದು, ಮೊದಲು ಅವಳ ಸೋದರಮಾವನು ಯಾರೆಂದು ವಿಚಾರಿಸಿದನು. ಶ್ಯಾಮಬಜಾರಿನಲ್ಲಿ ವಿನೋದಘೋಷನೆಂಬಾತನು ಯಾರೂ ಇರಲಿಲ್ಲ. ವಿನೋದದಾಸನೆಂಬುವನು ಒಬ್ಬನು ಇದ್ದನು ; ಅವನು ಕುಂದಳು ತನಗೇನೂ ಸಂಬಂಧವಿಲ್ಲವೆಂದು ಹೇಳಬಿಟ್ಟನು. ಆದ ಕಾರಣ ಕುಂದಳು ನಾಗೇಂದ್ರನ ಕುತ್ತಿಗೆಗೆ ಕಟ್ಟಬಿದ್ದಳು.

ನಾಗೇಂದ್ರನಿಗೆ ಕಮಲಳೆಂಬ ಸಹೋದರಿಯು ಇದ್ದಳು. ಅವಳು ನಾಗೇಂದ್ರನಗಿಂತ ಚಿಕ್ಕವಳು ಅವಳ ಅತ್ತೇಮನೆಯು ಕಲಿಕತ್ತೆಯಲ್ಲಿತ್ತು ಶ್ರೀಷಚಂದ್ರಮಿತ್ರನು ಅವಳ ಗಂಡ; ಶ್ರೀಷಬಾಬುವು ಪ್ಲಂಡರಫೇರ್ಲೀ ಅಂಡ್ ಕಂಪನಿ (Plunder Fairly &co.) ಯವರ ಹೌಸಿನಲ್ಲಿ ಗುಮಾಸ್ತೆಯಾಗಿದ್ದನು. ಅದು ಬಹಳ ಭಾರೀಹೌಸು–ಶ್ರೀಷಬಾಬುವು ಬಹಳ ಹಣವುಳ್ಳವನು. ನಾಗೇಂದ್ರನಿಗೂ ಅವನಿಗೂ ಬಹಳ ಅನ್ಯೋನ್ಯ. ನಾಗೇಂದ್ರನು ಕುಂದಳನ್ನು ಅಲ್ಲಿಗೆ ಕರೆದುಕೊಂಡುಹೋದನು. ಅಲ್ಲಿ ಕಮಲಳನ್ನು ಕರೆದು ಕುಂದಳ ವಿಚಾರವನ್ನೆಲ್ಲ ಅವಳಿಗೆ ತಿಳಿಸಿದನು.

ಕಮಲಮಣಿಗೆ ಹದಿನೆಂಟುವರುಷ. ಅವಳ ಕಣ್ಣು, ಮೂಗು, ಮುಖ ಎಲ್ಲಾ ನಾಗೇಂದ್ರನಹಾಗೆ; ಅಣ್ಣ ತಂಗಿ ಇಬ್ಬರೂ ಪರಮಸುಂದರರು; ಆದರೆ ಕಮಲಳು ಸೌಂದರ್ಯದೊಂದಿಗೆ ವಿದ್ಯಾವಂತಳೆಂತಲೂ ಹೆಸರುಗೊಂಡಿದ್ದಳು. ನಾಗೇಂದ್ರನ ತಂದೆಯು ಮಿಷ್ ಟೆಂಪಲೆಂಬ (Miss. Temple) ಒಬ್ಬ ಯುರೋಪಿಯನ್ ಹೆಂಗಸನ್ನು ಸಂಬಳಕ್ಕೆ ಗೊತ್ತುಮಾಡಿ ಕಮಲಮಣಿಗೂ ಸೂರ್ಯಮುಖಿಗೂ ಚನ್ನಾಗಿ ಓದುಬರಹವನ್ನು ಕಲಿಸಿದ್ದನು. ಕಮಲಳ ಅತ್ತೆಯು

ಶ್ರೀಷಚಂದ್ರನ ಸ್ವಂತಊರಿನಲ್ಲಿ ಕುಟುಂಬಕ್ಕೆ ಸೇರಿದ ಮನೆಯಲ್ಲಿ ವಾಸ ಮಾಡುತಲಿದ್ದಳು. ಕಲಿಕತ್ತೆಯಲ್ಲಿ ಕಮಲಳೇ ಮನೆಗೆ ಯಜಮಾನಿಯಾಗಿದ್ದಳು.

ನಾಗೇಂದ್ರನು ಕುಂದಳ ಪರಿಚಯವನ್ನೆಲ್ಲ ಹೇಳಿ ಕಮಲಳನ್ನು ಕುರಿತು ಈಗ ನೀನು ಇವಳನ್ನು ಇಟ್ಟುಕೊಳ್ಳದಿದ್ದರೆ ಇವಳು ಇರುವುದಕ್ಕೆ ಸ್ಥಳವೇ ಇಲ್ಲ. ಕಡೆಗೆ ನಾನು ಮನೆಗೆ ಹೋಗುವಾಗ ಅವಳನ್ನು ಗೋವಿಂದಪುರಕ್ಕೆ ಕರೆದುಕೊಂಡು ಹೋಗುವೆನೆಂದು ಹೇಳಿದನು.

ಕಮಲೆ ! ನೀನು ಬಹಳ ದುಷ್ಟಳೆಂದು ಹೇಳಿಬಿಟ್ಟು ಹೊರಟುಹೋಗುತ್ತಲೇ ಕಮಲಳು ಕುಂದಳನ್ನು ಎತ್ತಿಕೊಂಡುಹೋಗಿ ಬಚ್ಚಲುಮನೆಯಲ್ಲಿ ಬಿಸಿನೀರು ತುಂಬಿಟ್ಟದ್ದ ಟಬ್ಬಿನ (Tub) ಒಳಗೆ ಹಾಕಿದಳು. ಕುಂದಳು ಬಹಳ ಭೀತಳಾದಳು. ಕಮಲಳು ನಗುತನಗುತ ಸೊಗಸಾದ ವಾಸನೆಯುಳ್ಳ ಸಾಬೂನತೆಗೆದುಕೊಂಡು ಅವಳ ಮೈಗೆ ಹಾಕಿ ತಿಕ್ಕಿದಳು. ಪರಿಚಾರಕಳೊಬ್ಬಳು ಯಜಮಾನಿಯೇ ! ಈ ಕೆಲಸ ಮಾಡುವುದನ್ನು ನೋಡಿ ನಾನು ಮಾಡುತ್ತೇನೆ, ನಾನುಮಾಡುತ್ತೇನೆ ಎಂದು ಹೇಳಿಕೊಂಡು ಓಡಿಬಂದಳು. ಕಮಲಳು ಬಿಸಿನೀರನ್ನು ತೆಗೆದು ಅವಳ ಮೈಮೇಲೆ ಹಾಕಿದಳು. ಪರಿಚಾರಕಳು ಓಡಿಹೋದಳು.

ಕಮಲಳು ಸ್ವಹಸ್ತದಿಂದ ಕುಂದಳನ್ನು ತೊಳೆದು ಸ್ನಾನಮಾಡಿಸಿದಳು. ಕುಂದಳು ಹಿಮದಿಂದ ತೊಳೆದ ತಾವರೆಯಂತೆ ಹೊಳೆಯುತಬಂದಳು. ಅನಂತರ ಕಮಲಳು ಅವಳಿಗೆ ನಿರ್ಮಲವಾದ ಬೀಳೀಬಣ್ಣದ ಮಡಿಸೀರೆಯನ್ನುಡಿಸಿ ಸುಗಂಧವಾದ ತೈಲವನ್ನುಹಚ್ಚಿ ಹೆರಳನ್ನು ಹಾಕಿ ಕೆಲವು ಆಭರಣಗಳನ್ನು ತೊಡಿಸಿ, ಈಗ ಹೋಗಿ ಅಣ್ಣನವರಿಗೆ ನಮಸ್ಕಾರವನ್ನು ಮಾಡಿ ಬಾ ಎಂದು ಹೇಳಿದಳಲ್ಲದೆ, ಈ ಮನೆಯ ಯಜಮಾನರಿಗೆ ನಮಸ್ಕಾರವನ್ನು ಮಾಡಬೇಡ ; ಅವರು ನೋಡಿದರೆ ಮದುವೆಯನ್ನು ಮಾಡಿಕೊಂಡುಬಿಟ್ಟಾರೆಂದು ಹೇಳಿಕಳುಹಿಸಿದಳು.

ನಾಗೇಂದ್ರನಾಥನು ಕುಂದಳ ಸಮಾಚಾರವನ್ನೆಲ್ಲ ಸೂರ್ಯಮುಖಿಗೆ ಬರೆದುಕಳುಹಿಸಿದನು. ಹರದೇವಘೋಷಾಲೆಂಬೊಬ್ಬ ಪ್ರಿಯನಾದ ಅವನ ಸ್ನೇಹಿತನು ದೂರದೇಶದಲ್ಲಿ ವಾಸಮಾಡುತಲಿದ್ದನು. ನಾಗೇಂದ್ರನು ಅವನಿಗೆ ಕಾಗದವನ್ನು ಬರೆಯುವದರಲ್ಲಿ ಕುಂದನಂದಿನಿಯ ಸಮಾಚಾರವನ್ನು ಬರೆದನು-ಹೇಗೆಂದರೆ :—

ಹೆಂಗಸು ಯಾವ ವಯಸ್ಸಿನಲ್ಲಿ ಸುಂದರಳಾಗಿರುವುಳು, ಹೇಳಬಲ್ಲೆಯಾ ? ನೀನು ನಾಲ್ವತ್ತು ವರುಷವಮೇಲೆ ಹೆಂಗಸು ಸುಂದರಿಯಾಗುವುಳೆಂದು ಹೇಳುವೆ ; ಏತಕ್ಕೆಂದರೆ, ನಿನ್ನ ಬ್ರಾಹ್ಮಣಿಯು ಅದಕ್ಕಿಂತಲೂ ಒಂದೆರಡು ವರುಷ ದೊಡ್ಡವಳಾಗಿದ್ದಾಳೆ ! ನಾನು ಹೇಳಿದ ಕುಂದಳಿಗೆ ಹದಿಮೂರು ವರುಷ. ಅವಳನ್ನು ನೋಡಿದರೆ ಇದೇ ಸೌಂದರ್ಯಕ್ಕೆ ಸಮಯವೆಂದು ಬೋಧೆಯಾಗುತ್ತದೆ. ಪ್ರಥಮ ಯೌವನಸಂಚಾರಕ್ಕೆ ಅವ್ಯವಹಿತ ಪೂರ್ವದಲ್ಲಿ ಯಾವ ಮಾಧುರ್ಯವಾದ ಸರಳಸ್ವಭಾವವಿರುವುದೋ ಅನಂತರ ಅದು ಇರದು. ಈ ಕುಂದಳ ಸರಳತೆಯು ಅತಿ ಚಮತ್ಕಾರವಾದುದು. ಅವಳು ಏನೂ ಅರಿಯಳು. ಈಗಲೂ ಬೀದಿಯಲ್ಲಿ ಹೋಗುವ ಹುಡುಗರನ್ನು ಕಂಡರೆ ಅವರ ಜತೇಲಿ ಆಡುವುದಕ್ಕೆ ಹೊರಡುತ್ತಾಳೆ. ಬೇಡವೆಂದರೆ ಭಯಪಟ್ಟು ಹಿಂದಿರುಗಿ ಬರುತ್ತಾಳೆ. ಕಮಲಳು ಅವಳಿಗೆ ಓದುಬರಹವನ್ನು ಕಲಿಸುತ್ತಾಳಲ್ಲದೆ, ಓದುವುದರಲ್ಲಿ ಬಹಳ ಬುದ್ಧಿಯಿದೆ ಎಂದು ಹೇಳುತ್ತಾಳೆ. ಅವಳಿಗೆ ಇನ್ನೂ ಏನೂ ತಿಳಿಯದು. ಕಣ್ಣುಗಳೋ ನೀಲವರ್ಣ, ವಿಶಾಲವಾದವುಗಳು—ಕಣ್ಣುಗಳೆರಡೂ ಯಾವಾಗಲೂ ಶರದೃತುವಿನ ತಾವರೆಯು ನಿರ್ಮಲವಾದ ನೀರಿನಲ್ಲಿ ತೇಲುವಹಾಗೆ ಇದೆ. ಆ ಕಣ್ಣುಗಳಿಂದ ನನ್ನನ್ನು ದೃಷ್ಟಿಸಿ ನೋಡುತ್ತಾಳೆ, ಆದರೂ ಅವುಗಳಲ್ಲಿ ದುರಭಿಸಂಧಿಯೇನೂ ತೋರುವುದಿಲ್ಲ. ನಾನು ಆ ಕಣ್ಣುಗಳನ್ನು ನೋಡುತ್ತ ನೋಡುತ್ತ ಏನೋ ಅನ್ಯಮನಸ್ಕನಾಗಿ ಮರೆತವನಹಾಗಾಗುತ್ತೇನೆ ; ಹೇಳುವುದಕ್ಕೆ ಆಗುವುದಿಲ್ಲ. ನೀನು ಈರೀ

ತಿಯಾದ ನನ್ನ ಮತಿಸ್ಥೈರ್ಯವನ್ನು ತಿಳಿದು ಹಾಸ್ಯಮಾಡುವೆ! ಆದರೆ ನಿನ್ನನ್ನು ಆ ಕಣ್ಣುಗಳೆದುರಿಗೆ ನಿಲ್ಲಿಸಿದರೆ ಆಗ ನಿನ್ನ ಮನಸ್ಸಿನ ದಾರಢ್ಯವು ಹೇಗೆ ಇರುವುದೊ ಗೊತ್ತಾಗುವುದು. ಆ ಅತ್ಯಂತ ಮನೋಹರವಾದ ಕಣ್ಣುಗಳೆರಡನ್ನು ಯಾವುದಕ್ಕೆ ಸದೃಶ ಹೇಳಬಹುದೋ ಅದನ್ನು ಇದುವರೆಗೂ ಗೊತ್ತುಮಾಡಲಾರದವನಾಗಿದ್ದೇನೆ. ಅವು ಎರಡುತಡವೆಯಾದರೂ ಒಂದುವಿಧವಾಗಿ ಕಾಣುವುದಿಲ್ಲ. ಪ್ರತಿ ಒಂದುತಡವೆಗೂ ಹೆಚ್ಚು ಪ್ರಭಾಮಯವಾಗಿ ಕಾಣುತ್ತವೆ. ನನ್ನ ಬುದ್ಧಿಗೆ ಅವು ಈ ಪೃಥಿವಿಯ ಪದಾರ್ಥಗಳಲ್ಲಿ ಇಷ್ಟವುಳ್ಳವುಗಳಾಗಿ ನೋಡುವುದಿಲ್ಲ. ಅಂತರಿಕ್ಷದಲ್ಲಿರುವುದನ್ನೇ ನೋಡುವಹಾಗೆ ನೋಡುತ್ತವೆ. ಕುಂದಳು ಕೇವಲ ಅಷ್ಟು ನಿರ್ದೋಷವಾದ ಸೌಂದರ್ಯವನುಳ್ಳವಳೆಂದು ಹೇಳುವುದಕ್ಕಾಗದು. ಅವಳ ಮುಖಾವಯವಗಳನ್ನು ಅನೇಕ ರಮಣಿಯರೊಂದಿಗೆ ಜತೆ ಮಾಡಿ ನೋಡಿದರೆ ಅಷ್ಟು ಪ್ರಶಂಸನೀಯವಾಗಲಾರದಾದರೂ ನನ್ನ ಬುದ್ಧಿಗೆ ಇಂತಹ ಸುಂದರಿಯನ್ನು ಎಲ್ಲಿಯೂ ನೋಡಿದಹಾಗೆ ಬೋಧೆಯಾಗುವುದಿಲ್ಲ. ನೋಡಿದರೆ ಅವಳ ಶರೀರವು ಪೃಥ್ವ್ಯಂಶವಾದ ರಕ್ತಮಾಂಸಗಳಿಂದ ನಿರ್ಮಿತವಾದಹಾಗೆ ತೋರುವುದಿಲ್ಲ; ಕೇವಲ ಚಂದ್ರಕಿರಣಗಳಿಂದಲೂ ಪುಷ್ಪಸೌರಭಗಳಿಂದಲೂ ನಿರ್ಮಿತವಾಗಿರಬೇಕೆಂದು ತಿಳಿಯುತ್ತದೆ. ಅವಳೊಂದಿಗೆ ಸಾದೃಶ್ಯ ಹೇಳುವುದಕ್ಕೆ ಹಠಾತ್ ಯಾವ ವಸ್ತುವೂ ಮನಸ್ಸಿಗೆ ಹೊಳೆಯುವುದಿಲ್ಲ. ಅವಳು ಸರ್ವಾಂಗದಲ್ಲಿಯೂ ಶಾಂತಭಾವವುಳ್ಳವಳಾಗಿದ್ದಾಳೆ. ನೀನು ಯಾವಾಗಲಾದರೂ ಸ್ವಚ್ಛವಾದ ಸರೋವರದಲ್ಲಿ ಶರಚ್ಚಂದ್ರ ಕಿರಣಗಳು ಬಿದ್ದು ಅದರಿಂದುಂಟಾಗುವ ಭಾವವನ್ನು ಯೋಚಿಸಿ ನೋಡಿದ್ದರೆ ಆಗವಳ ಸಾದೃಶ್ಯವು ಸ್ವಲ್ಪಮಟ್ಟಿಗೆ ಅನುಭವ ಮಾಡುವೆ. ಸಾದೃಶ್ಯಕ್ಕೆ ಮತ್ಯಾವ ಸಾಮಗ್ರಿಯೂ ತೋರುವುದಿಲ್ಲ—ಎಂದು ಮುಂತಾಗಿ ಬರೆದಿದ್ದನು.

ನಾಗೇಂದ್ರನೂ ಸೂರ್ಯಮುಖಿಗೆ ಕುಂದನಂದಿನಿಯ ವಿಚಾರವಾಗಿ ಬರೆ

ದಿದ್ದ ಕಾಗದಕ್ಕೆ ಕೆಲವುದಿನಗಳ ಮೇಲೆ ಸೂರ್ಯಮುಖಿಯ ಪ್ರತ್ಯುತ್ತರವು ಬಂತು. ಅವಳ ಕಾಗದ :-

ದಾಸಿಯಾದ ನಾನು ಶ್ರೀ ಪಾದಂಗಳಲ್ಲಿ ಏನು ಅಪರಾಧವನ್ನು ಮಾಡಿದ್ದೆನೋ ಅದನ್ನು ತಿಳಿಯಲಾರದವಳಾಗಿದ್ದೇನೆ. ತಾವು ಕಲಿಕತ್ತೆಯಲ್ಲಿ ಇಷ್ಟು ದೀರ್ಘಕಾಲವಿರುವುದಾಗಿದ್ದರೆ ನಾನೂ ಸಮೀಪದಲ್ಲಿದ್ದುಕೊಂಡು ಏತಕ್ಕೆ ಪಾದಸೇವೆಯನ್ನು ಮಾಡಿಕೊಂಡಿರಕೂಡದು? ಈ ವಿಷಯದಲ್ಲಿ ಬಹಳ ವಿನಯದಿಂದ ಬೇಡಿಕೊಳ್ಳುತ್ತೇನೆ; ಆಜ್ಞೆಯಾದ ನಿಮಿಷದಲ್ಲಿ ಇಲ್ಲಿಂದ ಹೊರಟು ಬರುತ್ತೇನೆ.

ಒಬ್ಬ ಹುಡುಗಿಯು ಸಿಕ್ಕಿದಮಾತ್ರದಿಂದ ದಾಸಿಯಾದ ನನ್ನನ್ನು ಮರೆತುಬಿಡಬೇಕೆ? ಅನೇಕ ಅಪಕ್ವವಾದ ಕಿಂಡುಕಾಯಿಗಳ ಮೇಲೆ ಹೆಚ್ಚು ಆಶೆ ಇರುವುದು ಸ್ವಭಾವ. ಎಳನೀರು ಶೀತಳವಾದುದೇಹೌದು. ಪ್ರಕೃತ ಸಿಕ್ಕಿರುವ ಆ ಅಧಮಸ್ತ್ರೀಯು ಅಪಕ್ವವಾದ ಯುವತಿಯೆಂದು ತೋರುತ್ತದೆ. ಹಾಗಿಲ್ಲದಿದ್ದರೆ ಒಬ್ಬ ಹುಡುಗಿಯು ಸಿಕ್ಕಿದಮಾತ್ರದಿಂದ ನನ್ನಲ್ಲಿ ಉದಾಸೀನವುಂಟಾಗಲು ಕಾರಣವೇನು?

ವಿನೋದವು ಹಾಗಿರಲಿ. ತಾವು ಹುಡುಗಿಯ ಮೇಲಿನ ಅಧಿಕಾರವನ್ನು ಶುದ್ಧವಾಗಿ ತ್ಯಜಿಸೋಣಾಗಿದೆಯೆ ಏನು? ಇಲ್ಲದಿದ್ದರೆ ಅವಳನ್ನು ನನಗೆ ಒಪ್ಪಿಸಬೇಕೆಂದು ಬೇಡುತ್ತೇನೆ. ಅವಳನ್ನು ನೋಡಿಕೊಳ್ಳುವುದು ನನಗೆ ಕರ್ತವ್ಯವಾಗಿದೆ. ತಮಗೆ ಲಭಿಸುವ ಪದಾರ್ಥದಲ್ಲಿ ನನಗೆ ಸ್ವತ್ವವಿರತಕ್ಕದ್ದು. ಹಾಗಲ್ಲದೆ ಪ್ರಕೃತದಲ್ಲಿ ಆ ಸ್ವತ್ವಾಧಿಕಾರವು ತಮ್ಮ ಸಹೋದರಿಗೆ ಸೇರಿರುವಹಾಗೆ ಕಾಣುತ್ತದೆ. ಆದರೂ ಚಿಂತೆಯಿಲ್ಲ. ಕಮಲಮಣಿಯು ನನ್ನ ಅಧಿಕಾರವನ್ನುಪಹರಿಸಿಕೊಂಡಿರುವುದಕ್ಕಾಗಿ ನಾನು ಅಸೂಯಾಪರಳಾಗುವುದಿಲ್ಲ.

ಹುಡುಗಿಯಿಂದ ಕಾರ್ಯವೇನೆಂದು ಅಪ್ಪಣೆಯಾದರೆ, ನಾನು ಆ ಹುಡು

ಗಿಯನ್ನು ತಾರಾಚರಣನಿಗೆ ಕೊಟ್ಟು ವಿವಾಹವನ್ನು ಬೆಳಸುವೆನು. ತಾರಾಚರಣನಿಗೋಸ್ಕರ ಒಂದು ಕನ್ಯೆಯನ್ನು ಹುಡುಕುತಲಿದ್ದೇನೆಂಬುದು ತಮಗೆ ವೇದ್ಯವಿರಬಹುದು. ದೇವರದಯದಿಂದ ಹುಡುಗಿಯು ಚನ್ನಾಗಿದ್ದರೆ ನನಗೆ ಆಶಾಭಂಗವನ್ನು ಮಾಡಕೂಡದು. ಕಮಲಮಣಿಯು ಅವಳನ್ನು ಬಿಟ್ಟುಕೊಟ್ಟರೆ ಇಲ್ಲಿಗೆ ದಯಮಾಡಿಸುವಾಗ ಅವಳನ್ನು ಸಂಗಡ ಕರೆತರಬೇಕು. ನಾನು ಕಮಲಮಣಿಗೂ ಬರೆದಿದ್ದೇನೆ. ನಾನು ವಿವಾಹಕ್ಕೆ ಕೆಲವು ಆಭರಣಗಳನ್ನೂ ಇತರ ಪದಾರ್ಥಗಳನ್ನೂ ಸಹ ಸಿದ್ಧಪಡಿಸುವುದರಲ್ಲಿದ್ದೇನೆ. ಕಲಿಕತ್ತೆಯಲ್ಲಿ ಬಹಳ ಸಾವಕಾಶ ಮಾಡಕೂಡದು. ಕಲಕತ್ತೆಯಲ್ಲಿ ಆರುತಿಂಗಳು ವಾಸ ಮಾಡಿದರೆ ಮುಟ್ಠಾಳರಾಗುತ್ತಾರಂತೆ. ನಿಜವೆ? ಕುಂದನಂದಿನಿಯನ್ನು ಸ್ವಂತವಾಗಿ ವಿವಾಹ ಮಾಡಿಕೊಳ್ಳುವುದಾದರೂ ಅಪ್ಪಣೆಯಾಗಬೇಕು; ಅದಕ್ಕೂ ಸಿದ್ಧಪಡಿಸುತ್ತೇನೆ"—ಎಂದಳು.

ತಾರಾಚರಣನು ಯಾರೆಂಬುದನ್ನು ಅನಂತರ ತಿಳಿಸುವೆವು. ಅವನು ಯಾರೇ ಆಗಲಿ, ಸೂರ್ಯಮುಖಿಯು ಪ್ರಸ್ತಾಪಿಸಿದ್ದ ರಮೇಲೆ ನಾಗೇಂದ್ರನೂ ಕಮಲಳೂಸಹ ಅದಕ್ಕೆ ಒಪ್ಪಿಕೊಂಡರು. ಆದಕಾರಣ ನಾಗೇಂದ್ರನು ಊರಿಗೆ ಹೋಗುವಾಗ ಕುಂದಳನ್ನು ಜತೇಲಿ ಕರೆದುಕೊಂಡು ಹೋಗಬೇಕೆಂದು ಗೊತ್ತಾಯಿತು. ಎಲ್ಲರೂ ಸಂತೋಷವುಳ್ಳವರಾದರು. ಕಮಲಳೂಸಹ ಕುಂದನಂದಿನಿಗೆ ಕೆಲವು ತೊಡಗೆಗಳನ್ನು ಮಾಡಿಸಿದಳು. ಆದರೆ ಮನುಷ್ಯನು ಎಷ್ಟು ಚಿರಾಂಧನೋ! ಹೇಳಲಸಾಧ್ಯ. ಕೆಲವು ವರುಷಗಳನಂತರ ಕಮಲಮಣಿಯೂ ನಾಗೇಂದ್ರನೂಸಹ ನೆಲದ ಮೇಲೆ ಬಿದ್ದು ಹೊರಳಾಡುತ್ತ ತಲೆಯನ್ನು ಚಚ್ಚಿಕೊಂಡು ಎಂತಹ ಕೆಟ್ಟವೇಳೆಯಲ್ಲಿ ಕುಂದಳು ಸಿಕ್ಕಿದಳೆಂತಲೂ ಎಂತಹ ಕೆಟ್ಟ ವೇಳೆಯಲ್ಲಿ ಸೂರ್ಯಮುಖಿಯ ಕಾಗದಕ್ಕೆ ಒಪ್ಪಿಕೊಂಡೆವೆಂತಲೂ ಹೇಳಿಕೊಂಡು ಪೇಚಾಡುವ ಕಾಲ ಬರುವುದು. ಅದನ್ನು ಅವರು ಹೇಗೆ ಇದುರುನೋಡುವರು!

ಈಗ ಪ್ರಕೃತವಲ್ಲಿ ಕಮಲಮಣಿಯೂ ನಾಗೇಂದ್ರನೂ ಸೂರ್ಯಮುಖಿಯೂ ಸಹ ಸೇರಿಕೊಂಡು ವಿಷದ ಬೀಜವನ್ನು ಬಿತ್ತಿದರು. ಕಡೆಗೆ ಮೂವರೂ ಹಾಹಾಕಾರವನ್ನು ಮಾಡುವರು.

ನಾಗೇಂದ್ರನು ಬಾಡಿಗೆ ದೋಣಿಯನ್ನು ಮಾಡಿಕೊಂಡು ಕುಂದನಂದಿನಿಯನ್ನು ಜತೇಲಿ ಕರೆದುಕೊಂಡು ಗೋವಿಂದಪುರಕ್ಕೆ ಪ್ರಯಾಣವಾಗಿ ಹೊರಟನು.

ಕುಂದಳು ಸ್ವಪ್ನವನ್ನು ಶುದ್ಧವಾಗಿ ಮರೆತುಬಿಟ್ಟಳು. ನಾಗೇಂದ್ರನ ಸಂಗಡ ಪ್ರಯಾಣವನ್ನು ಮಾಡುವಕಾಲದಲ್ಲಿ ಸ್ವಪ್ನವು ಸ್ಮರಣೆಗೆ ಬಂತು. ಆದರೆ ನಾಗೇಂದ್ರನ ಕಾರುಣ್ಯಪೂರ್ಣವಾದ ಮುಖಕಾಂತಿಯನ್ನೂ ಅವನ ಜನವಾತ್ಸಲ್ಯಗುಣವುಳ್ಳನಡತೆಯನ್ನೂ ಸಹ ಕಂಡು ಅವನಿಂದ ತನಗೆ ಅನಿಷ್ಟವುಂಟಾಗುವುದೆಂದು ನಂಬಲಿಲ್ಲ. ಹೀಗೆಯೇ ಪತಂಗವು ಪ್ರಜ್ವಲಿಸುತ್ತಿರುವ ವಹ್ನಿರಾಶಿಯನ್ನು ನೋಡಿ ಹೋಗಿ ಅದರಲ್ಲಿ ಬೀಳುತ್ತದೆ.

---

## ಆರನೆಯ ಪರಿಚ್ಛೇದ.

### ತಾರಾಚರಣ.

ಕವಿ ಕಾಳಿದಾಸನಿಗೆ ನಿತ್ಯವೂ ಒಬ್ಬ ಹೂವಾಡಿಗಿತ್ತಿಯು ಪುಷ್ಪವನ್ನು ತಂದುಕೊಡುತ್ತಿದ್ದಳು. ಕಾಳಿದಾಸನು ದರಿದ್ರಬ್ರಾಹ್ಮಣ. ಪುಷ್ಪಕ್ಕೆ ಕ್ರಯವನ್ನು ಕೊಡಲಾರದೆ ಅದಕ್ಕೆ ಬದಲಾಗಿ ತಾನು ಮಾಡಿದ ಕಾವ್ಯಗಳನ್ನು ಅವಳಿಗೆ ಓದಿಹೇಳುತ್ತಿದ್ದನು. ಒಂದುದಿನ ಮಾಲಿನಿಯು ಪುಷ್ಕರದಲ್ಲಿ ಒಂದಪೂರ್ವವಾದ ಪದ್ಮವು ಅರಳಿದ್ದದನ್ನು ತಂದು ಕಾಳಿದಾಸನಿಗೆ

ಕೊಟ್ಟಳು. ಕಾಳಿದಾಸನು ಅದಕ್ಕೆ ಪುರಸ್ಕಾರವಾಗಿ ತಾನು ಮಾಡಿದ್ದ ಮೇಘದೂತವನ್ನು ಅವಳಿಗೆ ಓದಿಹೇಳಿದನು. ಮೇಘದೂತವು ರಸಕ್ಕೆ ಸಾಗರಸ್ವರೂಪವಾದುದು. ಆದರೂ ಅದರ ಆದಿಭಾಗವು ಸ್ವಲ್ಪಮಟ್ಟಿಗೆ ನೀರಸವಾದುದೆಂದು ಅನೇಕರು ಹೇಳುವವರಾಗಿದ್ದಾರೆ. ಹೂವಾಡಗಿತ್ತಿಗೆ ರಸವಾಗಿ ತೋರಲಿಲ್ಲವಾಗಿ ಅವಳು ಕೇಳುವುದನ್ನು ಬಿಟ್ಟು ಎದ್ದು ಹೊರಟು ಹೋಗುತ್ತಿದ್ದಳು. ಕವಿಯು, ಮಾಲಿನೀ ಸಖಿ! ಇದೇನು ಎದ್ದೆ? ಎಂದು ಕೇಳಿದನು.

ಮಾಲಿನೀ—ನಿನ್ನ ಕವಿತ್ವದಲ್ಲಿ ರಸವಿಲ್ಲವೇತಕ್ಕೆ?

ಕವಿ—ಮಾಲಿನೀ! ನೀನು ಯಾವಾಗಲೂ ಸ್ವರ್ಗಕ್ಕೆ ಏರಲಾರೆ.

ಮಾಲಿನೀ—ಏತಕ್ಕೆ?

ಕವಿ—ಸ್ವರ್ಗಕ್ಕೆ ಮೆಟ್ಟಲುಗಳುಂಟು. ಲಕ್ಷಯೋಜನದೂರ ಮೆಟ್ಟಲುಗಳನ್ನು ಹತ್ತಿ ಸ್ವರ್ಗಕ್ಕೆ ಹೋಗಬೇಕು. ಈ ನನ್ನ ಮೇಘದೂತವೆಂಬ ಸ್ವರ್ಗಕ್ಕೂ ಮೆಟ್ಟಲುಗಳುಂಟು. ಈ ನೀರಸ ಕವಿತ್ವವು ಅದಕ್ಕೆ ಮೆಟ್ಟಲು. ಈ ಸಾಮಾನ್ಯವಾದ ಮೆಟ್ಟಲುಗಳನ್ನು ಹತ್ತಲಾರದೆಹೋದರೆ ಲಕ್ಷಯೋಜನದ ಮೆಟ್ಟಲುಗಳನ್ನು ಹೇಗೆ ಹತ್ತುವೆ?

ಆಗ ಹೂವಾಡಿಗಿತ್ತಿಯು ಬ್ರಾಹ್ಮಣ ಶಾಪದಿಂದ ಸ್ವರ್ಗಲಾಭವು ತಪ್ಪಿ ಹೋದೀತೆಂಬ ಭಯದಿಂದ ಮೇಘದೂತವನ್ನು ಆದ್ಯಂತವಾಗಿ ಕೇಳಿದಳು. ಶ್ರವಣಾನಂತರದಲ್ಲಿ ಪ್ರೀತಳಾಗಿ ಮಾರನೆಯದಿನ ಮದನಮೋಹಿನೀ ಎಂಬ ಹೂವುಮಾಲೆಯನ್ನು ಕಟ್ಟಿ ತಂದು ಕವಿಯ ಕೊರಳಿಗೆ ಹಾಕಿದಳು.

ಈ ನಮ್ಮ ಸಾಮಾನ್ಯವಾದ ಕಾವ್ಯವು ಸ್ವರ್ಗವೂ ಅಲ್ಲ. ಇದಕ್ಕೆ ಲಕ್ಷಯೋಜನದ ಮೆಟ್ಟಲುಗಳೂ ಇಲ್ಲ. ರಸವೋ ಅಲ್ಪ, ಮೆಟ್ಟಲುಗಳು ಚಿಕ್ಕವು. ಈ ನೀರಸವಾದ ಕೆಲವು ಪರಿಚ್ಛೇದಗಳು ಅದರ ಮೆಟ್ಟಲುಗಳು. ನಮ್ಮ ಪಾಠಕಮಹಾಶಯರಲ್ಲಿ ಯಾರಾದರೂ ಹೂವಾಡಿಗಿತ್ತಿಯ ಚರಿತ್ರೆಯ

ನ್ನುಳ್ಳವರಾಗಿದ್ದರೆ ಅಂತಹವರು ಈ ಮೆಟ್ಟಿಲುಗಳನ್ನು ಹತ್ತದಿದ್ದರೆ ರಸ ಮಧ್ಯದಲ್ಲಿ ಪ್ರವೇಶಿಸಲಾರದೆಹೋದಾರೆಂಬ ಭಯದಿಂದ ಅವರಿಗೆ ಎಚ್ಚರಿಕೆ ಯನ್ನು ಕೊಡಲು ಇಲ್ಲಿ ವಿಜ್ಞಾಪಿಸಿಕೊಂಡಿದ್ದೇವೆ.

ಸೂರ್ಯಮುಖಿಯ ತೌರುಮನೆಯು ಕೋನ್ನಗರ. ಅವಳ ತಂದೆಯು ಒಂದು ದೊಡ್ಡ ಹೆಸರುವಾಸಿಯಾದ ಮನೆತನದ ಕಾಯಸ್ಥನಾಗಿದ್ದನಲ್ಲದೆ ಕಲ ಕತ್ತೆಯಲ್ಲಿ ಯಾವದೋ ಒಂದು ಹೌಸಿನಲ್ಲಿ ಕ್ಯಾಷಿಯರ ಕೆಲಸದಲ್ಲಿದ್ದನು. ಅವನಿಗೆ ಸೂರ್ಯಮುಖಿಯೊಬ್ಬಳೇ ಮಗಳು. ಬೇರೆ ಮಕ್ಕಳಿಲ್ಲ. ಅವಳ ಬಾಲ್ಯದಲ್ಲಿ ಶ್ರೀಮತಿಯೆಂಬೊಬ್ಬ ಕಾಯಸ್ಥಜಾತಿಯವಳಾದ ವಿತಂತುವು ದಾಸಿಯುಹಾಗೆ ಆ ಮನೆಯಲ್ಲಿದ್ದುಕೊಂಡು ಸೂರ್ಯಮುಖಿಗೆ ಶುಶ್ರೂಷೆಯನ್ನು ಮಾಡುತಲಿದ್ದಳು. ಶ್ರೀಮತಿಗೆ ಒಂದು ಮಗು. ಅದರ ಹೆಸರು ತಾರಾ ಚರಣ. ಆ ಮಗುವು ಸೂರ್ಯಮುಖಿಯ ಸಮವಯಸ್ಕನಾಗಿತ್ತು. ಸೂರ್ಯ ಮುಖಿಯು ಬಾಲ್ಯದಲ್ಲಿ ಆ ಹುಡುಗನ ಸಂಗಡ ಆಡುತ್ತಿದ್ದಳಲ್ಲದೆ ಬಾಲ್ಯ ಸ್ನೇಹದಿಂದ ಅವನನ್ನು ತಮ್ಮನಹಾಗೆ ಭಾವಿಸಿಕೊಂಡಿದ್ದಳು.

ಶ್ರೀಮತಿಯು ವಿಶೇಷ ರೂಪವತಿಯಾಗಿದ್ದಳು. ಆದಕಾರಣ ಕೆಲವು ದಿನಗಳಲ್ಲಿಯೇ ವಿಪತ್ತಿನಲ್ಲಿ ಬಿದ್ದಳು. ಗ್ರಾಮಸ್ಥನಾದ ಒಬ್ಬ ದುರ್ನಡತೆ ಯುಳ್ಳ ಹಣವಂತನ ಕಣ್ಣಿಗೆ ಬಿದ್ದು ಅವಳು ಸೂರ್ಯಮುಖಿಯ ತಂದೆಯ ಮನೆಯನ್ನು ಬಿಟ್ಟು ಹೊರಟುಹೋದಳು. ಎಲ್ಲಿಗೆ ಹೋಗಿಬಿಟ್ಟಳೋ ಯಾರಿಗೂ ಗೊತ್ತಾಗಲಿಲ್ಲ. ಅವಳು ಮರಳಿ ಬರಲಿಲ್ಲ.

ಶ್ರೀಮತಿಯು ತಾರಾಚರಣನನ್ನು ಬಿಟ್ಟುಬಿಟ್ಟು ಹೊರಟುಹೋ ದಳು. ಅವನು ಸೂರ್ಯಮುಖಿಯ ತಂದೆಯ ಮನೆಯಲ್ಲಿಯೇ ಉಳಿದು ಕೊಂಡನು. ಸೂರ್ಯಮುಖಿಯ ತಂದೆಯು ಅತಿ ದಯಾಳುಚಿತ್ತನಾಗಿದ್ದನು. ಅವನು ಆ ಅನಾಥನಾದ ಹುಡುಗನನ್ನು ತನ್ನ ಮಗನಹಾಗೆ ನೋಡಿಕೊಂಡು ದಾಸತ್ವ ಮೊದಲಾದ ಹೀನವೃತ್ತಿಗೆ ಹಾಕದೆ ಅವನಿಗೆ ಓದುಬರಹವನ್ನು ಕಲಿ

ಸಿದನು. ತಾರಾಚರಣನು ಸ್ಕೂಲ ಫಿ ಇಲ್ಲದಿರುವ ಒಂದು ಮಿಷನೇರಿ ಸ್ಕೂಲಿನಲ್ಲಿ ಇಂಗ್ಲೀಷನ್ನು ಓದುತಲಿದ್ದನು.

ಅನಂತರ ಸೂರ್ಯಮುಖಿಗೆ ಮದುವೆ ಆಯಿತು. ಆದಾದ ಕೆಲವು ವರುಷಗಳಮೇಲೆ ಅವಳ ತಂದೆಗೆ ಪರಲೋಕಪ್ರಾಪ್ತಿಯುಂಟಾಯಿತು. ಅದುವರೆಗೆ ತಾರಾಚರಣನು ಅಲ್ಪಸ್ವಲ್ಪ ಇಂಗ್ಲೀಷನ್ನು ಕಲಿತಿದ್ದನು; ಆದರೆ ಚಾಕರಿ ಮಾಡುವಷ್ಟು ಸಾಮರ್ಥ್ಯವಿರಲಿಲ್ಲ. ಸೂರ್ಯಮುಖಿಯ ತಂದೆಯು ಹೋದಮೇಲೆ ತಾರಾಚರಣನು ನಿರಾಶ್ರಯನಾಗಿ ಸೂರ್ಯಮುಖಿಯ ಬಳಿಗೆ ಹೋದನು. ಸೂರ್ಯಮುಖಿಯು ನಾಗೇಂದ್ರನಿಗೆ ಹೇಳಿ ಗ್ರಾಮದಲ್ಲಿ ಒಂದು ಸ್ಕೂಲನ್ನು ಸ್ಥಾಪಿಸಿದಳು. ತಾರಾಚರಣನು ಆ ಸ್ಕೂಲಿಗೆ ಮೇಷ್ಟರಾದನು. ಈಗಿನಕಾಲದಲ್ಲಿ ಗ್ರಾಂಟಿನ್ ಎಯಿಡಿನ ಪ್ರಭಾವದಿಂದಲೂ ಹೋಬಳೀ ಸ್ಕೂಲಿನೇರ್ಪಾಡಿನಿಂದಲೂ, ಗ್ರಾಮಗ್ರಾಮದಲ್ಲಿಯೂ ವಿದ್ಯಾಶಾಲೆಗಳು ಸ್ಥಾಪಿಸಲ್ಪಟ್ಟು, ಸರ್ವಗುಣಗಳಿಗೂ ನೆಲೆಯಾದ ರೂಪಾರೂಪರಾಶಿಯನುಳ್ಳ ನಿರೀಹಸತ್ಪುರುಷರು ಮೇಷ್ಟರುಗಳಾಗಿ ವಿರಾಜಮಾನರಾಗಿದ್ದಾರೆ. ಆದರೆ ಆ ಕಾಲದಲ್ಲಿ ಇಷ್ಟು ಮೇಷ್ಟರುಗಳು ಇರಲಿಲ್ಲ. ಆದುಕಾರಣ ತಾರಾಚರಣನು ಗ್ರಾಮದೇವತೆಗಳಲ್ಲಿ ಒಬ್ಬನಾಗಿ ಗಣಿಸಲ್ಪಟ್ಟಿದ್ದನು. ಅದಲ್ಲದೆ ಅವನು Citizen of the world ಮತ್ತು Spectator ಮತ್ತು Made Easy Series ಪುಸ್ತಕಗಳನ್ನೆಲ್ಲಾ ಓದಿದ್ದನು. ಇಷ್ಟೂ ಅಲ್ಲದೆ ಜ್ಯಾಮಿತಿಯಲ್ಲಿ ಮೂರು ಬುಕ್ಕನ್ನೂ ಓದಿದ್ದನೆಂದು ಬಾಜಾರಿನಲ್ಲಿ ವರ್ತಮಾನವಿತ್ತು. ಈ ಸಕಲ ಗುಣಗಳಿಂದ ಅವನು ದೇವೀಪುರ ನಿವಾಸಿಯಾದ ಜಮೀನ್ದಾರ ದೇವೇಂದ್ರಬಾಬುವಿನ ಬ್ರಹ್ಮಸಮಾಜಕ್ಕೆ ಸೇರಿ ಬಾಬುವಿನ ಸಭಾಸದರ ಮಧ್ಯದಲ್ಲಿ ಗಣ್ಯನಾಗಿದ್ದನು. ಆ ಸಮಾಜದಲ್ಲಿ ತಾರಾಚರಣನು ವಿಗ್ರಹಾರಾಧನ, ಬಾಲ್ಯವಿವಾಹ ಪೂರ್ವಾಚಾರ ಮುಂತಾದವುಗಳನ್ನು ಖಂಡಿಸಿ, ವಿಧವಾವಿವಾಹ, ಸ್ತ್ರೀವಿದ್ಯಾಭ್ಯಾಸ, ಸ್ತ್ರೀಪುರುಷರು ಸಭೆಯಲ್ಲಿ ಸೇರುವುದು,

ಮುಂತಾದ ಅವಶ್ಯವಾದ Reforms (ಸಂಸ್ಕಾರ) ಗಳನ್ನನುಮೋದಿಸಿ ದೊಡ್ಡ ದೊಡ್ಡ ಲೆಕ್ಚರಗಳನ್ನು (Lecture) ಬರೆದು ವಾರಕ್ಕೆ ಒಂದಾವರ್ತಿ ಸಭೆಯಲ್ಲಿ ಓದುತ್ತ ಈ ಸಮಾಜ ಸಂಸ್ಕಾರಗಳನ್ನೆಲ್ಲಾ ಜಾಗ್ರತೆಯಾಗಿ ನಮ್ಮ ಸಮಾಜದಲ್ಲಿ ಉಂಟುಮಾಡುವಹಾಗೆ ನಮ್ಮ ಜನರಿಗೆಲ್ಲಾ ಬುದ್ಧಿ ಯನ್ನು ಕೊಡಲು ನಾವೆಲ್ಲರೂ "ಪರಮಕಾರುಣಿಕನಾದ ಪರಮೇಶ್ವರ ನನ್ನು" ಪ್ರಾರ್ಥಿಸೋಣವೆಂದು ಸಭಾಸದರನ್ನೆಲ್ಲಾ ಪ್ರೋತ್ಸಾಹಪಡಿಸಿ ಪ್ರಬಂಧಗಳನ್ನು ಪೂರೈಸುವನು. ವಕ್ತೃತೆಯನ್ನು ಪ್ರಾರಂಭಿಸುವಾ ಗಲೂ, "ಹೇ, ಪರಮಕಾರುಣಿಕ ಪರಮೇಶ್ವರ!" ಎಂದು ಮೊದಲು ಮಾಡುವನು. ಅವುಗಳನ್ನೆಲ್ಲಾ ಯಾವದೋ ನ್ಯೂಸಪೇಪರಿನಿಂದ ನಕಲು ಮಾಡಿಕೊಳ್ಳುತ್ತಿದ್ದನಲ್ಲದೆ ಸ್ಕೂಲಪಂಡಿತರಿಂದಲೂ ಬರಸಿಕೊಂಡು ಬರು ವನು. ಬಾಯಿಯಲ್ಲಿ ಯಾವಾಗಲೂ, ನೀವು ಕಲ್ಲು ಮಣ್ಣು ಪೂಜೆ ಮಾಡ ಬೇಡಿ, ಸೋದರ ಸಂಬಂಧವನ್ನು ಮಾಡಿ, ಹೆಂಗಸರಿಗೆ ವಿದ್ಯಾಭ್ಯಾಸವನ್ನು ಮಾಡಿಸಿ, ಹೆಂಗಸರನ್ನು ಪಂಜರದಲ್ಲಿ ಮುಚ್ಚಿಡಬೇಡಿ, ಹೆಂಗಸರು ದೊಡ್ಡ ವರಾದಮೇಲೆ ಮದುವೆ ಮಾಡಿ, ಪುನರ್ವಿವಾಹವು ನಡೆಯಲಿ ಎಂದು ಮುಂ ತಾಗಿ ಹೇಳುತ್ತಿರುವನು. ಹೆಂಗಸರ ವಿಚಾರದಲ್ಲಿ ಇಷ್ಟುಮಟ್ಟಿಗೆ ಲಿಬರಾ ಲಿಟಿ (Liberality) ಯನ್ನು ತೋರಿಸುವುದಕ್ಕೆ ಒಂದು ವಿಶೇಷ ಕಾರಣವೇ ನಂದರೆ—ಅವನ ಸ್ವಂತ ಮನೆಯಲ್ಲಿ ಹೆಂಗಸರು ಯಾರೂ ಇರಲಿಲ್ಲ. ಇದುವ ರೆಗೆ ಅವನಿಗೆ ಮದುವೆಯಾಗಿರಲಿಲ್ಲ. ಸೂರ್ಯಮುಖಿಯು ಅವನ ಮದುವೆ ಗೋಸ್ಕರ ಬಹಳ ಪ್ರಯತ್ನಪಡುತಲಿದ್ದಳು. ಆದರೆ ಅವನ ತಾಯಿಯು ಕುಲತ್ಯಾಗವನ್ನು ಮಾಡಿದ ಸಮಾಚಾರವು ಗೋವಿಂದಪುರದಲ್ಲಿ ಸರ್ವರಿಗೂ ತಿಳಿದಿತ್ತಾದಕಾರಣ ಸದ್ವಂಶದ ಕಾಯಸ್ಥರು ಯಾರೂ ಅವನಿಗೆ ಹೆಣ್ಣು ಕೊ ಡಲು ಸಮ್ಮತಿಸರು. ಕುಲಕಳಂಕಿತರಾದ ಕುತ್ಸಿತ ಜನರು ಹೆಣ್ಣು ಕೊ ಡಲು ಒಪ್ಪುತ್ತಲಿದ್ದರು. ಆದರೆ ಸೂರ್ಯಮುಖಿಯು ತಾರಾಚರಣನನ್ನು

ತನ್ನ ಸಹೋದರನಹಾಗೆ ಭಾವಿಸಿದ್ದಳಾಗಿ ಅಂತಹ ಹೆಣ್ಣನ್ನು ತಮ್ಮನ ಹೆಂಡತಿಯೆಂದು ಹೇಳಿಕೊಳ್ಳುವುದಕ್ಕೆ ಇಷ್ಟವಿಲ್ಲದೆ ಅವರ ಸಂಬಂಧವನ್ನು ಮಾಡುವುದಕ್ಕೊಪ್ಪಲಿಲ್ಲ. ಒಳ್ಳೆ ಮನೆತನದ ಹೆಣ್ಣನ್ನು ಹುಡುಕುತಲಿದ್ದಾಗ ನಾಗೇಂದ್ರನು ಕುಂದಳ ಸೌಂದರ್ಯವನ್ನು ವರ್ಣಿಸಿ ಬರೆದ ಕಾಗದವು ಬಂತು. ಆಗ ತಾರಾಚರಣನಿಗೆ ಕುಂದಳನ್ನು ಕೊಟ್ಟು ವಿವಾಹವನ್ನು ಮಾಡಬೇಕೆಂದು ಸ್ಥಿರಮಾಡಿಕೊಂಡಳು.

---

## ಏಳನೆಯ ಪರಿಚ್ಛೇದ.

### ಪದ್ಮಪಲಾಶಲೋಚನೆ ! ನೀನುಯಾರೆ ?

ಕುಂದಳು ನಾಗೇಂದ್ರನ ಜತೇಲಿ ಗೋವಿಂದಪುರಕ್ಕೆ ಬಂದಳು ನಾಗೇಂದ್ರನ ಮನೆಯನ್ನು ನೋಡಿ ಅವಳಿಗೆ ಅತ್ಯಂತ ಆಶ್ಚರ್ಯವಾಯಿತು. ಅಂತಹ ದೊಡ್ಡದಾದ ಮನೆಯನ್ನು ಅವಳು ಎಂದೂ ನೋಡಿರಲಿಲ್ಲ. ಆ ಮನೆಗೆ ಮುಂದುಗಡೆ ಮೂರು ಮಹಲುಗಳು, ಹಿಂದುಗಡೆ ಮೂರು ಮಹಲುಗಳು, ಒಂದೊಂದು ಮಹಲು ಒಂದೊಂದು ಊರಾಗಿತ್ತು. ಮೊದಲನೆಯ ಮಹಲು ಸದರುಮಹಲು. ಅದಕ್ಕೆ ಕಬ್ಬಿಣದ ಬಾಗಲು. ಸುತ್ತಲೂ ವಿಚಿತ್ರವಾದ ಕಬ್ಬಿಣದ ಕಟಾಂಜನ. ಬಾಗಲಿನಿಂದ ಒಳಕ್ಕೆ ಹೋಗುವುದಕ್ಕೆ ಕೆಂಪು ಮಣ್ಣು ಮರಳು ಸೇರಿಸಿ ಅದರಿಂದ ಮಾಡಿದ್ದ ಪ್ರಶಸ್ತವಾದ ಮಾರ್ಗ. ಅದರಲ್ಲಿ ತುಸವಾದರೂ ಕಸವಿಲ್ಲ. ಮಾರ್ಗದ ಎರಡುಪಾರ್ಶ್ವದಲ್ಲಿಯೂ ಗೋವುಗಳಿಗೆ ಮನೋರಂಜನವಾದ ಕೋಮಲವಾದ ಹೊಸಗರಿಕೆ ಹುಲ್ಲು ಬೆಳದಿದ್ದ ಎರಡು ಭೂಖಂಡಗಳು. ಅದರ ಮಧ್ಯದಲ್ಲಿ ಮಂಡಲಾಕಾರವಾಗಿ

ಹಾಕಿದ್ದ ಹೂವುಗಿಡುಗಳು ವಿಚಿತ್ರವಾದ ಪುಷ್ಪಫಲಗಳಿಂದಲಂಕೃತವಾಗಿದ್ದವು. ಇದುರಿಗೆ ಎರಡು ಅಂತಸ್ತಿನ ಮಹಡಿಯು ಮೇಲೆ ದಿವಾನಖಾನೆ. ಅದಕ್ಕೆ ಹತ್ತುವುದಕ್ಕೆ ಶಿಲೆಯಿಂದ ನಿರ್ಮಿತವಾದ ಪ್ರಶಸ್ತವಾದ ಮೆಟ್ಟಿಲುಗಳು. ಅಲ್ಲಿ ಮೇಲಿನ ವರಾಂಡಾದಲ್ಲಿ ಸೊಗಸಾಗಿ ಕಡೆದ ದೊಡ್ಡದೊಡ್ಡ ಕಲ್ಲುಕಂಭಗಳು. ನೆಲಕ್ಕೆ ಶಿಲೆಯು ಹರಡಿತ್ತು. ಉಪ್ಪರಿಗೆಯು ಮೇಲುಗಡೆ ಮಧ್ಯದಲ್ಲಿ ಮಣ್ಣಿನಿಂದ ಮಾಡಲ್ಪಟ್ಟ ದೊಡ್ಡದಾದ ಸಿಂಹವು ಜಟಾಯುಕ್ತವಾಗಿ ಬಾಯಿಯಿಂದ ಕೆಂಪುನಾಲಿಗೆಯನ್ನು ಹೊರಕ್ಕೆ ಹಾಕಿಕೊಂಡು ಕೂತಿತ್ತು. ಇದು ನಾಗೇಂದ್ರನ ಬೈಠಕಖಾನೆ. ತೃಣಪುಷ್ಪಮಯವಾದ ಮುಂದುಗಡೆ ಇರುವ ಭೂಖಂಡಗಳ ಎರಡುಪಾರ್ಶ್ವಗಳಲ್ಲಿಯೂ, ಅಂದರೆ ಎಡಕ್ಕೂ, ಬಲಕ್ಕೂ, ಒಂದಂತಸ್ತಿನ ಮಹಡಿಗಳು. ಅವುಗಳಲ್ಲಿ ಒಂದುಕಡೆಯಲ್ಲಿ ದಫ್ತರಖಾನೆ ಮತ್ತು ಕಚ್ಚೇರಿ. ಮತ್ತೊಂದುಕಡೆಯಲ್ಲಿ ತೋಷೀಖಾನೆ ಮತ್ತು ಶಿಪಾಯಿಗಳು ಇರುವುದಕ್ಕೆ ಸ್ಥಳ. ಮುಂಬಾಗಲಿನಲ್ಲಿ ಉಭಯಪಾರ್ಶ್ವದಲ್ಲಿಯೂ ಪಹರೆಯವರು ಇರುವುದಕ್ಕೆ ಮನೆ. ಈ ಮೊದಲನೆಯ ಮಹಲಿಗೆ ಕಚ್ಚೇರಿವಾಡಿಯೆಂದು ಹೆಸರು. ಇದಕ್ಕೆ ಪಕ್ಕದಲ್ಲಿ ಪೂಜಾವಾಡಿ. ಇದರಲ್ಲಿ ಕ್ರಮವಾಗಿ ಒಂದುಕಡೆಯಲ್ಲಿ ಪೂಜೆ ನಡೆಯುವ ಸ್ಥಳ, ಮಿಕ್ಕ ಮೂರುಕಡೆಯಲ್ಲಿ ಎರಡು ಅಂತಸ್ತಿನ ಮಹಡಿಗಳು. ಮಧ್ಯದಲ್ಲಿ ಎತ್ತರವಾದ ದೊಡ್ಡಭವಂತಿ. ಈ ಮಹಲಿನಲ್ಲಿ ಯಾರೂ ವಾಸವಿಲ್ಲ. ದುರ್ಗೋತ್ಸವದಲ್ಲಿ ಇಲ್ಲಿ ಮಹಾಕೋಲಾಹಲ. ಈಗ ಬಾಗಲುಗಳಿಗೆಲ್ಲ ಬೀಗ. ಅಲ್ಲಲ್ಲಿ ಹುಲ್ಲುಸಹ ಬೆಳೆದಿದೆ. ಈ ಮಹಲಿನ ಪಕ್ಕದಲ್ಲಿ ಠಾಕೂರವಾಡಿ, ಅಂದರೆ, ದೇವರಮನೆ. ಇಲ್ಲಿ ಸೊಗಸಾದ ಶಿಲಾಮಯವಾದ ದೇವಮಂದಿರ. ಮೂರುಕಡೆಯಲ್ಲಿಯೂ ದೇವರಿಗೆ ನೈವೇದ್ಯಕ್ಕೋಸ್ಕರ ಅಡಿಗೆಯಾಗಲು ಪಾಕಶಾಲೆ, ಅತಿಥಿಶಾಲೆ. ಪೂಜಾರಿಗಳು ಇರುವುದಕ್ಕೆ ಮನೆಗಳು. ಇಲ್ಲಿ ಜನಗಳಿಗೆ ಕಡಮೆಯಿಲ್ಲ. ಕುತ್ತಿಗೆಯಲ್ಲಿ ಮಾಲೆ, ಹಣೆಯಲ್ಲಿ ಚಂದನ ತಿಲಕವುಳ್ಳ ಅರ್ಚಕರ ಗುಂಪು ;

ಪಾಚಕರ ಗುಂಪು. ಕೆಲವರು ಹೂವು ತುಲಸಿ ತರುವುರು. ಕೆಲವರು ದೇವರು ಗಳಿಗೆ ಅಭಿಷೇಕ ಮಾಡುವುರು. ಕೆಲವರು ಘಂಟೆಯನ್ನು ಆಡಿಸುವುರು. ಕೆಲವರು ಶಂಖವನ್ನು ಊದುವುರು. ಕೆಲವರು ಗದ್ದಲಮಾಡುವುರು. ಕೆಲ ವರು ಗಂಧವನ್ನು ತೇಯುವುರು. ಕೆಲವರು ಅಡಿಗೆಯನ್ನು ಮಾಡುವುರು. ಕೆಲವರು ಅಕ್ಕಿಯನ್ನು ತೊಳೆಯುವುರು. ಕೆಲವರು ನೀರು ಹೊತ್ತುಕೊಂ ಡು ಬರುವುರು. ಕೆಲದಾಸಿಯರು ಬ್ರಾಹ್ಮಣರಸಂಗಡ ಕಾದಾಡುವುರು. ಅತಿಥಿಶಾಲೆಯಲ್ಲಿ ಒಂದುಕಡೆಯಲ್ಲಿ ಭಸ್ಮಭೂಷಿತನಾದ ಒಬ್ಬ ಸನ್ಯಾಸಿಯು ಜಟೆಯನ್ನು ಹರಡಿಕೊಂಡು ಅರ್ಧ ಒರಗಿಕೊಂಡು ಹಾಗೆಯೇ ನಿದ್ರೆಯನ್ನು ಮಾಡುತಲಿರುವುನು. ಒಬ್ಬ ಊರ್ಧ್ವಬಾಹುವು ಕೈ ಮೇಲಕ್ಕೆತ್ತಿಕೊಂಡು ದಾಸಿಯರು ಇರುವಕಡೆ ಹೋಗಿ ಔಷಧವನ್ನು ಕೊಡುವುನು. ಪಲಿತಕೇಶ ನಾದ ಕಾವಿಶಾಟಿಯನ್ನುಟ್ಟಿದ್ದ ಬ್ರಹ್ಮಚಾರಿಯು ರುದ್ರಾಕ್ಷಿಸರವನ್ನು ತಿರುಗಿ ಸುತ್ತ ಸ್ವಹಸ್ತದಿಂದ ಬರೆದುಕೊಂಡಿದ್ದ ಭಗವದ್ಗೀತೆಯನ್ನು ಪಾರಾಯಣ ಮಾಡುವುನು. ಅಲ್ಲಲ್ಲಿ ಉದರಪರಾಯಣರಾದ ಸಾಧುಗಳು ಕೊಟ್ಟ ತುಪ್ಪವು ಸಾಲದೆಂದು ಗದ್ದಲಮಾಡುವುರು. ಅಲ್ಲಲ್ಲಿ ಶುಷ್ಕಕಂಠರಾದ ಬೈರಾಗಿಗಳು ಕಂಠದಲ್ಲಿ ತುಲಸಿಮಾಲೆಗಳನ್ನು ಹಾಕಿಕೊಂಡು ಮುಖಕ್ಕೆ ತಿಲಕವನ್ನು ಬರೆದುಕೊಂಡು ಮುಖ ಮೂಗು ಅಲ್ಲಾಡಿಸುತ್ತ ಮೃದಂಗವನ್ನು ಹೊಡಿ ಯುತ್ತ " ಕಥಾಕೊಯಿತೆಜೆಪೆ ಲಾಮುನಾದಾದಾಬೋಲಾಯಿಸಂಗೇಭಿಲ್ — ಕಥಾಕೊಯಿತೆಜೆ " ಎಂದು ಮುಕ್ತಾಯಮಾಡಿಕೊಂಡು ಕೀರ್ತನೆಯನ್ನು ಹಾಡುತ್ತಲಿದ್ದರು. ಬೈರಾಗಿಗಳ ಹೆಂಡಂದಿರು ತಮ್ಮ ತಮ್ಮ ಗಂಡಂದಿರಿಗೆ ಮೋಹವನ್ನುಂಟುಮಾಡುವಹಾಗೆ ಕೇಶರಂಜನೆಯನ್ನು ಮಾಡಿಕೊಂಡು ಖಂ ಜನೀ ತಾಳದಲ್ಲಿ " ಗೋವಿಂದ ಅಧಿಕಾರಿ " ಎಂದು ಪಲ್ಲವಿಯನ್ನು ಸೇರಿಸಿ ಹಾಡುವುರು. ಕೆಲವರು ಹೊಸದಾಗಿ ವೈರಾಗಿಗಳಾದ ಚಿಕ್ಕಚಿಕ್ಕ ಹುಡುಗಿ ಯರು ಮುದಿವೈಷ್ಣವೀಯರ ಜತೇಲಿ ಹಾಡುವುರು. ಕೆಲವರು ಅರ್ಧವಯಸ್ಸ

ರಾದವರು ಕೇವಲ ವೃದ್ಧರಜತೆಗೆ ಹ್ಮಡುವುರು. ವೇಮಂದಿರದ ಮುಂಭಾಗ ದಲ್ಲಿ ಕೆಲಸವಿಲ್ಲದ ನೆರೆಹೊರೆ ಹುಡುಗರು ಕಾದಾಡುತ್ತ ತೂಗಾಡುತ್ತ ಹೊಡ ದಾಡುತ್ತಿದ್ದರಲ್ಲದೆ ಪರಸ್ಪರ ತಾಯಿತಂದೆಗಳನ್ನು ಉದ್ದೇಶಿಸಿ ನಾನಾವಿಧ ವಾಗಿ ಸುಸಭ್ಯಭಾಷೆಯಲ್ಲಿ ಬೈದಾಡುತ್ತಿದ್ದರು.

ಈ ಮೂರು ಮೂರುಸದರಮಹಲು. ಈ ಮೂರು ಮಹಲಗಳಿಗೆ ಹಿಂಭಾಗದಲ್ಲಿ ಮೂರು ಒಳಗಿನ ಮಹಲುಗಳು. ಕಚ್ಚೇರಿ ಮಹಲಿಗೆ ಹಿಂದಿನ ಒಳಮಹಲು ನಾಗೇಂದ್ರನ ಸ್ವಂತಉಪಯೋಗದ್ದು. ಅದರಲ್ಲಿ ಅವನು, ಅವನ ಭಾರ್ಯೆ, ಅವರ ಸ್ವಂತ ಸೇವೆಗೆ ಇದ್ದ ಪರಿಚಾರಕರು ಮಾತ್ರ ಇರುವವರಲ್ಲದೆ ಅವರ ಉಪಯೋಗದ ಪದಾರ್ಥಗಳು ಅಲ್ಲಿರುವುವು. ಇದು ಹೊಸಮಹಲು; ನಾಗೇಂದ್ರನು ಸ್ವಂತವಾಗಿ ಕಟ್ಟಿಸಿದನು. ಅದರ ಕಟ್ಟುದೆಲೆಯು ಬಹಳ ಪರಿಪಾಟಿಯಾಗಿತ್ತು. ಅದರ ಪಕ್ಕದಲ್ಲಿ ಪೂಜಾ ವಾಹಿಗೆ ಹಿಂದಕ್ಕೆ ಹಳೇಮಹಲು. ಇದು ಪೂರ್ವಕಾಲದಲ್ಲಿ ಕಟ್ಟಿಸಿದುದು. ಕುಸಿಯಾದುದು. ಎತ್ತರವಿಲ್ಲ. ನೋಟಕ್ಕೆ ಏನೇನು ಚನ್ನಾಗಿಲ್ಲ. ಇದರಲ್ಲಿ ಅನೇಕ ಆತ್ಮೀಯ ಕುಟುಂಬದವರು ಇರುವುರು. ತಾಯಿಯ ತಾಯಿ, ಸೋದರತ್ತೆ, ಅವಳ ಹೆಣ್ಣುಮಕ್ಕಳು, ಮಕ್ಕಳಮಕ್ಕಳು, ಸಂಸಾರ ತಪ್ಪಿದವರು, ತಪ್ಪದವರು, ಚಿಕ್ಕಮ್ಮನ ಮಗಳ ಮಕ್ಕಳು, ಭಾವಮೈದನ ಹೆಣ್ಣುಮಕ್ಕಳು, ಅವನ ಮಕ್ಕಳು, ಇನ್ನೂ ಅನೇಕ ಬಂಧುವರ್ಗಕ್ಕೆ ಸೇರಿದವರು ತುಂಬಿಕಾಕಸಮಾಕುಲವಾದ ವಟವೃಕ್ಷದೋಪಾದಿಯಲ್ಲಿ ರಾತ್ರಿ ಹಗಲೂ ಕಿಲಕಿಲ ಎಂದು ಗದ್ದಲವಾಗುತಲಿರುವುದು. ಅನುಕ್ಷಣದಲ್ಲಿಯೂ ನಾನಾಪ್ರಕಾರವಾದ ಚೀತ್ಕಾರ, ಹಾಸ್ಯಪರಿಹಾಸ್ಯ, ಕಲಹ, ಕುತರ್ಕಗಳು, ನಡೆಯುತ್ತಿರುವುದು. ಗಂಡು ಹುಡುಗರ ಹಾವಳಿ, ಹೆಣ್ಣುಹುಡುಗರ ರೋದನ, ನೀರುಬೇಕು, ಬಟ್ಟೆಕೊಡು, ಅನ್ನಹಾಕು, ಅಡಿಗೆಯಿಲ್ಲ, ಮಗುವಿಗೆ ಹಾಲುಬೇಕು, ಎಂದು ಮುಂತಾದ ಶಬ್ದಗಳಿಂದ ಸಂಕ್ಷುಬ್ಧವಾದ ಸಾಗರದಂತೆ

ಶಬ್ದಿತವಾಗುತಲಿತ್ತು. ಇದರಪಾರ್ಶ್ವದಲ್ಲಿ ಠಾಕೂರವಾಡಿಗೆ ಹಿಂದೆ ರಂಧನ ಶಾಲೆ. ಅಲ್ಲಿ ಇನ್ನೂ ಹೆಚ್ಚು ಗದ್ದಲ. ಅಡಿಗೆಮಾಡುವವಳೊಬ್ಬಳು ಅನ್ನಕ್ಕೆ ಒಲೆ ಮೇಲೆ ತಪ್ಪಲೆಯನ್ನಿಟ್ಟು ಒಳಗೆ ಕಟ್ಟಿಗೆ ಹಾಕಿಬಿಟ್ಟು ಕಾಲು ಚಾಚಿ ಕೊಂಡು ಕೂತು ನೆರೆಯುವಳಸಂಗಡ ತನ್ನ ಮಗನಿಗೆ ಮದುವೆಯಾದ ವೃತ್ತಾಂತವನ್ನು ಹೇಳುತ್ತಿದ್ದಳು. ಮತ್ತೊಬ್ಬ ಪರಿಚಾರಕಳು ಹಸಿ ಕಟ್ಟಿಗೆಯುುರಿಯದೆ ಊದಿ ಊದಿ ಹೊಗೆಯಿಂದ ವಿಗಳಿತಲೋಚನಳಾಗಿ ಮನೆ ಯ ಗುಮಾಸ್ತೆಯನ್ನು ದೂಷಿಸುತ್ತ ಆತನು ದುಡ್ಡು ಳಿಸಿಕೊಳ್ಳುವುದಕ್ಕೆ ಹಸಿ ಕಟ್ಟಿಗೆಯನ್ನು ತಂದು ಹಾಕಿದ್ದಾನೆಂಬುವದಕ್ಕೆ ಅನೇಕ ರುಜುವಾತು ಗಳನ್ನು ಕೊಡುತಲಿದ್ದಳು. ಒಬ್ಬ ಸುಂದರಿಯು ಕಾದ ಯಣ್ಣೆಯಲ್ಲಿ ಕರಿ ಯುವುದಕ್ಕೆ ಏನೋ ಪದಾರ್ಥವನ್ನು ಕಣ್ಣು ಮುಚ್ಚಿಕೊಂಡು ಹಾಕಿದಾಗ ಕಾದೆಣ್ಣೆಯು ಮೈಮೇಲೆ ಹಾರಿ ದಶನಾವಳಿಯನ್ನು ಕಿರಿದು ಮುಖಭಂಗಿ ಯನ್ನು ಮಾಡುತ್ತಿದ್ದಳು. ಇನ್ನೊಬ್ಬಳು ಸ್ನಾನವನ್ನು ಮಾಡುವುದಕ್ಕೆ ಬಹಳ ಯಣ್ಣೆಯನ್ನು ತಲೆಗೆ ಬಳಿದುಕೊಂಡು ಗಂಟಿಗೆ ಆಡಗದ ಕೇಶರಾಶಿ ಯನ್ನು ಸೀಮಂತದೇಶದಲ್ಲಿ ಚೂಡಾಕಾರವಾಗಿ ಕಟ್ಟಿಕೊಂಡು ಕೈಲಿ ಕೋಲು ಹಿಡಿದು ಯಾವದನ್ನೋ ಹೊಡಿಯುತಲಿದ್ದಳು. ಸಾಕ್ಷಾತ್ ಶ್ರೀ ಕೃಷ್ಣನು ಕೋಲಿನಿಂದ ಗೋವುನ್ನು ಹೊಡಿಯುತ್ತಿದ್ದಹಾಗೆ ಹೋಲು ವಳು. ಒಂದುಕಡೆಯಲ್ಲಿ ಈಳಿಗೆಮಣೆಗಳ ಮೇಲೆ ಕೂತುಕೊಂಡು ಭಾ ಮಿನಿ, ವಾಮಿ, ಕ್ಷೇಮಿ, ಲಕ್ಷ್ಮಿ, ಸುಬ್ಬಿ, ಗೋಪಾಲತಾಯಿ, ನೇಪಾಳನ ಅತ್ತಿಗೆ ಮುಂತಾದವರು ಕುಂಬಳ, ಪಡವಲ, ಬದನೆಕಾಯಿ, ಸೊಪ್ಪು, ಗೆಣ ಸು ಮುಂತಾದವುಗಳನ್ನು ಹೆಚ್ಚುತಲಿದ್ದರು. ಕೈಯಲ್ಲಿ ಗಸಗಸ ಕಚಕಚ ಶಬ್ದವಾಗುತಲಿತ್ತು. ಬಾಯಿಯಲ್ಲಿ ತಡೆಯಿಲ್ಲದ ಮಾತಿನ ಗಲಭೆ-ಗಲಭೆ ಮಾತಿನಲ್ಲಿ ಯಜಮಾನ ಯಜಮಾನಿಯ ನಿಂದೆ, ನೆರೆಹೊರೆಯವರ ನಿಂದೆ ಪರಸ್ಪರ ಹೋರಾಟವಾಗುತಲಿರುವುದಲ್ಲದೆ, ಸುಂದರಿಯು ಚಿಕ್ಕವಯಸ್ಸಿನಲ್ಲಿ

ಯೇ ಗಂಡನ್ನು ಹೊಗಲಾಡಿಸಿಕೊಂಡಳು, ಚಂದ್ರವದನೆಯ ಗಂಡ ಶುದ್ಧ ಹುಚ್ಚ, ಕಾವೇರಮ್ಮನ ಅಳಿಯನಿಗೆ ದೊಡ್ಡ ಕೆಲಸವಾಯಿತು, ಚೊಕ್ಕಮ್ಮನ ಗಂಡ ಚೋಪದಾರನಾದನಂತೆ, ಜಾನಕಿ ಮಗನಹಾಗೆ ಇನ್ನು ಪ್ರಪಂಚದಲ್ಲಿಲ್ಲ, ಲಕ್ಷ್ಮಿಯ ಗಂಡ ಶುದ್ಧ ಪೋಕರಿ, ರಾಮಮ್ಮನಿಗೆ ಕೈಶುದ್ಧಿಯಿಲ್ಲ, ಮುನಿಸಿಬರು ಯಾತ್ರೆಮಾಡಿಕೊಂಡು ಬಂದುದು ಅತಿ ಜಾಗ್ರತೆ, ಇಂಗ್ಲೀಷರು ರಾವಣನ ವಂಶದವರು, ಭಗೀರಥನು ಎಷ್ಟೋ ಕಷ್ಟಪಟ್ಟು ಗಂಗೆಯನ್ನು ತಂದ, ನಮ್ಮ ಶ್ವೇತದ್ವೀಪಾಚಾರ್ರ ಮನೆಯವಳಿಗೂ ಆ ನೆರಮನೆಯ ರಾಯನಿಗೂ ಕೇವಲವಂತೆ, ಎಂದು ಮುಂತಾಗಿ ನಾನಾಪ್ರಕಾರವಾಗಿ ನಾನಾವಿಷಯಗಳ ಸಮಾಲೋಚನೆಯೂ ನಡೆಯುತಲಿತ್ತು. ಒಂದುಕಡೆಯಲ್ಲಿ ವೃದ್ಧಳೊಬ್ಬಳು ನದಿಯಲ್ಲಿ ಸ್ನಾನ ಮಾಡಿಕೊಂಡು ಬಂದು ಹೆಚ್ಚು ವೈರಾಗ್ಯವನ್ನುತಾಳಿ ಜಪವನ್ನು ಮಾಡುವ ನೆಪದಿಂದ ಕುಳಿತುಕೊಂಡು ಬಂದವರ ಸಂಗಡ ತನ್ನ ಸ್ವಂತದುಃಖವನ್ನೇ ಹೇಳಿಕೊಳ್ಳುತ್ತ ಅಸೂಯಾಪರಳಾಗಿ ಪರನಿಂದೆಯಲ್ಲಿ ತತ್ಪರಳಾಗಿ ಸಂಕಟಪಡುವಳು. ಒಬ್ಬ ವದುವುಗಾತ್ತಿಯು ಅಕ್ಕನು ಕೊಟ್ಟ ಒಡವೆ ವಸ್ತ್ರಗಳನ್ನು ಧರಿಸಿಕೊಂಡು ಅವುಗಳನ್ನು ಬಂದವರಿಗೆ ವ್ಯಕ್ತಪಡಿಸಲು ಕೆಲಸವನ್ನು ಮಾಡುವವಳಹಾಗೆ ತಿರುಗಾಡುತ್ತ, ಅನ್ಯರು ಲೋಭಿಗಳೆಂದು ದೂಷಿಸುವುಳು. ಕೆಲವಾಸ್ಟೆಯರಲ್ಲದವರು, ಪರಿಚಾರಕರು, ಆಳುಗಳು, ಅಪರಿಚಯದವರುಸಹ ಕೂತು ನಿಂತು ಓಡಾಡುವ ನಡಮನೆಯಲ್ಲಿ, ಕುಳಿತುಕೊಂಡು ಜರಿದುಹೋದ ಶೀರೆ ಶರಗುಗಳನ್ನು ಸರಿಮಾಡಿಕೊಳ್ಳದೆ ಬಾಲೆಂಬ ನಾಟ್ಯಕ್ಕೆ ಹೋಗಲು ತೊಟ್ಟುಡುಪುಗಳುಳ್ಳ ಧೂರೆಸಾನಿಗಳ ಹಾಗೆ ಕಣ್ಣೋಳಿಸುತ್ತ ನೆರಹೊರೆಯವರ ಛಿದ್ರಾನ್ವೇಷಣತತ್ಪರರಾಗಿ ಯಥಾಸಾವಕಾಶವಾಗಿ ಮಾತನಾಡುವುರು. ಆದರೆ ಅವರ ಗಂಡಂದಿರು ಅಲ್ಲಿ ಏನಾದರೂ ಸುಳಿದಾಡುವುದನ್ನು ಕಂಡರೆ ಬೇಗನೆ ಶರಗು ಸರಿಮಾಡಿಕೊಂಡು ಲಜ್ಜಿತರಾಗಿ ಎದ್ದು ನಿಂತುಕೊಳ್ಳುವುರು. ಉ

ಗ್ರಾಣದ ಹತ್ತಿರ ಪರಿಚಾರಿಕಳೊಬ್ಬಳು ತುಪ್ಪ ಕೊಟ್ಟದ್ದು ಸಾಲದೆಂದು ಉಗ್ರಾಣದವನ ಸಂಗಡ ತುಮುಲಕಲಹವನ್ನು ಮಾಡುವುಳು, ಬಾಗಲಿನ ಹತ್ತಿರ ಅನ್ನಕ್ಷೇತ್ರ ಉಮೇದುವಾರಿ ಮಾಡುತ್ತ ಅನೇಕ ಭಿಕ್ಷುಕರು, ಚಿಕ್ಕವರು, ದೊಡ್ಡವರು, ಹೆಂಗಸರು, ಗಂಡಸರು, ಕುಳಿತಿರುವರು. ಅವರ ಜತೆಯಲ್ಲಿ ನಾಯಿಯೂ ಕೂತಿರುವುದು. ಒಳಗೆ ಬೆಕ್ಕುಗಳು ಉಮೇದು ವಾರಿಯನ್ನು ಮಾಡುತ್ತಿರಲಿಲ್ಲ. ಅವು ಅವಕಾಶ ಸಿಕ್ಕಿದಹಾಗೆಲ್ಲ ಅಡಿಗೆ ಮಾಡುವವರಹಾಗೆ ಯಾರ ಅನುಮತಿಯನ್ನೂ ಕೇಳದೆ ಸಿಕ್ಕಿದ್ದನ್ನು ತೆಗದು ಕೊಂಡು ಹೋಗುತಲಿರುವುವು. ಅಧಿಕಾರವಿಲ್ಲದೆ ಪ್ರವೇಶಿಸಿದ ಹಸುಗಳು ಹೆಚ್ಚಿದ ತರಕಾರಿಗಳ ಅವಶಿಷ್ಟವನ್ನು ಅಮೃತಮಯವಾಗಿ ತಿಳಿದು ಕಣ್ಣು ಮುಚ್ಚಿಕೊಂಡು ತಿನ್ನುವುವು. ಆಗಾಗ್ಗೆ ಮೈಮೇಲೆ ಕೂತಿರುವ ನೊಣಗಳ ನಿವಾರಣಾರ್ಥವಾಗಿ ಕಿವಿ ಬಾಲಗಳನ್ನು ಬೀಸುತಲಿದ್ದವು.

ಈ ಮೂರು ಬಳಮಹಲಿಗೆ ಹಿಂದೆ ಪುಷ್ಪೋದ್ಯಾನ. ಪುಷ್ಪೋದ್ಯಾ ನದ ಆಚೆ ಒಂನು ಸಣ್ಣದಾದ ನೀಲಮೇಘಸದೃಶವಾದ ಪ್ರಶಸ್ತವಾದ ಚಿಕ್ಕ ಕೆರೆ. ಕೆರೆಗೆ ಸುತ್ತಲೂ ಗೋಡೆ. ಬಳಮಹಲಗಳಿಂದ ತೋಟಕ್ಕೆ ಬಾಗಲ ಗಳು, ತೋಟದಿಂದ ಕೆರೆಗೆ ದಾರಿ ಇರುವುದು.

ಈ ದೊಡ್ಡ ಅರಮನೆಯ ಹೊರಗೆ ಕುದುರೆಲಾಯ, ಆನೆಲಾಯ, ನಾಯಿಮನೆ, ಗೋಶಾಲಾ, ಹಕ್ಕೀಗೂಡುಗಳು.

ಕುಂದನಂದಿನಿಯು ವಿಸ್ಮಿತವಾದ ನೇತ್ರಗಳಿಂದ ನಾಗೇಂದ್ರನ ಅಪರಿ ಮಿತವಾದ ಐಶ್ವರ್ಯವನ್ನು ನೋಡುತ್ತ ಪಾಲ್ಕಿಯಲ್ಲಿ ಕೂತು ಅಂತಃಪುರಕ್ಕೆ ಹೋದಳು. ಸೂರ್ಯಮುಖಿಯ ಹತ್ತಿರಕ್ಕೆ ಕರೆತರಲ್ಪಟ್ಟವಳಾಗಿ ಅವಳಿಗೆ ನಮಸ್ಕಾರವನ್ನು ಮಾಡಿದಳು. ಸೂರ್ಯಮುಖಿಯು ಆಶೀರ್ವಾದವನ್ನು ಮಾಡಿದಳು.

ಕುಂದನಂದಿನಿಯು ನಾಗೇಂದ್ರನನ್ನು ನೋಡಿ, ಅವನಲ್ಲಿ ತಾನು

ಸ್ವಪ್ನದಲ್ಲಿ ಕಂಡ ಪುರುಷನ ಸಾದೃಶ್ಯವನ್ನು ನೋಡಿದ್ದವಳಾಗಿ, ಸ್ವಪ್ನದಲ್ಲಿ ಕಂಡ ಸ್ತ್ರೀಯು ಅವನ ಹೆಂಡತಿಯಾಗಿರಬಹುದೆಂದು ಶಂಕಾನ್ವಿತಳಾಗಿದ್ದಳು. ಆದರೆ ಸೂರ್ಯಮುಖಿಯನ್ನು ನೋಡಿದಮೇಲೆ ಅವಳ ಸಂದೇಹವು ದೂರವಾಯಿತು. ಸೂರ್ಯಮುಖಿಯು ಕುಂದನಂದಿನಿಯು ಸ್ವಪ್ನದಲ್ಲಿ ಕಂಡಿದ್ದ ಹೆಂಗಸಿನಹಾಗೆ ಶ್ಯಾಮಾಂಗಿಯಾಗಿರಲಿಲ್ಲ. ಸೂರ್ಯಮುಖಿಯು ಪೂರ್ಣಚಂದ್ರನ ಹಾಗೆ ಕಾಸಿದ ಚೊಕ್ಕಭಂಗಾರದ ವರ್ಣವುಳ್ಳವಳು. ಅವಳ ಕಣ್ಣುಗಳು ಸುಂದರವಾದುದಾದರೂ ಸ್ವಪ್ನದಲ್ಲಿ ಕಂಡ ಹೆಂಗಸಿನ ಕಣ್ಣುಗಳಹಾಗಿರಲಿಲ್ಲ. ಸೂರ್ಯಮುಖಿಯ ಕಣ್ಣು ಸುದೀರ್ಘವಾಗಿಯೂ ಅಳಕಸ್ಪರ್ಶಿಯಾದ ಭ್ರೂಯುಗ್ಮಸಮಾಶ್ರಿತವಾಗಿಯೂ ಕಮನೀಯವಾದ ವಕ್ರಪಲ್ಲವರೇಖೆಯಮಧ್ಯಸ್ಥವಾಗಿಯೂ ಸ್ಥೂಲವಾದ ಕೃಷ್ಣತಾರಾಸನಾಥವಾಗಿಯೂ, ಗುಡ್ಡೆಗಳು ಸ್ವಲ್ಪ ಉಬ್ಬಿದಹಾಗೆ ಉಜ್ವಲವಾಗಿ ಮಂದಗತಿಯುಳ್ಳದ್ದಾಗಿತ್ತು. ಸ್ವಪ್ನದೃಷ್ಟಳಾದ ಶ್ಯಾಮಾಂಗಿಯ ಕಣ್ಣುಗಳಲ್ಲಿ ಇಷ್ಟು ಅಲೌಕಿಕವಾದ ಮನೋಹಾರಿತ್ವವು ಇರಲಿಲ್ಲ. ಸೂರ್ಯಮುಖಿಯ ಅವಯವವೂ ಹಾಗಿರಲಿಲ್ಲ. ಸ್ವಪ್ನದೃಷ್ಟಳು ಖರ್ವಾಕೃತಿಯವಳು. ಸೂರ್ಯಮುಖಿಯು ಸ್ವಲ್ಪ ಉದ್ದವಾಗಿಯೂ ಮಂದಮಾರುತದಿಂದ ಆಂದೋಳಿತವಾದ ಲತೆಯಹಾಗೆ ಸೌಂದರ್ಯವು ತುಂಬಿ ಬಳುಕುತ್ತಿದ್ದಳು. ಸ್ವಪ್ನದಲ್ಲಿ ಕಂಡ ಹೆಂಸು ಸುಂದರಳೇ ಆದರೂ ಸೂರ್ಯಮುಖಿಯು ಅವಳಗಿಂತಲೂ ನೂರುಪಾಲು ಹೆಚ್ಚು ಸುಂದರಳಾಗಿದ್ದಳು. ಸ್ವಪ್ನದೃಷ್ಟಳು ಇಪ್ಪತ್ತು ವರುಷಕ್ಕೆ ಮೀರಿದಹಾಗೆ ಕಾಣಿಸಲಿಲ್ಲ. ಸೂರ್ಯಮುಖಿಗೆ ಇಪ್ಪತ್ತಾರುವರುಷ. ಸೂರ್ಯಮುಖಿಗೂ ಸ್ವಪ್ನದೃಷ್ಟಳಾದ ಸ್ತ್ರೀಮೂರ್ತಿಗೂ ಏನೇನೂ ಸಾದೃಶ್ಯವಿಲ್ಲದ್ದನ್ನು ಕಂಡು ಕುಂದಳು ಸಚ್ಛಂದಚಿತ್ತಳಾದಳು.

ಸೂರ್ಯಮುಖಿಯು ಕುಂದಳನ್ನು ಆದರದಿಂದ ಮಾತನಾಡಿಸಿ, ಅವಳ ಉಪಚಾರಕ್ಕೋಸ್ಕರ ದಾಸಿಗಳನ್ನು ಕರೆದು ಗೊತ್ತುಮಾಡಿ ದಾಸಿಗಳಿಗೆ

ಮುಖ್ಯವಾದವಳನ್ನು ಕುರಿತು, ಈ ಕುಂದಳನ್ನು ತಾರಾಚರಣನಿಗೆ ಕೊಟ್ಟು ಮದುವೆಯಾಗುತ್ತಾ ದಕಾರಣ ಇವಳನ್ನು ನನ್ನ ತಮ್ಮನ ಹೆಂಡತಿಯಹಾಗೆ ನೋಡಿಕೊಳ್ಳಬೇಕೆಂದು ಅಪ್ಪಣೆಯಂ ಮಾಡಿದಳು.

ದಾಸಿಯು ಒಪ್ಪಿಕೊಂಡಳು. ಕುಂದಳನ್ನು ಅವಳು ಬೇರೆ ಕೊಠಡಿಗೆ ಕರೆದುಕೊಂಡು ಹೋದಳು. ಆಗ ಕುಂದಳು ಅವಳನ್ನು ದೃಷ್ಟಿಸಿ ನೋಡಿದಳು. ನೋಡಿ ಕುಂದಳ ಶರೀರವು ಮುಳ್ಳುಚುಚ್ಚಿದಹಾಗಾಗಿ ಆಪಾದಮಸ್ತಕವೂ ಬೆವರಿಹೋಯಿತು. ಕುಂದಳು ಸ್ವಪ್ನದಲ್ಲಿ ನೋಡಿದ್ದ ಪದ್ಮಪಲಾಶಲೋಚನಳಾದ ಶ್ಯಾಮಾಂಗಿಯೇ ಇವಳಾಗಿದ್ದಳು.

ಕುಂದಳು ಭೀತಳಾಗಿ ಗಟ್ಟಿಯಾಗಿ ಉಸುರುಬಿಡದೆ, ನೀನು ಯಾರೆ ? ಎಂದು ಕೇಳಿದಳು.

ದಾಸಿ—ನನ್ನ ಹೆಸರು ಹೀರಾ.

---

## ಎಂಟನೆಯ ಪರಿಚ್ಛೇದ.

ನಮ್ಮ ಪಾಠಕಮಹಾಶಯರಿಗೆ ಬಹಳ ಕೋಪಕ್ಕೆ ಕಾರಣ.

ಇಲ್ಲಿ ಪಾಠಕಮಹಾಶಯರು ನಮ್ಮಮೇಲೆ ಬಹಳ ಕೋಪಮಾಡುವರು, ಸಂದೇಹವಿಲ್ಲ. ಗ್ರಂಥಕರ್ತರು ಗ್ರಂಥವನ್ನು ರಚನೆ ಮಾಡುವುದಕ್ಕೆ ಕ್ರಮವುಂಟು. ಗ್ರಂಥದಲ್ಲಿ ಉಕ್ತರಾದ ನಾಯಿಕ ನಾಯಿಕೆಯರಿಗೆ ಗ್ರಂಥವನ್ನು ಸಮಾಪ್ತಮಾಡುವಾಗ ಮದುವೆಯನ್ನು ಮಾಡಬೇಕು ; ನಾವಾದರೋ ಗ್ರಂಥದ ಪ್ರಾರಂಭದಲ್ಲಿಯೇ ಕುಂದನಂದಿನಿಗೆ ಮದುವೆಯನ್ನು ಮಾಡಲು ಕುಳಿತಿದ್ದೇವೆ. ಇದಲ್ಲದೆ ಪದ್ಧತಿಯಪ್ರಕಾರ ನಾಯಿಕೆಗೆ ಮದುವೆಯಾಗುವ ನಾಯಿಕನು ಪರಮಸುಂದರನಾಗಿಯೂ ಸರ್ವಗುಣವಿಭೂಷಿತ

ನಾಗಿಯೂ ದೊಡ್ಡ ವೀರಪುರುಷನಾಗಿಯೂ ನಾಯಿಕೆಯ ಪ್ರಣಯದಲ್ಲಿ ಕರಗಿ ಕುಂದಿ ಕಂಗೆಟ್ಟು ತೇಲಿಹೋಗಬೇಕು. ನಮ್ಮ ಬಡಪಾಪಿಯಾದ ತಾರಾಚರಣನಿಗೆ ಇಂತಹ ಗುಣಗಳು ಯಾವದೂ ಇಲ್ಲ. ಸೌಂದರ್ಯವು ಹೆಚ್ಚು ಹೇಳಿಸಿಕೊಳ್ಳುವಹಾಗಿರಲಿಲ್ಲ. ಮಸುಕಾದ ತಾಂಬ್ರದ ವರ್ಣದ ಹಾಗೆ ದೇಹಕಾಂತಿ, ಮೊಂಡುಮೂಗು, ಪೌರುಷವೆಲ್ಲಾ ಸ್ಕೂಲು ಹುಡುಗರ ಮೇಲೆ—ಪ್ರಣಯದವಿಚಾರದಲ್ಲಿ, ಕುಂದನಂದಿನಿಗೂ ಅವನಿಗೂ ಎಷ್ಟರಮ ಟ್ಟಿಗೆ ವಿಶ್ವಾಸವಿತ್ತೋ ಅದನ್ನು ಹೇಳಲಸಾಧ್ಯ. ಒಂದು ಸಾಕಿದ ವಾನರಿ ಯಲ್ಲಿ ಎಷ್ಟು ವಿಶ್ವಾಸವಿರಬಹುದೋ ಅದಕ್ಕೆ ಕಡಮೆಯಾಗಿರಲಿಲ್ಲವೆಂದು ಚನ್ನಾಗಿ ಹೇಳಬಹುದು.

ಅದು ಹೇಗಾದರೂ ಇರಲಿ—ಕುಂದನಂದಿನಿಯು ನಾಗೇಂದ್ರನಸಂಗಡ ಅವನ ಮನೆಗೆ ಬಂದ ಸ್ವಲ್ಪದಿನಗಳಲ್ಲಿಯೇ ಅವಳನ್ನು ತಾರಾಚರಣನಿಗೆ ಕೊಟ್ಟು ವಿವಾಹವಾಯಿತು. ತಾರಾಚರಣನು ಸುಂದರಳಾದ ಹೆಂಡತಿಯನ್ನು ಹೊಂದಿ ಅವನಿಗೆ ಒಂದು ವಿಪತ್ತುಂಟಾಯಿತು ಇವನು ಮೊದಲು ದೇವೇಂ ದ್ರಬಾಬುವಿನ ಬೈಠಕಖಾನೆಯಲ್ಲಿ ಸ್ತ್ರೀವಿದ್ಯಾಭ್ಯಾಸ, ಜನಾನಾ ತಪ್ಪಿಸುವ ವಿಚಾರಗಳಲ್ಲಿ ದೊಡ್ಡ ದೊಡ್ಡ ಪ್ರಬಂಧಗಳನ್ನು ಬರೆದು ತಂದು ಓದುತಲಿ ದ್ದನೆಂಬದು ಪಾಠಕರ ಸ್ಮರಣೆಯಲ್ಲಿರಬಹುದು. ಆ ಸಂಗತಿಗಳು ತರ್ಕವಿತ ರ್ಕವಾಗುವಾಗ ನಮ್ಮ ಮೇಷ್ಟರು ಡಂಭದಿಂದ, ನನಗೆ ಸಮಯ ಸಿಕ್ಕಿದರೆ ಆಗ ರಿಫಾರಂ (Reform) ಮಾಡುವುದಕ್ಕೆ ಪ್ರಥಮ ಉದಾಹರಣೆಯನ್ನು ತೋರಿಸುವೆನು. ನನಗೆ ಮದುವೆಯಾದರೆ ನನ್ನ ಹೆಂಡತಿಯನ್ನು ಎಲ್ಲರ ಇದುರಿಗೂ ಕರೆತರುವೆನೆಂದು ಮುಂತಾಗಿ ಹೇಳುತ್ತಿದ್ದನು. ಈಗ ಮದು ವೆಯೇನೋ ಆಯಿತು—ಕುಂದನಂದಿನಿಯ ಸೌಂದರ್ಯವೂ ಸರ್ವತ್ರ ಪ್ರಚಾ ರವಾಗಿತ್ತು. ಎಲ್ಲರೂ ಹಿಂದಿನ ಡಂಭದ ಮಾತುಗಳನ್ನು ಕೋಟ್ (quote—ಉದ್ಧೃತ) ಮಾಡಿ ಆ ಶಪಥವೇನಾಯಿತೆಂದು ಕೇಳುವರು. ದೇವೇಂದ್ರಬಾ

ಬುವ್ವಾ ನೀನೇನು ಓಲ್ಡ್‌ಫ್ಯುಲ್ (Old fool) ಗುಂಪಿಗೆ ಸೇರಿದಿಯಾ? ಎಂದು ಹೇಳುವನಲ್ಲದೆ ನಿನ್ನ ಹೆಂಡತಿಯೊಡನೆ ನಾವು ಏತಕ್ಕೆ ಮಾತನಾಡುಗೊಡಿಸು ವುದಿಲ್ಲ? ಎಂದು ಕೇಳುವುನು. ತಾರಾಚರಣನು ಬಹಳ ಲಜ್ಜಿತನಾಗು ವುನು. ದೇವೇಂದ್ರನ ಮಾತುಗಳನ್ನು ತಡೆಯಲಾರದವನಾಗಿ ಹೆಂಡತಿ ಯನ್ನು ದೇವೇಂದ್ರನಿಗೆ ತೋರಿಸುವುದಾಗಿ ಒಪ್ಪಿಕೊಂಡನು. ಆದರೆ ಕಡೆಗೆ ಸೂರ್ಯಮುಖಿಗೆ ತಿಳಿದರೆ ಕೋಪಮಾಡುವಳೆಂಬ ಭಯವು ಬಹಳವಾಗಿತ್ತು. ಈಹೊತ್ತು ನಾಳೆ ಎಂದು ಹೇಳುತ್ತ ಒಂದು ವರುಷಕಾಲ ಕಳೆದುಹೋ ಯಿತು. ಕಾಲಹರಣದ ನೆಪಗಳಿಂದ ಸಾಗುವುದಿಲ್ಲವೆಂದು ತಿಳಿದು ಮನೆ ಯನ್ನು ರಿಪೇರಿಮಾಡಿಸಬೇಕಾದ ನೆಪದಮೇಲೆ ಕುಂದನಂದಿನಿಯನ್ನು ನಾಗೇಂದ್ರನ ಮನೆಗೆ ಕಳುಹಿಸಿಬಿಟ್ಟನು. ಮನೆಯ ರಿಪೇರಿಯೂ ಆಯಿತು. ಕುಂದಳನ್ನು ಪುನಃ ಮನೆಗೆ ಕರೆತಂದನು. ಆಗ ದೇವೇಂದ್ರನು ಸ್ವಂತ ವಾಗಿ ತನ್ನ ಸ್ನೇಹಿತರನ್ನು ಕರೆದುಕೊಂಡು ತಾರಾಚರಣನ ಮನೆಗೆ ಬಂದು, ತಾರಾಚರಣನನ್ನು ಸುಳ್ಳುಜಂಭಗಾರನೆಂದು ಹಾಸ್ಯಮಾಡಲಾರಂಭಿಸಿದನು. ಆಗ ನಿರ್ವಾಹವಿಲ್ಲದೆ ಕುಂದಳಿಗೆ ಒಳ್ಳೇ ಉಡುಪು ಹಾಕಿ ಬಹಳಪ್ರಯತ್ನ ದಿಂದ ಕರೆತಂದು ದೇವೇಂದ್ರನಸಂಗಡ ಮಾತನಾಡುವಹಾಗೆ ಹೇಳಿದನು. ಕುಂದನಂದಿನಿಯು ದೇವೇಂದ್ರನಸಂಗಡ ಏನು ಮಾತನಾಡಿದಳು? ಒಂದು ಕ್ಷಣಕಾಲ ಗೋಷೆ ಬಟ್ಟೆಯಿಂದ ಮುಖವನ್ನು ಮುಚ್ಚಿಕೊಂಡು ನಿಂತಿದ್ದು ಅಳುತ್ತ ಹೊರಟುಹೋದಳು. ಆದರೆ ದೇವೇಂದ್ರನು ಅವಳ ನವಯೌ ವನಸಂಚಾರದ ಅಪೂರ್ವವಾದ ಕಾಂತಿಯನ್ನು ನೋಡಿ ಮುಗ್ಧನಾದನು. ಆ ಕಾಂತಿಯನ್ನು ಅವನು ಪುನಃ ಮರೆಯಲಿಲ್ಲ.

ಇದಾದ ಕೆಲವುದಿನಗಳಮೇಲೆ ದೇವೇಂದ್ರನ ಮನೆಯಲ್ಲಿ ಏನೋ ಪ್ರಸ್ತವಾಯಿತು. ಅವನ ಮನೆಯಿಂದ ಒಬ್ಬ ಹುಡುಗಿಯು ಬಂದು ಕುಂದ ಳನ್ನು ಅರಿಸಿನ ಕುಂಕುಮಕ್ಕೆ ಕರೆದಳು. ಆದರೆ ಸೂರ್ಯಮುಖಿಯು

ಕುಂದಳನ್ನು ಕಳುಹಿಸಿಕೊಡಲಿಲ್ಲ. ಅವಳು ಹೋಗಲೂ ಇಲ್ಲ.

ಕೆಲದಿನಗಳಮೇಲೆ ಮತ್ತೊಂದು ಸಲ ದೇವೇಂದ್ರನು ಕುಂದಳಸಂಗಡ ಮಾತುನಾಡುವುದಕ್ಕೆ ತಾರಾಚರಣನ ಮನೆಗೆ ಹೋದನು. ಈ ಸಮಾಚಾರ ವನ್ನು ಸೂರ್ಯಮುಖಿಯು ಕೇಳಿ ತಾರಾಚರಣನನ್ನು ಕರೆಸಿ ಬಹಳವಾಗಿ ಗದರಿಸಿಕೊಂಡಳು. ಅದರಮೇಲೆ ದೇವೇಂದ್ರನು ಬಂದು ಮಾತುನಾಡುವ ಪ್ರಯತ್ನವು ನಿಂತುಹೋಯಿತು.

ವಿವಾಹವಾಗಿ ಮೂರುವರುಷ ಕಳೆಯಿತು. ಅದರಮೇಲೆ—ಕುಂದ ನಂದಿನಿಯು ವಿಧವೆಯಾದಳು! ಜ್ವರವಿಕಾರದಿಂದ ತಾರಾಚರಣನು ಕಾಲಾ ಧೀನನಾದನು. ಸೂರ್ಯಮುಖಿಯು ಕುಂದಳನ್ನು ತನ್ನ ಮನೆಗೆ ಕರೆತಂದು ಇಟ್ಟುಕೊಂಡು ತಾರಾಚರಣನ ಮನೆಯನ್ನು ಮಾರಿ ಬಂದ ಹಣಕ್ಕೆ ಕುಂ ದಳ ಹೆಸರಿನಲ್ಲಿ ಸರ್ಕಾರದ ಪತ್ರವನ್ನು ಮಾಡಿದಳು.

ಪಾಠಕಮಹಾಶಯರಿಗೆ ಬಹಳ ಕೋಪವುಂಟಾಗಿರುವುದು ನಿಜ; ಆದರೆ ನಾವೇನು ಮಾಡೋಣ? ಈಗತಾನೇ ಕಥೆಯು ಪ್ರಾರಂಭವಾಯಿತು ಇಷ್ಟುದೂರದಲ್ಲಿ ಈಗ ವಿಷವೃಕ್ಷಕ್ಕೆ ಬೀಜವನ್ನು ಹಾಕಿದಹಾಗಾಯಿತು.



## ಒಂಭತ್ತನೆಯ ಪರಿಚ್ಛೇದ.

### ಹರಿದಾಸಿ ವೈಷ್ಣವಿ.

ವಿಧವೆಯಾದ ಕುಂದನಂದಿನಿಯು ನಾಗೇಂದ್ರನ ಮನೆಯಲ್ಲಿ ಕೆಲದಿನ ಗಳು ಕಾಲಹರಣಮಾಡಿದಳು. ಒಂದುದಿನ ಮಧ್ಯಾಹ್ನಾತ್ಪರದಲ್ಲಿ ಅಂತಃ ಪುರದ ಹೆಂಗಸರೆಲ್ಲರೂ ಸೇರಿ ಅಂತಃಪುರದ ಹಳೇಮಹಲನಲ್ಲಿ ಕುಳಿತಿದ್ದರು. ಈಶ್ವರನ ಕೃಪೆಯಿಂದ ಎಲ್ಲರೂ ತಮ್ಮತಮ್ಮ ಮನೋಗತವಾದ ಗ್ರಾಮ್ಯ

ಸ್ತ್ರೀಸುಲಭಕಾರ್ಯಗಳನ್ನು ಮಾಡುತಲಿದ್ದರು. ಅವರಲ್ಲಿ ಚಿಕ್ಕಚಿಕ್ಕ ಹುಡಿಗಿಯರು ಮೊದಲ್ಗೊಂಡು ಫಲಿತಕೇಶವುಳ್ಳ ವೃದ್ಧರ ಪರ್ಯಂತವೂ ಸೇರಿದ್ದರು. ಒಬ್ಬಳು ಹೆರಳು ಹಾಕುತ್ತಿದ್ದಳು, ಇನ್ನೊಬ್ಬಳು ಹೆರಳನ್ನು ಹಾಕಿಸಿಕೊಳ್ಳುತ್ತಿದ್ದಳು. ಮತ್ತೊಬ್ಬಳು ಒಬ್ಬಳ ತಲೆಯಲ್ಲಿ ಹೇನು ನೋಡುತ್ತ ಸಿಕ್ಕಿದ ಹೇನುಗಳನ್ನು ಉಸ್‌ಉಸ್ ಎಂದು ಕುಕ್ಕುತ್ತಿದ್ದಳು. ಒಬ್ಬಳು ಮತ್ತೊಬ್ಬಳ ತಲೆಯಲ್ಲಿದ್ದ ಬಿಳೀಕೂದಲುಗಳನ್ನು ಕೈಯಲ್ಲಿ ಧಾನ್ಯವನ್ನು ಇಟ್ಟುಕೊಂಡು ಕೀಳುತ್ತಿದ್ದಳು. ಒಬ್ಬ ಸುಂದರಿಯು ನಾನಾ ವರ್ಣಗಳುಳ್ಳ ವಿಚಿತ್ರವಾದ ಕಂಥೆಚೂರಗಳಿಂದ ಮಗುವಿಗೋಸ್ಕರ ದಟ್ಟಿವನ್ನು ಹೊಲಿಯುತಲಿರುವುಳು. ಒಬ್ಬಳು ಮಗುವಿಗೆ ಸ್ತನ್ಯವನ್ನು ಕೊಡುತ್ತ ಪುತ್ರವಾತ್ಸಲ್ಯದಿಂದುಂಟಾಗುವ ಸುಖಭಾವಾಪನ್ನಳಾಗಿ ಸುಮ್ಮನೆ ಕುಳಿತಿದ್ದಳು. ಒಬ್ಬಳು ತನ್ನ ತೊಡಗೆಗಳನ್ನು ಹಾಕಿಕೊಳ್ಳುತ್ತಿದ್ದಳು. ಒಬ್ಬಳು ತನ್ನ ಗಂಡನಮೇಲಿನ ಕೋಪಕ್ಕೆ ಮಗುವನ್ನು ಹೊಡಿಯುತಲಿರುವುಳು. ಮಗುವು ಬಾಯಿತೆರದುಕೊಂಡು ಮೂರು ಕಾಲದಲ್ಲಿಯೂ ಸಪ್ತಸ್ವರದಿಂದ ರೋದನಮಾಡುತಲಿತ್ತು. ಒಬ್ಬ ಕೂರ್ತಳು ಈ ಗದ್ದಲದಲ್ಲಿ ಗಾಢನಿದ್ರಾಗತಳಾಗಿದ್ದಳು. ಒಬ್ಬ ರೂಪಸಿಯು ಕಸೂದಿಯನ್ನು ಹಾಕುತ್ತಿದ್ದಳು. ಇನ್ನೊಬ್ಬಳು ಅವಳ ಹತ್ತಿರ ಕೂತು ತಲೆಬೊಗ್ಗಿಸಿಕೊಂಡು ನೋಡುತಲಿರುವುಳು. ಒಬ್ಬ ಚಿತ್ರಕುಶಲಳು ಹಿಟ್ಟನನೀರನಿಂದ ತಟ್ಟೆಯಲ್ಲಿ ವಿಚಿತ್ರವಾಗಿ ಹಸೆಯನ್ನು ಬರೆಯುತಲಿದ್ದಳು. ಒಬ್ಬ ಸದ್ಗ್ರಂಥರಸಗ್ರಾಹಿಣಿಯಾದ ವಿದ್ಯಾವತಿಯು ಭಾರತವನ್ನು ಓದುತ್ತಿರುವುಳು. ಒಬ್ಬಳು ಯಜಮಾನಿಯ ನಿಂದೆಯನ್ನು ಒಬ್ಬಳು ಯಜಮಾನನ ನಿಂದೆಯನ್ನು ಒಬ್ಬಳು ನೆರೆಯುವರ ನಿಂದೆಯನ್ನು ಮಾಡುತ್ತಿದ್ದರು. ಎಲ್ಲರೂ ಆತ್ಮಪ್ರಶಂಸೆಯನ್ನೇ ಹೆಚ್ಚಾಗಿ ಮಾಡಿಕೊಳ್ಳುತ್ತಿದ್ದರು. ಪ್ರಾತಃಕಾಲದಲ್ಲಿ ಸೂರ್ಯಮುಖಿಯ ವಾಗ್ದಂಡನೆಗೆ ಗುರಿಯವಾಗಿದ್ದ ಬುದ್ಧಿಹೀನಳೊಬ್ಬಳು ತನ್ನ ಬುದ್ಧಿ

ಪ್ರಾಬಲ್ಯವನ್ನು ಕುರಿತು ಅನೇಕ ಉದಾಹರಣೆಗಳನ್ನು ಕೊಡುತ್ತಿದ್ದಳು. ಒಬ್ಬ ರಸಿಕಳಾದ ಯುವತಿಯು ಅರ್ಧಸ್ಫುಟಸ್ವರದಿಂದ ತನ್ನ ಗಂಡನ ರಸ ಕೌಶಲವನ್ನು ಸಖಿಯರ ಕಿವಿಯಲ್ಲಿ ಹೇಳುತ್ತ ವಿರಹಿಣಿಯರ ಮನೋವೇದನೆಯನ್ನು ಹೆಚ್ಚು ಮಾಡುತ್ತಿದ್ದಳು. ಸೂರ್ಯಮುಖಿಯು ಇವರ ಗುಂಪಿಗೆ ಸೇರಿರಲಿಲ್ಲ. ಅವಳು ಸ್ವಲ್ಪ ಗರ್ವಿತಳಾದುದರಿಂದ ಇವರ ಜತೆಯಲ್ಲಿರಳು. ಅವಳಿದ್ದರೆ ಮಿಕ್ಕವರು ನಿರ್ಭಯವಾಗಿ ಮಾತನಾಡರು. ಕುಂದನಂದಿನಿಯು ಪ್ರಕೃತಕ್ಕೆ ಅವರೊಂದಿಗೆ ಇರುತ್ತಿದ್ದಳು. ಅವಳು ಒಬ್ಬ ಹುಡುಗನಿಗೆ ಅವನ ತಾಯಿಯು ಹೇಳಿಕೆಪ್ರಕಾರ ಓನಾಮವನ್ನು ಹೇಳಿಕೊಡುತ್ತಿದ್ದಳು. ಅವಳ ಶಿಷ್ಯನು ಮತ್ತೊಬ್ಬ ಹುಡುಗನ ಕೈಯಲ್ಲಿದ್ದ ತಿನ್ನುವ ಪದಾರ್ಥದಮೇಲೆ ಹೆಚ್ಚು ಗಮನವುಳ್ಳವನಾಗಿದ್ದಕಾರಣ ಅವನಿಗೆ ವಿಶೇಷ ವಿದ್ಯಾಲಾಭವಾಗುತಲಿತ್ತು.

ಈ ಸಮಯದಲ್ಲಿ ಅಲ್ಲಿಗೆ ಒಬ್ಬ ವೈಷ್ಣವಿಯು ಜಯರಾಧೆ ಎಂದು ಹೇಳುತ್ತ ಬಂದು ನಿಂತಳು.

ನಾಗೇಂದ್ರನ ಠಾಕೂರವಾಡಿಯಲ್ಲಿ ನಿತ್ಯವೂ ಬಂದವರಿಗೆ ಅನ್ನ ಹಾಕುತಲಿದ್ದರಲ್ಲದೆ ಪ್ರತಿ ಭಾನುವಾರದಲ್ಲಿಯೂ ಬೈರಾಗಿಗಳಗೆಲ್ಲ ಅಕ್ಕಿ ಪಡಿಯನ್ನು ಕೊಡುತಲಿದ್ದರು. ಭಿಕ್ಷಾರ್ಥಿಯಾದವರು ಯಾರೂ ಅಂತಃಪುರಕ್ಕೆ ಬರಲು ಕಾರಣವಿಲ್ಲ. "ಜಯರಾಧೆ" ಎಂಬ ಶಬ್ದವನ್ನು ಕೇಳಿ ಒಬ್ಬ ಪುರವಾಸಿನಿಯು, ಅದು ಯಾರೆ, ಒಳಗೆ ಬಂದವಳು? ಆತ್ತಕಡೆ ಠಾಕೂರವಾಡಿಗೆ ಹೋಗೆ ಎಂದು ಹೇಳುತ್ತ ಹಾಗೆಯೇ ಅವಳ ಕಡೆಗೆ ಮುಖವನ್ನು ತಿರುಗಿಸಿಕೊಂಡು, ಯಾರೆ! ಯಾವ ವೈಷ್ಣವಿಯೆ, ನೀನು? ಎಂದು ಕೇಳಿದಳು.

ಎಲ್ಲರೂ ವಿಸ್ಮಿತರಾಗಿ ನೋಡಲಾಗಿ ವೈಷ್ಣವಿಯು ಯುವತಿಯಾಗಿದ್ದಳು. ಅವಳ ಶರೀರದಲ್ಲಿ ಇನ್ನು ಹೆಚ್ಚು ರೂಪವು ಹಿಡಿಸಲಾರದಾಗಿತ್ತು.

ಆ ಬಹುಸುಂದರೀಶೋಭಿತವಾದ ರಮಣಿಗಳ ಮಂಡಲಿಯಲ್ಲಿ ಕುಂದನಂದಿನಿಯನ್ನು ಹೊರ್ತು ಮತ್ಯಾರೂ ಆ ವೈಷ್ಣವಿಗಿಂತಲೂ ಹೆಚ್ಚು ರೂಪವತಿಗಳಾಗಿರಲಿಲ್ಲ. ಅವಳ ಪೊಳಪಾದ ತುಟಿಗಳು, ಎಸಳಾದ ಮೂಗು, ವಿಕಸಿತವಾದ ಇಂದೀವರಕ್ಕೆ ಸಮಾನವಾದ ವಿಶಾಲವಾದ ಕಣ್ಣುಗಳು, ಚಿತ್ರದಕಡ್ಡಿಯಿಂದ ತಿದ್ದಿದಹಾಗಿದ್ದ ಹುಬ್ಬುಗಳು, ಆಯತವಾದ ಲಲಾಟ, ತಾವರೆದಂಟಿನಹಾಗಿರುವ ಬಾಹುಗಳು, ಗರಿಗೂವಿನಹಾಗೆ ದೇಹಕಾಂತಿ, ಇವು ರಮಣೀಕುಲಕ್ಕೆ ದುರ್ಲಭವಾದವು. ಅಲ್ಲಿ ಯಾರಾದರೂ ಸೌಂದರ್ಯವನ್ನು ಕುರಿತು ಸದ್ವಿಚಾರ ಮಾಡುವವರು ಇದ್ದು ನೋಡಿದ್ದರೆ ವೈಷ್ಣವಿಯ ಶರೀರದಲ್ಲಿ ಮಾರ್ದವವು ಇರಲಿಲ್ಲವೆಂದು ಚನ್ನಾಗಿ ಹೇಳುತಲಿದ್ದರು. ನಡನುಡಿಯೆಲ್ಲ ಗಂಡುಗುಣವುಳ್ಳದ್ದಾಗಿತ್ತೆಂತಲೂ ಹೇಳಬಹುದಾಗಿತ್ತು.

ವೈಷ್ಣವಿಯು ಮೂಗಿನಮೇಲೆ ತಿಲಕವು, ತಲೆಯಲ್ಲಿ ಹೆರಳು, ಕೈಯಲ್ಲಿ ಹಿತ್ತಾಳೆಬಳೆ ಇವುಗಳಿಂದಲಂಕೃತಳಾಗಿದ್ದಳು. ಬಂದು ನೂಲಿನ ಶೀರೆಯನ್ನುಟ್ಟದ್ದಳು. ಕೈಯಲ್ಲಿ ಬಂದು ಸಣ್ಣವಾದ ಖಂಜನೀ ಅಥವಾ ತಬಲಾ ಅಂದರೆ ಸಣ್ಣ ತಮಟೆಯು ಇತ್ತು.

ಹೆಂಗಸರಲ್ಲಿ ವೃದ್ಧಳೊಬ್ಬಳು, ಎಲೆ! ನೀನು ಯಾರಮ್ಮ! ಎಂದು ಕೇಳಿದಳು.

ವೈಷ್ಣವಿ—ನನ್ನ ಹೆಸರು ಹರಿದಾಸಿವೈಷ್ಣವಿ. ಯಜಮಾನಿಯರು ಸಂಗೀತವನ್ನು ಕೇಳುವಿರಾ?

ಆಗ 'ಕೇಳುವೆವು, ಕೇಳುವೆವು' ಎಂದು ಆಬಾಲವೃದ್ಧರೂ ಹೇಳಿದರು. ಆಗ ವೈಷ್ಣವಿಯು ಖಂಜನಿಯನ್ನು ಕೈಯಲ್ಲಿ ತೆಗದುಕೊಂಡು ಯಜಮಾನಿಯಹತ್ತಿರ ಹೋಗಿ ಕೂತಳು. ಅಲ್ಲಿ ಕುಂದಳು ಹುಡುಗನಿಗೆ ಪಾಠವನ್ನು ಹೇಳಿಕೊಡುತಲಿದ್ದಳು. ಕುಂದಳು ಅತ್ಯಂತವಾಗಿ ಸಂಗೀತಪ್ರಿಯಳು. ವೈಷ್ಣವಿಯು ಹಾಡುತ್ತಾಳೆಂದು ಇನ್ನೂ ಸ್ವಲ್ಪ ಅವಳ ಹತ್ತಿರಕ್ಕೆ ಸರ

ದಳು. ಅವಳ ಶಿಷ್ಯನು ಆ ಅವಕಾಶದಲ್ಲಿ ಎದ್ದುಹೋಗಿ ತಿನ್ನುವದನ್ನಿಟ್ಟು ಕೊಂಡಿದ್ದ ಹುಡುಗನ ಕೈಯಿಂದ ಅದನ್ನ ಕಿತ್ತುಕೊಂಡು ತಿಂದುಬಿಟ್ಟನು.

ವೈಷ್ಣವಿಯು ಏನು ಹಾಡಲೆಂದು ಕೇಳಿದಳು. ಕೇಳುವವರು ನಾನಾವಿಧವಾದುದನ್ನು ಹಾಡೆಂದರು. ಒಬ್ಬಳು "ಗೋವಿಂದ ಅಧಿಕಾರಿ" ಯನ್ನು ಹಾಡೆಂದಳು. ಒಬ್ಬಳು "ಸಾರಸ" ವನ್ನು ಹಾಡೆಂದಳು. ಭಾರತವನ್ನೋದುತ್ತಿದ್ದವಳು ಅದರಲ್ಲಿ ಏನಾದರೂ ಹಾಡೆಂದಳು. ವೃದ್ಧರು ಒಬ್ಬಿಬ್ಬರು ಕೃಷ್ಣವಿಷಯವಾಗಿ ಹಾಡೆಂದರು. ಮಧ್ಯವಯಸ್ಕರು ಕೃಷ್ಣ ವಿಷಯದಲ್ಲಿ "ಸಖೀಸಂವಾದ" ಮತ್ತು "ವಿರಹ" ವನ್ನು ಹಾಡೆಂದರು. ಲಜ್ಜಾಹೀನಳಾದ ಚಲ್ಲೆಗಾರ್ತಿಯಾದ ಒಬ್ಬ ಯುವತಿಯು "ಬೆಳಗಾದ ಮೇಲೆ" ಹಾಡು, ಇಲ್ಲದಿದ್ದರೆ ಕೇಳುವುದಿಲ್ಲವೆಂದಳು. ಒಬ್ಬಳು ಬಾಯಿ ತಿರುಗದವಳು, "ಬಾರೆ ಬಾರೆ ಬಾರೆ ಪಾತಿ" ಹಾಡೆಂದಳು.

ವೈಷ್ಣವಿಯು ಎಲ್ಲರ ಅಪ್ಪಣೆಯನ್ನೂ ಕೇಳಿ ಕುಂದಳ ಮೇಲೆ ಮಿಂಚಿನ ಗೊಂಚಲನ್ನು ಮಿಂಚಿಸುವ ಕಟಾಕ್ಷವನ್ನು ಎಸೆದು, ಅಮ್ಮ! ನಿಮಗೆ ಯಾವದುಬೇಕು, ಹೇಳುವುದಿಲ್ಲವೆ? ಎಂದಳು. ಕುಂದಳು ಲಜ್ಜೆ ಯಿಂದ ತಗ್ಗಿದ ಮುಖವುಳ್ಳವಳಾಗಿ ಸ್ವಲ್ಪ ನಕ್ಕು ಏನುತ್ತರವನ್ನೂ ಕೊಡಲಿಲ್ಲ. ಆದರೆ ಕೂಡಲೆ ಒಬ್ಬ ಸ್ನೇಹಿತಳ ಕಿವಿಯಲ್ಲಿ ಕೀರ್ತನೆಗಳನ್ನು ಪಾಡೆಂದು ಹೇಳುವಂತೆ ಹೇಳಿದಳು.

ಸ್ನೇಹಿತಳು, ಎಲೆ ವೈಷ್ಣವಿ! ಕುಂದಳಿಗೆ ಕೀರ್ತನೆ ಹಾಡಬೇಕಂತೆ ಎಂದಳು. ಅದನ್ನು ಕೇಳಿ ವೈಷ್ಣವಿಯು ಕೀರ್ತನೆಯನ್ನು ಹಾಡುವುದಕ್ಕೆ ಪ್ರಾರಂಭಿಸಿದಳು. ಮಿಕ್ಕವರು ಕೇಳಿದುದನ್ನೆಲ್ಲ ಬಿಟ್ಟು ತನ್ನ ಇಷ್ಟದಂತೆ ಪಾಡುವುದನ್ನು ನೋಡಿ ಕುಂದಳು ಲಜ್ಜಿತಳಾದಳು.

ಹರಿದಾಸಿ ವೈಷ್ಣವಿಯು ಒಂದೆರಡುಸಲ ಖಂಜನಿಯನ್ನು ಬೆರಳುಗಳಿಂದ ಹೊಡದಳು. ಅನಂತರ ಅವಳು ತನ್ನ ಕಂಠದಿಂದ ನವದವಸಂತದ

ಕುಸುಮಮುಕುಳಕ್ಕೆರಗಿ ಬರುತಲಿರ್ಪ ಷಟ್ಪದದ ಅತಿ ಮೃದುವಾದ ಝೇಂಕಾರದಂತೆ ಹೊಸದಾಗಿ ಲಜ್ಜಾಶೀಲಳಾದ ಬಾಲೆಯು ತನ್ನ ಸ್ವಾಮಿಯ ಬಳಿಯಲ್ಲಿ ಪ್ರಥಮಪ್ರೇಮವನ್ನು ವ್ಯಕ್ತಪಡಿಸುವಗೋಸ್ಕರ ಬಾಯಿಬಿಟ್ಟು ಮಾತುನಾಡುವಹಾಗೆ ಸುಸ್ವರದಲ್ಲಿ ಆಲಾಪವನ್ನು ಮಾಡಿದಳು. ಅನಂತರ ಆ ಅಲ್ಪಪ್ರಾಣವುಳ್ಳ ಖಂಜನೀಯಲ್ಲಿ ವಾದ್ಯವಿದ್ಯೆಯಲ್ಲಿ ವಿಶಾರದನಾದವನ ಬೆರಳುಗಳಿಂದ ಜನಿತವಾಗುವ ತಾಳಲಯಸಮನ್ವಿತವಾದ ಶಬ್ದದೋಪಾದಿಯಲ್ಲಿ ಗಂಭೀರವಾದ ಮೇಘನಾದವುಂಟಾಗಿ ವೈಷ್ಣವಿಯು ಅದರೊಂದಿಗೆ ಅಪ್ಸರಕಂಠಕ್ಕೆ ಸಮಧಿಕವಾದ ಕಂಠದಿಂದ ಪಾಡಿದಳು. ಕೇಳುತಲಿದ್ದ ರಮಣಿಗಳು ವಿಸ್ಮಿತರಾಗಿ ವಿಮೋಹಿತಚಿತ್ತವುಳ್ಳವರಾದರು. ಆ ವೈಷ್ಣವಿಯ ಅತುಲಿತವಾದ ಕಂಠಧ್ವನಿಯು ಅಟ್ಟಾಲಿಕಾಪರಿಪೂರ್ಣವಾಗಿ ಆಕಾಶಮಾರ್ಗಕ್ಕೆದ್ದಿತು. ಮುಗ್ಧರಾದ ಆ ಹೆಂಗಸರು ಅಂತಹ ಸಂಗೀತದ ಪಾರಿಪಾಟ್ಯವನ್ನು ಹೇಗೆ ತಿಳಿಯುವುದು ? ಸಂಗೀತಶಾಸ್ತ್ರದಲ್ಲಿ ಪಂಡಿತನಾದವನು ಅಲ್ಲಿ ಕುಳಿತಿದ್ದರೆ ಆ ಸರ್ವಾಂಗಸುಂದರವಾದ ತಾಳಲಯಸ್ವರ ಪರಿಶುದ್ಧವಾದ ಸಂಗೀತವು ಕೇವಲ ಸುಕಂಠದಕಾರ್ಯವಾಗಿರಲಿಲ್ಲವೆಂತಲೂ ವೈಷ್ಣವಿಯು ಸಾಮಾನ್ಯಳಾಗಿ ಕಂಡುಬಂದರೂ ಅವಳು ಸಂಗೀತವಿದ್ಯೆಯಲ್ಲಿ ಅಸಾಧಾರಣವಾದ ನೈಪುಣ್ಯವನ್ನುಹೊಂದಿ ಚಿಕ್ಕವಯಸ್ಸಿನಲ್ಲಿಯೇ ಅದರಲ್ಲಿ ಪಾರದರ್ಶಿಯಾದವಳೆಂತಲೂ ತಿಳಿಯುತಲಿದ್ದಳು.

ವೈಷ್ಣವಿಯು ಸಂಗೀತವನ್ನು ಪೂರೈಸಿದಳು. ಪೌರಸ್ತ್ರೀಯರು ಅವಳಿಗೆ ಪುನಃ ಹಾಡಬೇಕೆಂದರು. ಆಗ ವೈಷ್ಣವಿಯು ಸತೃಷ್ಣವಿಲೋಲನೇತ್ರಳಾಗಿ ಕುಂದನಂದಿನಿಯನ್ನು ನೋಡುತ್ತ ಪಾಡಲಾರಂಭಿಸಿದಳು :-

ರಾಗ—ಶಹನಾ—ಅಥವಾ ದರಬಾರ್.

ಸಾರಿಬಂದಿಹನೆ। ಗೋಕುಲದೆಡೆಗೀಗ ।
ತೋರೆಮುಖವತೋರ। ಮುತ್ತಿನಹಾರೆ ॥ ಪ ॥

ಮಾನಿನಿಮಣಿನಿನ್ನ ವನಜಮುಖವನೋಡಿ ।
ಮುನ್ನಿನ ಕೋಪವು ಶಮನಿಸಲು-
ಮಾನಿನಿಪೇಷವಿ । ಶೇಷದಿ ಬಂದಿಹೆ
ಸಾನುನಯದಿನುಡಿ । ಯಲೆರಮಣಿ ॥ ೧ ॥ ರಾಧೆ
ರಾಧೆ ಸುಧಾಧರೆ । ಯಾದರದಲಿನಿನ್ನ
ಪಾದತಲಕೆ ಕೈ । ಚಾಚುತಲಿ
ಪದುಳದಿ ನಯನದೊಳೀಂಟಿಶೆನಿನ್ನಯ
ಪದುಮಮುಖವನಾಂ । ಪೋಗುವೆನೆ ॥ ೨ ॥ ರಾಧೆ
ಸದಯದಿ ಮಾತಾಡಿ । ಬದುಕಿಸುಯೆನ್ನನು
ಪದುಳದಿವೇಣುವಿವರದೊಳಗೆ ॥-
ಮೃದುಸ್ವರದೊಳು ರಾಧೆಯೆಂದು ನುಡಿಯಲಾ
ರದೆ ಕಣ್ಣೊಳು ಜಲಬರುತಿಹುದೆ ॥ ೩ ॥ ರಾಧೆ
ಆದರ ತೋರದೆ ನೀ ನಿರ್ದಯಳಾದಡೆ
ಮುದ್ದುವೇಣುವನಾ ಬಿಸುಡುವೆನೆ ॥
ಕದ್ದುಕಳ್ಳನಂತೆಸದ್ದಿಲ್ಲದೆಕಾಳಿಂದಿಯ ಮಡುವನುಧುಮು
ಕುವೆನೆ ॥ ೪ ॥ ರಾಧೆ
ಕಾಯದೆ ನೀನೆನ್ನ ಪೋಗೆಂದುಸುರಲು
ನಾ ಯಮುನೆಯನೇ ಶೇರುವೆನು ॥
ಕಾಯದೊಳಾಶೆಯ ತೊರೆದು ಧರದೊಳೀಗ
ಕಾಯುವರಿಲ್ಲವೆಂದಳುತಿಹೆನೆ ॥ ೫ ॥ ರಾಧೆ
ಜಲದಲಿ ಕದಡಿದೆ ವ್ರಜಸುಖನಿನಿಗಾಗಿ
ಕಲಕಂಠಿಗೆ ಸಮಸರದವಳೆ ॥
ಕಾಲಿನ ಕಡಗವ (ನಿನ್ನ) ಕಂಠಕೆಬಿಗಿದುನಾ

ಕಾಳಿಂದಿಯ ಮಡು ಧುಮುಕುವನೆ ‖ ೬ ‖ ರಾಧೆ
ನರಹರಿದೇವನ ನೋಡಿ ಭರದಲೀಗ
ಸರಸದಿಮಾತನಾಡೆಲೆ ರಾಧೆ ‖
ವರದ ಧರಾಧರ ಪೀತಾಂಬರಧರ
ಕರಿಗಿರಿನಿಲಯನು ಕಾಯುವನೆ ‖ ‖

ಸಂಗೀತವು ಸಮಾಪ್ತವಾದಮೇಲೆ ವೈಷ್ಣವಿಯು ಕುಂದನಂದಿನಿಯ ನ್ನು ಕುರಿತು ಹಾಡಿ ಗಂಟ್ಲು ಒಣಗಿದೆ, ಸ್ವಲ್ಪ ನೀರು ಕೊಡಿ ಎಂದು ಕೇಳಿದಳು.

ಕುಂದನಂದಿನಿಯು ಪಾತ್ರೆಯಲ್ಲಿ ನೀರು ತಂದಿಟ್ಟಳು. ವೈಷ್ಣವಿಯು ನಾನು ನಿಮ್ಮ ಪಾತ್ರೆಯನ್ನು ಮುಟ್ಟುವುದಿಲ್ಲ, ಬಂದು ನೀರು ಹಾಕರಿ ಎಂದು ಹೇಳಿ ನಾನು ಜಾತಿಯಲ್ಲಿ ವೈಷ್ಣವಿಯಲ್ಲವೆಂದು ತಿಳಿಸಿದಳು.

ಇದರಿಂದ ವೈಷ್ಣವಿಯು ಪೂರ್ವದಲ್ಲಿ ಯಾವದೋ ಕೀಳುಜಾತಿಯವ ಳಾಗಿದ್ದು ಈಚೆಗೆ ವೈಷ್ಣವಿಯಾಗಿದ್ದಾಳೆಂದು ತಿಳಿದು ಕುಂದನಂದಿನಿಯು ಪಾತ್ರೆಯನ್ನು ತೆಗೆದುಕೊಂಡು ನೀರು ಹಾಕುವುದಕ್ಕೆ ಅವಳ ಹಿಂದೆ ಸ್ವಲ್ಪ ದೂರ ಹೋಗಿ ವೈಷ್ಣವಿಗೆ ನೀರು ಹಾಕಿದಳು. ವೈಷ್ಣವಿಯು ಮುಖ ವನ್ನು ತೊಳದುಕೊಳ್ಳುತ್ತ ಯಾರಿಗೂ ಕೇಳಸದಹಾಗೆ ಮೆಲ್ಲಮೆಲ್ಲಗೆ ನೀವೇನಮ್ಮ! ಕುಂದನಂದಿನಿ? ಎಂದು ಕೇಳಿದಳು.

ಕುಂದಳು ಆಶ್ಚರ್ಯಪಟ್ಟು ಏತಕ್ಕೆ? ಎಂದು ಕೇಳಿದಳು.

ವೈಷ್ಣವಿ— ನಿಮ್ಮ ಅತ್ತೆಯನ್ನ ಯಾವಾಗಲಾದರೂ ನೋಡಿದ್ದೀರಾ?

ಕುಂದ—ಇಲ್ಲ.

ಕುಂದಳು ತನ್ನ ಅತ್ತೆಯು ಜಾತಿಭ್ರಷ್ಟಳಾಗಿ ದೇಶಭ್ರಷ್ಟಳಾಗಿದ್ದ ಳೆಂದು ಕೇಳಿದ್ದಳು.

ವೈಷ್ಣವಿ—ನಿಮ್ಮ ಅತ್ತೆಯು ಈಗ ಬಂದು ನಮ್ಮ ಮನೆಯಲ್ಲಿದ್ದಾಳೆ, ನಿಮ್ಮನ್ನ ಬಂದುಸಲ ನೋಡಬೇಕೆಂದು ಬಹಳ ಗೋಳಾಡುತ್ತಾಳೆ. ಅಯ್ಯೊ!

ಎಷ್ಟಾದರೂ ಅತ್ತೆ. ಅವಳು ಇಲ್ಲಿಗೆ ಬಂದು ನೋಡಿ ಮನೇ ಯಜಮಾನಿಗೆ ತೋರಿಸಿಕೊಳ್ಳುವುದಕ್ಕೆ ಮುಖವಿಲ್ಲ. ನೀವು ಒಂದುಸಲ ನನ್ನ ಜತೇಲಿ ಬಂದು ಅವಳನ್ನು ನೋಡಿಕೊಂಡು ಬರಬಾರದೆ?

ಕುಂದನಂದಿನಿಯು ಸರಳಹೃದಯಳಾದರೂ ಅತ್ತೆಯ ಸಂಬಂಧವನ್ನು ಒಪ್ಪಿಕೊಳ್ಳುವುದು ಸರಿಯಲ್ಲವೆಂದು ತಿಳಿದಿದ್ದಳು. ಅದುಕಾರಣ ವೈಷ್ಣವಿಯ ಮಾತಿಗೆ ಒಪ್ಪಿಕೊಳ್ಳಲಿಲ್ಲ.

ಆದರೆ ವೈಷ್ಣವಿಯು ಅಲ್ಲಿಗೆ ಬಿಡಲಿಲ್ಲ. ಪುನಃ ಪುನಃ ಅವಳನ್ನು ಪ್ರೋತ್ಸಾಹಪಡಿಸಿದಳು. ಆಗ ಕುಂದನಂದಿನಿಯು ಯಜಮಾನಿಗೆ ತಿಳಿಸದೆ ಬರಲಾರೆನೆಂದಳು.



ಹರಿದಾಸಿಯು ಹಾಗೆ ಮಾಡಬೇಡಿ, ನಿಮ್ಮ ಯಜಮಾನಿಗೆ ತಿಳಿಸಕೂಡದು, ಅವಳು ಹೋಗೆಂದು ಹೇಳಲಾರಳು; ನಿಮ್ಮ ಅತ್ತೆಯನ್ನು ಕರಸುವಳು; ಆಗ ನಿಮ್ಮ ಅತ್ತೆಯು ಪುನಃ ಊರುಬಿಟ್ಟು ಹೋಗಿಬಿಡುವಳೆಂದು ಹೇಳಿದಳು.

ಹರಿದಾಸಿಯು ಎಷ್ಟು ಹೇಳಿದರೂ ಕೇಳದೆ ಸೂರ್ಯಮುಖಿಯ ಅಪ್ಪಣೆಯಿಲ್ಲದೆ ಬರಲಾರೆನೆಂದು ಹೇಳಿಬಿಟ್ಟಳು. ಆಗ ಯತ್ನವಿಲ್ಲದೆ ಹರಿದಾಸಿಯು, ಒಳ್ಳೇದು, ನೀವು ಯಜಮಾನಿಗೆ ಚನ್ನಾಗಿ ಹೇಳಿಟ್ಟರಿ; ನಾನು ಮತ್ತೊಂದುದಿನ ಬಂದು ಕರೆದುಕೊಂಡು ಹೋಗುತ್ತೇನೆ, ಆದರೆ ನೋಡಬೇಕೆಂದು ಮುಷ್ಕರ ಹಿಡಿಯಬೇಕು, ಅಲ್ಲದೆ ಸ್ವಲ್ಪ ಕಣ್ಣೀರುಬಿಡಬೇಕಾದರೂ ಬಿಡಬಹುದು, ಇಲ್ಲದಿದ್ದರೆ ಅವಳು ಕಳುಹಿಸುವುದಿಲ್ಲವೆಂದು ಹೇಳಿದಳು.

ಕುಂದನಂದಿಯು ಅದಕ್ಕೂ ಒಪ್ಪಲಿಲ್ಲ. ವೈಷ್ಣವಿಯು ಏನೂ ಹೇಳಲಾರದವಳಾಗಿ ಮುಖವನ್ನು ತೊಳೆದುಕೊಂಡು ಪುನಃ ಬಂದು ಹಾಡಿದ್ದಕ್ಕೆ ಪುರಸ್ಕಾರವನ್ನು ಬೇಡಿದಳು. ಈ ಸಮಯಕ್ಕೆ ಸರಿಯಾಗಿ ಸೂರ್ಯ

ಮುಖಿಯು ಅಲ್ಲಿಗೆ ಬಂದಳು. ಆಗ ಅಲ್ಲಿನ ಮಾತಿನ ಗಲಭೆಯು ನಿಂತಿತು. ಚಿಕ್ಕ ಚಿಕ್ಕ ಹುಡುಗರಾದವರು ಒಂದೊಂದು ಕೆಲಸವನ್ನು ಮಾಡುವವರಂತೆ ಕೂತುಕೊಂಡರು.

ಸೂರ್ಯಮುಖಿಯು ಹರಿದಾಸಿಯನ್ನು ತಲೆಯಿಂದ ಕಾಲುವರೆಗೆ ನೋಡಿ ನೀನು ಯಾರೆ? ಎಂದು ಕೇಳಿದಳು. ಆಗ ನಾಗೇಂದ್ರನ ಅಜ್ಜಿಯ ಸೋದರಸೊಸೆಯೊಬ್ಬಳು, ಇವಳೊಬ್ಬ ವೈಷ್ಣವಿ, ಹಾಡುತ್ತಾಳೆ; ಎಷ್ಟು ಚನ್ನಾಗಿ ಹಾಡುತ್ತಾಳೊ! ಅಂತಹ ಸಂಗೀತವನ್ನು ಎಂದೂ ಕೇಳಿಲ್ಲ; ನೀನು ಕೇಳಬೇಕು. ಹರಿದಾಸಿ! ಹಾಡೆ; ನಮ್ಮ ಯಜಮಾನಿಯು ವಿಚಾರ ವಾಗಿ ಹಾಡು, ನೋಡೋಣವೆಂದಳು.

ಹರಿದಾಸಿಯು ಶ್ಯಾಮಾವಿಚಾರವಾಗಿ ಒಂದಪೂರ್ವವಾದ ಕೀರ್ತನೆಯನ್ನು ಪಾಡಿದಳು. ಸೂರ್ಯಮುಖಿಯು ಪ್ರೀತಳಾಗಿ ಅವಳಿಗೆ ಪುರಸ್ಕಾರವನ್ನು ಕೊಟ್ಟು ಕಳುಹಿಸಿಬಿಟ್ಟಳು.

ವೈಷ್ಣವಿಯು ಪ್ರಣಾಮವನ್ನು ಮಾಡಿ, ಕುಂದಳನ್ನು ಪುನಃ ಒಂದು ತಡವೆ ನೋಡಿ ಹೊರಟುಹೋದಳು. ಸೂರ್ಯಮುಖಿಗೆ ಕಣ್ಣು ಮರೆಯಾಗುತ್ತಲೇ ವೈಷ್ಣವಿಯು ಖಂಜನಿಯನ್ನು ಬಾರಿಸುತ್ತ ಮೃದು ಮೃದುವಾಗಿ ಹಾಡಿಕೊಂಡು ಹೋದಳು:—ಹೇಗೆಂದರೆ—

ಅಯಿ! ಚಂದ್ರಕಳೆ!

ತಿನ್ನಲ್ಕೊಡುವೆನು ಮಧುವನು
ಸನ್ನುತಮಾದತ್ತರನ್ನು ತಾಂಬೂಲವನುಂ
ಪನ್ನೀರಂ ಮೆಯ್ತೊಳೆಯಲು
ಚಿನ್ನದ ತೊಡಿಗೆಗಳಕುಡುವೆ ತೊಡಲಿಂದುಮುಖಿ ‖

ವೈಷ್ಣವಿಯು ಹೊರಟುಹೋದಮೇಲೆ ಹೆಂಗಸರೆಲ್ಲರೂ ಬಹಳ ಹೊತ್ತು ವೈಷ್ಣವಿಯ ಪ್ರಸ್ತಾಪವನ್ನೇ ಮಾಡುತಲಿದ್ದರು. ಮೊದಲು ಅ

ವಳ ಪ್ರಶಂಸೆಯು ಪ್ರಾರಂಭವಾಯಿತು. ಅನಂತರ ಕ್ರಮವಾಗಿ ಅವಳ ತಪ್ಪು ಒಂದೊಂದಾಗಿ ಹೊರಪಟ್ಟಿತು. ಗಿರಿಜಾಬಾಯಿಯು ಎಲ್ಲ ಸರಿಯೆ, ಆದರೆ ವೈಷ್ಣವಿಯು ಮೂಗು ಸ್ವಲ್ಪ ಎಸಳು ಸಾಲದೆಂದಳು. ರಮಾಬಾಯಿಯು ಅವಳ ವರ್ಣವು ಸ್ವಲ್ಪ ಹೆಚ್ಚು ಬಿಳಿಪಾಗಿತ್ತು ಎಂದಳು. ಚಂದ್ರಮುಖಿಯು ಅವಳಕೂದಲು ಅತಿ ಒರಟಾಗಿ ಶಣಬಿನ ಜಡೆಯಾಗಿತ್ತು ಎಂದಳು. ಚಂಪಕೆಯು ಕಪಾಲವು ಸ್ವಲ್ಪ ಎತ್ತರವಾಗಿತ್ತೆಂದಳು. ಕಮಲೆಯು ಮುಖವು ಪಾಪಾಸಿನಹಾಗೆ ಉದ್ದವಾಗಿತ್ತೆಂದಳು. ಕನಕೆಯು ಅವಳ ತುಟಿಗಳು ದಪ್ಪವಾಗಿತ್ತೆಂದಳು. ಹರಿಣಿಯು ಅವಳ ಮುಖಾವಯವವೆಲ್ಲ ಮರಮರವಾಗಿ ಒರಟೆಂದಳು. ಪ್ರಮದೆಯು ಆ ವೈಷ್ಣವಿಯು ಎದೆಯು ಆಟದಲ್ಲಿ ಬರುವ ವೇಷಧಾರಿಗಳಹಾಗಿತ್ತೆಂದಳು. ಪದ್ಮೆಯು ಅವಳ ದೇಹದಲ್ಲಿ ಸ್ವಲ್ಪವೂ ಮಾರ್ದವವಿಲ್ಲ; ನೋಡುವುದಕ್ಕೆ ಅಸಹ್ಯವಾಗಿತ್ತೆಂದಳು. ಈಪ್ರಕಾರ ಆ ಸುಂದರಿಯಾಗಿದ್ದ ವೈಷ್ಣವಿಯು ಸ್ವಲ್ಪದರಲ್ಲಿಯೇ ಅತಿ ಕುರೂಪಿಯಾಗಿ ಹೋದಳು. ಅದರಮೇಲೆ ಲಲಿತೆಯು, ನೋಡುವುದಕ್ಕೆ ಹೇಗಾದರೂ ಇರಲಿ, ಹಾಡೋಣ ಚನ್ನಾಗಿತ್ತು ಎಂದಳು. ಇದೂ ಅಂಗೀಕಾರವಾಗಲಿಲ್ಲ. ಚಂದ್ರಮುಖಿಯು, ಅದೂ ಅಷ್ಟರಲ್ಲಿಯೇ ಇತ್ತು, ಕಂಠವು ಅತಿ ದೊಡ್ಡದಾಗಿತ್ತೆಂದಳು. ಮುಕ್ತಕೇಶಿಯು ಅದೀಗ ಸರಿಯಾಗಿ ಹೇಳಿದೆ ಎಂದಳು. ಅನಂಗಳು ವೈಷ್ಣವಿಗೆ ಹಾಡೇನೂ ಅಷ್ಟು ಬಾರದು, ಒಂದು ತ್ಯಾಗರಾಜ ಕೀರ್ತನೆಯನ್ನು ಕೂಡ ಕಲಿತಿಲ್ಲವೆಂದಳು. ಅದರಮೇಲೆ ಕನಕಾಂಗಿಯು ಅವಳಿಗೆ ತಾಳಜ್ಞಾನವೇ ಇಲ್ಲವೆಂದಳು. ಕ್ರಮವಾಗಿ ಆ ಹರಿದಾಸಿಯು ಕೇವಲ ಕುರೂಪಿಯಾದುದು ಮಾತ್ರವೇ ಅಲ್ಲದೆ ಅವಳ ಸಂಗೀತವುಕೂಡ ವ್ಯರ್ಥ ಕೆಲಸಕ್ಕೆ ಬಾರದ್ದೆಂದು ಇತ್ಯರ್ಥವಾಗಿ ಹೋಯಿತು.



## ಹತ್ತನೆಯ ಪರಿಚ್ಛೇದ

### ಬಾಬು.

ಹರಿದಾಸಿ ವೈಷ್ಣವಿಯು ನಾಗೇಂದ್ರನಾಥದತ್ತನ ಮನೆಯಿಂದ ಹೊರಟು ದೇವೀಪುರದಕಡೆಗೆ ಹೊರಟು ಹೋದಳು. ದೇವೀಪುರದಲ್ಲಿ ಸುತ್ತಲೂ ಕಬ್ಬಿಣದ ಕಟಕಟೆ ಇರುವ ಒಂದು ಪುಷ್ಪೋದ್ಯಾನ, ಅದರಲ್ಲಿ ನಾನಾವಿಧವಾದ ಫಲಪುಷ್ಪಗಳ ಗಿಡಗಳು, ಮಧ್ಯದಲ್ಲಿ ಪುಷ್ಕರಣಿ ಅದರಮೇಲೆ ಬೈಠಕಖಾನೆ. ಹರಿದಾಸಿ ವೈಷ್ಣವಿಯು ಆ ಪುಷ್ಪೋದ್ಯಾನಕ್ಕೆ ಪ್ರವೇಶಮಾಡಿ ಅಲ್ಲಿಂದ ಆ ಬೈಠಕಖಾನೆಗೆ ಹೋಗಿ ಅದರೊಳಗೆ ಒಂದು ಏಕಾಂತವಾದ ಕೊಠಡಿಯೊಳಗೆ ಹೋಗಿ ತನ್ನ ಉಡುಪು ತೊಡಗೆಗಳನ್ನು ತೆಗಿಯಲಾರಂಭಿಸಿದಳು. ಇದ್ದಕಿದ್ದ ಹಾಗೆ ಆ ನಿಬಿಡವಾದ ಕೇಶದಾಮದಿಂದ ರಚಿತವಾಗಿದ್ದ ಕಬರಿಯು ತಲೆಯಿಂದ ಕಳಚಿ ಬಿತ್ತು. ಅದು ಬೇರೆಕೂದಲು. ವಕ್ಷಸ್ಥಲದಿಂದ ಸ್ತನಯುಗಳವು ಕಸರಿಬಿತ್ತು—ಅದು ವಸ್ತ್ರನಿರ್ಮಿತವಾದುದು. ವೈಷ್ಣವಿಯು ಹಿತ್ತಾಳೆಬಳೆ ಮುಂತಾದ ತೊಡಗೆಗಳನ್ನು ತೆಗೆದುಹಾಕಿಬಿಟ್ಟಳು. ಮುಖದಲ್ಲಿದ್ದ ತಿಲಕವನ್ನು ಅಳಿಸಿದಳು. ಸರಿಯಾದ ಉಡುಪುಗಳನ್ನು ಧರಿಸಿಕೊಂಡಮೇಲೆ ವೈಷ್ಣವಿಯ ಸ್ತ್ರೀವೇಷವು ಹೋಗಿ ಒಬ್ಬ ಅಪೂರ್ವವಾದ ಸುಂದರ ಯುವಪುರುಷನು ನಿಂತನು. ಅವನಿಗೆ ಇಪ್ಪತ್ತೈದು ವರುಷ, ಆದರೆ ಅವನ ಅದೃಷ್ಟಕ್ಕೆ ಸರಿಯಾಗಿ ಅವನ ಮುಖಮಂಡಲದಲ್ಲಿ ರೋಮಾವಳಿಯ ಚಿಹ್ನೆಯುಕೂಡ ಇರಲಿಲ್ಲ. ಮುಖವೂ ದೇಹಘಟನೆಯೂ ಸಹ ಕಿಶೋರವಯಸ್ಕನ ಹಾಗೆ ಇತ್ತು. ಪರಮ ಸುಂದರವಾದ ದೇಹಕಾಂತಿ. ಈ ಯುವಾಪುರುಷನು ದೇವೇಂದ್ರ ಬಾಬುವಾಗಿದ್ದನು. ಇವನು ಮೊದಲೇ ನಮ್ಮ ಪಾಠಕರಿಗೆ ಸ್ವಲ್ಪ ಪರಿಚಿತನಾಗಿದ್ದಾನೆ.

ದೇವೇಂದ್ರನೂ ನಾಗೇಂದ್ರನೂ ಸಹ ಬಂದೇ ವಂಶದವರು. ಆದರೆ ಆ ವಂಶದ ಎರಡು ಶಾಖೆಯವರಿಗೂ ಪರಸ್ಪರ ಪ್ರರುಷಾನುಕ್ರಮವಾಗಿ ವಿವಾದವು ನಡೆಯುತ್ತ ದಿನೇದಿನೇ ದ್ವೇಷವು ಹೆಚ್ಚಾಗಿ ಗೋವಿಂದ ಪುರದವರಿಗೂ ದೇವೀಪುರದವರಿಗೂ ಮಾತುಕೂಡ ನಿಂತುಹೋಯಿತು. ಎರಡು ಮನೆತನದವರಿಗೂ ತಲೆಯಾಂತರದಿಂದ ಮೊಕದ್ದಮೆಯು ನಡೆಯುತಲೇ ಇತ್ತು. ಕಡೆಗೆ ಬಂದು ದೊಡ್ಡ ಮೊಕದ್ದಮೆಯಲ್ಲಿ ನಾಗೇಂದ್ರನ ಪಿತಾಮಹನು ದೇವೇಂದ್ರನ ಪಿತಾಮಹನನ್ನು ಸೋಲಿಸಿ ದೇವೀಪ್ರರದವರನ್ನು ಬಂದೇತಡವಿಗೆ ದುರ್ಬಲರನ್ನಾಗಿ ಮಾಡಿಬಿಟ್ಟನು. ಡಿಕ್ರಿ ಅಮಲಜಾರಿಯಿಂದ ಅವರ ಸರ್ವಸ್ವವೂ ಹೋಗಿಬಿಟ್ಟಿತು, ಅಮಲಜಾರಿಯಲ್ಲಿ ಗೋವಿಂದಪ್ರರದವರು ದೇವೀಪ್ರರದವರ ಜಮೀನು ದಾರಿಯನ್ನೆಲ್ಲ ಪಡೆದುಕೊಂಡರು. ತದಾರಭ್ಯ ದೇವೀಪ್ರರದವರು ಬಡವರಾದರು. ಗೋವಿಂದಪ್ರರದವರು ಧನಿಕರಾದರು. ಉಭಯ ವಂಶದವರೂ ಪ್ರನಃ ಸೇರಲಿಲ್ಲ. ದೇವೇಂದ್ರ ಬಾಬುವಿನ ತಂದೆಯು ಕ್ಷೀಣವಾದ ಧನ ಗೌರವವನ್ನು ಹೆಚ್ಚು ಮಾಡಲೊಂದುಪಾಯವನ್ನು ಹುಡುಕಿದನು. ಹರಿಪ್ರರವೆಂಬ ಜಿಲ್ಲೆಯಲ್ಲಿ ಗಣೇಶಬಾಬು ಎಂಬೊಬ್ಬ ಜಮೀನುದಾರನಿದ್ದನು. ಅವನಿಗೆ ಹೈಮವತಿಯೆಂಬ ಬಬ್ಬಳೇ ಮಗಳು ಅವಳನ್ನು ದೇವೇಂದ್ರನಿಗೆ ತೆಗೆದುಕೊಂಡರೆ ಧನಗೌರವವು ಹೆಚ್ಚಾಗುವುದೆಂದು ಅವಳನ್ನು ದೇವೇಂದ್ರನಿಗೆ ಕೊಟ್ಟು ವಿವಾಹವನ್ನು ಮಾಡಿಸಿದನು. ಹೈಮವತಿಯು ಅನೇಕ ಗುಣಗಳುಳ್ಳವಳು—ಕುರೂಪಿ, ಕುತ್ಸಿತವಾದ ಬುದ್ಧಿ, ಕುಟಿಲಗಾರ್ತಿ, ಆತ್ಮಪರಾಯಣೆ. ದೇವೇಂದ್ರನಿಗೆ ಅವಳನ್ನು ಕೊಟ್ಟು ವಿವಾಹವಾಗುವವರೆಗೂ ಅವನ ನಡತೆಯು ನಿಷ್ಕಳಂಕವಾಗಿತ್ತು. ವಿದ್ಯಾರ್ಜನೆಯಲ್ಲಿ ಯತ್ನವುಳ್ಳವನಾಗಿಯೂ ಪ್ರವೃತ್ತಿಯಲ್ಲಿ ಧೀರನಾಗಿಯೂ ಸತ್ಯನಿಷ್ಠನಾಗಿಯೂ ಇದ್ದನು. ಆ ವಿವಾಹದಿಂದ ಈ ಗುಣಗಳಿಗೆಲ್ಲ ಕಾಲಬಂದಹಾಗಾಯಿತು. ದೇವೇಂದ್ರನು ಪ್ರಾಪ್ತವಯಸ್ಕನಾದಾಗ ತನ್ನ ಹೆಂಡ

ತಿಯ ಗುಣಗಳಿಂದ ತನಗೆ ಮನೆಯಲ್ಲಿ ಸುಖದ ಆಶೆಯು ಹೋಯಿತೆಂದು ತಿಳಿದುಕೊಂಡನು. ವಯೋಗುಣದಿಂದ ಅವನಿಗೆ ರೂಪತೃಷ್ಣೆಯು ಹುಟ್ಟಿತು. ಆದರೆ ಹೆಂಡತಿಯು ಕುರೂಪಿಯಾದ್ದರಿಂದ ಆ ತೃಷ್ಣೆಗೆ ಮನೆಯಲ್ಲಿ ನಿವಾರಣವಾಗಲಿಲ್ಲ. ವಯೋಧರ್ಮದಿಂದ ದಂಪತಿಪ್ರಣಯಾಕಾಂಕ್ಷೆಯು ಹುಟ್ಟಿತು. ಆದರೆ ಆ ಅಪ್ರಿಯವಾದಿನಿಯಾದ ಹೈಮವತಿಯನ್ನು ನೋಡುತ್ತಲೇ ಆ ಆಶೆಯು ದೂರವಾಗುತಲಿತ್ತು. ಸುಖದಮಾತು ಹಾಗಿರಲಿ—ಅವನು ಹೈಮವತಿಯ ನಾಲಿಗೆಯಿಂದ ಕಾರುತಲಿದ್ದ ವಿಷದ ಜ್ವಾಲೆಯಿಂದ ಮನೆಯಲ್ಲಿರುವುದೇ ಕಷ್ಟವಾಗಿ ತೋರಿತು. ಒಂದು ದಿನ ಹೈಮವತಿಯು ಗಂಡನನ್ನು ಕುರಿತು ಒಂದು ಕೆಟ್ಟ ಕಟೂಕ್ತಿಯನ್ನು ಹೇಳಿದಳು; ದೇವೇಂದ್ರನು ಅದುವರೆಗೆ ಬಹಳ ತಡೆದಿದ್ದವನು, ಆ ದಿನ ಸಹಿಸಲಾರದೆಹೋಗಿ ಅವಳನ್ನು ತಲೆಕೂದಲು ಹಿಡಿದು ಪುಷ್ಪೋದ್ಯಾನಕ್ಕೆಳೆದುಕೊಂಡುಬಂದು ಚೆನ್ನಾಗಿ ಬಡಿದು ನೆಲಕ್ಕೆ ಕೆಡವಿಬಿಟ್ಟನು. ಆದಿನ ಮೊದಲ್ಗೊಂಡು ಮನೆಯನ್ನು ಬಿಟ್ಟುಬಿಟ್ಟು ಪುಷ್ಪೋದ್ಯಾನದಲ್ಲಿ ತನಗೆ ವಾಸಕ್ಕೆ ಯೋಗ್ಯವಾದ ಬೇರೆಯೊಂದು ಮನೆಯನ್ನು ಕಟ್ಟುವುದಕ್ಕೆ ಹೇಳಿಬಿಟ್ಟು ಕಲಕತ್ತೆಗೆ ಹೊರಟುಹೋದನು. ಇದಕ್ಕೆ ಮೊದಲೇ ದೇವೇಂದ್ರನ ತಂದೆಯು ಕಾಲವಾಗಿ ಹೋಗಿದ್ದನಾದಕಾರಣ ದೇವೇಂದ್ರನೇ ಸ್ವತಂತ್ರನಾಗಿದ್ದನು. ಕಲಕತ್ತೆಯಲ್ಲಿ ಅವನು ಪಾಪಪಂಕದಲ್ಲಿ ಮುಣುಗಿ ಅತೃಪ್ತವಾಗಿದ್ದ ವಿಲಾಸದ ತೃಷೆಯನ್ನು ನಿವಾರಣ ಮಾಡಿಕೊಳ್ಳಲು ಪ್ರವೃತ್ತನಾಗಿ, ಅದರಿಂದುಂಟಾಗುವ ಮನಸ್ಸಿನ ಅಪ್ರಾಶಸ್ತ್ಯವನ್ನು ಶೀಸೆಶೀಸೆಗಟ್ಟಳೆ ಸುರಾಭಿಸಿಂಚನೆಯಿಂದ ತೊಳೆದುಕೊಳ್ಳುವುದಕ್ಕೆ ಪ್ರಾರಂಭಿಸಿದನು. ಕ್ರಮೇಣ ಪಾಪದಲ್ಲಿಯೇ ಮನಸ್ಸಿಗೆ ಹರ್ಷವುಂಟಾಯಿತು. ಸ್ವಲ್ಪಕಾಲ ಕಲಿಕತ್ತೆಯಲ್ಲಿದ್ದು ಅಲ್ಲಿ ಪಟ್ಟಣವಾಸದಿಂದುಂಟಾಗುವ ಬಾಬುಗಿರಿಯಲ್ಲಿ ವಿಲಕ್ಷಣಾಭ್ಯಾಸವನ್ನು ಪಡೆದು ಅನಂತರ ಊರಿಗೆ ಬಂದು ಅಲ್ಲಿ ಹೊಸದಾಗಿ ಕಟ್ಟಿದ್ದ ಉಪವನದ ಮನೆಯಲ್ಲಿ ದೊಡ್ಡವ

ನುಷ್ಯನಾಗಿ ವಿಷಯಾಸಕ್ತಿ ಮುಂತಾದ ಸುಖಲೋಲುಪ್ತಿಯಲ್ಲಿದ್ದುಕೊಂಡಿದ್ದನು.

ಕಲಕತ್ತೆಯಿಂದ ಬರುತ್ತ ದೇವೇಂದ್ರನು ಅನೇಕವಾದ ಹೊಸಹೊಸ ಸಂಗತಿಗಳನ್ನು ತಿಳಿದುಕೊಂಡು ಬಂದಿದ್ದನು. ಅವನು ದೇವೀಪುರಕ್ಕೆ ಬರುತ್ತಲೇ ತಾನು ದೊಡ್ಡ ರಿಫಾರ್ಮರ್ (Reformer) ಸಮಾಜವನ್ನು ಸಂಸ್ಕಾರ ಮಾಡತಕ್ಕವನು ಎಂದು ಹೇಳಿಕೊಂಡನು. ಬಂದವನು ದೇವೀಪುರದಲ್ಲಿ ಬ್ರಹ್ಮಸಮಾಜವನ್ನು ಸ್ಥಾಪಿಸಿದನು. ತಾರಾಚರಣ ಪ್ರಭೃತಿಗಳನೇಕರು ಆ ಸಮಾಜಕ್ಕೆ ಸೇರಿದರು. ಅನೇಕ ಲೆಕ್ಚರಗಳು (Lectures ಪ್ರಬಂಧಗಳು) ಕೊಡಲಾರಂಭವಾಯಿತು. ಮಧ್ಯೆ ಮಧ್ಯೆ ಒಂದು ಫಿಮೇಲ್‌ಸ್ಕೂಲ್ (Female School ಹೆಂಗಸರ ಪಾಠಶಾಲೆ) ಸ್ಥಾಪನೆಗೋಸ್ಕರ ಹೆಚ್ಚು ಆಡಂಬರವು ನಡೆಯಿತು. ಆದರೆ ಅದು ಕಾರ್ಯದಲ್ಲಿ ಪರಿಣಮಿಸಲಿಲ್ಲ. ಹೆಂಗಸರಿಗೆ ಪುನರ್ವಿವಾಹವಿಷಯವಾಗಿಯೂ ಬಹಳ ಚರ್ಚೆ ಉತ್ಸಾಹಗಳು ನಡೆಯುತಲಿದ್ದವು. ಕೀಳುಜಾತಿಯಲ್ಲಿ ಅಂತಹ ವಿವಾಹಗಳು ಒಂದೆರಡು ನಡೆದವು. ಆದರೆ ಅದು ಕನ್ಯಾವರಗಳ ಪರಸ್ಪರ ಅನುಮತಿಯುಪ್ರಕಾರ ನಡೆದದ್ದೆಹೊರ್ತು ಸಮಾಜದವರ ಪ್ರಯತ್ನದಿಂದಾದುದಲ್ಲವು. ದೇವೇಂದ್ರನು ಹೆಂಗಸರಿಗೆ ಜನಾನಾ ಸ್ವರೂಪವಾದ ಕಾರಾಗಾರವನ್ನು ತಪ್ಪಿಸಬೇಕೆಂಬ ವಿಚಾರದಲ್ಲಿ ತಾರಾಚರಣನ ಸಂಗಡ ಐಕಮತ್ಯವುಳ್ಳವನಾಗಿದ್ದನು. ಇಬ್ಬರೂ ಹೆಂಗಸರನ್ನು ಹೊರಗೆ ಬಿಡಬೇಕೆಂದು ಹೇಳುತಿದ್ದರು. ದೇವೇಂದ್ರಬಾಬುವು ಈ ಕಾರ್ಯದಲ್ಲಿ ಬಹಳ ಸಾಹಸಗಳನ್ನು ನಡಿಸುತಲಿದ್ದನು. ಹಾಗೆ ಹೆಂಗಸರನ್ನು ಹೊರಪಡಿಸಬೇಕೆಂದು ಹೇಳುವುದಕ್ಕೆ ಅವನ ಅರ್ಥವೇ ಬೇರೆಯಾಗಿತ್ತು.

ದೇವೇಂದ್ರನು ಗೋವಿಂದಪುರದಿಂದ ಹಿಂದಿರುಗಿಬಂದು ವೈಷ್ಣವಿಯ ಉಡುಪು ತೊಡಗೆಗಳನ್ನು ತೆಗೆದುಹಾಕಿ ತನ್ನ ನಿಜವಾದ ಸ್ವರೂಪವನ್ನು

ಧರಿಸಿಕೊಂಡು ಬಂದು ಕೊಠಡಿಯಲ್ಲಿ ಹೋಗಿ ಕುಳಿತುಕೊಂಡನು. ಒಬ್ಬ ಭೃತ್ಯನು ಶ್ರಮಹಾರಿಯಾದ ಹುಕ್ಕಾವನ್ನು ಸಿದ್ಧಪಡಿಸಿತಂದು ಅವನ ಇದುರಿಗೆ ಇಟ್ಟನು. ದೇವೇಂದ್ರನು ಸ್ವಲ್ಪಹೊತ್ತು ಆ ಸರ್ವಶ್ರಮವನ್ನು ಸಂಹಾರಮಾಡುವ ತಂಬಾಕು ದೇವಿಯನ್ನು ಸೇವಿಸಿದನು. ಯಾಗು ಈ ಮಹಾದೇವಿಯ ಪ್ರಸಾದದಿಂದುಂಟಾಗುವ ಸುಖವನ್ನನುಭವಿಸುವದಿಲ್ಲವೋ ಅಂತಹವನು ಮನುಷ್ಯನಾಗುವುದಿಲ್ಲ. ಹೆ, ಸರ್ವಜನಚಿತ್ತರಂಜನಕಾರಿ, ವಿಶ್ವ ಮೋಹಿನಿ! ನಿನ್ನಲ್ಲಿ ನಮ್ಮ ಭಕ್ತಿಯು ಅಚಲವಾಗಿರಲಿ; ನಿನ್ನ ವಾಹನ ವಾದ ಹುಕ್ಕಾ, ಗುಡಿಗುಡಿ, ಮುಂತಾದ ದೇವಕನ್ಯೆಯರು ಸರ್ವದಾ ನಮ್ಮ ನಯನ ಪಥದಲ್ಲಿ ಪ್ರಕಾಶಿಸುತ್ತಿರಲಿ. ದೃಷ್ಟಿಮಾತ್ರದಿಂದಲೇ ಸ್ವರ್ಗದ ಸುಖಲಾಭವುಂಟಾಗುವುದು. ಹೆ, ಹುಕ್ಕೆ! ಹೆ, ಗುಡಿಗುಡಿ! ಹೆ, ಕುಂಡ ಲಾಕೃತಧೂಮರಾಶಿಸಮುದ್ಗಾರಿಣಿ! ಹೆ, ಫಣಿನಿಯನ್ನು ನಿಂದಿಸುವ ದೀರ್ಘ ವಾದ ನಾಳಸಂಸರ್ಪಿಣಿ! ಹೆ, ರಜತಮಯವಾದ ಕಿರೀಟದಿಂದಲಂಕೃತವಾದ ಶಿರೋದೇಶಸುಶೋಭಿನಿ! ನಿನ್ನ ಕಿರೀಟದಿಂದ ತೂಗಲಾಡುವ ಝಾಲರೆಯ ಝಳತ್ಕಾರ ಕಾಂತಿಯು ಎಂಥಾದ್ದು! ನಿನ್ನ ಶೃಂಖಲಾಂಗುಳೀಯುಗಳಿಂದ ಸಂಭೂಷಿತವಾದ ವಕ್ರಾಕೃತಿಯಾದ ಅಗ್ರಭಾಗವಾಗಿರುವ ಮುಖನಾಳದ ಶೋಭಾರಾಶಿಯು ಎಂಥಾದ್ದು! ನಿನ್ನ ಗರ್ಭಸ್ಥವಾದ ಶೀತಲಾಂಬು ರಾಶಿಯ ಗಭೀರವಾದ ನಿನಾದವು ಎಷ್ಟು ಶ್ರಾವ್ಯವಾದದ್ದು! ಹೆ, ವಿಶ್ವರಮೆ! ನೀನು ವಿಶ್ವಜನರ ಶ್ರಮಹಾರಿಣಿ! ನೀನು ಅಲಸರಾದ ಜನರ ಪ್ರತಿಪಾಲಿನೀ, ನೀನು ಭಾರ್ಯೆಯರಿಂದ ಭರ್ತ್ಸಿತರಾದ ಜನರ ಚಿತ್ತವಿಕಾರವಿನಾಶಿನೀ, ನೀನು ಪ್ರಭು ಭೀತರಾದ ಜನರಿಗೆ ಸಾಹಸಪ್ರದಾಯಿನೀ, ಹೆ ದೇವಿ! ನಿನ್ನ ಮಹಿಮೆಯ ನ್ನು ತಿಳಿಯಲು ಯಾರಿಗೆ ಆಗುವುದು! ನೀನು ಶೋಕಪ್ರಾಪ್ತರಾದ ಜನರಿಗೆ ಪ್ರಬೋಧನವನ್ನು ಕೊಡುತ್ತಿ, ನೀನು ಭಯಪ್ರಾಪ್ತರಾದ ಜನರಿಗೆ ಭರವ ಸೆಯನ್ನು ಕೊಡುತ್ತಿ, ನೀನು ಬುದ್ಧಿಭ್ರಷ್ಟರಾದ ಜನರಿಗೆ ಬುದ್ಧಿಯನ್ನು

ಕೊಡುತ್ತಿ, ಕೋಪಯುಕ್ತರಾದ ಜನರಿಗೆ ಶಾಂತಿಪ್ರದಾನವನ್ನು ಮಾಡುತ್ತಿ, ಹೇ ವರದೆ! ಹೇ ಸರ್ವಸುಖಪ್ರದಾಯಿನೀ! ನೀನು ನಮ್ಮಗಳ ಮನೆಯಲ್ಲಿ ಅಕ್ಷಯವಾಗಿ ವಿರಾಜಿಸುತ್ತಿರು. ನಿನ್ನ ಸುಗಂಧವು ದಿನೇದಿನೇ ಹೆಚ್ಚುಗುತ್ತಿರಲಿ. ನಿನ್ನ ಗರ್ಭಸ್ಥವಾಗಿರುವ ನೀರಿನ ಕಲ್ಲೋಲದಲ್ಲಿ ಮೇಘಗರ್ಜನೆಯು ಹಾಗೆ ಧ್ವನಿಯು ಆಗುತ್ತಿರಲಿ. ನಿನ್ನ ಮುಖನಾಳದೊಂದಿಗೆ ನಮ್ಮ ಅಧರೋಷ್ಠಗಳು ತಿಲಾರ್ಧಕಾಲವಾದರೂ ವಿಚ್ಛೇದವಾಗದಿರಲಿ.

ಭೋಗಾಸಕ್ತನಾದ ದೇವೇಂದ್ರನು ಈ ಮಹಾದೇವಿಯ ಪ್ರಸಾದವನ್ನು ಯಥೇಷ್ಟವಾಗಿ ಸೇವಿಸಿದನು. ಆದರೆ ಅದರಿಂದ ಪರಿತೃಪ್ತನಾಗಲಿಲ್ಲ. ಅನಂತರ ಮತ್ತೊಂದು ಮಹಾಶಕ್ತಿಯ ಅರ್ಚನೆಯಂ ಮಾಡತೊಡಗಿದನು. ಆಗ ಭೃತ್ಯನ ಕೈಯಲ್ಲಿ (1) ತೃಣಪಟಾವೃತಳಾದ ಬಾಟಲ (2) ವಾಹಿನಿಯು ಆವಿರ್ಭಾವಿಸಿದಳು. ಆಮೇಲೆ ಆ ಅಮಲವಾದ ಶ್ವೇತವರ್ಣವುಳ್ಳ ಸುವಿಸ್ತೃತನಾದ ಶಯ್ಯೆಮೇಲೆ ರಜತಾನುಕೃತಾಸನದಲ್ಲಿ (3) ಸಂಧ್ಯಾಗಗನವನ್ನು ತೊಳಪುಗೊಳಿಸುವ ರಕ್ತಾಂಬುದಕ್ಕೆ ಸಮಾನವಾದ ವರ್ಣವಿಶಿಷ್ಟಳಾಗಿ ದ್ರವಮಯಿಯಾದ ಮಹಾದೇವಿಯು ಡಿಕ್ಯಾಂಟರೆಂಬ (Decanter) ಆಸುರ ಘಟದಲ್ಲಿ ಸಂಸ್ಥಾಪಿತಳಾದಳು. ಕಟ್‌ಗ್ಲಾಸು (Cut glass) ಪೂಜೆಯ ಸ್ಫಟಿಕಪಾತ್ರವಿಶೇಷವಾಯಿತು. ಪ್ಲೇಟೆಡ್‌ಜಗ್ (Plated Jug) ಎಂಬ ಹೂಜೆಯು ತಾಮ್ರಕುಂಡವಾಯಿತು. ಪಾಕಶಾಲೆಯಿಂದ ಬಬ್ಬ ಕೃಷ್ಣಕಾಯಕನಾದ ಪುರೋಹಿತನು ಹಾಟ್ವಾಟರಪ್ಲೇಟ (Hot water plate)ಎಂಬ ಹೆಸರುಳ್ಳ ದಿವ್ಯವಾದ ಪುಷ್ಪಪಾತ್ರೆಯಲ್ಲಿ ರೋಸ್ಟಮಟ್ಟನ್ ಮತ್ತು ಕಟ್ಲೆಟ್

(1) ತೃಣ+ ಪಟ+ ಆವೃತ = ಹುಲ್ಲುಗಳಿಂದ ಸಿನಹಾಗೆ ಮಾಡಿ ಅದರಿಂದ ಸುತ್ತಲ್ಪಟ್ಟ

(2) ಬಾಟಲ (Bottle) ಸೀಸೆ.

(3) ರಜತ + ಅನುಕೃತ + ಆಸನ = German silver plate ಜರ್ಮನ್ ಸಿಲ್ವರಿನ ತಟ್ಟೆ.

(1) ನಾಮಕವಾದ ಸುಗಂಧವುಳ್ಳ ಪುಷ್ಪರಾಶಿಯನ್ನು ತೆಗೆದುಕೊಂಡು ಬಂದನು. ಆಗ ದೇವೇಂದ್ರನು ಯಥಾಶಾಸ್ತ್ರವಾಗಿ ಭಕ್ತಿಭಾವದಿಂದ ದೇವಿಯ ಪೂಜೆಗೆ ಕುಳಿತುಕೊಂಡನು.

ಅನಂತರದಲ್ಲಿ ಸಿತಾರು, ತಬಲಾ ಮುಂತಾದ್ದರ ಸಮೇತವಾಗಿ ಗಾಯಕವಾದಕರು ಬಂದು ಪೂಜೆಗೆ ಆವಶ್ಯಕವಾದ ವಾದ್ಯೋತ್ಸವವನ್ನು ಮಾಡಿದರು.

ಕಟ್ಟಕಡೆಗೆ ದೇವೇಂದ್ರನ ಸಮವಯಸ್ಕನಾದ ಬಳ್ಳೇ ದೇಹಕಾಂತಿಯನ್ನುಳ್ಳ ಸುರೇಂದ್ರನೆಂಬೊಬ್ಬ ಯುವಪುರುಷನು ಬಂದುಕುಳಿತನು. ಇವನು ದೇವೇಂದ್ರನ ಸೋದರಮಾವನಮಗ. ಸುರೇಂದ್ರನ ಗುಣಗಳೆಲ್ಲಾ ದೇವೇಂದ್ರನ ಗುಣಗಳಿಗೆ ಶುದ್ಧವಾಗಿ ವಿಪರೀತವಾಗಿದ್ದವು. ಇವನ ಸ್ವಭಾವ ಸಿದ್ಧವಾದ ಸದ್ಗುಣಗಳನ್ನು ನೋಡಿ ದೇವೇಂದ್ರನು ಕೂಡ ಆತನನ್ನು ಪ್ರೀತಿಸುತಲಿದ್ದನು. ದೇವೇಂದ್ರನು ಸುರೇಂದ್ರನ ಬುದ್ಧಿವಾದಗಳನ್ನು ಹೊರ್ತು ಮತ್ಯಾರಮಾತನ್ನೂ ಕೇಳುತ್ತಿರಲಿಲ್ಲ. ಸುರೇಂದ್ರನು ಪ್ರತಿನಿತ್ಯವೂ ರಾತ್ರಿಯಲ್ಲಿ ಬಂದುತಡವೆ ವಿಚಾರಿಸಿಕೊಳ್ಳುವುದಕ್ಕೆ ಬಂದು ಹೋಗುತ್ತಿದ್ದನು. ಆದರೆ ಮದ್ಯಾದಿಗಳ ಭಯದಿಂದ ಬಹಳಹೊತ್ತು ನಿಲ್ಲುತ್ತಿರಲಿಲ್ಲ. ಎಲ್ಲರೂ ಹೋದನಂತರ ಸುರೇಂದ್ರನು ದೇವೇಂದ್ರನನ್ನು ಕುರಿತು ಶರೀರದಲ್ಲಿ ಹೇಗೆ ಇದೆ ಎಂದು ಕೇಳಿದನು.

ದೇವೇಂದ್ರ—ಶರೀರಂ ವ್ಯಾಧಿಮಂದಿರಂ.

ಸುರೇಂದ್ರ—ಈದಿನವೇನಾದರೂ ಜ್ವರವು ಬಂದಿತ್ತೆ ?

ದೇವೇಂದ್ರ—ಇಲ್ಲ.

ಸುರೇಂದ್ರ—ಯಕೃತ್ತಿನ ವ್ಯಾಧಿಯು ಹೇಗಿದೆ?

ದೇವೇಂದ್ರ—ಮೊದಲಿನ ಹಾಗೆಯೇ ಇದೆ.

ಸುರೇಂದ್ರ—ಹಾಗಾದರೆ ಇದನ್ನೆಲ್ಲ ಬಿಡುವುದು ಒಳ್ಳೇದಲ್ಲವೆ?

(1) (Roas Mutton & Cutlets) ಪಾಕಭೇದದಿಂದ ಸಿದ್ಧವಾದ ಮಾಂಸಾಹಾರ.

ದೇವೇಂದ್ರ—ಯಾವದು ? ಮದ್ಯಪಾನವೆ ? ಅದನ್ನು ಕುರಿತು ಎಷ್ಟ ತಡವೆ ಹೇಳುತ್ತೀ ? ಅದು ನನ್ನ ಜನ್ಮಕ್ಕೆ ಬಂದದ್ದು.

ಸುರೇಂದ್ರ—ಏತಕ್ಕೆ ಬಿಡಕೂಡದು ? ಅದು ದೇಹಧಾರಣೆಗೆ ಆವಶ್ಯಕವಾದುವಲ್ಲ. ಅನೇಕರು ಬಿಟ್ಟುಬಿಟ್ಟದ್ದಾರೆ. ನೀನೂ ಏತಕ್ಕೆ ಹಾಗೆ ಮಾಡಕೂಡದು ?

ದೇವೇಂದ್ರ—ನಾನು ಯಾವ ಸುಖಕ್ಕೋಸ್ಕರ ಬಿಡಬೇಕು ? ಅದನ್ನು ತ್ಯಜಿಸಿರುವವರು ಬೇರೇಸುಖಕ್ಕಾಗಿ ಬಿಟ್ಟದ್ದಾರೆ. ನನಗೆ ಬೇರೇ ಸುಖ ಯಾವದೂ ಇಲ್ಲ.

ಸುರೇಂದ್ರ—ನಿನ್ನ ಪ್ರಾಣರಕ್ಷಣೆಗೋಸ್ಕರವಾದರೂ ಬಿಟ್ಟುಬಿಡು.

ದೇವೇಂದ್ರ—ಯಾರು ಬದುಕಿದ್ದು ಸುಖಪಡಬೇಕೋ ಅಂತಹವರು ಮದ್ಯವನ್ನು ಬಿಟ್ಟುಬಿಡಲಿ. ನಾನು ಬದುಕಿ ಏನು ಲಾಭ ?

ಸುರೇಂದ್ರನ ಕಣ್ಣುಗಳಲ್ಲಿ ನೀರುತುಂಬಿತು. ಆಗ ಸ್ನೇಹರಸದಿಂದ ಪರಿಪೂರ್ಣನಾಗಿ, ಹಾಗಾದರೆ ನಾನು ಹೇಳುತ್ತೇನೆಂದು ಬಿಟ್ಟುಬಿಡು ಎಂದನು.

ದೇವೇಂದ್ರನ ಕಣ್ಣಿನಲ್ಲಿಯೂ ನೀರುಬಂದು, ನಾನು ಸನ್ಮಾರ್ಗದಲ್ಲಿರಬೇಕೆಂದು ಹೇಳುವವರು ನಿನ್ನನ್ನು ಹೊರ್ತು ಮತ್ಯಾರನ್ನೂ ಕಾಣಲಿಲ್ಲ. ನಾನು ಬಿಡಬೇಕಾದರೆ ನಿನ್ನ ಬುದ್ಧಿವಾದಕ್ಕೋಸ್ಕರ ಬಿಡಬೇಕು. ಮತ್ತು—

ಸುರೇಂದ್ರ—ಮತ್ತೇನು ?

ದೇವೇಂದ್ರ—ನನ್ನ ಹೆಂಡತಿಯು ಸತ್ತ ಸಮಾಚಾರವನ್ನು ಕಿವಿಯಿಂದ ಕೇಳಿದರೆ ಮದ್ಯವನ್ನು ಬಿಟ್ಟುಬಿಡುತ್ತೇನೆ. ಇಲ್ಲದಿದ್ದರೆ ನಾನು ಇದ್ದರೂ ಒಂದೆ, ಸತ್ತರೂ ಒಂದೆ. ಎರಡೂ ಸಮಾನ.

ಸುರೇಂದ್ರನು ಕಣ್ಣೀರು ಬಿಟ್ಟುಕೊಂಡು, ಮನಸ್ಸಿನಲ್ಲಿ ಹೈಮವತಿಯನ್ನು ಶಪಿಸುತ್ತ ಮನೆಗೆ ಹೊರಟುಹೋದನು.

## ಹನ್ನೊಂದನೆಯ ಪರಿಚ್ಛೇದ

### ಸೂರ್ಯಮುಖಿಯ ಕಾಗದ.

"ಪ್ರಾಣಾಧಿಕಳಾದ ಶ್ರೀಮತಿ ಕಮಲಮಣಿದಾಸಿ ಚಿರಾಯುಷ್ಮತಿಗೆ.

ಇನ್ನು ಮೇಲೆ ನಿನಗೆ ಆಶೀರ್ವಾದಪೂರ್ವಕವಾಗಿ ಕಾಗದವನ್ನು ಬರೆಯುವುದಕ್ಕೆ ನಾಚಿಕೆಯಾಗುತ್ತದೆ. ಈಗ ನೀನು ಒಬ್ಬ ಮನುಷ್ಯಳಾದೆ. ಒಂದು ಮನೆಗೆ ಗೃಹಿಣಿ. ಆದರೂ ನಿನ್ನನ್ನು ನನ್ನ ತಂಗಿಯಾಗಿ ಭಾವಿಸುವೆನೇ ಹೊರ್ತು ಬೇರೆ ವಿಧವಾಗಿ ಭಾವಿಸಲಾರೆನು. ನಾನು ನಿನ್ನನ್ನು ಮಗುವಿನಿಂದ ದೊಡ್ಡವಳನ್ನಾಗಿ ಮಾಡಿದೆ. ಮೊದಲು ನಿನಗೆ ಓನಾಮವನ್ನು ಹೇಳಿಕೊಟ್ಟೆನು. ಆದರೆ ಈಗ ನಿನ್ನ ಮುಕ್ತಾಫಲವಾದ ಅಕ್ಷರಗಳನ್ನು ನೋಡಿ ನನ್ನ ಈ ಕಾಕಲಿಪಿಯಾದ ಅಕ್ಷರದಲ್ಲಿ ನಿನಗೆ ಕಾಗದವನ್ನು ಬರೆಯುವುದಕ್ಕೆ ಲಜ್ಜೆಯುಳ್ಳವಳಾಗಿದ್ದೇನೆ. ಹಾಗೆ ನಾಚಿಕೆಪಟ್ಟು ಏನುತಾನೆ ಮಾಡಬಲ್ಲೆ ? ನನಗೆ ಕಾಲವಾಯಿತು, ದಿನವಾಯಿತು. ಹಾಗಿಲ್ಲದಿದ್ದರೆ ನನಗೇತಕ್ಕೆ ಈ ದಸೆಯು ಬರುತಲಿತ್ತು ?

ಎಂತಹ ದಸೆ ? ಇದನ್ನು ಯಾರಿಗೂ ಹೇಳಕೂಡದು. ಹೇಳಿದರೆ ದುಃಖಬರುತ್ತದೆ. ಹೇಳಿಕೊಳ್ಳುವುದು ನಾಚಿಗೆಗೇಡು. ಆದರೆ ಮನಸ್ಸಿನ ದುಃಖವನ್ನು ಒಬ್ಬರಲ್ಲಿ ಹೇಳಿಕೊಳ್ಳದಿದ್ದರೆ ಸಹಿಸುವುದು ಅತಿಕಷ್ಟ. ಮತ್ಯಾರಲ್ಲಿ ಹೇಳಿಕೊಳ್ಳಲಿ ? ನೀನು ನನ್ನ ಪ್ರಾಣಕ್ಕಿಂತಲೂ ಹೆಚ್ಚಾದವಳು. ನಿನ್ನನ್ನು ಹೊರ್ತು ನನ್ನನ್ನು ಯಾರೂ ಪ್ರೀತಿಸುವುದಿಲ್ಲ. ನಿನ್ನನ್ನು ಬಿಟ್ಟು ಪರಕೀಯರಲ್ಲಿ ಹೇಳಿಕೊಳ್ಳಲಾರೆನು.

ನಾನೇ ನನ್ನ ಸ್ವಂತ ಚಿತೆಯನ್ನು ಸಿದ್ಧಪಡಿಸಿಕೊಂಡ ಹಾಗಾಯಿತು. ಕುಂದನಂದಿನಿಯು ಅನ್ನವಿಲ್ಲದೆ ಸತ್ತುಹೋಗಿದ್ದರೆ ಅದರಿಂದ ನನಗೇನು ನಷ್ಟವಾಗುತಲಿತ್ತು ? ಲೋಕಕ್ಕೆಲ್ಲಾ ಅಕ್ಕರೆಯನ್ನು ಅಳೆಯುವ ದೇವರು

ಅವಳಿಗೆ ಅನ್ನವನ್ನು ಕಳ್ಪಿಸದೆ ಇರುತಲಿದ್ದನೆ? ನಾನೇ ನನ್ನನ್ನು ತಿಂದು ಕೊಳ್ಳುವುದಕ್ಕೆ ಅವಳನ್ನು ಮನೆಯಲ್ಲಿ ತಂದಿಟ್ಟುಕೊಂಡೆ. ಹಾಗೆ ಏತಕ್ಕೆ ಮಾಡಿದೆನೋ ಈಗ ಹೇಗೆ ಹೇಳಲಿ?

ನೀನು ಆ ಹತಭಾಗಿನಿಯನ್ನು ನೋಡಿದಾಗ ಅವಳು ಹುಡುಗಿಯಾಗಿ ದ್ದಳು. ಈಗ ಅವಳಿಗೆ ಹದಿನೇಳು ಹದಿನೆಂಟುವರುಷ. ಅವಳು ಸುಂದ ರಿಯೇ ಹೌದು. ಅದಕ್ಕೆ ಅಡ್ಡಿಯಿಲ್ಲ. ಆ ಸೌಂದರ್ಯವೇ ಈಗ ನನ್ನ ತಲೆ ಯನ್ನು ತಿನ್ನುವುದಕ್ಕೆ ನಿಂತಿರುವುದು.

ಪೃಥಿವಿಯಲ್ಲಿ ನನಗೆ ಸೌಖ್ಯವೆಂಬುದು ಇದ್ದರೆ ಅದು ನನ್ನ ಸ್ವಾಮಿ. ಪೃಥಿವಿಯಲ್ಲಿ ನಾನು ಚಿಂತಿಸಬೇಕಾದುದು ಇದ್ದರೆ ಅದು ನನ್ನ ಸ್ವಾಮಿ. ಪೃಥಿವಿಯಲ್ಲಿ ನನಗೆ ಸಂಪತ್ತು ಇದ್ದರೆ ಅದು ನನ್ನ ಸ್ವಾಮಿ. ಆ ನನ್ನ ಸ್ವಾಮಿಯನ್ನು ಕುಂದನಂದಿನಿಯು ನನ್ನ ಹೃದಯದಿಂದ ಅಪಹರಿಸಿಕೊಂಡಿ ದ್ದಾಳೆ. ಈ ಪೃಥಿವಿಯಲ್ಲಿ ನಾನು ಅಪೇಕ್ಷಿಸುವುದು ಇದ್ದರೆ ಅದು ನನ್ನ ಸ್ವಾಮಿಯ ಪ್ರೀತಿ. ಆ ನನ್ನ ಸ್ವಾಮಿಯ ಪ್ರೀತಿವಿಶ್ವಾಸಗಳನ್ನು ಕುಂದ ನಂದಿನಿಯು ನನಗೆ ವಂಚಿಸಿದ್ದಾಳೆ.

ನೀನು ನಿಮ್ಮ ಅಣ್ಣಂದಿರನ್ನು ಕೆಟ್ಟವರೆಂದು ತಿಳಿಯಬೇಡ. ನಾನು ಅವರನ್ನು ನಿಂದಿಸುವುದಿಲ್ಲ. ಅವರು ಧರ್ಮಾತ್ಮರು. ಅವರ ಶತ್ರುಗಳು ಕೂಡ ಅವರಲ್ಲಿ ಕಳಂಕವಿದೆಯೆಂದು ಹೇಳಲಾರರು. ಅವರು ಪ್ರತ್ಯಹವೂ ತಮ್ಮ ಚಿತ್ತವನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದರಲ್ಲಿದ್ದಾರೆ. ಕುಂದನಂ ದಿನಿಯು ಇದ್ದ ಕಡೆಗೆ ಸಾಧ್ಯವಾದಮಟ್ಟಿಗೆ ತಿರುಗಿ ನೋಡುವುದಿಲ್ಲ. ಕೇವ ಲ ಆವಶ್ಯಕವಿಲ್ಲದಿದ್ದರೆ ಅವಳ ಹೆಸರನ್ನು ಉಚ್ಚರಿಸುವುದಿಲ್ಲ. ಒಂದೊಂದು ಸಲ ಅವಳ ವಿಷಯದಲ್ಲಿ ಕ್ರೂರವಾಗಿ ವ್ಯವಹರಿಸುತ್ತಾರೆ; ಅದಲ್ಲದೆ ಒಂ ದೊಂದು ಸಲ ಅವಳಲ್ಲಿ ದೋಷವಿಲ್ಲದಿದ್ದರೂ ಅವಳನ್ನು ಗದರಿಸಿಕೊಳ್ಳುವು ದನ್ನು ಕಣ್ಣಾರೆ ನಾನೇ ನೋಡಿದ್ದೇನೆ.

ಹಾಗಿದ್ದರೆ ನಾನು ಹೀಗೆ ಗೋಳಾಡಿಕೊಂಡು ಈ ಕಾಗದವನ್ನು ಏತಕ್ಕೆ ಬರೆಯಬೇಕು? ಒಬ್ಬ ಪುರುಷನು ಈ ಪ್ರಶ್ನೆಯನ್ನು ಮಾಡಿದರೆ ಅವನಿಗೆ ತಿಳಿಯಹೇಳುವುದು ಕಷ್ಟ. ಆದರೆ ನೀನು ಹೆಂಗಸಾದುದರಿಂದ ಇದನ್ನೆಲ್ಲಾ ಒಂದು ನಿಮಿಷದಲ್ಲಿ ತಿಳಿದುಕೊಳ್ಳುವೆ. ಅವರು ಮನಸ್ಸಿನಲ್ಲಿ ಕುಂದನಂದಿಯು ಇತರ ಹೆಂಗಸರಹಾಗೆ ಸಾಮಾನ್ಯಳಾದ ಸ್ತ್ರೀ ಎಂದು ಭಾವಿಸಿದ್ದರೆ ಅವಳನ್ನು ನೋಡುವುದಕ್ಕೆ ಏತಕ್ಕೆ ಇಷ್ಟುಪ್ರಯತ್ನಪಡಬೇಕು? ತಮ್ಮ ಬಾಯಿಯಿಂದ ಅವಳ ಹೆಸರು ಹೊರಡದಹಾಗೆ ಏತಕ್ಕೆ ಇಷ್ಟು ಎಚ್ಚರಿಕೆಯಿಂದ ಯತ್ನಶೀಲರಾಗಿರಬೇಕು? ಕುಂದನಂದಿನಿಯ ವಿಷಯವಾಗಿ ಅವರು ಮನಸಾ ಅಪರಾಧಿಯಾಗಿರುತ್ತಾರಾದುದರಿಂದ ಅದಕ್ಕೋಸ್ಕರ ಅವಳನ್ನು ಅಕಾರಣವಾಗಿ ಗದರಿಸಿಕೊಳ್ಳುತ್ತಾರೆ. ಆ ಕೋಪವು ಅವಳಮೇಲೆ ಅಲ್ಲ. ತಮ್ಮ ಮೇಲೆಯೇ ಮಾಡಿಕೊಳ್ಳುವ ಕೋಪವಾಗಿದೆ. ನಾನು ಇವುಗಳನ್ನೆಲ್ಲ ತಿಳಿದುಕೊಳ್ಳಬಲ್ಲೆನು. ನಾನು ಇಷ್ಟು ವರುಷ ಅನನ್ಯವ್ರತಳಾಗಿ ಅವರನ್ನು ಹೊರಗೂ ಒಳಗೂ ನೋಡಿ ತಿಳಿದಿದ್ದೇನೆ. ಅವರ ನೆರಳನ್ನು ನೋಡಿದಮಾತ್ರದಿಂದಲೇ ಅವರ ಮನಸ್ಸಿನಲ್ಲಿರುವುದನ್ನು ಹೇಳಬಲ್ಲೆ. ಅವರು ಅದನ್ನು ನನಗೆ ತಿಳಿಯದ ಹಾಗೆ ಮುಚ್ಚಿಟ್ಟುಕೊಳ್ಳಬಲ್ಲರೆ? ಅವರು ಆಗಾಗ್ಯೆ ಅನ್ಯಮನಸ್ಕರಾಗಿ ಕಣ್ಣುಗಳನ್ನು ಆಕಡೆ ಈಕಡೆ ತಿರುಗಿಸಿ ನೋಡುತ್ತಾರೆ. ಯಾರನ್ನು ನೋಡುವುದಕ್ಕೆನ್ನುವುದು ನಾನರಿಯನೆ? ಕಂಡುಬಿಟ್ಟರೆ ವ್ಯಸ್ತರಾಗಿ ದೃಷ್ಟಿಯನ್ನು ಬೇರೇಕಡೆಗೆ ತಿರುಗಿಸಿಕೊಳ್ಳುತ್ತಾರೆ. ಅದೇತಕ್ಕೆ? ನನಗೆ ಗೊತ್ತಾಗುವುದಿಲ್ಲವೆ? ಊಟಮಾಡುವಾಗ ಯಾರಧ್ವನಿಯನ್ನು ಕೇಳಬೇಕೆಂದಿದೆಯೋ ಅದಕ್ಕೋಸ್ಕರ ಕೈಗೆ ತೆಗೆದುಕೊಂಡ ತುತ್ತು ಕೈಯಲ್ಲಿಟ್ಟುಕೊಂಡು ಸುಮ್ಮನೆ ಕಿವಿಕೊಟ್ಟುಕೊಂಡು ಕೂತಿರುವುದು ನನಗೆ ಗೊತ್ತಾಗುವುದಿಲ್ಲವೆ? ಕೈಯಲ್ಲಿದ್ದ ತುತ್ತು ಕೈಯಲ್ಲಿಯೇ, ಬಾಯಿಯಲ್ಲಿದ್ದ ತುತ್ತು

ಬಾಯಿಯಲ್ಲಿಯೋ. ಯಾವಾಗ ಕುಂದನಂದಿನಿಯ ಸೊಲ್ಲು ಕಿವಿಗೆ ಬೀಳುತ್ತದೋ ಆಗ ಏತಕ್ಕೆ ಗವಗವಕನೆ ಊಟಮಾಡಿಬಿಡಬೇಕು. ಅದು ನನಗೆ ಗೊತ್ತಾಗದೆ ಇದ್ದೀತೆ? ನನ್ನ ಪ್ರಾಣಾಧಿಕರು ಯಾವಾಗಲೂ ಪ್ರಸನ್ನವದನರಾಗಿದ್ದವರು ಈಗ ಏತಕ್ಕೆ ಇಷ್ಟು ಅನ್ಯಮನಸ್ಕರಾಗಿರಬೇಕು? ಏನಾದರೂ ಹೇಳಿದರೆ ಅದು ಕಿವಿಯಮೇಲೆ ಬೀಳುವುದಿಲ್ಲ. ನಾನು ಯಾವಾಗಲಾದರು ಕೋಪವಶಳಾಗಿ, ದೇವರೆ! ನನ್ನ ಪ್ರಾಣವನ್ನು ಬೇಗ ಸಾಕು ಮಾಡಬಾರದೇ! ಎಂದು ಹೇಳಿಕೊಂಡರೆ ಅದನ್ನು ಕೇಳಿ ತಿಳಿದುಕೊಳ್ಳದೆ ಅನ್ಯಮನಸ್ಕರಾಗಿದ್ದುಕೊಂಡು, ಆಗಬಹುದೆಂದು ಹೇಳಿಬಿಡುತ್ತಾರೆ. ಏತಕ್ಕೆ ಇಷ್ಟು ಅಮನಸ್ಕರಾಗಿರಬೇಕು? ಕೇಳಿದರೆ ಮೊಕದ್ದಮೆಯಕೊರತೆಯೆಂದು ಹೇಳುತ್ತಾರೆ. ಅವರಿಗೆ ಮೊಕದ್ದಮೆಯ ವಿಚಾರವಾದ ಕೊರತೆಯು ಮನಸ್ಸಿಗೆ ಅಂಟುವುದೇ ಇಲ್ಲ. ಮೊಕದ್ದಮೆಯ ಸಂಗತಿಯನ್ನು ಮಾತನಾಡುವಾಗ ನಗುನಗುತ ಮಾತನಾಡುತ್ತಾರೆ. ಮತ್ತೊಂದುವಿಶೇಷ ಸಂಗತಿಯೇನೆಂದರೆ:—ನೆರೆಮನೆಯ ಮುದಿ ಹೆಂಗಸರು ಕುಂದನಂದಿನಿಯ ಮಾತನ್ನು ತೆಗೆದುಕೊಂಡು, ಅವಳ ಬಾಲ್ಯ, ವೈಧವ್ಯ, ಅವಳ ಅನಾಥತ್ವ ಮುಂತಾದ ವಿಚಾರವಾಗಿ ಮಾತನಾಡುತ್ತ ದುಃಖಪಡುತಲಿದ್ದರು. ಆ ಸಮಯದಲ್ಲಿ ನಿಮ್ಮ ಅಣ್ಣಂದಿರು ಏತಕ್ಕೋ ಅಲ್ಲಿಗೆ ಬಂದರು. ಆಗ ನಾನು ಮರೆಯಲ್ಲಿ ನಿಂತುಕೊಂಡು ನೋಡುತ್ತಿದ್ದಾಗ ಅವರ ಕಣ್ಣುಗಳಲ್ಲಿ ನೀರು ತುಂಬಿತು. ಕೂಡಲೆ ಅವರು ಅಲ್ಲಿ ನಿಲ್ಲದಹಾಗೆ ಆ ಸ್ಥಳವನ್ನು ಬಿಟ್ಟು ಹೊರಟುಹೋದರು. ಇದಕ್ಕೆಲ್ಲ ಅರ್ಥವಿಲ್ಲವೆ?

ಈಚೆಗೆ ಒಬ್ಬ ಹೊಸದಾಸಿಯನ್ನು ಕೆಲಸಕ್ಕೆ ಇಟ್ಟುಕೊಂಡಿದ್ದೇನೆ. ಅವಳ ಹೆಸರು ಕುಮುದ. ಯಜಮಾನರೂ ಅವಳನ್ನು ಕುಮುದ ಎಂತಲೇ ಕರೆಯುತ್ತಾರೆ. ಒಂದೊಂದುವೇಳೆ ಕುಮುದ ಎಂದು ಕರೆಯುವುದಕ್ಕೆ ಬದಲಾಗಿ ಬಾಯಿತಪ್ಪಿ ಕುಂದ ಎಂದು ಕರೆದುಬಿಟ್ಟು, ಉತ್ತರಕ್ಷಣದ

ಲ್ಲಿಯೇ ಕೇವಲ ಅಪ್ರೀತಿಭರಾಗುತ್ತಾರೆ. ಅಪ್ರೀತಿಭರಾಗಬೇಕಾದುದು ಏತಕ್ಕೆ?

ಅವರು ನನ್ನ ವಿಷಯದಲ್ಲಿ ಉದಾಸೀನರಾಗಿದ್ದಾರೆಂತಾಗಲಿ, ಅನಾದರವುಳ್ಳವರಾಗಿದ್ದಾರೆಂತಾಗಲಿ, ಪ್ರೀತಿವಿಶ್ವಾಸವಿಲ್ಲದವರಾಗಿದ್ದಾರೆಂತಾಗಲಿ ಎಂದಿಗೂ ಹೇಳಲಾರೆನು. ಮೊದಲಗಿಂತಲೂ ಹೆಚ್ಚು ಆದರ, ಹೆಚ್ಚು ಪ್ರೀತಿ, ನನಗೆ ಇದರ ಕಾರಣ ಗೊತ್ತು. ಅವರು ನನ್ನ ವಿಷಯದಲ್ಲಿ ಅಪರಾಧಿಯೆಂದು ಚನ್ನಾಗಿ ತಿಳಿದುಕೊಂಡಿದ್ದಾರೆ. ಅವರಿಗೆ ನನ್ನ ಮೇಲೆ ಶುದ್ಧವಾಗಿ ಮನಸ್ಸು ಇಲ್ಲ. ಆದರವನ್ನು ಮಾಡುವುದಕ್ಕೂ ಪ್ರೀತಿಸುವದಕ್ಕೂ ಬಹಳ ಭೇದ. ಅದದಕ್ಕೆ ಇರುವ ಪ್ರಭೇದವನ್ನು ನಾವು ಹೆಂಗಸರು ಬಲ್ಲವರಾಗಿದ್ದೇವೆ.

ಇನ್ನೊಂದು ನೆಗೆಗೇಡು ಏನೆಂದರೆ; — ಕಲಕತ್ತೆಯಲ್ಲಿ ಈಶ್ವರಚಂದ್ರ ವಿದ್ಯಾಸಾಗರನೆಂಬ ಒಬ್ಬ ದೊಡ್ಡ ಪಂಡಿತನು ಇದ್ದಾನಂತೆ. ಅವನು ವಿಧವಾ ವಿವಾಹ ವಿಚಾರವಾಗಿ ಒಂದು ಪುಸ್ತಕವನ್ನು ಬರೆದಿದ್ದಾನೆ. ವಿಧವಾವಿವಾಹವು ಆಗಬಹುದೆಂದು ಹೇಳುವವರೆಲ್ಲ ಪಂಡಿತರಾಗುವುದಾದರೆ ಮೂರ್ಖರು ಉಳಿಯುವವರು ಯಾರು? ಭಟ್ಟಾಚಾರ್ಯರು ಬ್ರಾಹ್ಮಣರು ಯಾರಾದರೂ ಬೈಠಕಖಾನೆಗೆ ಬಂದರೆ ಆ ಪುಸ್ತಕದ ವಿಚಾರವಾಗಿ ಅನೇಕ ತರ್ಕವಿತರ್ಕಗಳು ನಡೆಯುತ್ತೆ. ಒಂದುದಿನ "ನ್ಯಾಯಚಂಚುಕುಚಿ" ಎಂಬ ಬಿರದನ್ನು ಪಡೆದಿರುವ ಪಂಡಿತನೊಬ್ಬನು — ಸಾಕ್ಷಾತ್ ಸರಸ್ವತಿಯ ವರಪುತ್ರ ಒಂದು ವಿಧವಾವಿವಾಹವಾಗುವುದು ಶಾಸ್ತ್ರಸಿದ್ಧವೆಂದು ಹೇಳಿಬಿಟ್ಟು, ನಿಮ್ಮ ಅಣ್ಣಂದಿರಿಂದ ಪಾಠಶಾಲೆಯ ಕಾಮಗಾರಿಗೋಸ್ಕರವೆಂದು ಹೇಳಿ ಹತ್ತುರೂಪಾಯಿ ತೆಗೆದುಕೊಂಡು ಹೊರಟುಹೋದನು. ಅದರ ಮರುದಿನ ಸಾರ್ವಭೌಮ ಭಟ್ಟಾಚಾರ್ಯರು ಬಂದು ವಿಧವಾವಿವಾಹವು ಆಗಕೂಡದೆಂದು ಅನೇಕಶಾಸ್ತ್ರಗಳನ್ನೆಲ್ಲ ಹೇಳಿ ಮೂರು ಘಂಟೆ ಹೊತ್ತು ಕಂಠಶೋಷಣೆಮಾಡಿಕೊಂಡರು. ಅವರಿಗೆ ಒಂದು ಕಾಸೂ ಸಿಕ್ಕಲಿಲ್ಲ. ಕಡೆಗೆ ನನಗೆ ಪಶ್ಚಾ

ತ್ತಾಪವುಂಟಾಗಿ ಆ ಭಟ್ಟಾಚಾರ್ಯರ ಮಗಳ ಲಗ್ನಕ್ಕೋಸ್ಕರ ಒಂದು ಪಾವಿನಷ್ಟು ಒಂದುಜೊತೆ ಬಂಗಾರದ ಬಳೆಯನ್ನು ಕೊಟ್ಟೆ. ಇವಾದ ಈಚೆಗೆ ವಿಧವಾವಿವಾಹಪಕ್ಷಪಾತಿಗಳಾಗಿ ಯಾರೂ ಪಂಡಿತರು ಬಂದಿಲ್ಲ.

ನನ್ನ ಸ್ವಂತ ದುಃಖಗಳನ್ನೇ ಬರೆದು ನಿನಗೆ ಬಹಳ ಬೇಸರವುಂಟಾಗುವಹಾಗೆ ಮಾಡಿದ್ದೇನೆ. ನೀನು ಎಷ್ಟು ವಿರಕ್ತಳಾಗಿದ್ದೀಯೋ ನಾನರಿಯೆ. ಆದರೆ ಏನುಮಾಡಲಿ? ಹೇಳು. ನನ್ನ ದುಃಖವನ್ನು ನಿನಗೆ ಹೇಳಿಕೊಳ್ಳದೆ ಮತ್ತಾರಿಗೆ ಹೇಳಿಕೊಳ್ಳಲಿ? ನನ್ನ ಎಲ್ಲಾ ಸಮಾಚಾರವನ್ನೂ ಪೂರ್ತಿಯಾಗಿ ಹೇಳಲ್ಲ. ಆದರೆ ನಿನ್ನಿಂದ ಸ್ವಲ್ಪ ಸಮಾಧಾನವಾದೀತೆಂದು ಈಗ ಕ್ಷಾಂತಳಾಗಿದ್ದೇನೆ. ಇವನ್ನೆಲ್ಲಾ ಯಾರಿಗೂ ಹೇಳಬೇಡ. ಮ॥ರಾ॥ ಅಳಿಯಂದಿರಿಗೆ ಈ ಕಾಗದವನ್ನು ತೋರಿಸಬೇಡ.

ನೀನು ನನ್ನನ್ನು ನೋಡುವುದಕ್ಕೆ ಬರುವುದಿಲ್ಲವೆ? ಈಗ ಒಂದು ಸಲ ಬಂದು ಹೋಗು. ನೀನು ಬಂದರೆ ನನ್ನ ಅನೇಕ ದುಃಖಗಳು ನಿವಾರಣೆಯಾಗುತ್ತವೆ.

ನಿನ್ನ ಮಗು ಆಡಿಕೊಂಡು ಆರೋಗ್ಯವಾಗಿರುವುದಕ್ಕೂ ಅಳಿಯಂದಿರ ಆರೋಗ್ಯಕ್ಕೂ ಜಾಗ್ರತೆಯಾಗಿ ಬರಿ. ಇತಿ.

ಸೂರ್ಯಮುಖಿ.

---

ಪುನಶ್ಚ—ಇನ್ನೊಂದುಮಾತು ಉಂಟು. ಈ ಪಾಪಿಯಾದ ಹುಡುಗಿಯು ಹೊರಟುಹೋದರೆ ಉಳಿದುಕೊಂಡೇನು. ಅವಳನ್ನು ಎಲ್ಲಿಗೆ ಕಳುಹಿಸಲಾದೀತು? ನೀನು ಕರೆದುಕೊಂಡು ಹೋಗುವಿಯಾ? ಇಲ್ಲ, ಭಯಪಡುತ್ತೀಯೊ?"

---

ಕಮಲಳು ಇದಕ್ಕೆ ಪ್ರತ್ಯುತ್ತರವನ್ನು ಬರೆದಳು.—

ನೀನು ಹುಚ್ಚಳಾದೆ. ಹಾಗಿಲ್ಲದಿದ್ದರೆ ನಿನ್ನ ಸ್ವಾಮಿಯಲ್ಲಿ ಏತಕ್ಕೆ

ಅಪನಂಬಿಕೆಪಡುತಲಿದ್ದೆ ? ಪತಿಯಲ್ಲಿ ಅಪನಂಬಿಕೆ ಪಡಬೇಡ. ಹಾಗೆ ನಂಬಿಕೆ ಇಡಲಾರದವಳಾದರೆ ಎಲ್ಲಾದರೂ ಬಂದು ದೊಡ್ಡದಾದ ಮಡುವನ್ನು ನೋಡಿ ಧುಮುಕಿ ಪ್ರಾಣವನ್ನು ಬಿಟ್ಟುಬಿಡು. ಕಮಲಮಣಿಯಾದ ನಾನು ಸಿದ್ಧಾಂತವಾಗಿ ಹೇಳುತ್ತೇನೆ. ಏನೆಂದರೆ—ನೀನು ಬಂದು ದೊಡ್ಡ ಗಡಿಗೆಯನ್ನು ಕಟ್ಟಿಕೊಂಡು ನೀರಿನಲ್ಲಿ ಬಿದ್ದು ಪ್ರಾಣವನ್ನು ಬಿಟ್ಟುಬಿಡು. ಪತಿಯಲ್ಲಿ ಯಾರು ಅಪನಂಬಿಕೆ ಪಡುತ್ತಾರೋ ಅಂತಹವಳಿಗೆ ಮರಣವೇ ಮಂಗಳಕರವಾದುದು. ಇತಿ.

---

## ಹನ್ನೆರಡನೆಯ ಪರಿಚ್ಛೇದ.

ಅಂಕುರ.

ಕೆಲ ದಿನಗಳಲ್ಲಿ ಕ್ರಮಕ್ರಮವಾಗಿ ನಾಗೇಂದ್ರನ ನಡತೆಗಳೆಲ್ಲ ಮಾರುಗೊಳ್ಳುತ್ತ ಬಂದವು. ಶರತ್ಕಾಲದಲ್ಲಿ ನಿರ್ಮಲವಾದ ಆಕಾಶದಲ್ಲಿ ಮೇಘವನ್ನು ನೋಡಿದಹಾಗೆ ಅವನ ಚರಿತ್ರೆಯು ಮೇಘಾವೃತವಾಗುತ್ತ ಬಂತು. ಅದನ್ನುನೋಡಿ ಸೂರ್ಯಮುಖಿಯು ಮರೆಯಲ್ಲಿ ಹೋಗಿ ಶರಗಿನಿಂದ ಕಣ್ಣೊರಿಸಿಕೊಳ್ಳುತ್ತಿದ್ದಳು.

ಸೂರ್ಯಮುಖಿಯು ಬಂದೊಂದು ತಡವೆ ನಾನು ಕಮಲಮಣಿಯು ಹೇಳಿರುವಹಾಗೆ ಮಾಡಿಬಿಡುತ್ತೇನೆಂದು ಭಾವಿಸಿಕೊಳ್ಳುವಳು. ನನ್ನ ಸ್ವಾಮಿಯ ಚಿತ್ತವೃತ್ತಿಯ ವಿಷಯದಲ್ಲಿ ಏತಕ್ಕೆ ಅನುಮಾನಪಡಲಿ ? ಅವರ ಚಿತ್ತವು ಅಚಲವಾದ ಪರ್ವತದೋಪಾದಿಯಲ್ಲಿದೆ. ನಾನೇ ಭ್ರಾಂತಳಾಗಿದ್ದೇನೆ. ಅವರಿಗೇನೋ ಆಲಸ್ಯವಾಗಿರಬೇಕೆಂದು ಮುಂತಾಗಿ ಭಾವಿಸಿಕೊಳ್ಳುತ್ತ ಸೂರ್ಯಮುಖಿಯು ಮರಳುನಿಂದ ಗೋಡೆಯನ್ನು ಹಾಕುತ್ತಿದ್ದಳು.

ಮನೆಯಲ್ಲಿಯೇ ಆಸ್ಪತ್ರೆಯಿರುವುದು. ಯಜಮಾನಿಯಾದ ಸೂರ್ಯ

ಮುಖಿಯು ಪರದೆಯಲ್ಲಿ ಕೂತುಕೊಂಡು ಎಲ್ಲರಸಂಗಡಲೂ ಮಾತನಾ ಡುವ ಪದ್ಧತಿಯಪ್ರಕಾರ ಬಂದು ಪರದೆಯ ಹಿಂದುಗಡೆ ಕೂತುಕೊಂಡು ಆಸ್ಪತ್ರೆಯಿಂದ ಡಾಕ್ಟರನ್ನು ಕರೆಸಿ, ದಾಸಿಯನ್ನು ಇಟ್ಟುಕೊಂಡು ಡಾಕ್ಟ ರನ್ನು ಕುರಿತು ಯಜಮಾನರಿಗೆ ಆಲಸ್ಯವಾಗಿದೆ; ಔಷಧವನ್ನು ಏತಕ್ಕೆ ಕೊಡುವುದಿಲ್ಲವೆಂದು ಕೇಳಿದಳು.

ಡಾಕ್ಟರು--ಏನು ಆಲಸ್ಯ? ನನಗೇನೂ ಗೊತ್ತಿಲ್ಲ. ಅವರಿಗೆ ಆಲಸ್ಯ ವೆಂಬ ಸಮಾಚಾರವನ್ನೇ ಕೇಳಲಿಲ್ಲ.

ಸೂರ್ಯಮುಖಿ–ಅವರೇನೂ ಹೇಳಲಿಲ್ಲವೆ?

ಡಾಕ್ಟರು–ಇಲ್ಲ, ಏನು ಆಲಸ್ಯ?

ಸೂರ್ಯಮುಖಿ–ಏನು ಆಲಸ್ಯವೆ? ನೀವು ಡಾಕ್ಟರಾಗಿದ್ದುಕೊಂಡು ನಿಮಗೆ ಗೊತ್ತಿಲ್ಲದ್ದು ನನಗೆ ಗೊತ್ತೆ?

ಡಾಕ್ಟರು ಸರಿಯಾದ ಉತ್ತರವನ್ನು ಹೇಳುವುದಕ್ಕೆ ತೋಚದೆ, ಹೋಗಿ ವಿಚಾರಿಸುತ್ತೇನೆಂದು ಹೇಳಿ ಹೊರಟುಹೋಗುತಲಿದ್ದನು.

ಅಷ್ಟರಲ್ಲಿಯೇ ಸೂರ್ಯಮುಖಿಯು ಡಾಕ್ಟರನನ್ನು ಕರೆಸಿ, ಯಜ ಮಾನರನ್ನ ವಿಚಾರಿಸಬೇಡಿ, ಏನಾದರೂ ಔಷಧವನ್ನು ಕೊಡಿ ಎಂದಳು.

ಡಾಕ್ಟರನು ಇದು ವಿಜಾತೀಯವಾದ ಚಿಕಿತ್ಸೆಯೆಂದಂದುಕೊಂಡು, ಅಪ್ಪಣೆಯಪ್ರಕಾರ ಔಷಧವನ್ನು ಕಳುಹಿಸುತ್ತೇನೆಂದು ಹೇಳಿ ಹೊರಟು ಹೋದನು. ಮನೆಯಲ್ಲಿಯೇ ಆಸ್ಪತ್ರೆ. ಡಾಕ್ಟರನು ಆಸ್ಪತ್ರೆಗೆ ಹೋಗಿ ಸ್ವಲ್ಪ ಸೋಡ (Soda) ಸ್ವಲ್ಪ ಪೋರ್ಟ್‌ವೈನ್ (Port Wine) ಸಿರಪ ಫೆರ್ರಿ ಮ್ಯೂರೆಟಿಸ (Syrup Ferri Muratis) ಮೂರೂ ನೀರನಲ್ಲಿ ಸೇರಿಸಿ ಬಂದು ಸೀಸೆಗೆ ತುಂಬಿ ಅದರಮೇಲೆ ನಿತ್ಯವೂ ಎರಡುತಡವೆ ತೆಗೆದುಕೊಳ್ಳ ತಕ್ಕದ್ದೆಂದು ಟಿಕೆಟ್ ಬರೆದು ಅಂಟಿಸಿ ಕಳುಹಿಸಿಕೊಟ್ಟನು. ಸೂರ್ಯಮುಖಿ ಯು ಔಷಧವನ್ನು ತೆಗೆದುಕೊಂಡು ಗಂಡನಿಗೆ ಕೊಡುವುದಕ್ಕೆ ಹೋದಳು.

ನಾಗೇಂದ್ರನು ಸೀಸೆಯನ್ನು ತೆಗೆದುಕೊಂಡು ಅಲ್ಲಿ ಹೋಗುತಲಿದ್ದ ಬೆಕ್ಕಿನ ಮೇಲೆ ಬಿಸಾಟುಬಿಟ್ಟನು. ಬೆಕ್ಕು ಓಡಿಹೋಯಿತು. ಸೀಸೆಯು ಒಡೆಯಿತು. ಬೆಕ್ಕಿನಬಾಲವು ನೆನೆದುಹೋಯಿತು.

ಸೂರ್ಯಮುಖಿಯು ಔಷಧವನ್ನು ತೆಗೆದುಕೊಳ್ಳದಿದ್ದರೆ ಚಿಂತೆಯಿಲ್ಲ. ಮೈಯಲ್ಲಿ ಏನು ಆಲಸ್ಯವೋ ಅದನ್ನಾದರೂ ಹೇಳಿ ಎಂದಳು.

ನಾಗೇಂದ್ರನು ಬೇಸರಗೊಂಡು ನನಗೇನು ಆಲಸ್ಯವೆಂದನು.

ಸೂರ್ಯಮುಖಿಯು, ನಿಮ್ಮ ಶರೀರವನ್ನು ನೋಡಿಕೊಳ್ಳಿ ಎಂದು ಹೇಳಿ ಒಂದು ಕನ್ನಡಿಯನ್ನು ತಂದು ಮುಖದಹತ್ತಿರ ಹಿಡಿದಳು. ನಾಗೇಂದ್ರನು ಅವಳ ಕೈಯಿಂದ ಕನ್ನಡಿಯನ್ನು ಕಿತ್ತುಕೊಂಡು ದೂರಬಿಸಾಟನು. ಅದು ಚೂರ್ಣವಾಗಿ ಹೋಯಿತು.

ಸೂರ್ಯಮುಖಿಯ ಕಣ್ಣುಗಳಿಂದ ನೀರು ಸುರಿಯಿತು. ಅದನ್ನು ನೋಡಿ ನಾಗೇಂದ್ರನು ಕಣ್ಣುಗಳನ್ನು ರಕ್ತವರ್ಣವಾಗಿ ಮಾಡಿಕೊಂಡು ಅಲ್ಲಿರದೆ ಎದ್ದು ಹೊರಟುಹೋದನು. ಹೊರಗೆಹೋಗಿ ಏನೂ ತಪ್ಪುಮಾಡದ ಒಬ್ಬ ಭೃತ್ಯನನ್ನು ಹೊಡೆದನು. ಆ ಪ್ರಹರವು ಸೂರ್ಯಮುಖಿಗೆ ಬಿದ್ದ ಹಾಗಾಯಿತು.

ಇದಕ್ಕೆ ಮೊದಲು ನಾಗೇಂದ್ರನು ಬಹಳ ಮೃದುಸ್ವಭಾವವುಳ್ಳವನಾಗಿದ್ದನು. ಈಗ ಮಾತುಮಾತಿಗೂ ಕೋಪದಿಂದ ರೇಗುತಲಿದ್ದನು.

ಕೇವಲ ಕೋಪಮಾತ್ರವೇ ಅಲ್ಲ. ಒಂದು ದಿನ ರಾತ್ರಿ ಊಟದ ಹೊತ್ತು ಮೀರಿದರೂ ನಾಗೇಂದ್ರನು ಅಂತಃಪುರಕ್ಕೆ ಬರಲಿಲ್ಲ. ರಾತ್ರಿ ಬಹಳ ಹೊತ್ತಾದಮೇಲೆ ಬಂದನು. ಸೂರ್ಯಮುಖಿಯು ನೋಡಿ ಬಹಳ ವಿಸ್ಮಿತಳಾದಳು. ನಾಗೇಂದ್ರನ ಮುಖವು ಆರಕ್ತವಾಗಿತ್ತು. ಕಣ್ಣುಗಳೂ ಆರಕ್ತವಾಗಿದ್ದವು. ಅವನು ಮದ್ಯಪಾನವನ್ನು ಮಾಡಿದ್ದನು. ಯಾವಾಗಲೂ ಪಾನಮಾಡಿದವನಲ್ಲ. ಈಗ ನೋಡಿ ಸೂರ್ಯಮುಖಿಗೆ ಆಶ್ಚರ್ಯವುಂಟಾಯಿತು.

ಅದು ಮೊದಲ್ಗೊಂಡು ನಿತ್ಯವೂ ಹೀಗೆಯೇ ಆಗುತಲಿತ್ತು. ಒಂದು ದಿನ ಸೂರ್ಯಮುಖಿಯು ನಾಗೇಂದ್ರನ ಕಾಲುಹಿಡಿದುಕೊಂಡು ಕಣ್ಣೀರು ಬಿಡುತ್ತ ಅತಿ ವಿನಯದಿಂದ ನನಗೋಸ್ಕರ ಇದನ್ನು ತ್ಯಜಿಸಬೇಕೆಂತ ಬೇಡಿ ಕೊಂಡಳು. ನಾಗೇಂದ್ರನು ಕೋಪದಿಂದ ಅದರಿಂದ ದೋಷವೇನು ? ಎಂದು ಕೇಳಿದನು.

ಈ ಉತ್ತರದ ಸ್ವಭಾವದಿಂದಲೇ ಪ್ರತ್ಯುತ್ತರವು ನಿವಾರಣವಾಯಿತು ಆದರೂ ಸೂರ್ಯಮುಖಿಯು ತಮಗೆ ದೋಷವಿಲ್ಲವೆಂದು ತಿಳಿದಮೇಲೆ ನನಗೆ ಹೇಗೆ ಗೊತ್ತು ; ಅದು ನನಗೆ ಗೊತ್ತಾಗುವುದಿಲ್ಲ. ಆದರೆ ನನಗೋಸ್ಕರ ವಾದರೂ ಬಿಟ್ಟುಬಿಡಬೇಕೆಂದಳು.

ನಾಗೇಂದ್ರನು, ಸೂರ್ಯಮುಖಿ! ನಾನು ಹೆಂಡಕುಡಕ ; ಹೆಂಡಕುಡ ಕನಿಗೆ ಮರ್ಯಾದೆಮಾಡುವುದುಚಿತವಾಗಿದ್ದರೆ ನನಗೆ ಮರ್ಯಾದೆಮಾಡು ; ಇಲ್ಲ ವಾದರೆ ಅವಶ್ಯವಿಲ್ಲವೆಂದನು.

ಸೂರ್ಯಮುಖಿಯು ಕಣ್ಣೀರೊರಸಿಕೊಳ್ಳಲು ಹೊರಟುಹೋದಳು. ನಾಗೇಂದ್ರನ ಇದುರಿಗೆ ಕಣ್ಣೀರುಬಿಟ್ಟರೆ ಅವನು ಹೋಗಿ ಭೃತ್ಯನನ್ನು ಹೊಡೆದಾನೆಂದು ಅವನಿದುರಿಗೆ ಕಣ್ಣೀರುಬಿಡಲಿಲ್ಲ.

ಮನೆಯ ಖಾನಗಿ ದಿವಾನನು ಬಂದು ಯಜಮಾನಿಯಾದ ಸೂರ್ಯ ಮುಖಿಗೆ ಭೂಮಿಕಾಣಿಗಳೆಲ್ಲ ಹೋಗುತ್ತವೆ, ಇನ್ನುಳಿಯುವುದಿಲ್ಲವೆಂದು ಹೇಳಿಕಳುಹಿಸಿದನು.

ಸೂರ್ಯಮುಖಿಯು ಏತಕ್ಕೆಂದು ವಿಚಾರಿಸಿದಳು.

ಉತ್ತರ–ಯಜಮಾನರು ನೋಡಿ ವಿಚಾರಿಸಿಕೊಳ್ಳುವುದಿಲ್ಲ. ಸದರ ಮಹಲಿನ ನವಕರರೆಲ್ಲರೂ ನನ್ನ ಮಾತನ್ನು ಲಕ್ಷ್ಯಮಾಡುವುದಿಲ್ಲ. ಮನಸ್ಸಿ ಮಾಡುತ್ತಾರೆ.

ಸೂರ್ಯಮುಖಿ–ಯಜಮಾನರು ನೋಡಿಕೊಂಡರೆ ಉಳಿಯುತ್ತದೆ

ಇಲ್ಲವಾದರೆ ಎಲ್ಲ ಹೋದಹಾಗೆಯೆ.

ನಾಗೇಂದ್ರನು ಮೊದಲು ಈ ಸಂಗತಿಗಳನ್ನೆಲ್ಲ ಸ್ವಂತವಾಗಿ ವಿಚಾರಿಸಿಕೊಳ್ಳುತ್ತಿದ್ದನು.

ಒಂದುದಿನ ೩೦೦-೪೦೦ಮಂದಿ ರೈತರು ಬಂದು ಕಚ್ಚೇರಿಯ ಬಾಗಲಲ್ಲಿ ಕೈಮುಗಿದುಕೊಂಡು, ಸ್ವಾಮಿ! ನಮ್ಮನ್ನು ಕಾಪಾಡಬೇಕು. ಇಲ್ಲದಿದ್ದರೆ ನಾಯಬದಿವಾನರು ಬಂದು ನಮ್ಮನ್ನು ಆಳಸುವಹಾಗಿಲ್ಲ. ಎಲ್ಲಾ ಬಾಚಿಕೊಂಡು ಹೋಗುತ್ತಾರೆ. ತಾವು ನೋಡಿಕೊಳ್ಳದಿದ್ದರೆ ನಾವೆಲ್ಲರೂ ಹಾಳಾಗಿಹೋಗುತ್ತೇವೆಂದು ಮೊರೆಯಿಟ್ಟರು.

ನಾಗೇಂದ್ರನು ಎಲ್ಲರನ್ನು ಅಟ್ಟಿಬಿಡೆಂದು ಅಪ್ಪಣೆ ಮಾಡಿದನು.

ಇದಕ್ಕೆ ಮೊದಲು ನಾಗೇಂದ್ರನು ಗುಮಾಸ್ತೆಯರಲ್ಲೊಬ್ಬನು ಯಾವ ರೈತನಿಂದಲಾದರೂ ಒಂದು ರೂಪಾಯಿಯನ್ನು ಅನ್ಯಾಯವಾಗಿ ವಸೂಲ್ಮಾಡಿದ್ದರೆ ಅದಕ್ಕೆ ಪ್ರತಿಯಾಗಿ ಹತ್ತು ರೂಪಾಯಿಗಳನ್ನು ಗುಮಾಸ್ತೆಯಿಂದ ವಸೂಲ್ಮಾಡಿ ರೈತನಿಗೆ ಕೊಡಿಸುತಲಿದ್ದನು.

ನಾಗೇಂದ್ರನ ಸ್ನೇಹಿತನಾದ ಹರದೇವಘೋಷಾಲನು ನಾಗೇಂದ್ರನಿಗೆ ಕಾಗದವನ್ನು ಬರೆದಿದ್ದರಲ್ಲಿ, ನಿನಗೇನು ಸಂಭವಿಸಿದೆ? ಏನುಮಾಡುತ್ತಿ? ಯಾವದೂ ಗೊತ್ತಾಗುವುದಿಲ್ಲ. ನಿನ್ನ ಕಾಗದವೇ ಅಪರೂಪವಾಯಿತು. ಕಾಗದ ಬರೆದರೂ ಎರಡುಪಜ್ತೆಯಮೇಲೆ ಇರುವುದಿಲ್ಲ. ಅದಕ್ಕೆ ತಲೆಬಾಲ ಯಾವದೂ ಇರುವುದಿಲ್ಲ. ಏನೊಂದು ಸಮಾಚಾರವೂ ಗೊತ್ತಾಗುವುದಿಲ್ಲ. ನನ್ನಮೇಲೆ ಕೋಪವೆ? ಹಾಗಿದ್ದರೆ ಅದನ್ನು ಕುರಿತು ಏತಕ್ಕೆ ಬರೆಯಕೂಡದು? ನಿನ್ನ ಮೊಕದ್ದಮೆಯು ಹೋಯಿತೆ? ಹೋಗಿದ್ದರೆ ಏತಕ್ಕೆ ಬರೆಯಲಿಲ್ಲ. ಅದು ಹೇಳಲಿಷ್ಟವಿಲ್ಲದಿದ್ದರೆ ದೇಹದಲ್ಲಿ ಆರೋಗ್ಯವಾಗಿದೆಯೋ ಇಲ್ಲವೆ? ಎಂದು ಮುಂತಾಗಿ ಬರೆದಿದ್ದನು.

ಇದಕ್ಕೆ ಉತ್ತರವಾಗಿ ನಾಗೇಂದ್ರನು ನನ್ನಮೇಲೆ ಕೋಪವನ್ನು

ಮಾಡಬೇಡ, ನಾನು ಅಧಃಪಾತಾಳಕ್ಕೆ ಹೋಗುತಲಿದ್ದೇನೆಂದು ಬರೆದನು.

ಹರದೇವನು ಬಹಳ ವಿಜ್ಞನು, ಕಾಗದವನ್ನೋದಿ ಇದಕ್ಕೇನು ಅರ್ಥವಿರಬಹುದೆಂದು ಯೋಚಿಸುತ್ತ, ಚಿಂತೆಯೋ, ಬಂಧುವಿಚ್ಛೇದವೋ, ಪ್ರೇಮವೋ, ಇಲ್ಲದಿದ್ದರೆ ದೇವೇಂದ್ರದತ್ತನ ಅವತಾರವೇ ಆಗಿದೆಯೋ, ಯಾವದೂ ಗೊತ್ತಾಗುವದಿಲ್ಲವೆಂದಂದುಕೊಂಡನು.

ಸೂರ್ಯಮುಖಿಯು ಕಮಲಮಣಿಗೆ ಮತ್ತೊಂದು ಕಾಗದವನ್ನು ಬರೆದಿದ್ದಳು. ಅದರಲ್ಲಿ ಕೊನೆಗೆ ನೀನು ಬಂದುಸಲ ಬಂದುಹೋಗು, ಕಮಲಮಣಿ! ನಿನ್ನನ್ನು ಹೊರ್ತು ನನಗೆ ಯಾರೂ ಸ್ನೇಹಿತರು ಇಲ್ಲ. ಹೇಗಾದರೂಮಾಡಿ ಬಂದುತಡವೆ ಬಂದುಹೋಗಬೇಕೆಂದು ಬರೆದಿತ್ತು.

---

## ಹದಿಮೂರನೆಯ ಪರಿಚ್ಛೇದ.

### ಮಹಾಸಮರ.

ಕಮಲಮಣಿಯು ಸೂರ್ಯಮುಖಿಯ ಕಾಗದಬಂದಕೂಡಲೇ ಬಹಳ ಚಂಚಲಳಾದಳು. ಗಂಡನಹತ್ತಿರ ಹೋದಳು. ಅವಳು ರಮಣೀರತ್ನಳಾಗಿದ್ದಳು.

ಶ್ರೀಶಚಂದ್ರನು ಕೋಠಡಿಯ ಒಳಗೆ ಕೂತುಕೊಂಡು ಆಫೀಸಿನ ಜಮಾಖರ್ಚಿನ ಬುಕ್ಕುಗಳನ್ನು ನೋಡುತಲಿದ್ದನು. ಅವನ ಪಾರ್ಶ್ವದಲ್ಲಿ ತಿವಾಸಿಯಮೇಲೆ ಬಂದು ವರುಷದ ಸತೀಶನೆಂಬ ಅವನ ಮಗನು ಬಂದು ಇಂಗ್ಲೀಷ ನ್ಯೂಸಪೇಪರನ್ನು ತೆಗೆದುಕೊಂಡು, ಮೊದಲು ಅದನ್ನು ಭಕ್ಷಣೆ ಮಾಡಲು ಯತ್ನಿಸಿ ಅದರಲ್ಲಿ ಕೃತಕಾರ್ಯನಾಗದೆ ಪ್ರಕೃತದಲ್ಲಿ ಅದನ್ನು ಹಾಸಿ ಅದರಮೇಲೆ ಕೂತುಕೊಂಡಿದ್ದನು.

ಕಮಲಮಣಿಯು ಗಂಡನ ಸಮೀಪಕ್ಕೆಬಂದು ಸೆರಗು ಸರಿಮಾಡಿ

ಕೊಂಡು ಭೂಮಿಷ್ಠಳಾಗಿ ಸಾಷ್ಟಾಂಗನಮಸ್ಕಾರವನ್ನು ಮಾಡಿ ಎದ್ದು ಕೈಮುಗಿದುಕೊಂಡು ಮಹಾರಾಜರಿಗೆ ನಮಸ್ಕಾರಬರುತ್ತದೆಂದು ಹೇಳಿದಳು. (ಇದಕ್ಕೆ ಮೊದಲು ಬಂದುದಿನ ನಾಟಕವನ್ನು ನೋಡುವುದಕ್ಕೆ ಹೋಗಿದ್ದಳು).

ಶ್ರೀಶಚಂದ್ರನು ನಕ್ಕು ಕುಂಬಳಕಾಯಿ ಕಳವಾಯಿತೇನೆಂದನು.

ಕಮಲ–ಕುಂಬಳಕಾಯಿ ಅಲ್ಲ. ಈ ಸಲ ಭಾರೀಪದಾರ್ಥವು ಹೋಯಿತು.

ಶ್ರೀಶ–ಎಲ್ಲಿ ? ಏನು ಕಳವಾಯಿತು ?

ಕಮಲ–ಗೋವಿಂದಪುರದಲ್ಲಿ ಕಳವಾಗಿದೆ. ನಮ್ಮ ಅಣ್ಣಂದಿರ ಸುವರ್ಣದ ಸಂಪುಟದಲ್ಲಿದ್ದ ಕವಡೆಯೊಂದು ಕಳವಾಗಿ ಹೋಯಿತು.

ಶ್ರೀಶ–ಅರ್ಥವಾಗುವುದಿಲ್ಲ. ನಿಮ್ಮ ಅಣ್ಣಂದಿರ ಸುವರ್ಣಸಂಪುಟವೆಂದರೆ ಸೂರ್ಯಮುಖಿಯಾದಳು. ಕವಡೆಯೆಂದರೆ ಯಾವದು ?

ಕಮಲ–ಸೂರ್ಯಮುಖಿಯ ಬುದ್ಧಿ.

ಶ್ರೀಶ–ಆದಕಾರಣವೇ ಜನರು ಕವಡೆಯಿಂದ ಆಡುವುದು. ಸೂರ್ಯಮುಖಿಯು ಈ ಕವಡೆಯಿಂದಲೇ ಆಡಿ ನಿಮ್ಮ ಅಣ್ಣನನ್ನ ಸೋಲಿಸಿ ಬೆಲೆಗೆ ತೆಗೆದುಕೊಂಡಿದ್ದಾಳೆ. ನಿನಗೆ ಇಷ್ಟು ದೊಡ್ಡದಾದ ಬುದ್ಧಿಯಿದ್ದರೂ–

ಮಾತು ಪೂರೈಸುವದರೊಳಗಾಗಿ ಕಮಲಮಣಿಯು ಶ್ರೀಶಚಂದ್ರನ ಕಂಠವನ್ನು ಆಲಿಂಗನೆಮಾಡಿ ಬಿಟ್ಟಮೇಲೆ ಶ್ರೀಶಚಂದ್ರನು ಆ ಕವಡೆಯನ್ನು ಕಳವು ಮಾಡಿದವರು ಯಾರು ? ಎಂದು ಕೇಳಿದನು.

ಕಮಲಮಣಿ–ಅದು ಗೊತ್ತಿಲ್ಲ. ಆದರೆ ಅವಳ ಕಾಗದವನ್ನು ಓದಿದರೆ ಕವಡೆಯೇನೋ ಹೋದಹಾಗೆ ಕಾಣುತ್ತದೆ. ಇಲ್ಲದಿದ್ದರೆ ಇಂತಹ ಕಾಗದವನ್ನು ಯಾವ ಹೆಂಗಸುತಾನೇ ಬರೆಯುತಲಿದ್ದಳು ?

ಶ್ರೀಶ–ಕಾಗದವನ್ನು ನಾನು ನೋಡಬಹುದೆ ?

ಕಮಲಳು ಕಾಗದವನ್ನು ಗಂಡನಕೈಲಿ ಕೊಟ್ಟು, ಓದಬಹುದು.

ಸೂರ್ಯಮುಖಿಯು ಇದನ್ನೆಲ್ಲ ತಮಗೆ ಹೇಳಕೂಡದೆಂದು ಬರೆದು ಇದ್ದಾಳೆ. ಆದರೆ ತಮಗೆ ಹೇಳದಿದ್ದರೆ ನನ್ನ ಪ್ರಾಣವು ತುಡುಗುತ್ತದೆ. ನೀವು ಓದದಿದ್ದರೆ ನನಗೆ ಊಟ ಬೇಕಾಗುವುದಿಲ್ಲ, ನಿದ್ರೆ ಹತ್ತುವುದಿಲ್ಲ. ನನ್ನ ಬುದ್ಧಿಯೇ ಸರಿಯಾಗಿರುವುದಿಲ್ಲವೆಂದಳು.

ಶ್ರೀಶಚಂದ್ರನು ಕಾಗದವನ್ನು ಕೈಲಿ ಹಿಡಿದುಕೊಂಡು ನಿನಗೆ ಹಾಗೆ ತೋರಿಸಕೂಡದೆಂದು ನಿಷೇಧಿಸಿದ್ದರೆ ನಾನು ಅದನ್ನೋದುವುದಿಲ್ಲ. ಸಮಾಚಾರವನ್ನು ಹೇಳ ಬೇಕಾದ್ದೇನೋ ಅಷ್ಟು ಹೇಳೆಂದನು.

ಕಮಲ—ಆಗತಕ್ಕದ್ದೇನೆಂದರೆ;—ಸೂರ್ಯಮುಖಿಯ ಬುದ್ಧಿ ಯೇನೋ ಹೋಗಿಬಿಟ್ಟದೆ. ಅದನ್ನು ಬರುವಹಾಗೆ ಮಾಡಬೇಕು. ಅವಳಿಗೆ ಬುದ್ಧಿವಾದವನ್ನು ಹೇಳುವವರು ಯಾರಿದ್ದಾರೆ? ಸ್ವಲ್ಪ ಬುದ್ಧಿವಂತನೆನ್ನಿಸಿಕೊಂಡಿರುವವನು ನಮ್ಮ ಸತೀಶಬಾಬು. ಸತೀಶಬಾಬುವು ಬಂದುತಡವೆ ಗೋವಿಂದಪುರಕ್ಕೆ ಬಂದು ಹೋಗಬೇಕೆಂದು ಅವನ ಸೋದರತ್ತೆಯು ಬರೆದಿದ್ದಾಳೆ.

ಸತೀಶಬಾಬು ಆಗತಾನೇ ಬಂದು ಪುಷ್ಪಾಧಾರಪಾತ್ರವನ್ನು ಪುಷ್ಪಸಮೇತವಾಗಿ ಉರುಡಿಸಿ, ಮಸೀದೌತಿಯಮೇಲೆ ಕಣ್ಣುಹಾಕಿದ್ದನು. ಇದನ್ನು ನೋಡಿ ಶ್ರೀಶಚಂದ್ರನು, ಸರಿ; ಇವನೀಗ ಬುದ್ಧಿಪ್ರದಾತನು. ಅದು ಹೇಗಾದರೂ ಆಗಲಿ; ಈಗ ಗೊತ್ತಾದ್ದೇನೆಂದರೆ :—ಅಣ್ಣನ ಹೆಂಡತಿಯಿಂದ ನಾದನಿಗೆ ಬರಬೇಕೆಂದು ಔತಣದ ಕಾಗದವು ಬಂದಿದೆ ಎಂದು ಕಾಣುತ್ತದೆ. ಕಪಡೆಕಳವಾಗಿದ್ದರೆ ಹೀಗೆ ಪತ್ರಕ್ಕೆ ಬರೆಯುತ್ತಿದ್ದಳು.

ಕಮಲ—ಕೇವಲ ಸತೀಶನಿಗೆಮಾತ್ರವೇ ಔತಣವಲ್ಲ. ತಮಗೂ ನನಿಗೂ ಎಲ್ಲರಿಗೂ ಬಂದಿದೆ.

ಶ್ರೀಶ—ನನಗೇತಕ್ಕೆ ಔತಣ?

ಕಮಲ—ನಾನೊಬ್ಬಳೇ ಹೋಗುವುದಕ್ಕಾದೀತೆ? ಸಾಮಾನುಗಳನ್ನೆಲ್ಲ ನೋಡಿಕೊಳ್ಳುವವರು ಯಾರು?

ಶ್ರೀಶ—ಸೂರ್ಯಮುಖಿಯು ಮನೆ ಅಳಿಯಂದಿರನ್ನು ಸಾಮಾನುಗಳನ್ನು ನೋಡಿಕೊಳ್ಳುವವರ್ಪಿಗೆ ಬರಬೇಕೆಂದು ಬರೆದಿದ್ದರೆ ಬಹಳ ಅನ್ಯಾಯ. ಆ ಕೆಲಸಕ್ಕೆ ಬೇಕಾದರೆ ಎರಡು ದಿನಗಳ ಮಟ್ಟಿಗೆ ಬೇರೆ ಅಳಿಯಂದಿರನ್ನು ಸಂಪಾದಿಸಿಕೊಡುತ್ತೇನೆ.

ಕಮಲಮಣಿಯು ಬಹಳ ಕೋಪಗೊಂಡು ಹುಬ್ಬು ಗಂಟುಹಾಕಿಕೊಂಡು ಗದರಿಸಿಕೊಂಡು ಶ್ರೀಶಚಂದ್ರನು ಬರೆಯುತಲಿದ್ದ ಕಾಗದವನ್ನು ಕಿತ್ತುಕೊಂಡಳು. ಆಗ ಶ್ರೀಶನು ನಕ್ಕು, ಅದೀಗ ಸರಿಯಾದ ಕೆಲಸವೆಂದನು.

ಕಮಲಮಣಿಯು ಕೃತ್ರಿಮಕೋಪದಿಂದ ನಾನು ಮಾಡುವುದು ಹಾಗೆಯೇಸರಿ ಎಂದಳು.

ಶ್ರೀಶಚಂದ್ರನು ಕೃತ್ರಿಮಕೋಪದಿಂದ ನಾನು ಹೇಳುವುದು ಹಾಗೆಯೇಸರಿ ಎಂದನು.

ಅನಂತರ ಪರಸ್ಪರ ಸ್ವಲ್ಪ ಪ್ರೇಮಕಲಹವು ನಡೆಯಿತು. ಶ್ರೀಶನು ಕಮಲಮಣಿಯ ತಲೆಯ ತುರುಬಿನ ಗಂಟನ್ನು ಬಿಚ್ಚಿಬಿಟ್ಟನು. ಅವಳು ಅವನ ದೌತಿಯಲ್ಲಿದ್ದ ಮಸಿಯನ್ನು ಪೀಕುದಾನಿಯ ಮೇಲೆ ಉರುಡಿಸಿದಳು. ಕೋಪಗೊಂಡಿದ್ದ ಶ್ರೀಶಚಂದ್ರನು ಓಡಿಹೋಗಿ ಅವಳ ಮುಖವನ್ನು ಚುಂಬನ ಮಾಡಿದನು. ಕಮಲಮಣಿ ಹೆಚ್ಚು ಕೋಪಗೊಂಡು ಮುಯ್ಯಿಗೆ ಮುಯ್ಯಿ ಮಾಡಿ ತೀರಿಸಿಕೊಂಡಳು.

ಇದನ್ನು ನೋಡಿ ಸತೀಶಚಂದ್ರನಿಗೆ ಬಹಳ ಸಂತೋಷವಾಯಿತು. ಅವನು ಚುಂಬನವು ತನ್ನ ಏಕಾಧಿಪತ್ಯಕ್ಕೆ ಸೇರಿದ್ದೆಂದು ತಿಳಿದಿದ್ದನಾದಕಾರಣ ಅದು ಹೀಗೆ ಕಂಡಾಬಟ್ಟೆ ಖರ್ಚಾಗುವುದನ್ನು ಕಂಡು ತನ್ನ ರಾಜಭಾಗವನ್ನು ಭದ್ರಪಡಿಸುವುದಕ್ಕೋಸ್ಕರವಾಗಿ ತಾಯಿಯ ಮೊಳಕಾಲನ್ನು ಹಿಡಿದುಕೊಂಡು ಎದ್ದು ನಿಂತು ಇಬ್ಬರ ಮುಖವನ್ನು ನೋಡಿ ಲಹರಿ

ಯಾದ ನಗುವನ್ನೆತ್ತಿದನು. ಆ ನಗುವು ಕಮಲಮಣಿಯ ಕಿವಿಯಲ್ಲಿ ಎಷ್ಟು ಮಧುರವಾಗಿ ಕೇಳಿಸಿತೋ ಮಕ್ಕಳನ್ನು ಪಡೆದ ಹೆಂಗಸರಿಗೆಮಾತ್ರ ಗೋಚರ. ಕಮಲಮಣಿಯು ಸತೀಶನನ್ನು ಕಂಕುಳಲ್ಲಿ ಎತ್ತಿಕೊಂಡು ಲೆಕ್ಕವಿಲ್ಲದಷ್ಟು ತಡವೆ ಮುಖಚುಂಬನವನ್ನು ಮಾಡಿದಳು. ಅನಂತರ ಶ್ರೀಶಚಂದ್ರನು ಅವಳ ಕಂಕುಳಿಂದ ಮಗುವನ್ನು ಕರೆದುಕೊಂಡು ಅದೇರೀತಿಯಾಗಿ ಮುದ್ದಿಟ್ಟುಕೊಂಡನು. ಸತೀಶಬಾಬುವು ತನ್ನ ರಾಜಭಾಗವನ್ನು ತೆಗೆದುಕೊಂಡು ಯಥಾಕಾಲದಲ್ಲಿ ಇಳಿದುಬಂದು ತಂದೆಯ ಭಂಗಾರದ ಪೆನ್ಸಿಲನ್ನು ನೋಡಿ ಓಡಿಹೋಗಿ ಅದನ್ನು ತೆಗೆದುಕೊಂಡು ಉಪಾದೇಯವಾದ ಭೋಜ್ಯಪದಾರ್ಥವೆಂದು ತಿಳಿದು ಬಾಯಿಯಲ್ಲಿಟ್ಟುಕೊಂಡನು.

ಕುರುಕ್ಷೇತ್ರದ ಯುದ್ಧಕಾಲದಲ್ಲಿ ಭಗದತ್ತನಿಗೂ ಅರ್ಜುನನಿಗೂ ಯುದ್ಧವಾದಾಗ ಭಗದತ್ತನು ಅರ್ಜುನನ ಮೇಲೆ ನಿವಾರ್ಯವಾಗದ ಮಹಾವೈಷ್ಣವಾಸ್ತ್ರವನ್ನು ಬಿಟ್ಟನು. ಶ್ರೀಕೃಷ್ಣನು ಅರ್ಜುನನಿಗೆ ಆ ಅಸ್ತ್ರವನ್ನು ನಿವಾರಣೆ ಮಾಡುವುದಕ್ಕೆ ಅಸಾಧ್ಯವೆಂದು ತಿಳಿದು ಅದಕ್ಕೆ ಇದುರಾಗಿ ತಾನೇ ನಿಂತು ಅದರ ವೇಗವನ್ನು ಶಮನ ಮಾಡಿಬಿಟ್ಟನು. ಹಾಗೆಯೇ ಕಮಲಮಣಿಗೂ ಶ್ರೀಶಚಂದ್ರನಿಗೂ ನಡೆದ ಈ ಮಹಾಸಮರದಲ್ಲಿ ಪರಸ್ಪರ ಎಸದಾಡಿದ ಮಹಾಸ್ತ್ರಗಳನ್ನೆಲ್ಲ ಸತೀಶನು ತನ್ನ ವದನಮಂಡಲದಲ್ಲಿ ಗ್ರಹಣಮಾಡಿ ಯುದ್ಧವನ್ನು ಶಾಂತಿ ಮಾಡಿದನು. ಆದರೆ ಅವರವರ ಸಂಧಿವಿಗ್ರಹಳು ಮಳೆಗಾಲದ ಮಳೆಯಹಾಗೆ ಆಗಿಂದಾಗ ನಡೆಯುತ್ತ ನಿಲ್ಲುತಲಿದ್ದವು.

ಶ್ರೀಶ—ಹಾಗಾದರೆ ನೀನು ಗೋವಿಂದಪುರಕ್ಕೆ ಹೋಗುವುದೇ ನಿಶ್ಚಯವಷ್ಟೆ? ನಾನು ಒಬ್ಬನೇ ಇಲ್ಲಿ ಹೇಗಿರಲಿ?

ಕಮಲ—ನಾನೊಬ್ಬಳೇ ಹೋದೇನೆ? ನಾನೂ ಹೋಗುತ್ತೇನೆ. ನೀವೂ ಹೊರಡಬೇಕು. ನಾಳೆ ಬೇಗನೆ ಎದ್ದು ಆಫೀಸಿಗೆ ಹೋಗಿ ಜಾಗ್ರತೆಯಾಗಿ

ಹಿಂದಿರುಗಿ ಬಂದು ಹೊರಡುವುದಕ್ಕೆ ಸಿದ್ಧವಾಗಬೇಕು. ಇಲ್ಲದಿದ್ದರೆ ನಾನೊಂದುಕಡೆ, ಸತೀಶ ಒಂದುಕಡೆ ಅಳುವುದಕ್ಕೆ ಪ್ರಾರಂಭಿಸುವೆವು.

ಶ್ರೀಶ—ನಾನು ಈಗ ಬರುವುದಕ್ಕೆ ಹೇಗಾಗುತ್ತದೆ? ನಮ್ಮ ಕಂಪನಿಗೆ ಜಿನಸಿಯನ್ನು ತೆಗಿಯುವಕಾಲ. ನೀನೊಬ್ಬಳೇ ಹೋಗು.

ಕಮಲ-ಬಾರೊ, ಸತೀಶ! ನಾವು ಹೋಗಿ ಎರಡುಕಡೆಯಲ್ಲಿ ಕೂತುಕೊಂಡು ಅಳೋಣ.

ಸತೀಶನು ತಾಯಿಯು ಆದರದಿಂದ ಕರೆಯುತಲೇ ಪೆನಸಿಲಿನ ಆಹಾರವನ್ನು ಬಿಟ್ಟು ನಗುನಗುತ ಬಂದನಾದುದರಿಂದ ಕಮಲಮಣಿಯು ಅಳುವುದಕ್ಕಾಗದೆ ಸತೀಶನನ್ನು ಮುದ್ದಿಟ್ಟುಕೊಂಡಳು. ತಂದೆಯೂ ಸಂತೋಷಪಟ್ಟು ಮುದ್ದಿಟ್ಟುಕೊಂಡನು. ಈ ದೊಡ್ಡ ಕೆಲಸವಾದಮೇಲೆ ಕಮಲಮಣಿಯು ಏನು ಅಪ್ಪಣೆಯಾಗುತ್ತದೆಂದು ಕೇಳಿದಳು.

ಶ್ರೀಶ—ನೀನು ಹೋಗು, ಅಡ್ಡಿಮಾಡುವುದಿಲ್ಲ. ಈಗ ಸುಗ್ಗಿಕಾಲ. ನಾನು ಬರುವುದಕ್ಕಾಗುವುದಿಲ್ಲ.

ಕೇಳಿ ಕಮಲಮಣಿಯು ಮುನಿದು ಮುಖವನ್ನು ತಿರುಗಿಸಿಕೊಂಡು ಮೌನವಾಗಿ ಕುಳಿತುಕೊಂಡಳು. ಪುನಃ ಮಾತನಾಡಲಿಲ್ಲ.

ಶ್ರೀಶಚಂದ್ರನು ಹಿಂದಲಿಂದ ಹೋಗಿ ಪೇನಾದಲ್ಲಿದ್ದ ಮಸಿಯಿಂದ ಕಮಲಳ ಕೆನ್ನೆಯಮೇಲೆ ಒಂದುಬಟ್ಟು ಇಟ್ಟನು.

ಆಗ ಕಮಲಳು, ಪ್ರಾಣಾಧಿಕ! ಎಂದು ಹೇಳಿ ಕುತ್ತಿಗೆಮೇಲೆ ಬಾಹುವನ್ನು ಹಾಕಿ ಆಲಿಂಗನೆಮಾಡಿಕೊಂಡು ಮುಖಚುಂಬನವನ್ನು ಮಾಡಿದ್ದರಮೇಲೆ ಅವಳ ಕೆನ್ನೆಮೇಲಿದ್ದ ಬಟ್ಟು ಶ್ರೀಶನ ಕೆನ್ನೆಮೇಲೂ ಗುರುತಾಯಿತು.

ಈರೀತಿಯಾಗಿ ಯುದ್ಧದಲ್ಲಿ ಒಂದುತಡವೆ ಜಯವನ್ನು ಹೊಂದಿ ಕಮಲಳು, ನೀವು ಬರುವುದಕ್ಕೆ ಶುದ್ಧವಾಗಿ ಆಗದೆಹೋದರೆ ನಾನು ಹೋಗಿ ಬರು

ಪುನಕ್ಕಾದರೂ ಅನುಕೂಲಪಡಿಸಿಕೊಟ್ಟರೆ ವಾಸಿ ಎಂದಳು.

ಶ್ರೀಶ—ಪುನಃ ಬರುವುದು ಯಾವಾಗ?

ಕಮಲ—ಕೇಳುವುದೇತಕ್ಕೆ? ನೀವು ಬರದಿದ್ದರೆ ನಾನೊಬ್ಬಳೇ ಅಲ್ಲಿ ಎಷ್ಟುದಿನವಿದ್ದೇನು?

ಶ್ರೀಶಚಂದ್ರನು ಕಮಲಮಣಿಯನ್ನು ಗೋವಿಂದಪುರಕ್ಕೆ ಕಳುಹಿಸಿ ಕೊಟ್ಟನು.

ನನಗೆ ತಲ್ಪಿರುವ ನಿಜವಾದ ಸಮಾಚಾರದಿಂದ, ಆಸಲ ಸುಗ್ಗಿಕಾಲ ದಲ್ಲಿ ಶ್ರೀಶಚಂದ್ರನು ಜಿನಸಿತೆಗದುದುರಲ್ಲಿ ಹೌಸನವರಿಗೆ ಬಹಳ ನಷ್ಟವಾ ಯಿತೆಂತಲೂ, ಹೆಂಡತಿಯನ್ನು ಗೋವಿಂದಪುರಕ್ಕೆ ಕಳುಹಿಸಿಕೊಟ್ಟಮೇಲೆ ಅವನು ಮನಸ್ಸು ಇಟ್ಟು ಕೆಲಸವನ್ನು ಮಾಡಲಿಲ್ಲವೆಂತಲೂ ಅದರಿಂದಲೇ ನಷ್ಟವಾಯಿತೆಂತಲೂ ತಿಳಿಯಬಂತು. ಹೌಸನ ಬೇರೇನವಕರರು ಹೇಳಿ ದ್ದರಲ್ಲಿ ಅವನು ಮನೆಯಲ್ಲಿಯೇ ಕೂತುಕೊಂಡು ಕವಡೆ ಆಡುತಿದ್ದನೆಂತಲೂ ತಿಳಿಯಬಂತು. ಇದು ಗತ್ಯಾಗತ್ಯ ಶ್ರೀಶಚಂದ್ರನಿಗೆ ತಿಳಿಯಿತು. ಅವನು ಈಸಲ ಲಕ್ಷ್ಮೀಕಟಾಕ್ಷಕಡಮೆಯಾಯಿತು ; ಏನುಮಾಡುವುದೆಂದು ಹೇಳಿ ಬಿಟ್ಟು ಸುಮ್ಮನಿದ್ದನು. ಈ ಮಾತನ್ನು ಕೇಳಿದವರು ಅದು ಶುದ್ಧಸುಳ್ಳು, ಹೆಂಡತಿಕಟಾಕ್ಷ ಸಾಲದೆಹೋಯಿತು, ಇವನು ಸ್ತ್ರೈಣನು, ಹೆಣ್ಣಿನ ಹೋ ರಾಟ ಸಾಲದೆ ಹೆಂಬೇಡಿಯಾಗಿ ಮನೆಯಲ್ಲಿಯೇ ಕೂತು ಕಂಪನಿಯವರಿಗೆ ನಷ್ಟವಾಯಿತೆಂದು ಅವನ ಬೆನ್ನಿನಹಿಂದೆ ಆವನ ಕಿವಿಗೆ ಬೀಳುವಹಾಗೆ ಹೇಳಿ ಕೊಂಡು ಹಾಸ್ಯಮಾಡಿದರು. ಇದನ್ನು ಕೇಳಿ ಶ್ರೀಶನು ಹೃಷ್ಟಚಿತ್ತನಾಗಿ ಆಮಾತು ಹೇಳಿದವರಿಗೆ ಔತಣಮಾಡಿಸಲು ಅಡಿಗೆಯವರಿಗೆ ಔತಣಕ್ಕೆ ಸರಿ ಯಾದ ಅಡಿಗೆಮಾಡಲು ಅಪ್ಪಣೆಯನ್ನುಮಾಡಿದನು.

## ಹದಿನಾಲ್ಕನೆಯ ಪರಿಚ್ಛೇದ.

### ಸಿಕ್ಕಿಬಿದ್ದಳು.

ಕಮಲಳು ಗೋವಿಂದಪುರಕ್ಕೆ ಬಂದುದು—ನಾಗೇಂದ್ರನ ಮನೆಯಲ್ಲಿ ಒಂದು ಪುಷ್ಪವು ಅಂಧಕಾರದಲ್ಲಿ ವಿಕಸಿತವಾದ ಹಾಗಾಯಿತು. ಕಮಲಮಣಿಯ ನಗುಮುಖವನ್ನು ನೋಡಿ ಸೂರ್ಯಮುಖಿಯು ಕಣ್ಣೀರನ್ನು ಒಣಗಿಸಿದಳು. ಕಮಲಳು ಬರುತ್ತಲೇ ಸೂರ್ಯಮುಖಿಗೆ ಹೆರಳುಹಾಕಲು ಕೂತಳು. ಅವಳು ತಲೆಯನ್ನು ಬಹಳ ದಿವಸದಿಂದ ಬಾಚಿಕೊಂಡಿರಲಿಲ್ಲ. ಕಮಲಳು ಎರಡುಹೂವು ಮುಡಿಸಲೆ ಎಂದಳು. ಸೂರ್ಯಮುಖಿಯು ಬೇಡವೆಂದು ಆಕ್ಷೇಪಮಾಡಿದಳು. ಆದರೂ ಕಮಲಳು ಎರಡುಹೂ ಮುಚ್ಚಿಟ್ಟುಕೊಂಡಿದ್ದು ಕಡೆಗೆ ಮುಡಿಸಿದಳು. ಬಂದವರು ನೋಡಿ, ಇದೇನೆ? ಇಷ್ಟು ದೊಡ್ಡವಳು ಹುಡುಗರಹಾಗೆ ಹೆರಳನ್ನೆತ್ತಿ ಕಟ್ಟಿಕೊಂಡು ಅಲಂಕಾರಮಾಡಿಕೊಂಡಿದ್ದಾಳೆಂದಂದುಕೊಂಡರು.

ಆ ಕಾಂತಿಮಯಿಯಾದ ಸೂರ್ಯಮುಖಿಯ ಕಾಂತಿಯು ನಾಗೇಂದ್ರನ ಮುಖಮಂಡಲವನ್ನು ಮರೆಮಾಡಿದ್ದ ಮೇಘವನ್ನು ಹೋಗಲಾಡಿಸಲಿಲ್ಲ. ಕಮಲಮಣಿಯು ನಾಗೇಂದ್ರನನ್ನು ಕಾಣುತ್ತಲೇ ನಮಸ್ಕಾರವನ್ನು ಮಾಡಿದಳು. ನಾಗೇಂದ್ರನು, ಇದೇನು, ಕಮಲೆ! ಯಾವಾಗ ಬಂದದ್ದು ? ಎಂದು ಕೇಳಿದನು. ಕಮಲೆಯು ಕೇವಲ ಮರ್ಯಾದೆಯೊಡನೆ ತಲೆಬಗ್ಗಿಸಿಕೊಂಡು ಹುಡುಗ ಕರೆದುಕೊಂಡು ಬಂದನು ಎಂದಳು. ನಾಗೇಂದ್ರನು, ಅಪ್ಪೋಟನೆ? ಕರೆತಂದುದು! ಅವನೆಲ್ಲಿ? ಬಾರೊ, ತಾಯಿಯ ತಾರೆಗೆಯಾಳ್ಮ! ಎಂದು ಹೇಳಿ ಮಗುವನ್ನು ಕರೆದುಕೊಂಡು ಮುದ್ದಿಟ್ಟುಕೊಂಡನು. ಹುಡುಗನು ಕೃತಜ್ಞತೆಯಿಂದ ನಾಗೇಂದ್ರನ ಮುಖದಲ್ಲಿ ಜಲ್ಲುಸುರಿಸಿ ಮೀಸೆಯನ್ನು ಹಿಡಿದೆಳೆದನು.

ಕಮಲಳು ಕುಂದನಂದಿನಿಯನ್ನು ಪರಿಹಾಸ್ಯಮಾಡುತ್ತ ಎಲೆ! ಕುಂದಿ, ನಂದಿ, ದುಂದಿ! ಚನ್ನಾಗಿದ್ದೀಯಾ? ಎಂದು ಕೇಳಿದಳು.

ಕುಂದನಂದಿನಿಯು ಅವಾಕ್ಕಾಗಿ ಹಾಗೆಯೇ ಸ್ವಲ್ಪಹೊತ್ತು ಯೋಚಿಸಿ, ಅನಂತರ, ಇದ್ದೇನೆ ಎಂದಳು.

ಕಮಲಮಣಿಯು ಏದೇನೆ! ಇದ್ದೇನೆಂದು ಮಾತ್ರ ಹೇಳಿದೆ? ಅಕ್ಕ ಎಂದು ಹೇಳಕೂಡದೆ? ಎಂದಳು. ಇನ್ನುಮೇಲೆ ನನ್ನನ್ನು ಅಕ್ಕ ಎಂದು ಕರೆಯಬೇಕು; ಇಲ್ಲದಿದ್ದರೆ ನಿನ್ನ ತಲೆಗೆ ಬೆಂಕಿಯನ್ನು ಹಚ್ಚುತ್ತೇನೆ; ಅದಿಲ್ಲದಿದ್ದರೆ ನಿನ್ನಮೇಲೆ ಜಿರ್ಲೆತಂದುಬಿಡುತ್ತೇನೆಂದಳು.

ಕುಂದನಂದಿನಿಯು ಹಾಗೆ ಮಾಡು, ಅಕ್ಕ, ಎಂದು ಹೇಳಿ ತದಾರಭ್ಯದಿಂದ ಅವಳನ್ನು ಅಕ್ಕ ಎಂದು ಕರೆಯಲಾರಂಭಿಸಿದಳು.

ಕುಂದಿಯು ಕಲ್ಕತ್ತೆಯಲ್ಲಿ ಕಮಲಮಣಿಯ ಜತೆಯಲ್ಲಿದ್ದಾಗ ಅವಳನ್ನು ಯಾವ ರೀತಿಯಾಗಿಯೂ ಸಂಬೋಧಿಸುತ್ತಿರಲಿಲ್ಲ. ಅವಳ ಸಂಗಡ ಹೆಚ್ಚುಮಾತೇ ಆಡುತ್ತಿರಲಿಲ್ಲ. ಆದರೂ ಕಮಲಳು ಮೊದಲಿನಿಂದಲೂ ಪ್ರೇಮಮಯಿಯಾದುದರಿಂದ ಕುಂದನಂದಿನಿಗೆ ಅವಳಲ್ಲಿ ವಿಶ್ವಾಸವಿತ್ತು. ಈಚೆಗೆ ಕೆಲವರುಷಗಳು ಬಳಿಕೆ ಕಡಿಮೆಯಾಗಿತ್ತು. ಆದರೆ ಸ್ವಲ್ಪದರಲ್ಲಿಯೇ ಅವರವರ ಸ್ವಭಾವಸಿದ್ಧವಾದ ಗುಣಗಳಿಂದ ಉಭಯತ್ರರಿಗೂ ಪರಸ್ಪರ ಇದ್ದ ಪೂರ್ವವಿಶ್ವಾಸವು ವೃದ್ಧಿಯಾಗಿ ಅವರವರಿಗೆ ಸ್ನೇಹವು ಹೆಚ್ಚಾಯಿತು ಆದರೆ ಸ್ವಲ್ಪ ಕಾಲವಾದನಂತರ ತನ್ನ ಮನೆಗೆ ಹೊರಟುಹೋಗಬೇಕೆಂದು ಹೇಳಿದಳು. ಸೂರ್ಯಮುಖಿಯು ಈಗಲೇ ಹೋಗಬೇಡ, ಇನ್ನೆರಡು ದಿನವಿದ್ದು ಹೋಗು, ನೀನು ಹೊರಟುಹೋದರೆ ನಾನು ಭೂಮಿಯಮೇಲೆ ಇರುವುದೇ ಕಷ್ಟವಾಗುತ್ತದೆ; ನಿನ್ನಸಂಗಡ ಮಾತನಾಡುತಲಿದ್ದರೆ ಮನಸ್ಸಿಗೆ ಎಷ್ಟೋ ಹರ್ಷವಾಗುತ್ತದೆ ಎಂದು ಮುಂತಾಗಿ ಹೇಳಿದಳು. ಕಮಲಳು, ಹಾಗಾದರೆ ನಿನ್ನ ಕೆಲಸವನ್ನೆಲ್ಲ ಸರಿಮಾಡಿ ಇಟ್ಟಲ್ಲದೆ ನಾನು ಹೋಗುವುದಿಲ್ಲ

ವೆಂದು ಹೇಳಿದಳು. ಸೂರ್ಯಮುಖಿಯು ನನ್ನ ಕೆಲಸವೇನಮ್ಮ! ಎಂದಳು. ಕಮಲಳು ಮನಸ್ಸಿನಲ್ಲಿ ನಿನ್ನ ಕಂಟಕನಿವಾರಣೆ ಎಂದಂದುಕೊಂಡು ವ್ಯಕ್ತವಾಗಿ, ನಿನ್ನ ಶ್ರಾದ್ಧವೆಂದು ಹೇಳಿದಳು.

ಕುಂದನಂದಿನಿಯು ಕಮಲಳು ಹೊರಟುಹೋಗುತ್ತಾಳೆಂಬ ಸಮಾಚಾರವನ್ನು ಕೇಳಿ ತನ್ನ ಕೊಠಡಿಗೆ ಹೋಗಿ ಯಾರಿಗೂ ತಿಳಿಯದ ಹಾಗೆ ದುಃಖದಿಂದ ಕಣ್ಣೀರುಬಿಟ್ಟಳು. ಕಮಲಳು ಅವಳಿಗೆ ತಿಳಿಯದ ಹಾಗೆ ಅಲ್ಲಿಗೆ ಹೋಗಿ ನೋಡಲಾಗಿ ಕುಂದನಂದಿನಿಯು ತಲೆದಿಂಬಿನಮೇಲೆ ಮುಖವನ್ನಿಟ್ಟುಕೊಂಡು ಅಳುತ್ತಿದ್ದಳು. ಹಾಗೆಯೇ ಕೂತು ಕುಂದನಂದಿನಿಯು ಹೆರಳನ್ನು ಹಾಕಿದಳು. ಕಂಡವರಿಗೆಲ್ಲ ಹೆರಳುಹಾಕುವುದೊಂದು ಹುಚ್ಚು ಹಿಡಿದಿತ್ತು.

ಕಮಲಳು ಹೆರಳುಹಾಕಿ ಕುಂದಳ ತಲೆಯನ್ನೆತ್ತಿ ತನ್ನ ತೊಡೆಯ ಮೇಲೆ ಇಟ್ಟುಕೊಂಡು ಅವಳ ಕಣ್ಣೀರೊರಸಿ, ಎಲೆ ಕುಂದಿನಿ! ಏತಕ್ಕೆ ಅಳುತ್ತಿ? ಎಂದು ಕೇಳಿದಳು.

ಕುಂದ—ನೀನು ಏತಕ್ಕೆ ಹೊರಟುಹೋಗುತ್ತಿ?

ಕಮಲಮಣಿಯು ಸ್ವಲ್ಪನಕ್ಕು, ಆದರೆ ನೀನೇತಕ್ಕೆ ಅಳಬೇಕೆಂದಳು. ಕಮಲಳು ನಕ್ಕರೂ ಅವಳ ಕಣ್ಣುಗಳಿಂದ ನೀರುಸುರಿದು ಗಂಡಸ್ಥಳವು ತೋಯಿದುಹೋಯಿತು. ಬಿಸಿಲು ಮಳೆ ಎರಡೂ ಬಂದಹಾಗಾಯಿತು.

ಕಮಲ—ನಾನು ಹೋದರೆ ನೀನೇತಕ್ಕೆ ಅಳುತ್ತಿ?

ಕುಂದ—ನೀನು ನನ್ನನ್ನು ಬಹಳ ಪ್ರೀತಿಸುತ್ತಿ.

ಕಮಲ—ಏತಕ್ಕೆ—ಇನ್ಯಾರೂ ಪ್ರೀತಿಸುವುದಿಲ್ಲವೆ?

ಕುಂದಳು ಸುಮ್ಮನಿದ್ದಳು.

ಕಮಲ—ಯಾರೂ ಪ್ರೀತಿಸುವುದಿಲ್ಲವೆ? ಯಜಮಾನಿಯು ಪ್ರೀತಿಸುವುದಿಲ್ಲವೆ? ನನಗೆ ವಂಚಿಸಬೇಡ, ನಿಜವಾಗಿ ಹೇಳು.

—ಕುಂದಳು ಸುಮ್ಮನಿದ್ದಳು.

ಕಮಲ—ನಮ್ಮ ಅಣ್ಣಂದಿರು ಪ್ರೀತಿಸುವುದಿಲ್ಲವೆ?

—ಕುಂದಳು ಮೌನವಾಗಿದ್ದಳು.

ಕಮಲ—ನಾವು ನಾವೇ ಒಬ್ಬರಿಗೊಬ್ಬರು ಪ್ರೀತಿಸುವುದಾದರೆ ನೀನು ನನ್ನ ಸಂಗಡ ಏತಕ್ಕೆ ಹೊರಟು ಬರಕೂಡದು?

—ಕುಂದಳು ಮಾತನಾಡಲಿಲ್ಲ.

ಕಮಲ—ನಾವಿಬ್ಬರೂ ಜತೆಯಲಿ ಹೊರಡೋಣವೆ?

ಕುಂದ—ತಲೆಯನ್ನು ಅಲ್ಲಾಡಿಸುತ್ತ—ಹೋಗಲಾರೆ.

ಇದನ್ನು ಕೇಳಿ ಕಮಲಮಣಿಯ ಪ್ರಫುಲ್ಲವಾದ ಮುಖವು ಗಂಭೀರ ಭಾವವನ್ನು ತಾಳಿತು. ಆಗವಳು ಸ್ನೇಹಪೂರ್ವಕವಾಗಿ ಕುಂದನಂದಿನಿಯ ಮಸ್ತಕವನ್ನು ತನ್ನ ವಕ್ಷಕ್ಕೆ ತಬ್ಬಿಕೊಂಡು ಅವಳ ಗಲ್ಲವನ್ನು ಪಿಡಿದು, ಕುಂದ! ನಿಜವನ್ನು ಹೇಳ್, ಎಂದು ಕೇಳಿದಳು.

ಕುಂದ—ಯಾವದು?

ಕಮಲ—ನಾನು ಕೇಳುವುದನ್ನು ಹೇಳು. ನಾನು ನಿನಗೆ ಅಕ್ಕ. ನನಗೆ ಮುಚ್ಚುಮರೆ ಮಾಡಬೇಡ. ನಾನು ಯಾರಿಗೂ ಹೇಳುವುದಿಲ್ಲ. (ಮನಸ್ಸಿನಲ್ಲಿ, ಹೇಳಿದರೆ ರಾಜಮಂತ್ರಿಯಾದ ಶ್ರೀಶಬಾಬುವಿಗೂ ಮತ್ತು ಮಗುವಿನ ಕಿವಿಯಲ್ಲಿ—ಇವರಿಗೆಮಾತ್ರ ಹೇಳುವೆನೆಂದಂದುಕೊಂಡಳು.)

ಕುಂದ—ಏನು? ಹೇಳು.

ಕಮಲ—ನೀನು ನಮ್ಮ ಅಣ್ಣಂದಿರಲ್ಲಿ ಬಹಳ ಪ್ರೀತಿಯುಳ್ಳವಳಾಗಿರುತ್ತಿಯಲ್ಲವೆ?

ಕುಂದಳು—ಉತ್ತರವನ್ನು ಕೊಡಲಿಲ್ಲ. ಕಮಲಮಣಿಯು ಅವಳ ಮುಖವನ್ನು ತನ್ನ ಹೃದಯದಲ್ಲಿ ಅಪ್ಪಿಕೊಂಡು ಅತ್ತು, ಗೊತ್ತಾಯಿತು. ನೀನು ಸಾಯುತ್ತಿ ಸಾಯಿ. ನೀನು ಸತ್ತರೆ ಚಿಂತೆಯಿಲ್ಲ. ಆದರೆ ನಿನ್ನೊಂದಿಗೆ

ಅನೇಕರು ಸಾಯುತ್ತಾರಲ್ಲ? ಎಂದಳು.

ಕುಂದನಂದಿನಿಯು ತಲೆಯನ್ನೆತ್ತಿ ಕಮಲಮಣಿಯ ಮುಖವನ್ನು ಸ್ಥಿರದೃಷ್ಟಿಯಿಂದ ನೋಡಿದಳು. ಕಮಲೆಯು ಸ್ಥಿರವಾದ ದೃಷ್ಟಿಯಿಂದ ದ್ಯೋತಕವಾದ ಪ್ರಶ್ನೆಯನ್ನರಿತು, ಅಯ್ಯೋ! ನಿರ್ಭಾಗ್ಯಳೆ! ನಿನ್ನ ತಲೆ ನೀನೇ ತಿಂದುಕೊಳ್ಳುತ್ತೀಯಾ? ಗೊತ್ತಾಗಲಿಲ್ಲವೆ? ಎಂದು ಹೇಳಿ ಮುಂದೆ ಮಾತು ಹೊರಡದೆಹೋಯಿತು. ಅಷ್ಟರೊಳಗೆ ಕುಂದಳ ತಲೆಯು ತಿರುಗಿ ಪುನಃ ಕಮಲಮಣಿಯ ವಕ್ಷದಲ್ಲಿ ಬಿದ್ದು, ಅವಳ ಕಣ್ಣೀರಿನಿಂದ ಕಮಲಳ ಹೃದಯವು ತೋಯಿದುಹೋಯಿತು. ಕುಂದಳು ಹಾಗೆಯೇ ಬಹಳಹೊತ್ತು ಮಾತಿಲ್ಲದೆ ಅತ್ತಳು. ಹುಡುಗಿಯಹಾಗೆ ವಿವಶಳಾಗಿ ಬಿಕ್ಕಿಬಿಕ್ಕಿಯಳುತ್ತಿದ್ದಳು. ಅದನ್ನು ನೋಡಿ ಮತ್ತೊಬ್ಬಳೂ ಅತ್ತು ಅವಳ ಕಣ್ಣೀರಿನಿಂದ ಕುಂದಳ ತಲೆಯಲ್ಲಾ ನನೆದುಹೋಯಿತು.

ಪ್ರೀತಿಯನ್ನುವುದು ಎಂತಹದೆಂಬುದನ್ನು ಸುವರ್ಣಮಾಯಿಯಾದ ಕಮಲೆಯು ಚೆನ್ನಾಗಿ ಅರಿತಿದ್ದಳು. ಅಂತಃಕರಣದ ಅಂತಃಕರಣದಲ್ಲಿ ಅವಳು ಕುಂದನಂದಿನಿಯ ದುಃಖದಲ್ಲಿ ದುಃಖಿಯಾಗಿ ಸುಖದಲ್ಲಿ ಸುಖಿಯಾಗಿ ಅವಳ ಕಣ್ಣೀರೊರಸಿ, ಕುಂದ! ಎಂದಳು.

ಕುಂದನಂದಿನಿಯು ಪುನಃ ಮುಖವನ್ನೆತ್ತಿ ನೋಡಿದಳು.

ಕಮಲ—ನನ್ನ ಸಂಗಡ ಹೊರಡುವಿಯಾ?

ಕುಂದನಂದಿನಿಯ ಕಣ್ಣುಗಳಲ್ಲಿ ಪುನಃ ನೀರು ತುಂಬಿತು.

ಕಮಲ-ಇಲ್ಲದಿದ್ದರೆ ಹೋಯಿತು. ಭಂಗಾರದಂತಹ ಸಂಸಾರವು ಹೋಗುತ್ತದೆ.

ಕುಂದಳು ಅಳುವುದಕ್ಕೆ ತೊಡಗಿದಳು. ಕಮಲ ಮಣಿಯು, ಹೊರಡುವಿಯಾ? ಯೋಚಿಸಿ ನೋಡೆಂದಳು.

ಕುಂದಳು ಬಹಳ ಹೊತ್ತು ಯೋಚಿಸಿ ಕಣ್ಣೊರಸಿಕೊಂಡು ಎದ್ದು

ಕೂತು, ಹೊರಡುವೆಯೆಂದಳು.

ಕಮಲಳು ಇಷ್ಟುಹೊತ್ತು ಏತಕ್ಕೆ ಆಯಿತೆನ್ನುವುದನ್ನು ತಿಳಿದಳು. ಕುಂದನಂದಿನಿಯು ಅನ್ಯರ ಮಂಗಳಕರವಾದ ಮನೆಯಲ್ಲಿ ತನ್ನ ಪ್ರಾಣವನ್ನು ಬಲಿಕೊಟ್ಟಿದ್ದಾಳೆಂತಲೂ, ನಾಗೇಂದ್ರನ ಮಂಗಳ ಕ್ಕೋಸ್ಕರವೂ ಸೂರ್ಯಮುಖಿಯ ಮಂಗಳಕ್ಕೋಸ್ಕರವೂ ನಾಗೇಂದ್ರನನ್ನು ಮರೆತುಬಿಡುವುದನ್ನು ಸ್ಥಿರಮಾಡಿಕೊಳ್ಳುವುದಕ್ಕೆ ಯೋಚಿಸುತಲಿದ್ದಳೆಂತಲೂ, ಅದಕ್ಕಾಗಿ ಸಾವಕಾಶವಾಯಿತೆಂದು ತಿಳಿದಳು. ತನ್ನ ಸ್ವಂತಸುಖವೊ? ತನ್ನ ಸ್ವಂತ ಸುಖವನ್ನು ಕುರಿತು ಅವಳು ಯೋಚಿಸಲಿಲ್ಲವೆಂದು ಕಮಲಳು ತಿಳಿದಳು. ಕುಂದಳು ಅದನ್ನು ತಿಳಿಯಲಾರದೆಹೋದಳು.

---

## ಹದಿನ್ನೈದನೆಯ ಪರಿಚ್ಛೇದ.

### ಹೀರಾ.

ಈ ಸಮಯದಲ್ಲಿ ವೈಷ್ಣವಿಯು ಬಂದು ಗಾನಮಾಡಿದಳು :–

ರಾಗ–ಸುರಟಿ.

ಅ॥ ದೇವಾದಿದೇವ ಭಕ್ತಜನರಪೊರೆವ ಸುರವರ
ಶ್ರೀವಧೂವಿಲೋಲ ನೀಲಮೇಘ ಕೋಮಲ ॥
ನವೀನ ಮುಕುಳವರಳುವೆಡೆಯೊಲಲೆಯುತಿಹೆ ಸಖಿ
ನವೀನಪುಷ್ಪರಸವಕದ್ದುಕುಡಿಯುವೆಸಖಿ ॥೧॥
ಭವದಸುಖಕಿದೀಗಮೂಲ ಹಾದೆಲೆ ಸಖಿ
ಕಾವರಿಲ್ಲಪ್ರಾಣವನ್ನುತೊರಿಯುವೆ ಸಖಿ ॥೨॥
ರಕ್ಷಿಸುವನುನೃಹರಿ ದೇವದೇವನೆ ಸಖಿ
ವೀಕ್ಷಿಸೀಗಪೊಕ್ಕಿ ಮುಳ್ಳುವನವನೆ ಸಖಿ ॥೩॥

ಈದಿನ ಸೂರ್ಯಮುಖಿಯು ಅಲ್ಲಿದ್ದವಳು ಹಾಡುಕೇಳುವುದಕ್ಕೆ ಕಮಲಳನ್ನು ಕರೆಕಳುಹಿಸಿದಳು. ಕಮಲಳು ಬರುತ್ತ ಕುಂದನಂದಿನಿಯನ್ನು ಜತೇಲಿ ಕರೆತಂದಳು. ವೈಷ್ಣವಿಯು ಪುನಃ ಹಾಡತೊಡಗಿದಳು :–

ಹೋದೆ ಸುಮವಕೀಳಲ್ಕೆಗ ಮುಳ್ಳುಬನದೊಳು
ಮುದ್ದುಸಖಿಯೆಹೌಮಕೇಳ್ಕಳಂಕಸುಮವಿದು ॥
ಮುದದಿಮಾಲೆಗೈದುಶಿರದಿಧರಿಸಲೆಲೆಸಖಿ
ಅದುಕರ್ಣತಳದಿನಲಿದುವಲೀದಾಡುತಿದೆಸಖಿ ॥
ನೃಹರಿದೇವದೇವಪೂರೆಯಬೇಕೆಲೆಸಖಿ
ಇಹದಿಲಿದನಮುಡಿದವಧುವುಧನ್ಯಳೆಸಖಿ ॥

ಗಾನವನ್ನು ಕೇಳಿ ಕಮಲಳು ಭ್ರೂಭಂಗಿಮಾಡಿ ವೈಷ್ಣವಿಯನ್ನು ಕುರಿತು ನೀನು ಹಾಳಾದೆ! ಇನ್ನೇನಾದರೂ ಹಾಡಬಾರದೆ? ಇನ್ನೇನೂ ಬರುವುದಿಲ್ಲವೆ? ಎಂದಳು.

ಹರಿದಾಸಿಯು, ಏತಕ್ಕೆ? ಎಂದಳು. ಕಮಲಳ ಕೋಪವು ಇನ್ನಷ್ಟು ಹೆಚ್ಚಾಗಿ, ಏತಕ್ಕೇ? ಒಂದು ಬೊಬ್ಬುಳಿಮರದ ಕೊನೆಯನ್ನು ತೆಗೆದುಕೊಂಡು ಬಾರೆ, ಮುಳ್ಳಿನ ರುಚಿಯನ್ನು ಇವಳಿಗೆ ತೋರಿಸುತ್ತೇನೆಂದು ಹೇಳಿದಳು.

ಸೂರ್ಯಮುಖಿಯು ಅಂತಹ ಹಾಡುಗಳು ನಮಗೆ ಸರಿಯಾಗಿ ಕಾಣುವುದಿಲ್ಲ. ಅವು ಗೃಹಸ್ಥರ ಮನೇಲಿ ಹಾಡಬೇಡವೆಂದಳು.

ವೈಷ್ಣವಿಯು ಒಳ್ಳೇದೆಂದು ಹೇಳಿ ಕೆಳಗಿನ ಕಂದವನ್ನು ಹೇಳಿದಳು:

ಓದುವೆನಾಂಸ್ಮೃತಿತತಿಯುಂ ।
ಪಾದಗಳಂಸೇವೆಗೈದುಭಟ್ಟಾಭಿದರೊಳ್ ॥
ನಿಂದೆಯುಮಹಾಪಲದಾರಿಗೆ ।
ಬಂದಪುದೆಲೆ ಧೈರ್ಯಧರ್ಮಮಹಿಮೆಯುಮರಿಯಲ್ ॥

ಕಮಲಳು ಬೇಸರಗೊಂಡು, ಯಜಮಾನಮ್ಮ! ನಿನಗೆ ಇಷ್ಟವಿದ್ದರೆ ನಿನ್ನ ವೈಷ್ಣವಿಯ ಹಾಡನ್ನು ಕೇಳಿಕೊ, ನಾನು ಹೋಗುತ್ತೇನೆಂದು ಹೇಳಿ ಹೊರಟು ಹೋದಳು. ಸೂರ್ಯಮುಖಿಯೂ ಸಂಗೀತವು ರುಚಿಸದೆ ಎದ್ದು ಹೋದಳು. ಮಿಕ್ಕ ಹೆಂಗಸರು, ಅವರವರ ಇಷ್ಟಪ್ರಕಾರ ಇದ್ದವರು ಇದ್ದರು, ಹೋದವರು ಹೋದರು. ಕುಂದಳು ಅಲ್ಲಿಯೇ ಇದ್ದಳು. ಅವಳಿಗೆ ಸಂಗೀತದ ಅರ್ಥವಾಗಲಿಲ್ಲ. ಹೆಚ್ಚು ಕೇಳಲೂ ಇಲ್ಲ. ಅನ್ಯಮನಸ್ಕಳಾಗಿದ್ದ ಕಾರಣ ಕೂತಲ್ಲಿಯೇ ಕುಳಿತಿದ್ದಳು. ಹರಿದಾಸಿ ಪುನಃ ಹಾಡಲಿಲ್ಲ, ಆದೂ ಇದೂ ಮಾತನಾಡುತಿದ್ದಳು. ಪುನಃ ಸಂಗೀತವಾಗಲಿಲ್ಲವಾಗಿ ಹೆಂಗಸರೆಲ್ಲರೂ ಹೊರಟುಹೋದರು. ಕುಂದಳುಮಾತ್ರ ಏಳಲಿಲ್ಲ. ನಡೆಯುವ ಶಕ್ತಿಯಿತ್ತೋ ಯಿಲ್ಲವೋ ಆದೇಸಂದೇಹ. ಕುಂದಳು ಒಬ್ಬಳೇ ಇದ್ದದ್ದು ನೋಡಿ ಹರಿದಾಸಿಯು ಅವಳಿಗೆ ಏನೇನೋ ಹೇಳಿದಳು. ಕುಂದಳಿಗೆ ಕೆಲವು ಕೇಳಿಸಿತು ಕೆಲವು ಕೇಳಿಸಲಿಲ್ಲ.

ಸೂರ್ಯಮುಖಿಯು ಇದನ್ನು ದೂರದಿಂದ ನೋಡುತಲಿದ್ದವಳು ಕಮಲಮಣಿಯನ್ನು ಕರೆದು ಅವಳಿಗೆ ತೋರಿಸಿದಳು.

ಕಮಲ—ಆದರೆ ಏನು? ಮಾತನಾಡಿದರೆ ಮಾತನಾಡಲಿ. ಪುರುಷನಲ್ಲವಷ್ಟೆ? ಹೆಂಗಸು ಹೆಂಗಸಿನಸಂಗಡ ಮಾತನಾಡಿದರೆ ಬಾಧಕವೇನು?

ಸೂರ್ಯಮುಖಿ–ಹೆಂಗಸೋ ಗಂಡಸೋ? ಯಾರಿಗೆಗೊತ್ತು?

ಕಮಲಳು ಆಶ್ಚರ್ಯಪಟ್ಟು ಅದೇತಕ್ಕೆ ಹಾಗೆ ಹೇಳುತ್ತಿ? ಎಂದಳು.

ಸೂರ್ಯಮುಖಿ—ಯಾರೋ ಛದ್ಮವೇಷಿಯಾದ ಪುರುಷನಿರಬಹುದೆಂದು ಕಾಣುತ್ತದೆ. ಅದನ್ನು ಈಗ ಗೊತ್ತುಮಾಡುತ್ತೇನೆ. ಆದರೆ ಕುಂದಳು ಎಂತಹ ಪಾಪಿಷ್ಠೆ!

ಕಮಲಳು, ಇರಲಿ; ನಾನು ಹೋಗಿ ಬಂದುಮುಳ್ಳು ಚುಚುಕು ತಂದು ಕಂಟಕದ ಸುಖವನ್ನು ತೋರಿಸುತ್ತೇನೆ ಎಂದು ಹೇಳಿ ಕಂಟಕಾವೃತ

ಮಾವ ಮರದಕೊಂಬೆಯನ್ನು ತರಲು ಹೊರಟುಹೋದಳು. ಹೋಗುತ್ತ ಮಾರ್ಗದಲ್ಲಿ ಸತೀಶನನ್ನು ಕಂಡಳು. ಸತೀಶನು ಸೋದರಅತ್ತೆಯ ಕುಂಕುಮದ ಭರಣಿಯನ್ನು ಕೈಲಿ ಹಿಡಿದುಕೊಂಡು ಕುಂಕುಮವನ್ನು ಮುಖ, ಬಾಯಿ, ಮೈಯಿಗೆಲ್ಲಾ ಬಳಿದುಕೊಂಡು ವಿಲಕ್ಷಣವಾಗಿ ಅಂಗರಾಗವನ್ನು ಮಾಡಿಕೊಳ್ಳುತ್ತಿದ್ದದ್ದನ್ನು ಕಂಡು, ವೈಷ್ಣವಿಯನ್ನು, ಮುಳ್ಳುಚಬುಕನ್ನು, ಕುಂದನಂದಿನಿಯನ್ನು ಸಹ ಮರೆತುಬಿಟ್ಟಳು.

ಆಮೇಲೆ ಸೂರ್ಯಮುಖಿಯು ಹೀರಾದಾಸಿಯನ್ನು ಕರೆಸಿದಳು.

ಹೀರಾ ಎಂಬುವಳ ಹೆಸರು ಮೊದಲು ಬಂದುಸಲ ಉಲ್ಲೇಖವಾಗಿದೆ, ಅವಳ ಪರಿಚಯವು ಸ್ವಲ್ಪ ಹೆಚ್ಚು ಅವಶ್ಯಕವಾದುದು.

ನಾಗೇಂದ್ರನು ಅವನ ತಂದೆಯು ಸಹ ಮನೆಯಲ್ಲಿ ಕೆಲಸಮಾಡುವ ಪರಿಚಾರಕರಾದ ಹೆಂಗಸರು ಸತ್ಸ್ವಭಾವವುಳ್ಳವರನ್ನೇ ನೋಡಿ ಇಟ್ಟುಕೊಳ್ಳುತ್ತಿದ್ದರು. ಅದಕ್ಕೋಸ್ಕರ ತಂದೆ ಮಗ ಇಬ್ಬರೂ ಹೆಚ್ಚು ಸಂಬಳವನ್ನು ಕೊಟ್ಟು ಸರಿಯಾದ ಮನೆತನದ ಹೆಂಗಸರನ್ನು ಕೆಲಸಕ್ಕೆ ಇಟ್ಟುಕೊಳ್ಳುವುರು. ನಾಗೇಂದ್ರನಮನೆಯಲ್ಲಿ ಪರಿಚಾರಕರು ಸುಖವಾಗಿ ಮಾನದಿಂದ ಇರುತಲಿದ್ದರಾದಕಾರಣ ದರಿದ್ರರಾದ ಬಳ್ಳೆಸಂಸಾರದ ಹೆಣ್ಣುಹುಡುಗರು ಅಲ್ಲಿ ಬಂದು ದಾಸಿಯವೃತ್ತಿಯಲ್ಲಿರಲು ಒಪ್ಪಿಕೊಳ್ಳುತ್ತಿದ್ದರು. ಈ ಪ್ರಕಾರ ಕೆಲಸಕ್ಕೆ ಬಂದು ನಿಂತವರಲ್ಲಿ ಹೀರೆಯು ಮುಖ್ಯಳಾದವಳು. ಪರಿಚಾರಕರೆಲ್ಲರೂ ಕಾಯಸ್ಥ ಹೆಂಗಸರು. ಹೀರೆಯೂ ಕಾಯಸ್ಥಬ್ರಾಹ್ಮಣಳು. ನಾಗೇಂದ್ರನ ತಂದೆಯು ಹೀರೆಯ ಮಾತಾಮಹಿಯನ್ನು ಬೇರೆ ಊರಿನಿಂದ ಕರೆತಂದಿದ್ದನು. ಹೀರೆಯ ಅಜ್ಜಿಯು ಕೆಲಸಕ್ಕೆ ನಿಂತಾಗ ಹೀರಾ ಇನ್ನು ಹುಡುಗಿಯಾಗಿದ್ದಳು. ಹೀರೆಯು ಸಮರ್ಥಳಾದಮೇಲೆ ಮುದುಕಿಯು ದಾಸಿಯವೃತ್ತಿಯನ್ನು ಬಿಟ್ಟು ತಾನು ಗಳಿಸಿಕೊಂಡು ಇಟ್ಟದ್ದ ಹಣದಿಂದ ಗೋವಿಂದಪುರದಲ್ಲಿಯೇ ಬಂದು ಸಾಮಾನ್ಯವಾದ ಮನೆಯನ್ನು

ಕಟ್ಟಿಕೊಂಡು ಅಲ್ಲಿ ವಾಸಮಾಡುತಲಿದ್ದಳು. ಹೀರೆಯು ದತ್ತನಮನೆಯಲ್ಲಿ ಚಾಕರಿಗೆ ಪ್ರವೃತ್ತಳಾದಳು.

ಈಗ ಹೀರೆಗೆ ಇಪ್ಪತ್ತು ವರುಷವಯಸ್ಸು. ವಯಸ್ಸಿನಲ್ಲಿ ಇತರಪರಿಚಾರಕ ಹೆಂಗಸರಿಗಿಂತಲೂ ಚಿಕ್ಕವಳು. ಅವಳ ಬುದ್ಧಿಯ ಪ್ರಭಾವದಿಂದಲೂಬಳ್ಳೇ ನಡತೆಯಿಂದಲೂ ದಾಸಿಗಳಲ್ಲಿ ಶ್ರೇಷ್ಠಳಾಗಿ ಗಣಿಸಲ್ಪಟಿದ್ದಳು

ಹೀರೆಯು ಬಾಲ್ಯವಿಧವೆಯೆಂದು ಗೋವಿಂದಪುರದಲ್ಲಿ ಪರಿಚಿತಳಾಗಿದ್ದಳು. ಯಾವಾಗಲೂ ಯಾರೂ ಅವಳ ಗಂಡನ ಸುದ್ದಿಯನ್ನೇ ಕೇಳರಲಿಲ್ಲ. ಮತ್ತು ಹೀರೆಯ ನಡೆತೆಯು ಯಾರೂ ಕಳಂಕಿತವಾದುದೆಂದು ಕೇಳಿಲ್ಲ. ಅವಳು ಅತ್ಯಂತ ಮುಗ್ಧಳಾಗಿ, ಸಧವೆಯರಹಾಗೆ ಉಡುಪು ತೊಡಗೆಗಳನ್ನು ಧರಿಸುವಳು. ಉಡುಪು ತೊಡಗೆಗಳಲ್ಲಿ ಬಹಳ ಇಷ್ಟವುಳ್ಳವಳಾಗಿದ್ದಳು.

ಇದಲ್ಲದೆ ಹೀರೆಯು ಸುಂದರಿ. ಉಜ್ವಲವಾದ ಶ್ಯಾಮಾಂಗಿ, ಪದ್ಮಪಲಾಶಲೋಚನಳು. ಆಕಾರದಲ್ಲಿ ಗಿಡ್ಡು, ಮುಖವು ಮೇಘಾವೃತವಾದ ಚಂದ್ರನಹಾಗಿರುವುದು. ತಲೆಯ ಕೇಶರಾಜಿಯು ಹೆಡೆಬಿಟ್ಟ ಫಣಿಯಹಾಗೆ ಹಿಂದೆ ಹರಿದಾಡುತಲಿತ್ತು. ಹೀರಾ ಅತ್ತಡ್ಡಾಗಿ ಕೂತು ಹಾಡುವಳು. ದಾಸಿದಾಸಿಗೆ ಜಗಳ ಹಚ್ಚಿಬಿಟ್ಟು ವಿನೋದವನ್ನು ನೋಡುವಳು. ಅಡಿಗೆಮಾಡುವವಳನ್ನು ಅಂಧಕಾರದಲ್ಲಿ ಭಯಪಡಿಸುವಳು ; ಹುಡುಗರಿಗೆ ಗಂಡಹೆಂಡಂದಿರು ಸಂಸಾರಮಾಡುವ ಆಟವನ್ನು ಹೇಳಿಕೊಡುವಳು ; ಯಾರಾದರೂ ನಿದ್ರೆಮಾಡುತಲಿದ್ದರೆ ಅವರ ಮುಖಕ್ಕೆ ಸುಣ್ಣದಲ್ಲಿ ಬಟ್ಟು ಇಡುವಳು.

ಆದರೆ ಹೀರೆಗೆ ಅನೇಕ ದೋಷಗಳೂ ಇದ್ದವು. ಅವುಗಳನ್ನು ಕ್ರಮೇಣ ತಿಳಿಸುವೆವು. ಪ್ರಕೃತಕ್ಕೆ ಇಷ್ಟುಹೇಳುತ್ತೇವೆ. ಏನೆಂದರೆ:– ಅವಳು ಅತ್ತರು ಪನ್ನೀರನ್ನು ಕಂಡರೆ ಅವುಗಳನ್ನು ಕಳವುಮಾಡುವಳು.

ಸೂರ್ಯಮುಖಿಯು ಹೀರೆಯನ್ನು ಕರೆದು, ಈ ವೈಷ್ಣವಿಯನ್ನು ಬಲ್ಲೆಯಾ? ಎಂದು ಕೇಳಿದಳು.

ಹೀರಾ—ಇಲ್ಲ. ನಾನು ಯಾವಾಗಲೂ ನೆರೆಬಿಟ್ಟು ಹೊರಗೆಹೋಗಿಲ್ಲ. ವೈಷ್ಣವಿ ಭಿಕ್ಷುಕಳನ್ನು ಹೇಗೆ ತಿಳಿಯುವೆನು? ಠಾಕೂರವಾಡಿಯಲ್ಲಿರುವ ಹೆಂಗಸರನ್ನು ಕೇಳಲೆ?—ಕರುಣಾ ಅಥವಾ ಸೀತಾ ಇವರಿಗೆ ಗೊತ್ತಿರಬಹುದು

ಸೂರ್ಯಮುಖಿ—ಇವಳು ಠಾಕೂರವಾಡಿಯ ವೈಷ್ಣವಿಯಲ್ಲ. ಈ ವೈಷ್ಣವಿಯು ಯಾರೆಂಬುದನ್ನು ನೀನು ಕಂಡುಹಿಡಿಯಬೇಕು. ಇವಳು ವೈಷ್ಣವಿಯೋ ಅಲ್ಲವೆ, ಇವಳ ಮನೆ ಎಲ್ಲಿ? ಕುಂದಳ ಸಂಗಡ ಇವಳ' ಇಷ್ಟು ಆಲೋಚನೆ ಏತಕ್ಕೆ ಮಾಡಿದಳು? ಇದನ್ನೆಲ್ಲ ಚನ್ನಾಗಿ ವಿಚಾರಿಸಿ ತಿಳಿದುಕೊಂಡು ಬಂದರೆ ನಿನಗೆ ಒಂದು ಹೊಸ ಬನಾರೀಸ ಸೀರೆಯನ್ನು ಕೊಡುವೆನು.

ಹೊಸಬನಾರೀಸಸೀರೆಯ ಮಾತು ಕಿವಿಗೆ ಬೀಳುತ್ತಲೇ ಹೀರೆಗೆ ವೈಯುಬ್ಬಿ ಈ ಸಮಾಚಾರವನ್ನೆಲ್ಲ ಯಾವಾಗ ತರಬೇಕೆಂದು ಕೇಳಿದಳು.

ಸೂರ್ಯಮುಖಿ—ನಿನಗೆ ಇಷ್ಟಬಂದಾಗ ತೆಗೆದುಕೊಂಡುಬಾ. ಆದರೆ ಈಗ ಅವಳ ಹಿಂದೆ ಬೆನ್ನಟ್ಟದಿದ್ದರೆ ಅವಳಿರುವ ಸ್ಥಳವು ಗೊತ್ತಾಗುವುದಿಲ್ಲ.

ಹೀರಾ—ಒಳ್ಳೇದು.

ಸೂರ್ಯಮುಖಿ—ಆದರೆ ನೋಡಿಕೊ, ವೈಷ್ಣವಿಗೆ ಸ್ವಲ್ಪವೂ ಗೊತ್ತಾಗಕೂಡದು. ಮತ್ಯಾರಿಗೂ ಈ ಸಮಾಚಾರವು ಗೊತ್ತಾಗದಿರಬೇಕು.

ಈ ಸಮಯಕ್ಕೆ ಸರಿಯಾಗಿ ಕಮಲಮಣಿಯು ಹಿಂದಿರುಗಿ ಬಂದಳು. ಸೂರ್ಯಮುಖಿಯು ತಾನು ಹೀರಾದಾಸಿಗೆ ಹೇಳಿದುದನ್ನೆಲ್ಲ ತಿಳಿಸಿದಳು. ಕೇಳಿ ಕಮಲಮಣಿಯು ಸಂತೋಷವುಳ್ಳವಳಾಗಿ ಹೀರೆಯನ್ನು ಕುರಿತು, ನಿನ್ನ ಕೈಲಾದರೆ ಮುಳ್ಳಿನ ಚಬುಕಿನಿಂದ ಆ ವೈಷ್ಣವಿಗೆ ನಾಲ್ಕು ಪೆಟ್ಟುಕೊಟ್ಟು ಬರಬೇಕೆಂದು ಹೇಳಿದಳು.

ಹೀರಾ—ಅದೆಲ್ಲಾ ಮಾಡಬಲ್ಲೆ. ಬರೆ ಬನಾರೀಸ ಸೀರೆಯನ್ನು ಮಾತ್ರ ತೆಗೆದುಕೊಳ್ಳುವುದಿಲ್ಲ!

ಸೂರ್ಯಮುಖಿ—ಮತ್ತೇನುಬೇಕು ?

ಕಮಲ—ಅವಳಿಗೆ ಒಬ್ಬ ವರನೂ ಬೇಕು. ಮದುವೆಯಾಗಬೇಕಂತೆ. ಅಲ್ಲವೆ ?

ಸೂರ್ಯಮುಖಿ—ಒಳ್ಳೇದು, ಅದೂ ಆಗಬಹುದು. ಅಳಿಯಂದಿರನ್ನು ನೆನಪುಮಾಡಿಕೊ, ಬೇಕಾದರೆ ಕಮಲಳು ಮದುವೆಮಾಡುತ್ತಾಳೆ.

ಹೀರಾ—ಆಗ ನೋಡಿಕೊಳ್ಳುತ್ತೇನೆ. ಈಗ ಮನೆಯಲ್ಲಿಯೇ ನನಗೆ ತಕ್ಕ ವರನೊಬ್ಬನು ಇದ್ದಾನೆ.

ಸೂರ್ಯಮುಖಿ—ಅದ್ಯಾರೆ ?

ಹೀರಾ—ಯಮ.

---

## ಹದಿನಾರನೆಯ ಪರಿಚ್ಛೇದ.

### ಇಲ್ಲ.

ಆ ದಿನ ಪ್ರದೋಷಕಾಲದಲ್ಲಿ ಕುಂದನಂದಿನಿಯು ಉದ್ಯಾನವನದಲ್ಲಿ ಪುಷ್ಕರಿಣಿಯತೀರದಲ್ಲಿ ಕುಳಿತಿದ್ದಳು. ಆ ಪುಷ್ಕರಿಣಿಯು ಅತಿ ದೊಡ್ಡದು. ಅದರ ನೀರು ಅತಿ ಪರಿಷ್ಕಾರವಾಗಿ ಸರ್ವದಾ ನೀಲಪ್ರಭೆಯುಳ್ಳದ್ದು. ಈ ಪುಷ್ಕರಿಣಿಯ ಹಿಂದುಗಡೆಯೇ ಪುಷ್ಪೋದ್ಯಾನವಿರುವುದು ಪಾಠಕರ ಸ್ಮರಣೆಯಲ್ಲಿರಬಹುದು! ಆ ಪುಷ್ಪೋದ್ಯಾನದ ಮಧ್ಯದಲ್ಲಿ ಬಿಳೀ ಶಿಲೆ ಹರಡಿದ ನೆಲವನುಳ್ಳ ಲತಾಮಂಟಪ. ಆ ಲತಾಮಂಟಪದ ಮುಂದುಗಡೆ ಪುಷ್ಕರಿಣಿಗೆ ಇಳಿಯುವುದಕ್ಕೆ ಸೋಪಾನ. ಆ ಸೋಪಾನವು ಶಿಲೆಯ ಹಾಗಿರುವ ಇಟ್ಟಿಗೆಗಳಿಂದ ನಿರ್ಮಿತವಾದುದು. ಅಗಲವಾಗಿಯೂ ಪರಿಷ್ಕಾರವಾಗಿಯೂ ಇತ್ತು.

ಅದರ ಎರಡು ಕಡೆಯಲ್ಲಿಯೂ ಬಹುಕಾಲದ ಎರಡು ವಕುಳಪುಷ್ಪದ ಮರಗಳು. ಆ ವಕುಳಮರದ ತಲದಲ್ಲಿ ಆ ಸೋಪಾನದಮೇಲೆ ಅಂಧಕಾರವಾದ ಪ್ರದೋಷಕಾಲದಲ್ಲಿ ಏಕಾಕಿನಿಯಾಗಿ ಕುಂದನಂದಿನಿಯು ಕುಳಿತುಕೊಂಡು ಸ್ವಚ್ಛವಾದ ಸರೋವರದಲ್ಲಿ ಪ್ರತಿಫಲಿತವಾದ ನಕ್ಷತ್ರಾದಿಗಳಿಂದ ಹೊಳೆಯುತ್ತಿದ್ದ ಆಕಾಶದ ಪ್ರತಿಬಿಂಬವನ್ನು ನೋಡುತಲಿದ್ದಳು. ಪುಷ್ಕರಿಣಿಯಲ್ಲಿ ಅಲ್ಲಲ್ಲಿ ಅಸ್ಪಷ್ಟವಾಗಿ ಪುಷ್ಪಗಳು ಎಲೆಗಳು ಕಾಣಿಸುತಲಿದ್ದವು. ಪುಷ್ಕರಿಣಿಯ ಅತ್ತಕಡೆ ಮೂರು ಪಾರ್ಶ್ವದಲ್ಲಿಯೂ ಮಾವು ಹಲಸು ನೇರಲೆ ನಿಂಬೆ ತೆಂಗು ಬೇಲ ಮುಂತಾದ ಫಲವತ್ತಾದ ಫಲವೃಕ್ಷಗಳು ಶ್ರೇಣೀಬದ್ಧವಾಗಿ ಅಂಧಕಾರದಲ್ಲಿ ಸಮವಲ್ಲದೆ ಏರುತಗ್ಗುವುಳ್ಳ ಗೋಡೆಯ ಹಾಗೆ ಕಾಣಿಸುತಲಿದ್ದವು. ಒಂದೊಂದು ತಡವೆ ಮರದಮೇಲೆ ಕೂತಿರುವ ಪೇಚಕ ಪಕ್ಷಿಯು ವಿಕಟಾಕಾರವಾದ ಶಬ್ದದಿಂದ ನಿಶ್ಯಬ್ದವಾದ ಸರೋವರವನ್ನು ಶಬ್ದಿತಮಾಡುತಲಿತ್ತು. ಶೀತಲವಾದ ವಾಯುವು ಸರೋವರವನ್ನು ಪಾರಾಗಿ ಬಂದು ತಾವರೆಯ ಮೊಗ್ಗೆಗಳನ್ನು ಸ್ವಲ್ಪಸ್ವಲ್ಪ ಅಲುಗಿಸಿ ಜಲದಲ್ಲಿ ಬಿದ್ದಿರುವ ಆಕಾಶದ ಚಿತ್ರವನ್ನು ಸ್ವಲ್ಪಮಾತ್ರ ಕಂಪಿತಮಾಡಿ, ಕುಂದನಂದಿನಿಯ ತಲೆಯಮೇಲಿದ್ದ ವಕುಳಪತ್ರಗಳಲ್ಲಿ ಮರ್ಮರಶಬ್ದವನ್ನು ಮಾಡಿ ಬೇಸಗೆಯಲ್ಲಿ ಪ್ರಸ್ಫುಟಿತವಾದ ವಕುಳಪುಷ್ಪದ ಗಂಧವನ್ನು ನಾಲ್ಕು ದಿಕ್ಕುಗಳಲ್ಲಿಯೂ ಕುಂದನಂದಿನಿಯಮೇಲೂ ಸುರಿಯುತಲಿದ್ದವು. ಹಿಂದುಗಡೆಯಿಂದ ಮಲ್ಲಿಕಾ, ಯೂಥಿಕಾ, ಕಾಮಿನೀ ಪುಷ್ಪಗಳ ಸುಗಂಧವು ಬರುತಲಿತ್ತು. ನಾಲ್ಕುದಿಕ್ಕುಗಳಲ್ಲಿಯೂ ಅಂಧಕಾರಮಯ. ಮಿಂಚಿನಹುಳುಗಳು ಸ್ವಚ್ಛವಾದ ನೀರಿನ ಮೇಲಭಾಗದಲ್ಲಿ ಏಳುತ್ತ ಬೀಳುತ್ತ ಮಿನುಗುತ್ತ ಕುಣಿದಾಡುತ್ತವೆ. ಒಂದೆರಡು ಕೀಚಪಾಲಹಕ್ಕಿ ಕೂಗುತ್ತದೆ. ನರಿಗಳು ಕೂಗುತವೆ. ಒಂದೆರಡು ಮೇಘಗಳು ಆಕಾಶದಲ್ಲಿ ಹಾದಿತಪ್ಪಿ ಅಲೆದಾಡುತ್ತವೆ. ಒಂದೊಂದು ತಡವೆ ಒಂದೆರಡು ನಕ್ಷತ್ರಗಳು ಮನಸ್ಸಿನ ದುಃಖ

ಕ್ಷೋತ್ಸ್ಕರ ಆಕಾಶದಿಂದ ಕಳಚಿಬೀಳುತ್ತವೆ. ಕುಂದನಂದಿನಿಯು ಮನ ಸ್ಸಿನ ದುಃಖದಿಂದ ಏನೋ ಯೋಚಿಸುತ್ತಾಳೆ. ಏನು ಯೋಚನೆ ಮಾಡು ತ್ತಾಳೆ? ಅವಳ ಯೋಚನೆ ಏನೆಂದರೆ :-"ಎಲ್ಲರೂ ಮೊದಲೇ ಸತ್ತುಹೋದ ರು-ಅಮ್ಮ ಸತ್ತಳು, ಅಣ್ಣ ಸತ್ತ, ಅಪ್ಪನೂ ಸತ್ತುಹೋದ, ನಾನೇತಕ್ಕೆ ಸಾಯಲಿಲ್ಲ? ಹಾಗೆ ಸಾಯದಿದ್ದರೆ ಇಲ್ಲಿಗೆ ಏತಕ್ಕೆ ಬಂದೆ? ಬಳ್ಳೇದು, ಮನುಷ್ಯಸತ್ತರೆ ನಕ್ಷತ್ರವಾಗುತ್ತಾನೆಯೆ?" ಅವಳಿಗೆ ತಂದೆಯು ಸತ್ತ ರಾತ್ರಿಯಲ್ಲಿ ತಾನು ಕಂಡಿದ್ದ ಸ್ವಪ್ನದ ಜ್ಞಾಪಕವೇ ಇರಲಿಲ್ಲ. ಯಾವಾ ಗಲೂ ಜ್ಞಾಪಕಕ್ಕೆ ಬರಲಿಲ್ಲ. ಈಗಲೂ ಬರಲಿಲ್ಲ. ಏನೋ ಮಸಕು ಮಸಕಾಗಿ, ಸ್ವಪ್ನದಲ್ಲಿ ತಾಯಿಯನ್ನು ಕಂಡಿದ್ದಂತೆಯೂ ಅವಳು ತನಗೆ ನಕ್ಷತ್ರನಾಗೆಂದು ಹೇಳಿದಂತೆಯೂ ಮಾತ್ರ ಏನೋ ಸ್ವಲ್ಪ ಜ್ಞಾಪಕವಿತ್ತು. ಮುಂದೆ ಯೋಚಿಸುತ್ತಾಳೆ. "ಮನುಷ್ಯರು ಸತ್ತರೆ ನಕ್ಷತ್ರವಾಗುತ್ತಾ ರಲ್ಲವೆ? ಹಾಗಾದರೆ ನಮ್ಮ ಅಮ್ಮ, ನಮ್ಮ ಅಪ್ಪಾಸಹ ನಕ್ಷತ್ರವಾಗಿದ್ದಾರೆ ಯೆ? ಹಾಗಾದರೆ ಅವರು ಇದರಲ್ಲಿ ಯಾವ ನಕ್ಷತ್ರ? ಇದೆ? ಇಲ್ಲ, ಇನ್ನೊಂ ದೆ? ಯಾವ ನಕ್ಷತ್ರ? ಯಾರು? ಹೇಗೆ ಗೊತ್ತುಮಾಡಬೇಕು? ನಾನು ಈಗ ಅಳುವುದನ್ನು ಅವರು ದೂರದಿಂದ ನೋಡಿ ಯೋಚಿಸುವುದಿಲ್ಲವೆ? ಬಹಳ ಘಟ್ಟಿಯಾಗಿ ಅಳಬೇಕೆಂದು ಕಾಣುತ್ತದೆ-ಅತ್ತು ಏನಾದೀತು? ನನ್ನ ಹಣೆಯಲ್ಲಿ ಅಳುವುದೇ ಬರೆದಿದೆ. ಇಲ್ಲದಿದ್ದರೆ ನಮ್ಮಮ್ಮನು-ಪುನಃ ಈ ಮಾತು ಏತಕ್ಕೆ? ಸಾಯುವುದಕ್ಕೆ ಆಗುವುದಿಲ್ಲವೆ? ನೀರಿನಲ್ಲಿ ಮುಣುಗಿ ಹೋದರೆ? ಅನುಸರಿ—ನಕ್ಷತ್ರವಾಗುವೆನು. ನಕ್ಷತ್ರವಾದರೆ ಆದೇನೆಂತ ಲೇ ಹೇಳೋಣ. ನಕ್ಷತ್ರವಾದರೆ ನೋಡಬಹುದು. ನಿತ್ಯನಿತ್ಯ ನೋಡ ಬಹುದು. ಯಾರನ್ನ ನೋಡಬಹುದೋ ಅವನನ್ನ ಬಾಯಿಯಿಂದ ಹೇಳು ವುದಕ್ಕಾದೀತೆ? ಬಳ್ಳೇದು, ಹೆಸರನ್ನು ಹೇಳುವುದಕ್ಕೆ ಆಗುತ್ತದೆಯೆ? ಈಗ ಇಲ್ಲಿ ಯಾರೂ ಇಲ್ಲ—ಯಾರೂ ಕೇಳಲಾರರು. ಒಂದುಸಲ ಬಾಯ್ಬಿ

ಯಲ್ಲಿ ಹೇಳಲೆ? ಯಾರೂ ಇಲ್ಲ. ಮನಸ್ಸಿನ ಆಶೆಗೋಸ್ಕರ ಹೆಸರು ಹೇಳಿ ನೋಡೋಣ—ನಾ—ನಾಗ—ನಾಗೇಂದ್ರ! ನಾಗೇಂದ್ರ, ನಾಗೇಂದ್ರ, ನಾಗೇಂದ್ರ, ನನ್ನ ನಾಗೇಂದ್ರ! ಅಯ್ಯೋ! ನನ್ನ ನಾಗೇಂದ್ರನೆ? ನಾನ್ಯಾರು? ಸೂರ್ಯಮುಖಿಯ ನಾಗೇಂದ್ರ. ಎಷ್ಟುಸಲ ಹೆಸರು ಹೇಳಿದೆ? ಆದುದೇನು? ಸೂರ್ಯಮುಖಿಗೆ ಮದುವೆಯಾಗದೆ ನನಗೆ ಮದುವೆಯಾಗಿದ್ದರೆ—ಯೋಚನೆ ಸರಿಯಲ್ಲ. ಮುಣುಗಿಯೇ ಸಾಯುತ್ತೇನೆ. ಬಳ್ಳೇದು, ಈಗ ಮುಣುಗಿಹೋದೆ. ಬೆಳಗ್ಗೆ ಎದ್ದು ತೇಲುತ್ತೇನೆ. ಆಗ ಎಲ್ಲರೂ ಕೇಳುತ್ತಾರೆ; ಕೇಳುತ್ತಾನೆ. ನಾಗೇಂದ್ರ—ನಾಗೇಂದ್ರ! ನಾಗೇಂದ್ರ! ಪುನಃ ಹೇಳಲೆ? ನಾಗೇಂದ್ರ, ನಾಗೇಂದ್ರ, ನಾಗೇಂದ್ರ—ನಾಗೇಂದ್ರ ಕೇಳಿ ಏನುಮಾಡುತ್ತಾನೆ? ಏನು ಹೇಳುವನು? ನಾನು ಮುಣುಗಿ ಸಾಯುವುದಿಲ್ಲ. ಮೈಯೆಲ್ಲಾ ಉಬ್ಬಿ ಹೋಗಿ ರಾಕ್ಷಸಿಯಹಾಗೆ ಆಗುವೆನು. ಅವನೂ ನೋಡಿದರೆ? ವಿಷವನ್ನು ತಿಂದು ಸಾಯುವೆನೆ? ಯಾವ ವಿಷವನ್ನು ತಿನ್ನಲಿ? ವಿಷವು ಎಲ್ಲಿದೆ? ಯಾರು ತಂದುಕೊಡುವವರು? ತಂದುಕೊಟ್ಟರೆ—ಸಾಯಬಲ್ಲೆನೆ? ಸಾಯಬಲ್ಲೆ. ಆದರೆ ಇಂದು ಬೇಡ. ಬಂದುಸಲ ಮನಸ್ಸಿನಲ್ಲಿ ಹೇಳಿಕೊಂಡು ಆಶೆಯನ್ನು ದಣಿಸಿಕೊಳ್ಳುತ್ತೇನೆ. ಅವನು ನನ್ನನ್ನು ಪ್ರೀತಿಸುತ್ತಾನೆ. ಕಮಲಳು ಹೇಳುತ್ತಿದ್ದಳು. ಹೇಳಲಿಲ್ಲವೇತಕ್ಕೆ? ಇದೇ ಮಾತು. ಅವಳು ಹೇಳಿದ್ದು ನಿಜವೆ? ಆದರೆ ಕಮಲಳಿಗೆ ಹೇಗೆ ಗೊತ್ತು? ಹಾಳಾದವಳು ನಾನು ಕೇಳದೆಹೋದೆ. ಪ್ರೀತಿಸುತ್ತಾನೆಯೆ? ಹೇಗೆ ಪ್ರೀತಿಸುತ್ತಾನೆ? ಏನು ನೋಡಿ ಪ್ರೀತಿಸಬೇಕು? ರೂಪವೆ? ಇಲ್ಲ, ಗುಣವೆ? ರೂಪವೆ? ನೋಡೋಣ. (ಹೀಗೆ ಹೇಳಿಕೊಂಡು, ಕಪ್ಪಾಗಿ ಸ್ವಚ್ಛವಾದ ಸರೋವರದ ಜಲದಲ್ಲಿ ತನ್ನ ಪ್ರತಿಬಿಂಬವ ನೋಡುವುದಕ್ಕೆ ಹೋಗಿ ನೋಡಿ ಏನೂ ಕಾಣಿಸದೆ ಹಿಂದಿರುಗಿ ಬಂದು ಮೊದಲು ಕುಳಿತಿದ್ದ ಸ್ಥಳಕ್ಕೆ ಬಂದು ಕೂತುಕೊಂಡಳು.) ಹೀಗೆ ಏತಕ್ಕೆ ಯೋಚಿಸಿಕೊಂಡೆ? ನನಗಿಂತ ಸೂರ್ಯಮುಖಿ

ಸುಂದರಳು. ನನಗಿಂತ ಹರಮಣಿ, ಸುಂದರಿ; ವಾಮಾ, ಸುಂದರಿ; ಚಂದ್ರಮುಖಿ, ಸುಂದರಿ, ಮುಕ್ತಕೇಶಿ; ಸುಂದರಿ; ನನಗಿಂತಲೂ ಹೀರಾ ದಾಸಿಯುಕೂಡ ಸುಂದರಿ, ಹೀರಾದಾಸಿ ನನಗಿಂತಲೂ ಸುಂದರಳೇ ಹೌದು; ಶ್ಯಾಮವರ್ಣವಾದರೆ ಏನು? ಮುಖವು ನನ್ನ ಮುಖಕ್ಕಿಂತಲೂ ಚನ್ನಾಗಿದೆ. ರೂಪವೇನೋ ಇಲ್ಲ. ರೂಪವಿಲ್ಲದಿದ್ದರೂ ನನ್ನಲ್ಲಿ ಗುಣವಾದರೂ ಉಂಟೆ? ಏನು ಗುಣವಿದ್ದೀತು? ಯೋಚಿಸಿ ನೋಡೋಣ. ಎಷ್ಟು ಯೋಚಿಸಿದರೂ ಯಾವದೂ ಗೊತ್ತಾಗುವುದಿಲ್ಲ. ಯಾರಿಗೆ ಗೊತ್ತು? ಆದರೆ ನಾಯಕನೂ ಡದು. ಕಮಲಮಣಿಯು ಏತಕ್ಕೆ ಹೇಳಿದಳು? ಅವಳು ಹೇಳಿದ್ದು ಸುಳ್ಳಾಗಿಯೇ ಇರಲಿ. ಸುಳ್ಳನ್ನೇ ನಿಜವೆಂದು ಯೋಚಿಸಿಕೊಂಡು ನೋಡೋಣ. ಆದರೆ ನಾನು ಕಲಕತ್ತೆಗೆ ಹೋಗಲಾರೆ. ಹೋದರೆ ನೋಡುವುದು ತಪ್ಪಿ ಹೋಗುತ್ತದೆ. ಹೋಗಲಾರೆ. ನಿಜವಾಗಿ ಹೋಗಲಾರೆ. ಹೋಗದಿದ್ದರೆ ಮಾಡುವುದೇನು? ಕಮಲಳು ಹೇಳಿದ್ದು ನಿಜವಾಗಿದ್ದರೆ, ನನ್ನನ್ನು ಇಷ್ಟು ಮಾಡಿ ಮುಂದಕ್ಕೆ ತಂದವರ ನಾಶಕ್ಕೆ ನಾನೇ ಕಾರಣಳಾಗುತ್ತೇನೆ. ಸೂರ್ಯ ಮುಖಿಯು ಮನಸ್ಸಿನಲ್ಲಿ ಏನೋ ಸಂಶಯು ಉಂಟಾಗಿದೆ ಎಂದು ತೋರುತ್ತದೆ. ನಿಜವೇ ಆಗಲಿ ಸುಳ್ಳೇ ಆಗಲಿ—ನಾನು ಕಲಕತ್ತೆಗೆ ಹೋಗಲೇ ಬೇಕೆಂದು ಕಾಣುತ್ತದೆ; ಆದರೆ ಹೇಗೆ ಹೋಗಲಿ? ಹೋಗಲಾರೆ. ಹಾಗಾದರೆ ಮುಣುಗಿ ಸತ್ತು ಹೋಗುತ್ತೇನೆ. ಸರೋವರದಲ್ಲಿ ಬಿದ್ದು ಪ್ರಾಣವನ್ನು ಬಿಟ್ಟುಬಿಡುತ್ತೇನ. ಇನ್ನು ಇದ್ದು ಪ್ರಯೋಜನವಿಲ್ಲ. ಅಪ್ಪಾ! ನೀನು ನನ್ನನ್ನು ಹೀಗೆ ದುರ್ಮರಣವನ್ನು ಹೊಂದಲೆಂದು ಬಿಟ್ಟುಹೋದಿಯಾ? ಎಂದು ಕುಂದಳು ತನ್ನ ಎರಡು ಕೈಗಳನ್ನು ತಲೆಯ ಮೇಲೆ ಇಟ್ಟು ಕೊಂಡು ರೋದನ ಮಾಡಲಾರಂಭಿಸಿದಳು. ಇದ್ದಕ್ಕಿದ್ದಹಾಗೆ ಅಂಧಕಾರದಲ್ಲಿ ದೀಪವನ್ನು ತಂದಿಟ್ಟಹಾಗೆ ಅವಳಾ ಸ್ವಪ್ನವೃತ್ತಾಂತವೆಲ್ಲ ಸ್ಪಷ್ಟವಾಗಿ ಮನಸ್ಸಿಗೆ ಹೊಳೆಯಿತು. ಆಗವಳು ವಿದ್ಯುತ್ ಸ್ಪಷ್ಟಳಾದವಳಹಾಗೆ

ಎದ್ದು ನಿಂತುಕೊಂಡು, ನಾನು ಎಲ್ಲಾ ಮರೆತಿದ್ದೆ. ಏತಕ್ಕೆ ಮರೆತುಬಿಟ್ಟೆ? ನಮ್ಮಮ್ಮನು ಇದನ್ನೆಲ್ಲ ನನಗೆ ತೋರಿಸಿದ್ದಳು. ನನ್ನ ಹಣೆಯ ಬರಹ ವನ್ನೆಲ್ಲ ಅರಿತು ಈ ನಕ್ಷತ್ರಲೋಕಕ್ಕೆ ಹೋಗಬೇಕೆಂದು ಹೇಳಿದ್ದಳು. ನಾನೇತಕ್ಕೆ ಅವಳ ಬುದ್ಧಿವಾದವನ್ನು ಕೇಳದೆಹೋದೆ? ನಾನು ಈಗಲೂ ಏತಕ್ಕೆ ಪ್ರಾಣವನ್ನು ಬಿಡಕೂಡದು? ಸಾವಕಾಶವೇತಕ್ಕೆ ಮಾಡುತ್ತೇನೆ? ನಾನು ಈಗಲೇ ಪ್ರಾಣವನ್ನು ಬಿಟ್ಟುಬಿಡುತ್ತೇನೆಂದು ಚಿಂತಿಸಿ, ಅವಳು ಎದ್ದು ಮೆಲ್ಲಮೆಲ್ಲಗೆ ಆ ಸರೋವರದ ಸೋಪಾನವನ್ನು ಇಳಿಯಲಾರಂಭಿಸಿ ದಳು. ಕುಂದಳು ಅಬಲೆಯಾಗಿ ಅತ್ಯಂತ ಭೀರುಸ್ವಭಾವವುಳ್ಳವಳಾಗಿ ಪ್ರತಿಹೆಜ್ಜೆಗೂ ಭಯಗ್ರಸ್ತಳಾಗಿ ಪ್ರತಿಹೆಜ್ಜೆಗೂ ನಡುಗಿದಳು. ಆದರೂ ಮನಸ್ಸು ಕದಲದೆ ಆ ತಾಯಿಯ ಆಜ್ಞಾಪರಿಪಾಲನಾರ್ಥವಾಗಿ ಮೆಲ್ಲಮೆಲ್ಲಗೆ ಇಳಿದುಹೋಗುತಲಿದ್ದಳು. ಈ ಸಮಯದಲ್ಲಿ ಹಿಂದಲಿಂದ ಯಾರೋ ಅವಳ ಬೆನ್ನಿನ ಮೇಲೆ ಕೈಯಿಟ್ಟು ಕುಂದ! ಎಂದು ಕರೆದಹಾಗಾಯಿತು. ಕುಂದ ಳು ಹಿಂದಿರುಗಿ ನೋಡಿದಳು. ಆ ಅಂಧಕಾರದಲ್ಲಿಯೂಕೂಡ ಅವಳಿಗೆ ಗೊತ್ತಾಯಿತು. ನಾಗೇಂದ್ರನಾಗಿದ್ದನು. ಕುಂದನಂದಿನಿಗೆ ಆ ದಿನ ಪುನಃ ಪ್ರಾಣವನ್ನು ಬಿಡುವುದಕ್ಕೆ ಅವಕಾಶವಾಗಲಿಲ್ಲ.

ನಾಗೇಂದ್ರ! ಇದೇನು? ನೀನು ಇಷ್ಟುಕಾಲ ಸುಚರಿತ್ರನಾಗಿದ್ದೆ. ಇದೇ, ನೀನು ಸುಶಿಕ್ಷಿತನಾದುದಕ್ಕೆ ಫಲ? ಛಿ! ನೀನು ಶುದ್ಧ ಕಳ್ಳ! ನೀನು ಕಳ್ಳನಿಗಿಂತಲೂ ಅಧಮ. ಕಳ್ಳನು ಸೂರ್ಯಮುಖಿಗೆ ಏನು ಮಾಡುತಲಿದ್ದ? ಅವಳ ನಗನಟ್ಟನ್ನು ಕಳವು ಮಾಡಿ ಅರ್ಥಹಾನಿಯನ್ನು ಮಾಡುತಲಿದ್ದ. ನೀನಾದರೋ, ಅವಳ ಪ್ರಾಣಹಾನಿಯನ್ನು ಮಾಡುವುದ ಕ್ಕೆ ಬಂದೆ. ಸೂರ್ಯಮುಖಿಯು ಕಳ್ಳನಿಗೆ ಏನೂ ಕೊಡುತಲಿರಲಿಲ್ಲವಾದು ದರಿಂದ ಅವನು ಕಳವು ಮಾಡಿ ಕಳ್ಳನಾಗುತಲಿದ್ದ. ನಿನಗಾದರೋ ಸೂ ರ್ಯಮುಖಿಯು ಸರ್ವಸ್ವವನ್ನೂ ಕೊಟ್ಟಿದ್ದಾಳೆ. ಆದರೂ ನೀನು ಕಳ್ಳನ

ಗಿಂತ ಹೆಚ್ಚಾಗಿ ಕಳವು ಮಾಡುವುದಕ್ಕೆ ಬಂದೆ! ನಾಗೇಂದ್ರ! ನೀನು ಪ್ರಾಣವನ್ನು ಬಿಟ್ಟರೆ ಚನ್ನಾಗಿ ಕಾಣುತ್ತದೆ. ಧೈರ್ಯವಿದ್ದರೆ ಹೋಗಿ ಸರೋವರದಲ್ಲಿ ಬಿದ್ದು ಪ್ರಾಣ ಬಿಡು.

ಛೀ! ಛೀ! ಕುಂದನಂದಿನಿ! ನೀನು, ಕಳ್ಳನು ಸ್ಪರ್ಶಮಾಡಿದರೆ ಕಂಪಿತಳಾದೆ ಏತಕ್ಕೆ? ಛೀ! ಕುಂದನಂದಿನಿ! ಕಳ್ಳನ ಮಾತು ಕೇಳಿ ಏತಕ್ಕೆ ನಿನ್ನ ಶರೀರವಲ್ಲಿ ಮುಳ್ಳು ಚುಚ್ಚಿದಹಾಗೆ ಆಗಬೇಕು? ಕುಂದನಂದಿನಿ! ನೋಡು, ಪುಷ್ಕರಿಣಿಯು ಜಲವು ಪರಿಷ್ಕಾರವಾಗಿ ಶೀತಲವಾಗಿ ಸುವಾಸಿತವಾಗಿದೆ. ವಾಯುವಿನ ಹಿಲ್ಲೋಲದಿಂದ ಅದರಡಿಯಲ್ಲಿ ನಕ್ಷತ್ರವು ಆಲ್ಲಾಡುತ್ತದೆ. ಮುಣುಗುವಿಯಾ? ಮುಣುಗಿ ಸಾಯಲಾರೆಯಾ? ಕುಂದಳು ಪ್ರಾಣ ಬಿಡಲು ಇಷ್ಟಪಡಲಿಲ್ಲ.

ಕಳ್ಳ—ಕುಂದ! ನಾಳೆ ಕಲಕತ್ತೆಗೆ ಹೋಗುತ್ತೀಯಾ?

ಕುಂದಳು ಮಾತನಾಡಲಿಲ್ಲ. ಕಣ್ಣು ಮುಂಚಿಕೊಂಡಳು. ಮಾತು ನಾಡಲಿಲ್ಲ.

ಕಳ್ಳ—ಕುಂದ! ನಿನ್ನ ಮನಃಪೂರ್ವಕವಾಗಿ ಹೋಗುವಿಯಾ?

ಮನಃಪೂರ್ವಕವಾಗಿಯೆ! ಹರಿ, ಹರಿ! ಕುಂದಳು ಪುನಃ ಕಣ್ಣು ಮುಚ್ಚಿಕೊಂಡಳು. ಮಾತನಾಡಲಿಲ್ಲ.

ಕುಂದ! ಅಳುವುದೇತಕ್ಕೆ?—ಕುಂದಳು ಈಸಲ ಅತ್ತುಬಿಟ್ಟಳು.

ಆಗ ನಾಗೇಂದ್ರನು—ಕೇಳು, ಕುಂದ! ನಾನು ಬಹಳ ಕಷ್ಟದಿಂದ ಇಷ್ಟುದಿನ ಸಹಿಸಿದೆ, ಇನ್ನು ಆಗುವುದಿಲ್ಲ. ಎಷ್ಟು ಕಷ್ಟದಿಂದ ಬದುಕಿಕೊಂಡಿದ್ದೇನೋ ಅದನ್ನು ಹೇಳಲಾರೆನು. ನನ್ನಸಂಗಡ ನಾನೇ ಯುದ್ಧಮಾಡಿಕೊಂಡು ಕ್ಷತವಿಕ್ಷತನಾಗಿದ್ದೇನೆ. ನಾನು ಶುದ್ಧವಾಗಿ ಇತರನಾಗಿ ಅಧಮನಾಗಿದ್ದೇನೆ. ಮದ್ಯಪಾಯಿಯಾಗಿದ್ದೇನೆ. ಇನ್ನು ತಡಿಯಲಾರೆ. ನಿನ್ನನ್ನು ಬಿಡಲಾರೆ. ಕೇಳು, ಕುಂದ! ಈಗ ವಿಧವಾವಿವಾಹವು ನಡೆ

ಯುತ್ತದೆ. ನಿನ್ನನ್ನು ಮದುವೆ ಮಾಡಿಕೊಳ್ಳುತ್ತೇನೆ. ನೀನು ಒಪ್ಪಿಕೊಂಡರೆ, ಮಾಡಿಕೊಳ್ಳುತ್ತೇನೆ. ಎಂದು ಹೇಳಿದನು.

ಕುಂದನಂದಿನಿಯು ಈಸಲ ಮಾತನಾಡಿದಳು. ನಾಗೇಂದ್ರನು ಕೇಳಿದ್ದಕ್ಕೆ 'ಇಲ್ಲ' ಎಂದಳು.

ಪುನಃ, ನಾಗೇಂದ್ರನು, ಏತಕ್ಕೆ? ಕುಂದ! ವಿಧವಾವಿವಾಹವು ಅಶಾಸ್ತ್ರೀಯವೆ? ಎಂದನು. ಕುಂದಳು ಪುನಃ 'ಇಲ್ಲ' ಎಂದಳು.

ನಾಗೇಂದ್ರನು, ಹಾಗಾದರೆ 'ಇಲ್ಲ' ಎನ್ನುವುದೇತಕ್ಕೆ? ಹೇಳು, ಜಾಗ್ರತೆಯಾಗಿ ಹೇಳು, ನನ್ನ ಗೃಹಿಣಿಯಾಗುವಿಯಾ ಅಥವಾ ಇಲ್ಲವೆ? ನನ್ನನ್ನು ಪ್ರೀತಿಸುತ್ತೀಯಾ ಅಥವಾ ಇಲ್ಲವೆ? ಎಂದನು.

ಕುಂದ—ಇಲ್ಲ.

ಆಗ ನಾಗೇಂದ್ರನು ಸಹಸ್ರವಿಧವಾಗಿ ಅಪರಿಮಿತವಾದ ಪ್ರೇಮಪೂರ್ಣವಾದ ಮರ್ಮಭೇದಿಯಾದ ಎಷ್ಟೋ ಮಾತುಗಳನ್ನು ಹೇಳಿದನು.

ಕುಂದ—ಇಲ್ಲ.

ನಾಗೇಂದ್ರನು ದೃಷ್ಟಿಸಿ ನೋಡಲಾಗಿ ಪುಷ್ಕರಿಣಿಯು ನಿರ್ಮಲವಾಗಿಯೂ, ಸುಶೀತಲವಾಗಿಯೂ ಕುಸುಮ-ವಾಸ-ಸುವಾಸಿತವಾಗಿಯೂ ಕಂಡಿತು. ವಾಯುವಿನ ಹಿಲ್ಲೋಲದಿಂದ ಅದರಲ್ಲಿ ನಕ್ಷತ್ರವು ಕಂಪಿತವಾಗುತಲಿತ್ತು. ಇದರಲ್ಲಿ ಶಯನ ಮಾಡುವುದು ಹೇಗೆ ಇರಬಹುದೊ ಎಂದು ಭಾವಿಸಿಕೊಳ್ಳುತ್ತಿದ್ದನು.

ಅಂತರ್‍ಯದಲ್ಲಿ ಕುಂದಳು, ಬೇಡವೆಂದು ಹೇಳಿ, ವಿಧವಾವಿವಾಹವು ಶಾಸ್ತ್ರದಲ್ಲಿದೆ. ಅದಕ್ಕೋಸ್ಕರ ಅಲ್ಲವೆಂದಳು. ಹಾಗಾದರೆ ಅವಳು ಮುಣುಗಿ ಸಾಯಲಿಲ್ಲವೇತಕ್ಕೆ? ಸ್ವಚ್ಛವಾದ ನೀರು, ಶೀತಲವಾದ ಜಲ. ಕೆಳಗೆ ನಕ್ಷತ್ರವು ಕುಣಿದಾಡುತ್ತದೆ. ಕುಂದಳು ಬಿದ್ದು ಸಾಯಲಿಲ್ಲವೇತಕ್ಕೆ?

## ಹದಿನೇಳನೆಯ ಪರಿಚ್ಛೇದ.

ಯೋಗ್ಯಂ ಯೋಗ್ಯೇನ ಯೋಜಯೇತ್ ।

ಹರಿದಾಸಿವೈಷ್ಣವಿಯು ಉಪವನಗೃಹದಲ್ಲಿ ಬಂದು ಇದ್ದಕಿದ್ದ ಹಾಗೆ ದೇವೇಂದ್ರಬಾಬುವಾಗಿ ಕೂತಳು. ಪಾರ್ಶ್ವದಲ್ಲಿ ಬಂದು ಹುಕ್ಕಾ. ವಿಚಿತ್ರವಾದ ಬೆಳ್ಳಿ ಸರಪಣಿಗಳ ಮಾಲಾಮಯಿಯಾಗಿಯೂ ಕಲ್ಪಕಲಕಲ್ಲೋಲ ಶಬ್ದಮಯಿಯಾಗಿಯೂ ಓಷ್ಠಚುಂಬನಾರ್ಥವಾಗಿ ಸುಂದರವಾದ ದೀರ್ಘವಾದ ನಾಳವನ್ನು ಉದ್ದಮಾಡಿದಳು. ಅದರ ತಲೆಯಮೇಲೆ ಸುವಾಸಿತವಾದ ಬೆಂಕಿಯು ಉಜ್ವಲವಾಗಲಾರಂಭವಾಯಿತು. ಮತ್ತೊಂದು ಪಾರ್ಶ್ವದಲ್ಲಿ ಸ್ಫಟಿಕಪಾತ್ರದಲ್ಲಿ ಮೋಹಾಂಗಿಯಾದ ಏಕ್ಷಾ (Exshaw ಉತ್ಕೃಷ್ಟವಾದ ಬ್ರಾಂದಿವಿಶೇಷ) ಕುಮಾರಿಯು ದ್ರವಮಯಿಯಾಗಿ ಥಳಥಳಹೊಳೆಯುತ್ತಿದ್ದಳು. ದೇವೇಂದ್ರನು ಹುಕ್ಕೆಯ ಮುಖಚುಂಬನ ಮಾಡಿದನು. ಅವಳಪ್ರೇಮವು ಧೂಮಾಕಾರವಾಗಿ ಎದ್ದಿತು. ಏಕ್ಷಾಕುಮಾರಿಯನ್ನು ಉದರಸ್ಥಮಾಡಿದನು. ಅವಳು ಕ್ರಮವಾಗಿ ತಲೆಯಮೇಲೆ ಏರಿದಳು. ಇದಕ್ಕೆ ತಕ್ಕಂತೆ ಇತರಸೇವನೆಯೂ ಆಯಿತು.

ಆಗ ಸುರೇಂದ್ರನು ಬಂದು ದೇವೇಂದ್ರನ ಹತ್ತರ ಕೂತುಕೊಂಡು ಅವನ ಆರೋಗ್ಯವನ್ನು ಕುರಿತು ಕುಶಲಪ್ರಶ್ನೆಗಳನ್ನು ಮಾಡಿ, ಅನಂತರ ಈಹೊತ್ತು ನೀನು ಎಲ್ಲಿಗೆ ಹೋಗಿದ್ದೆ ಎಂದು ಕೇಳಿದನು.

ದೇವೇಂದ್ರ—ಇಷ್ಟರೊಳಗೆ ಅದು ನಿನ್ನ ಕಿವಿಗೆ ಬಿತ್ತೆ ?

ಸುರೇಂದ್ರ—ನಿನಗೆ ಇದೊಂದು ಭ್ರಮೆ. ನೀನು ಮಾಡುವುದೆಲ್ಲ ಯಾರಿಗೂ ತಿಳಿಯದೆ ಮಾಡುತ್ತೇನೆಂದು ತಿಳಿದಿದ್ದೀಯಾ ? ಆದರೆ ನೀನು ಮಾಡುವುದೆಲ್ಲಾ ಊರೂರಲ್ಲಿ ಡಂಗೋರೆಯಾಗಿರುತ್ತೆ.

ದೇವೇಂದ್ರ—ಸಾಕಪ್ಪಾ, ನಿಮ್ಮ ಧರ್ಮಾಚರಣೆ ! ನಾನು ಯಾವದ

ನ್ನೂ ಮರೆಮಾಚಿ ಮಾಡಬೇಕೆಂದಿಲ್ಲ. ಏತಕ್ಕೆ ಮರೆಮಾಚಬೇಕು ?

ಸುರೇಂದ್ರ—ಅದೊಂದು ದೊಡ್ಡಸ್ತಿಕೆ ಎಂದು ತಿಳಿಯಬೇಡ. ನಿನಗೆ ಸ್ವಲ್ಪ ನಾಚಿಗೆಯಿದ್ದರೆ ಏನಾದರೂ ಹೇಳಬಹುದು. ಲಜ್ಜೆಯಿದ್ದರೆ ವೈಷ್ಣವಿಯ ವೇಷದಲ್ಲಿ ಊರೂರು ಅಲೆಯುತ್ತಿದ್ದೆಯಾ ?

ದೇವೇಂದ್ರ—(ನಕ್ಕು)—ಆದರೆ ನಾನು ಎಂತಹ ವೈಷ್ಣವಿಯಾಗಿದ್ದೆ ; ನೀನು ನೋಡಲಿಲ್ಲವೆ ? ಬಹಳ ಸೊಗಸಾಗಿತ್ತು.

ಸುರೇಂದ್ರ—ನಾನು ಆ ಸುಟ್ಟ ಮುಖವನ್ನು ನೋಡಲಿಲ್ಲ. ನೋಡಿದ್ದರೆ ಕಮಚಿಕಿತ್ತೆಗೆದುಕೊಂಡು ಆ ವೇಷದ ಸೊಗಸನ್ನ ತೋರಿಸುತಲಿದ್ದೆ.

ಅನಂತರ ಸುರೇಂದ್ರನು ಅವನ ಕೈಲಿದ್ದ ಮದ್ಯಪಾತ್ರವನ್ನು ಕಿತ್ತು ತೆಗೆದುಕೊಂಡು, ಕುಡಿಯುವುದು ನಿಲ್ಲಿಸು, ಮೈಮೇಲೆ ಸ್ಮರಣೆಯಿದ್ದಹಾಗೆ ಎರಡುಮಾತು ಹೇಳುತ್ತೇನೆ, ಕೇಳಿ ಅನಂತರ ಬೇಕಾದರೆ ಕುಡಿ ಎಂದನು.

ದೇವೇಂದ್ರ—ಹೇಳಪ್ಪಾ ! ಈಹೊತ್ತು ಬಹಳ ಗದ್ದಲಮಾಡುವ ಹಾಗಿದೆ. ಹೈಮವತಿಯ ಗಾಳಿಯು ನಿನಗೂ ಬೀಸಿರುವಹಾಗೆ ಕಾಣುತ್ತದೆ.

ಸುರೇಂದ್ರನು ಆ ದುರ್ಮುಖನ ಮಾತಿಗೆ ಕಿವಿಗೊಡದಹಾಗೆ, ಯಾರನ್ನ ಹಾಳುಮಾಡುವುದಕ್ಕೆ ವೈಷ್ಣವಿಯವೇಷದಲ್ಲಿ ಹೋಗಿದ್ದೆ ? ಎಂದನು.

ದೇವೇಂದ್ರ—ಅದು ಗೊತ್ತಾಗಲಿಲ್ಲವೆ ? ಮಾಸ್ಟರು ತಾರಾಚರಣನು ಒಂದು ದೇವಕನ್ಯೆಯಂತಹ ಹುಡುಗಿಯನ್ನು ಮದುವೆಮಾಡಿಕೊಂಡಿದ್ದುದು ಜ್ಞಾಪಕವಿದೆಯಷ್ಟೆ ? ಆ ದೇವಕನ್ಯೆಯು ಈಗ ವಿತಂತುವಾಗಿದ್ದಾಳೆ. ಆ ದೈತ್ಯನಾದ ದತ್ತನಮನೇಲಿ ಅಡಿಗೆಮಾಡಿಕೊಂಡು ಊಟಮಾಡುತ್ತಾಳೆ. ಅವಳನ್ನು ನೋಡುವುದಕ್ಕೆ ಹೋಗಿದ್ದೆ.

ಸುರೇಂದ್ರ—ನೀನು ಇನ್ನೂ ಎಷ್ಟು ದುರ್ವೃತ್ತಿಗೆ ಬೀಳಬೇಕು ? ಈಗ ಬಿದ್ದಿರುವುದು ಸಾಲದೆ ? ಆ ಅನಾಥಳಾದ ಬಾಲೆಯನ್ನು ಅಧಃಪಾತಕ್ಕೆ ತಳ್ಳಬೇಕೆ ? ನೋಡು, ದೇವೇಂದ್ರ ! ನೀನು ಬಹಳ ಪಾಪಿಷ್ಠನಾದೆ.

ಅತ್ಯಂತ ನೃಶಂಸನಾಗುತ್ತ ಬಂದೆ; ಕೇವಲ ಅತ್ಯಾಚಾರಕ್ಕೆ ಬಿದ್ದೆ. ಇನ್ನು ನೀನು ನನ್ನ ಸಹವಾಸಕ್ಕೆ ಯೋಗ್ಯನಲ್ಲ. ನಿನ್ನ ಸಹವಾಸವನ್ನು ಮಾಡ ಲಾರೆನು.

ಸುರೇಂದ್ರನು ಇಷ್ಟು ದಾರ್ಢ್ಯದಿಂದ ಖಂಡಿತವಾಗಿ ಹೇಳಿದ್ದನ್ನು ಕೇಳಿ ದೇವೇಂದ್ರನು ನಿಸ್ತಬ್ಧನಾಗಿ, ಅನಂತರ ಗಂಭೀರಭಾವದಿಂದ ನೀನು ನನ್ನಮೇಲೆ ಕೋಪಮಾಡಬೇಡ. ನನ್ನ ಮನಸ್ಸು ನನ್ನ ವಶದಲ್ಲಿಲ್ಲ. ನಾನು ಏನು ಬೇಕಾದರೂ ತ್ಯಾಗಮಾಡಬಲ್ಲೆನು. ಆದರೆ ಹೆಂಗಸಿನ ಮೇ ಲಿನ ಆಶೆಯನ್ನು ಮಾತ್ರ ಬಿಡಲಾರೆನು. ಮೊದಲು ಯಾವದಿನ ಅವಳನ್ನು ತಾರಾಚರಣನ ಮನೆಯಲ್ಲಿ ನೋಡಿದೆನೋ ಆ ದಿನ ಮೊದಲ್ಗೊಂಡು ಅವಳ ಸೌಂದರ್ಯದಲ್ಲಿ ಮುಗ್ಧನಾಗಿದ್ದೇನೆ. ನಾನು ಅಂತಹ ಸೌಂದರ್ಯವನ್ನು ಮತ್ತೆ ಲ್ಲಿಯೂ ನೋಡಿಲ್ಲ. ಜ್ವರದಲ್ಲಿ ಬಾಯಾರಿಕೆಯು ಹೇಗೆ ರೋಗಿಯನ್ನು ದಗ್ಧಮಾಡುತ್ತದೋ ಹಾಗೆಯೇ ಆದಿನ ಮೊದಲ್ಗೊಂಡು ಅವಳಮೇಲಿನ ಮಮತೆಯು ನನ್ನನ್ನು ಸುಡುತಲಿದೆ. ಅದು ಮೊದಲ್ಗೊಂಡು ನಾನು ಅವ ಳನ್ನು ನೋಡಲು ಎಷ್ಟೋ ಪ್ರಯತ್ನಪಟ್ಟೆನು. ಆಗಲಿಲ್ಲ. ಕಡೆಗೆ ಈ ವೈಷ್ಣವಿಯ ವೇಷವನ್ನು ಧರಿಸಿದೆನು. ಅವಳು ಅತ್ಯಂತ ಸಾಧ್ವಿ ಎಂಬಂ ಶದಲ್ಲಿ ನೀನು ಎಷ್ಟು ಮಾತ್ರವೂ ಶಂಕಿಸಬೇಡವೆಂದು ಹೇಳಿದನು.

ಸುರೇಂದ್ರ—ಹಾಗಾದರೆ ಏತಕ್ಕೆ ಹೋಗುತ್ತಿ ?

ದೇವೇಂದ್ರ—ಕೇವಲ ಅವಳನ್ನು ನೋಡುವುದಕ್ಕೆ ಮಾತ್ರ ಹೋಗು ತ್ತೇನೆ. ಅವಳನ್ನು ನೋಡಿ ಅವಳ ಸಂಗಡ ಮಾತನಾಡಿ, ಅವಳಿಗೋ ಸ್ಕರ ಸಂಗೀತವನ್ನು ಹಾಡಿ ಬರುವುದರಲ್ಲಿ ಎಷ್ಟು ತೃಪ್ತನಾಗಿದ್ದೇನೋ ಅದನ್ನು ಹೇಳಲಾರೆನು.

ಸುರೇಂದ್ರ—ನಾನು ನಿನಗೆ ನಿಜವಾಗಿ ಹೇಳುತ್ತೇನೆ—ಏನಂದರೆ ;— ನೀನು ಈ ದುಷ್ಟವೃತ್ತಿಯನ್ನು ಬಿಡದೆ ಅದೇ ಮಾರ್ಗದಲ್ಲಿ ಹೋಗುವುದಾ

ದರೆ ನಿನಗೂ ನನಗೂ ಮಾತು ನಿಂತುಹೋಗುತ್ತದೆಯಲ್ಲದೆ ನಾನೂಕೂಡ ನಿನ್ನಲ್ಲಿ ಶತ್ರುವಾಗಿ ವರ್ತಿಸುವೆನು. ಇದು ಹುಡುಗಾಟದ ಮಾತು ಅಲ್ಲ. ಚನ್ನಾಗಿ ತಿಳಿಯಬೇಕು.

ದೇವೇಂದ್ರ—ನನಗೆ ಇರುವವನು ನೀನೊಬ್ಬ ಮಾತ್ರ ಸ್ನೇಹಿತ. ಇನ್ನ್ಯಾರೂ ಇಲ್ಲ. ನಿನಗೋಸ್ಕರ ನನ್ನಲ್ಲಿರುವ ಅರ್ಥ ದುರ್ಗುಣಗಳನ್ನೆಲ್ಲ ಬಿಟ್ಟುಬಿಡುವೆನು. ನಿನ್ನನ್ನು ಮಾತ್ರ ಬಿಡಲಾರೆನು. ಆದರೆ ಮತ್ತೊಂದು ಹೇಳುತ್ತೇನೆ—ಏನಂದರೆ;— ನಿನ್ನನ್ನಾದರೂ ಬಿಡುವೆನೇ ಹೊರ್ತು ಕುಂದನಂ ದಿನಿಯನ್ನು ನೋಡುವ ಆಶೆಯನ್ನು ಮಾತ್ರ ಬಿಡಲಾರೆನು.

ಸುರೇಂದ್ರ—ಹಾಗಾದರೆ ಹಾಗೆಯೇ ಆಗಲಿ. ನನಗೂ ನಿನಗೂ ಇದೇ ಕಡೇ ಸಂದರ್ಶನ.

ಇಷ್ಟು ಹೇಳಿ ಸುರೇಂದ್ರನು ದುಃಖಿತನಾಗಿ ಹೊರಟುಹೋದನು. ದೇವೇಂದ್ರನು ಏಕಮಾತ್ರ ಬಂಧುವಿಚ್ಛೇದದಿಂದ ಮನಗುಂದಿದವನಾಗಿ ಸ್ವಲ್ಪಹೊತ್ತು ವ್ಯಸನಾಕ್ರಾಂತನಾಗಿ ಕುಳಿತಿದ್ದನು. ಕಡೆಗೆ ಹಾಗೆಯೇ ಯೋಚಿಸಿ, ಹೋದರೆ ಹೋಗಲಿ ! ಈ ಪ್ರಪಂಚದಲ್ಲಿ ಯಾರಿಗೆ ಯಾರು ! ನನಗೆ ನಾನೇ ! ಎಂದಂದುಕೊಂಡು ಪಾತ್ರವನ್ನು ತುಂಬಿ ಬ್ರಾಂದಿಯನ್ನು ಪಾನ ಮಾಡಿದನು. ಅದರಿಂದ ಕೂಡಲೇ ಚಿತ್ತವು ಪ್ರಫುಲ್ಲವಾಯಿತು. ಆಗವನು ಹಾಗೆಯೇ ಬಿದ್ದುಕೊಂಡು ಕಣ್ಣುಗಳನ್ನು ಮುಚ್ಚಿಕೊಂಡು ಹಾಡುವುದಕ್ಕೆ ಪ್ರಾರಂಭಿಸಿದನು :—

॥ ಪಲ್ಲವಿ ॥ ಅಂದಚಂದವನೋಡಿ ಜನರೆಲ್ಲ

॥ ಅನು ॥ ಸುಂದರಿ ಸೊಬಗು ಸಂಪತ್ತುಗಳೆಲ್ಲ ॥

ವಜ್ರಮಾಲಿನಿಯೆಂದು ಹೆಸರು । ನನಗೆ । ವಜ್ರಮಾಲಿನಿಯೆಂದು ಹೆಸರು
ಇರುವೇನುಪ್ರೊದರೀನೊ । ಇನ್ನೇನುಕಡಮೆ । ನನಗಿನ್ನೇನುಕಡಮೆ ॥
ನಾದೀನಿಕುಬ್ಜೆಕಾಣಕ್ಕಾ । ನನ್ನ । ನಾದೀನಿ ಕುಬ್ಜೆಕಾಣಕ್ಕಾ ।

ಆವಶಕಂಠಕರಿಯುವ । ಚಂದ್ರಾ । ವಳಿಯಂದಕ್ಕಾ ॥

ವರಕೀಚಕ ನನ್ನೋನೆಂದು । ಆ । ವರಕೀಚಕ ನನ್ನೋನೆಂದು

ಶೌರಿಕಾಪಾಡೀದ । ದ್ರೌ । ಪದಿಯತಾನೆಂದು ದ್ರೌಪದಿಯತಾನೆಂದು ॥

ಆಗ ಅವನ ಜತೆಗಾರರೆಲ್ಲರೂ ಹೊರಟುಹೋಗಿದ್ದರು. ಅವನು ನದಿಯಲ್ಲಿ ದೋಣಿಯಿಂದ ಬಿದ್ದುಹೋದ ಹೂಟೆಮರದ ಹಾಗೆ ಒಬ್ಬನೇ ಕುಳಿತುಕೊಂಡು ರಸದ ತರಂಗದಲ್ಲಿ ಮುಳುಗೇಳುತಲಿದ್ದನು. ರೋಗರೂಪವಾದ ತಿಮಿ ಮಕರಾದಿಗಳು ಜಲದಲ್ಲಿ ಔತುಕೊಂಡಿದ್ದವು. ಆಗ ಕೇವಲ ಮಂದಮಾರುತ ಮತ್ತು ಬೆಳದಿಂಗಳು. ಈ ಸಮಯದಲ್ಲಿ ಕಿಟಕಿಯಕಡೆಯಲ್ಲಿ ಏನೋ ಕರಕರ ಶಬ್ದವಾಯಿತು. ಗವಾಕ್ಷದ ಬಾಗಲು ತೆರೆಯಲ್ಪಟ್ಟಿತು. ದೇವೇಂದ್ರನು ಯಾರೋ ಹೊಂಚು ಹಾಕಿ ನೋಡುತ್ತಾರೆಂದು ತಿಳಿದುಕೊಂಡು ಅದ್ಯಾರು ಕಳವು ಮಾಡುವವರೆಂದನು. ಯಾರೂ ಉತ್ತರವನ್ನು ಕೊಡದಿರುವುದನ್ನು ಕಂಡು ಎದ್ದು ನೋಡಲಾಗಿ ಯಾರೋ ಹೆಂಗಸೊಬ್ಬಳು ಓಡಿಹೋಗುತ್ತಿದ್ದಳು. ಹೆಂಗಸು ಓಡುತ್ತಾಳೆಂದು ಕಂಡು ದೇವೇಂದ್ರನು ಗವಾಕ್ಷವನ್ನು ಹತ್ತಿ ಹಾರಿ ಬಿದ್ದು, ಬದ್ದೇಳುತ್ತ ಅವಳ ಹಿಂದೆ ಓಡಿದನು.

ಹೆಂಗಸು ಅನಾಯಾಸವಾಗಿ ಅವನ ಕೈಗೆ ಸಿಕ್ಕದೆ ಓಡಿಹೋಗಬಹುದಾಗಿತ್ತು. ಆದರೆ ಬೇಕೆಂತಲೇ ಓಡಿಹೋಗಲಿಲ್ಲವೋ, ಅಥವಾ ಅಂಧಕಾರದಲ್ಲಿ ಆ ಹೂವಿನ ತೋಟದಲ್ಲಿ ಹಾದಿ ತಪ್ಪಿದಳೋ ಗೊತ್ತಾಗಿ ಹೇಳಲಾರೆವು. ದೇವೇಂದ್ರನು ಹೋಗಿ ಅವಳನ್ನು ಹಿಡಿದುಕೊಂಡನು. ಕತ್ತಲೆಯಲ್ಲಿ ಅವಳ ಮುಖವನ್ನು ನೋಡಿದನು. ಅವನಿಗೆ ಗೊತ್ತಾಗಲಿಲ್ಲ. ಮದ್ಯಪಾನದ ಝೋಲಿಯಲ್ಲಿ, ವಹವಾಃ! ಯಾವ ಮರದಿಂದ ಬಿದ್ದದ್ದು? ನೀನು ಯಾರಪತ್ನಿಯೆ? ಎಂದು ಹೇಳಿ ಪುನಃ ಈ ಹೊತ್ತು ಆಗುವದಿಲ್ಲ, ಸ್ವಾಮಿ! ಅಮಾವಾಸ್ಯೆದಿನ ಭಕ್ಷಭೋಜ್ಯ ಮಾಡಿಸಿ ಪೂಜೆಯನ್ನು ಮಾಡುತ್ತೇನೆ;

ಇಂದು ಸ್ವಲ್ಪ ಬ್ರಾಂದಿಯನ್ನು ಕುಡಿದು ಹೋಗೆಂದು ಹೇಳಿ ಆ ಹೆಂಗಸನ್ನು ಬೈಠಕಖಾನೆಗೆ ಎಳೆದುಕೊಂಡು ಬಂದು ಗ್ಲಾಸಿನಲ್ಲಿ ಬ್ರಾಂದಿಯನ್ನು ಹಾಕಿ ಅವಳ ಕೈಲಿ ಕೊಟ್ಟನು.

ಹೆಂಗಸು ತೆಗೆದುಕೊಳ್ಳದೆ ಗ್ಲಾಸನ್ನು ಕೆಳಗೆ ಇಟ್ಟಳು. ಹೆಂಡ ಕುಡಕನು ಪುನಃ ಬೆಳಕು ತಂದು ನೋಡಿ, ನೀನು ಯಾರು, ಎಲ್ಲಿಯೋ ಕಂಡಹಾಗಿದೆ ಎಂದನು.

ಹೆಂಗಸು ಸಿಕ್ಕಬಿದ್ದೆನೆಂದು ತಿಳಿದು ನಾನು ಹೀರಾ ಎಂದಳು.

Hurrah! Three Cheers to ಹೀರಾ! ಎಂದು ಹೇಳಿ ಮದ್ಯಪಾಯಿಯು ಕುಣಿದಾಡಿ ಕಡೆಗೆ ಭೂಮಿಷ್ಠನಾಗಿ ಅವಳಿಗೆ ನಮಸ್ಕಾರವನ್ನು ಮಾಡಿ ಎದ್ದು ಕೈಯಲ್ಲಿ ಗ್ಲಾಸನ್ನು ಹಿಡಿದುಕೊಂಡು ಸ್ತೋತ್ರವನ್ನು ಮಾಡಲಾರಂಭಿಸಿದನು;—

ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋನಮಃ ।
ಯಾದೇವೀವಟವೃಕ್ಷೇಷು ಛಾಯಾರೂಪೇಣಸಂಸ್ಥಿತಾ ॥೧॥
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋನಮಃ ।
ಯಾದೇವೀದತ್ತಭವನೆ ಹೀರಾರೂಪೇಣಸಂಸ್ಥಿತಾ ॥೨॥
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋನಮಃ ।
ಯಾದೇವಿಪುಷ್ಕರತಟೆ ಶೂರ್ಪಹಸ್ತೆನಸಂಸ್ಥಿತಾ ॥೩॥
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋನಮಃ ।
ಯಾದೇವೀಸದನದ್ವಾರೆ ಮಾರ್ಜನೀಹಸ್ತಸಂಸ್ಥಿತಾ ॥೪॥
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋನಮಃ ।
ಯಾದೇವೀಮದ್ಗೃಹೇನಿತ್ಯಂ ಪತ್ನೀರೂಪೇಣಸಂಸ್ಥಿತಾ ॥೫॥
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋನಮಃ ।
ಹೀರೆಯು ಇದಕ್ಕೆ ಮುಂಚೆ ಮಧ್ಯಾಹ್ನದಲ್ಲಿಯೇ ವೈಷ್ಣವಿಯ

ಹಿಂದೆ ಬಂದು ವೈಷ್ಣವಿಯೂ ದೇವೇಂದ್ರಬಾಬುವೂ ಸಹ ಬಂದೇ ವ್ಯಕ್ತಿಯೆಂದು ಗೊತ್ತುಮಾಡಿಕೊಂಡು ಹೋಗಿದ್ದಳು. ಆದರೆ ದೇವೇಂದ್ರನು ಈ ವೇಷದಲ್ಲಿ ದತ್ತನ ಮನೆಗೆ ಏತಕ್ಕೆ ಬಂದು ಹೋಗುತ್ತಾನೆಂಬುದು ಗೊತ್ತಾಗದೆ ಅವಳು ಇದನ್ನು ಹೇಗಾದರೂ ಗೊತ್ತುಮಾಡಿಕೊಳ್ಳಬೇಕೆಂಬ ಸಂಕಲ್ಪವುಳ್ಳವಳಾಗಿ ಧೈರ್ಯಮಾಡಿ ಈ ಅವೇಳೆಯಲ್ಲಿ ದೇವೇಂದ್ರನಮನೆಗೆ ಬಂದು ಗವಾಕ್ಷದ ಹತ್ತಿರ ನಿಂತುಕೊಂಡಿದ್ದು ದೇವೇಂದ್ರನಿಗೂ ಸುರೇಂದ್ರನಿಗೂ ನಡೆದ ಮಾತುಗಳನ್ನು ಕೇಳಿ ಸಿದ್ಧಮನಃಕಾಮಳಾಗಿ ಹಿಂದಿರುಗಿ ಹೋಗುತ್ತಿದ್ದಳು. ಆಗ ದೇವೇಂದ್ರನು ಬಂದು ಹಿಡಿದು ಕರೆದುಕೊಂಡು ಬಂದು ಬೈಠಕಖಾನೆಯಲ್ಲಿ ಅವಳಿಗೂ ಪಾನಕ್ಕೆ ಮದ್ಯವನ್ನು ಕೊಟ್ಟನು ಆದರೆ ಅವಳು ಕುಡಿಯದೆ ತಾವೇ ಪಾನಮಾಡಬಹುದೆಂದು ಹೇಳುತ್ತಲೇ ದೇವೇಂದ್ರನು ಕುಡಿದುಬಿಟ್ಟನು. ಅದು ಅವನಿಗೆ ಪೂರ್ಣಮಾತ್ರೆಯಾಯಿತು. ಮದ್ಯದ ವೇಗವು ತಲೆಗೆ ಏರಿ ದೇವೇಂದ್ರನು ಕೂತಿರಲು ಸಾಮರ್ಥ್ಯವು ಸಾಲದೆ ಮಲಗಿಕೊಂಡನು. ಹೀರೆಯು ಸಮಯನೋಡಿಕೊಂಡಿದ್ದವಳು ಎದ್ದು ತನ್ನ ಮನೆಗೆ ಹೊರಟು ಹೋದಳು. ಮರುದಿನ ಪ್ರಾತಃಕಾಲದಲ್ಲಿ ಹೋಗಿ ಸೂರ್ಯಮುಖಿಗೆ ದೇವೇಂದ್ರನ ಸಮಾಚಾರವನ್ನೆಲ್ಲ ತಿಳಿಸಿದಳು. ಕುಂದನಂದಿನಿಯು ನಿರ್ದೋಷಿಯೆಂಬ ಮಾತನ್ನು ಮಾತ್ರ ತಿಳಿಸಲಿಲ್ಲ. ಸೂರ್ಯಮುಖಿಯೂ ವಿಚಾರಿಸಿ ತಿಳಿದುಕೊಳ್ಳಲಿಲ್ಲ. ಹೀರೆ ಆ ಮಾತನ್ನು ಏತಕ್ಕೆ ಮರೆಮಾಚಿದಳೋ ಪಾಠಕರಿಗೆ ಕ್ರಮೇಣ ಗೊತ್ತಾಗುತ್ತದೆ. ಸೂರ್ಯಮುಖಿಯು ಕುಂದಳು ವೈಷ್ಣವಿಯೊಂದಿಗೆ ಏಕಾಂತವಾಗಿ ಮಾತನಾಡುತಲಿದ್ದದುನ್ನು ನೋಡಿದ್ದಳು. ಆದಕಾರಣ ಅವಳು ಕುಂದಳನ್ನು ದೋಷಿಯಾಗಿರಬೇಕೆಂದು ತಿಳಿದಳು. ಹೀರೆ ಹೇಳಿದ ಮಾತುಗಳನ್ನು ಕೇಳಿ ಸೂರ್ಯಮುಖಿಯು ನೀಲೋತ್ಪಲದ ಹಾಗಿದ್ದ ಕಣ್ಣುಗಳಲ್ಲಿ ರಂಗು ಏರಿತು. ಅವಳ ಕಪೋಲದ ನರಗಳು ಎದ್ದು ದಪ್ಪವಾದವು. ಕಮಲಳೂ ಎಲ್ಲಾ

ಸಮಾಚಾರವನ್ನು ಕೇಳಿದಳು. ಸೂರ್ಯಮುಖಿಯು ಕುಂದಳನ್ನು ಕರೆಸಿದಳು. ಅವಳು ಬರುತ್ತಲೇ, ಸೂರ್ಯಮುಖಿಯು, ಕುಂದ! ಹರಿದಾಸಿ ವೈಷ್ಣವಿಯು ಯಾರೆಂಬುದು ಗೊತ್ತಾಯಿತು. ಅವನು ನಿನ್ನ ಉಪಪತಿಯೆಂದು ತಿಳಿಯಬಂತು. ನೀನು ಎಂತಹವಳೆಂದು ಈಗ ತಿಳಿದೆನು. ನಾವು ಇಂತಹ ಕೆಟ್ಟ ಹೆಂಗಸರನ್ನು ಮನೆಯಲ್ಲಿಟ್ಟುಕೊಳ್ಳುವುದಿಲ್ಲ. ನೀನು ಈಗಲೇ ಮನೆಯನ್ನು ಬಿಟ್ಟು ಹೊರಟುಹೋಗು. ಇಲ್ಲದಿದ್ದರೆ ಹೀರಾದಾಸಿಯು ಬಂದು ನಿನ್ನನ್ನು ಕಸಬರಿಗೆಯಿಂದ ಹೊಡೆದು ಹೊರಡಿಸುವುಳು ಎಂದು ಹೇಳಿದಳು.

ಇದನ್ನು ಕೇಳಿ ಕುಂದಳಿಗೆ ಮೈನಡುಗಿತು. ಕಮಲಳು ಅವಳು ಹಾಗೆಯೇ ನೆಲಕ್ಕೆ ಬೀಳುವ ಸಂಭವವನ್ನು ಕಂಡು ಅವಳನ್ನು ಹಿಡಿದುಕೊಂಡು ಮೆಲ್ಲಗೆ ಅವಳ ಮಲಗುವ ಕೋಠಡಿಗೆ ಕರೆದುಕೊಂಡು ಹೋಗಿ, ಅಲ್ಲಿ, ಕುಂದ! ಯಜಮಾನಿಯು ಏನು ಹೇಳಿಕೊಂಡರೂ ಹೇಳಿಕೊಳ್ಳಲಿ; ಆ ಮಾತುಗಳಲ್ಲಿ ನಾನೊಂದನ್ನೂ ನಂಬುವುದಿಲ್ಲವೆಂದು ಅನೇಕ ವಿಧವಾಗಿ ಸಮಾಧಾನೋಕ್ತಿಗಳನ್ನು ಹೇಳಿದಳು. 12362

## ಹದಿನೆಂಟನೆಯ ಪರಿಚ್ಛೇದ.

### ಅನಾಥಿನೀ.

ಗಭೀರವಾದ ರಾತ್ರಿಯಲ್ಲಿ ಮನೆಯವರೆಲ್ಲರೂ ಮಲಗಿದ ಮೇಲೆ ಕುಂದನಂದಿನಿಯು ತಾನು ಮಲಗಿದ್ದ ಕೋಠಡಿಯ ಬಾಗಿಲು ತೆರೆದು ಹೊರಗೆ ಹೊರಟು ಉಟ್ಟದ್ದೊಂದುಬಟ್ಟೆಯಲ್ಲಿ ಸೂರ್ಯಮುಖಿಯ ಮನೆಯನ್ನು ಬಿಟ್ಟು ಹೊರಟುಹೋದಳು. ಆ ಗಭೀರವಾದ ರಾತ್ರಿಯಲ್ಲಿ ಏಕವಸನದಿಂದ ಹದಿನೇಳು ವರುಷದ ಆ ಅನಾಥಳಾದ ಹುಡುಗಿಯು ಇಹಸಂಸಾರಸಾಗರದಲ್ಲಿ

ಏಕಾಕಿನಿಯಾಗಿ ಧುಮುಕಿಬಿಟ್ಟಳು.

ಕುಂದನಂದಿನಿಯು ಯಾವಾಗಲೂ ಹೊರಗೆ ಹೋದವಳಲ್ಲ. ರಾತ್ರಿಯಲ್ಲಿ ಮನೆಯ ಸುತ್ತಲೂ ತಿರುತಿರುಗಿ ಕಡೆಗೆ ನಾಗೇಂದ್ರನು ಮಲಗುವ ಕೊಠಡಿಯ ಗವಾಕ್ಷದ ಹತ್ತಿರ ಬಂದು ನಿಂತಳು. ಅಲ್ಲಿ ಒಳಗೆ ಬೆಳಕು ಕಾಣಿಸುತಲಿತ್ತು. ಅದನ್ನು ಕಂಡು ಪತಂಗದಹುಳುಗಳು ದೀಪಕ್ಕೆ ಹೋಗಿ ಬೀಳುವ ಆಶೆಯಿಂದ ಒಳಗೆ ಹೋಗಲು ಪ್ರಯತ್ನಪಡುತಲಿದ್ದವು. ಆದರೆ ಗವಾಕ್ಷದ ಬಾಗಲುಗಳಿಗೆ ಕನ್ನಡಿ ಹಾಕಿದ್ದುದರಿಂದ ಆಶಾಭಗ್ನವಾಗಿ ಅಲ್ಲಿಯೇ ಹಾರಾಡುತಲಿದ್ದವು, ಕುಂದಳು ಮನಸ್ಸಿನಲ್ಲಿ ಅವುಗಳಿಗೋಸ್ಕರ ಪಶ್ಚಾತ್ತಾಪಪಟ್ಟಳು.

ಕುಂದನಂದಿನಿಯು ಮುಗ್ಧಲೋಚನಳಾಗಿ ಆ ಗವಾಕ್ಷದಿಂದ ಬಂದ ಬೆಳಕನ್ನೇ ನೋಡುತಲಿದ್ದಳು. ಆ ಬೆಳಕುಬಿಟ್ಟು ಹೋಗಲಾರಳು. ಆ ಕೊಠಡಿಯ ಮುಂದುಗಡೆ ಕೆಲವು ದೊಡ್ಡ ಹುಣಸೆಮರಗಳು ಇದ್ದವು. ಕುಂದಳು ಆ ಮರದ ಬುಡದಲ್ಲಿ ಗವಾಕ್ಷಿಗೆ ಇದುರಾಗಿ ಕೂತಳು. ರಾತ್ರಿ ಅಂಧಕಾರ, ನಾಲ್ಕುದಿಕ್ಕೂ ಅಂಧಕಾರ, ಮರಮರದಲ್ಲಿಯೂ ಮಿಂಚಿನ ಹುಳುಗಳು ಮಿನುಗುತ್ತವೆ, ಮುಚ್ಚಿಕೊಳ್ಳುತ್ತವೆ. ಏಳುತ್ತವೆ, ಬೀಳುತ್ತವೆ. ಆಕಾಶದಲ್ಲಿ ಕಾರ್ಮೋಡ, ಅದರ ಹಿಂದೆ ಮತ್ತೂ ಕಪ್ಪಾದ ಮೋಡ. ಒಂದೆರಡು ನಕ್ಷತ್ರಗಳುಮಾತ್ರ ಕಾಣುತಲಿದ್ದವು. ಒಂದೊಂದುಸಲ ಮೇಘವು ಮುಚ್ಚಿಕೊಳ್ಳುತಲಿತ್ತು. ಮನೆಯ ಸುತ್ತಲೂ ದೊಡ್ಡದೊಡ್ಡ ಮರಗಳು ತಲೆಯನ್ನೆತ್ತಿಕೊಂಡು ನಿಶಾಚರಪಿಶಾಚಗಳ ಹಾಗೆ ನಿಂತಿದ್ದವು. ವಾಯುಸ್ಪರ್ಶದಿಂದ ಆ ಕರಾಳವದನವುಳ್ಳ ಕಗ್ಗತ್ತಲೆಯಲ್ಲಿ ಆ ಮರಗಳು ಕುಂದಳ ತಲೆಯ ಮೇಲೆ ತಮ್ಮತಮ್ಮ ಪೈಶಾಚಭಾಷೆಯಲ್ಲಿ ಮಾತನಾಡಿಕೊಳ್ಳುತ್ತಿದ್ದವು. ಪಿಶಾಚಗಳೂಕೂಡ ಆ ಕರಾಳರಾತ್ರಿಯ ಭಯಕ್ಕೋಸ್ಕರ ಮೆಲ್ಲಮೆಲ್ಲಗೆ ಮಾತನಾಡುವುವು. ಒಂದೊಂದುಸಲ ಗಾಳಿಯಿಂದ ಆ ಗವಾಕ್ಷದ

ಬಾಗಿಲು ಗೋಡೆಗೆ ತಗಲಿ ಶಬ್ದವಾಗುತಲಿತ್ತು. ಕಪ್ಪಾದ ಗೂಬೆಯು ಮೇಲಿನ ಮಹಡಿಯಮೇಲೆ ಕೂತು ಒಂದೊಂದು ಸಲ ಕೂಗುತಲಿತ್ತು. ಒಂದೊಂದುಸಲ ನಾಯಿಯು ಯಾವದನ್ನೋ ನೋಡಿ ಓಡಿಹೋಗುತಲಿತ್ತು. ಆಗಿಂದಾಗ ಮರದಿಂದ ಎಲೆ ಅಥವಾ ಕಾಯಿಗಳು ಬೀಳುತಲಿದ್ದವು. ದೂರ ದಲ್ಲಿ ತೆಂಗಿನ ಗರಿಗಳು ಸ್ವಲ್ಪಸ್ವಲ್ಪ ಅಲುಗಾಡುತಲಿದ್ದವು. ದೂರದಲ್ಲಿ ತಾಳೆ ಮರಗಳ ಗರಿಗಳ ಮರ್ಮರಶಬ್ದವು ಕೇಳಿಸುತಲಿತ್ತು. ಎಲ್ಲಪರಮೇಲೂ ಗವಾಕ್ಷಗಳ ಬೆಳಕು ಬರುತಲಿತ್ತು. ಪತಂಗ ಹುಳುಗಳು ಹೋಗಿಹೋಗಿ ಹಿಂದಿರುಗುತಲಿದ್ದವು, ಕುಂದನಂದಿನಿಯು ಅತ್ತಕಡೆಯೇ ನೋಡಿಕೊಂಡು ಕೂತಳು.

ನಾಗೇಂದ್ರನು ಎದ್ದುಬಂದು ಬೆಳಕುಬರುತಲಿದ್ದ ಕಿಟಕಿಗೆ ಒಳಗಡೆ ಹಾಕಿದ್ದ ಪರದೆಯನ್ನು ಎಳದು ಮರೆಮಾಡಿದನು.

ಅಯ್ಯೋ! ನಿರ್ದಯನೆ! ಪರದೆಯು ಹಾಗೆಯೇ ಇದ್ದರೆ ಏನು ಹಾನಿ ಯುಂಟಾಗುತಲಿತ್ತು? ನೀನು ರಾತ್ರಿ ಏಳುವುದಕ್ಕೆ ಏನು ಕಾರಣವಿತ್ತು? ನಿದ್ರೆಮಾಡು. ಇಲ್ಲದಿದ್ದರೆ ಆಲಸ್ಯವುಂಟಾಗುವುದು. ಕುಂದನಂದಿನಿಯು ಸತ್ತರೆ ಸಾಯಲಿ. ನಿನಗೆ ಮಾತ್ರ ಆಲಸ್ಯವಾಗಕೂಡದು. ಇದು ಕುಂದ ನಂದಿನಿಯ ಆಶೆ.

ಬೆಳಕು ಬರುತಲಿದ್ದ ಗವಾಕ್ಷವು ಅಂಧಕಾರಮಯವಾಯಿತು. ಬೆಳ ಕು ನೋಡುತ್ತ ಕುಳಿತಿದ್ದ ಕುಂದನಂದಿನಿಯು ಕಣ್ಣೊರಸಿಕೊಂಡು ಎದ್ದ ಳು. ಇದುರಿಗೆ ಕಂಡಬಂದ ಮಾರ್ಗದಲ್ಲಿ ಹೊರಟಳು. ಎಲ್ಲಿಗೆ ಹೋಗು ವುಳು? ನಿಶಾಚರಪಿಶಾಚಗಳ ಹಾಗಿದ್ದ ಮರಗಳು ಎಲ್ಲಿಗೆ ಹೋಗುವೆ ಎಂದು ಕೇಳುವ ಹಾಗೆ ಸರಸರಶಬ್ದಮಾಡಿದವು. ತಾಳೆಮರಗಳು ಎಲ್ಲಿಗೆ ಹೋಗುವೆ ಎಂದು ಕೇಳುವ ಹಾಗೆ ತರತರ ಶಬ್ದಮಾಡಿದವು. ಗವಾಕ್ಷಗಳು ಹೋದರೆ ಹೋಗು, ನಾವು ನಿನಗೆ ನಾಗೇಂದ್ರನನ್ನು ತೋರಿಸುವುದಿಲ್ಲವೆಂದು ಸುಮ್ಮ

ನಿದ್ದವು. ಆದರೂ, ಕುಂದನಂದಿನಿ–ಆ ನಿರ್ಭಾಗ್ಯಳಾದ ಕುಂದನಂದಿನಿಯು ಹಿಂದೆ ತಿರುಗಿತಿರುಗಿ ನೋಡುತ್ತ ಹೋಗುತಲಿದ್ದಳು.

ಕುಂದಳು ಹೋದಳು. ಹೊರಟೇಹೋದಳು. ಆಕಾಶದಲ್ಲಿ ಮೋಡವು ಏರುತ್ತ ಬಂತು. ಮೇಘದಮೇಲೆ ಮೇಘವು ಏರಿತು. ಮೇಘಗಳೆಲ್ಲ ಸೇರಿ ಆಕಾಶವನ್ನೂ ರಾತ್ರಿಮಾಡಿದವು. ಮಿಂಚುನಕ್ಕಿತು, ಪುನಃನಕ್ಕಿತು. ಪುನಃ ಗಾಳಿಯು ಗರ್ಜಿಸಿತು. ಮೇಘವು ಗರ್ಜಿಸಿತು. ಗಾಳಿಯು ಮೇಘವು ಒಂದಾಗಿ ಗರ್ಜಿಸಿದವು. ಕುಂದ ! ಎಲ್ಲಿಗೆ ಹೋಗುವೆ ? ಎಂದು.–

ರೌದ್ರನಾದ ಚಂಡಮಾರುತವು ಎದ್ದಿತು. ಮೊದಲು ಶಬ್ದವಾಯಿತು. ಅನಂತರ ಧೂಳಿಯು ಎದ್ದಿತು. ಅನಂತರ ಮರದೆಲೆಯನ್ನು ಕಿತ್ತು ತೂರುತ್ತ ಸ್ವಯಂ ಗಾಳಿಯೇ ಬಂತು. ಕಡೆಗೆ ಪಟಪಟ ಮಳೆ ಬಂತು. ಕುಂದ ! ಎಲ್ಲಿ ಹೋಗುವೆ ?

ಮಿಂಚಿನ ಬೆಳಕಿನಲ್ಲಿ ಕುಂದಳು ಮಾರ್ಗದ ಪಾರ್ಶ್ವದಲ್ಲಿ ಒಂದು ಸಾಮಾನ್ಯವಾದ ಮನೆಯನ್ನು ಕಂಡಳು. ನಾಲ್ಕುಕಡೆಯಲ್ಲಿಯೂ ಮಣ್ಣಿನ ಗೋಡೆ. ಮನೆ ಚಿಕ್ಕದು. ಕುಂದನಂದಿನಿಯು ಬಂದು ಬಾಗಲಿನ ಹತ್ತರ ಕೂತು ಹಾಗೆಯೇ ಬಾಗಿಲಿಗೆ ಒರಗಿಕೊಂಡಳು. ಬೆನ್ನು ತಗಲುತ್ತಲೇ ಬಾಗಿಲು ಶಬ್ದವಾಯಿತು. ಗಾಳಿ ಎಂದು ಮನೆಯವರು ಸುಮ್ಮನಿದ್ದರು. ಆದರೆ ನಾಯಿಯು ಬಗುಳಿತು. ಮನೇಲಿದ್ದವರು ಭಯಪಟ್ಟು ಬಾಗಿಲು ತೆಗೆದು ನೋಡಲಾಗಿ ಮಳೆಗೋಸ್ಕರ ಒಬ್ಬ ಹೆಂಗಸು ಕುಳಿತಿದ್ದಳು.

ಗೃಹಸ್ಥ–ಯಾರಮ್ಮ ! ನೀನು ?

ಕುಂದಳು ಮಾತನಾಡಲಿಲ್ಲ.

ಗೃಹಸ್ಥ–ಯಾರೆ, ನೀನು ?

ಕುಂದ–ಮಳೆಗೆ ನಿಂತಿದ್ದೇನೆ.

ಗೃಹಸ್ಥ–ಏನು ? ಏನು ? ಪುನಃ ಹೇಳು ?

ಕುಂದ-ಮಳೆಗೆ ನಿಂತಿದ್ದೇನೆ.

ಗೃಹಸ್ಥ-ಧ್ವನಿ ಗೊತ್ತಾಯಿತು. ಮನೆಯೊಳಗೆ ಬಾ.

ಕುಂದಳು ಒಳಗೆ ಹೋದಳು. ದೀಪವನ್ನು ಹಚ್ಚಿದಮೇಲೆ ನೋಡಲಾಗಿ ಗೃಹಸ್ಥಳು ಹೀರಾದಾಸಿಯಾಗಿದ್ದಳು.

ಹೀರಾ-ಗೊತ್ತಾಯಿತು. ತಿರಸ್ಕಾರವಾದುದರಿಂದ ಓಡಿಬಂದೆ. ಭಯವಿಲ್ಲ. ನಾನು ಯಾರಿಗೂ ಹೇಳುವುದಿಲ್ಲ. ಇಲ್ಲಿ ನಮ್ಮ ಮನೆಯಲ್ಲಿಯೇ ಎರಡು ದಿನವಿರು.

---

## ಹದಿನೆಂಟನೆಯ ಪರಿಚ್ಛೇದ.

---

### ಹೀರೆಯಕೋಪ.

ಹೀರೆಯ ಮನೆಯು ಸುತ್ತು ಗೋಡೆಯುಳ್ಳ ಬಹಳ ಚಿಕ್ಕದು. ಇಪ್ಪಾರಿನ ಮಣ್ಣುಮನೆ. ಅದರಲ್ಲಿ ಒಂದು ಅಡಿಗೆಕೋಣೆ, ನಡುಮನೆ ಇನ್ನೆರಡು ಕೋಠಡಿ. ಮುಂದುಗಡೆ ಹೂವಿನತೋಟ. ಅದರಲ್ಲಿ ಯಜಮಾನನ ಉದ್ಯಾನದ ಗುಲಾಬಿ ಮಲ್ಲಿಗೆ ಮುಂತಾದ ಹೂವಿನಗಿಡಗಳು. ಅಲ್ಲಿನ ತೋಟದವನೇ ಸ್ವಂತವಾಗಿ ಗಿಡಗಳನ್ನು ತಂದುಹಾಕಿ ಬೆಳೆಸುತಲಿದ್ದನು. ಇದಕ್ಕೆ ಪ್ರತಿಯಾಗಿ ಹೀರೆಯು ತಾನೇ ಸ್ವಂತವಾಗಿ ಹುಕ್ಕಾವನ್ನು ಸಿದ್ಧಪಡಿಸಿ ತೋಟದ ಮಾಲಿಯು ಬಂದ ಕೂಡಲೇ ಬಳೆತೊಡಿಸಿರುವ ತನ್ನ ಸ್ವಂತ ಕೈಯಿಂದ ಹುಕ್ಕಾವನ್ನು ತೆಗೆದು ಅವನಿಗೆ ಕೊಡುವುಳು. ಮಾಲಿಯು ಹುಕ್ಕಾಕುಡಿದು ಮನೆಗೆ ಹೋಗಿ ರಾತ್ರಿಯಲ್ಲೆಲ್ಲ ಅದನ್ನೇ ಯೋಚಿಸಿಕೊಂಡಿರುವನು.

ಹೀರೆಯುಮನೆಯಲ್ಲಿ ಅವಳ ಅಜ್ಜಿ ಮತ್ತು ಅವಳು. ಇನ್ಯಾರೂ ಇಲ್ಲ. ಹೀರಾ ಒಂದು ಕೋಠಡಿಯಲ್ಲಿ, ಅವಳ ಅಜ್ಜಿ ಒಂದು ಕೋಠಡಿಯಲ್ಲಿ

ಮಲಗುವುದು. ಕುಂದಳನ್ನು ಒಳಗೆ ಕರೆತಂದು ಹೀರಾ ತನ್ನ ಪಾರ್ಶ್ವದಲ್ಲಿ ಹಾಸಿಗೇ ಹಾಸಿ ಮಲಗಿಸಿದಳು. ಕುಂದಳು ಮಲಗಿಕೊಂಡಳು, ಆದರೆ ನಿದ್ರೆ ಹೋಗಲಿಲ್ಲ. ಮರುದಿನ ಅವಳ ಇಷ್ಟಾನುಸಾರ ಮುದುಕಿಗೆ ತಿಳಿಯದ ಹಾಗೆ ಅವಳನ್ನು ಅದೇ ಕೊಠಡಿಯಲ್ಲಿಟ್ಟು ಹೊರಗೆ ಬೀಗಹಾಕಿಕೊಂಡು ಕೆಲಸಕ್ಕೆ ಹೋದಳು. ಮಾರನೆಯ ಜಾವಕ್ಕೆ ಮುದುಕಿಯು ಸ್ನಾನಕ್ಕೆ ಹೋಗುತ್ತಲೇ ಹೀರಾ ಬಂದು ಕುಂದಳಿಗೆ ಸ್ನಾನಾಹಾರಗಳನ್ನು ಮಾಡಿಸಿ ಬಾಗಿಲಿಗೆ ಬೀಗಹಾಕಿಕೊಂಡು ಹೋದಳು. ರಾತ್ರಿ ಬಂದು ಹಾಸಿಗೆ ಹಾಸಿದಳು. ಇಬ್ಬರೂ ಮಲಗಿದರು.

ಆಗ ಹೊರಗಿನ ಬಾಗಲಿನ ಚಿಲಕವು ಕಟಕಟ ಅಲ್ಲಾಡಿತು. ಹೀರಾ ಕೇಳಿ ಆಶ್ಚರ್ಯಪಟ್ಟಳು. ರಾತ್ರಿಕಾಲದಲ್ಲಿ ಪೋಲಿಸಜವಾನನು ಮಾತ್ರ ಅಲ್ಲಾಡಿಸುತಲಿದ್ದನು. ಆದರೆ ಅವನು ಅಲ್ಲಾಡಿಸಿದಾಗ ಶಬ್ದವು ಇಷ್ಟು ಮಧುರವಾಗುತ್ತಿರಲಿಲ್ಲ. "ಬಾಗಿಲು ತೆಗೆ, ತೆಗೆಯದಿದ್ದರೆ ಬಾಗಿಲು ಒಡೆಯುತ್ತೇನೆ" ಎಂದು ಗಡಬಿಡಿಯಾಗಿ ಶಬ್ದವಾಗುತಲಿತ್ತು. ಈಗ ಥಾಗಾಗದೆ, ನನ್ನ ಹೀರಾಮಣಿಯೆ ! ಏನು ಮಾಡುತ್ತಿ ? ಏಳು, ಎಂದು ಹೇಳುವ ಹಾಗೆ ಅಲುಗಾಡಿತು. ಹೀರಾ ಬಾಗಿಲು ತೆಗೆದು ನೋಡಿದಳು. ಒಬ್ಬ ಹೆಂಗಸು ನಿಂತಿದ್ದಳು. ಮೊದಲು ಗೊತ್ತಾಗಲಿಲ್ಲ. ಅನಂತರ ಗುರ್ತಿಸಿ, ಓ, ಗಂಗಾಜಲಳೆ ! ನೀನೆ ! ನನ್ನ ಪುಣ್ಯ ! ಇದೇನೆ ? ಇಷ್ಟುಪರೂಪವಾದೆ ? ಎಂದಳು.

ಗಂಗಾಜಲಳು ಹಾಲು ಮೊಸರು ಮಾರುವ ಗೌಳಗಿತ್ತಿ. ಇವಳ ಮನೆಯು ದೇವೀಪುರದಲ್ಲಿ ದೇವೇಂದ್ರನಮನೆಗೆ ನೆರೆಮನೆಯಾಗಿತ್ತು. ಅವಳು ಬಹಳ ರಸಿಕಳು. ಮುವ್ವತ್ತು ಮುವ್ವತ್ತೈದು ವರುಷದವಳು. ಉಟ್ಟಿರುವುದು ಕಪ್ಪುಸೀರೆ, ಕೈಯಲ್ಲಿ ಬೆಳ್ಳಿದುಂಡು, ಬಾಯಿಯಲ್ಲಿ ಅಡಿಕೆ ಎಲೆಯ ರಂಗು. ಪ್ರಾಯಃ ಗೌರಾಂಗಿ. ಮುಖದಮೇಲೆ ಕೆಂಪುಕೆಂಪು ಬೊಬ್ಬೆ

ಮೂಗು ಸ್ವಲ್ಪ ಮೊಂಡು. ಕಪಾಲದಮೇಲೆ ಹಚ್ಚೆಯು ಹೊಯಿದಿತ್ತು. ದವಡೆಯಲ್ಲಿ ಹೊಗೆಸೊಪ್ಪು. ಗೌಳಗಿತ್ತಿಯು ದೇವೇಂದ್ರನ ದಾಸಿಯಾಗಿರಲಿಲ್ಲ. ಆಶ್ರಿತಳೂ ಅಲ್ಲ. ಆದರೆ ಅವನ ಅನುಗತಳಾಗಿದ್ದಳು. ಇತರರಿಂದ ಆಗದ ಕೆಲಸವನ್ನು ಮಾಡಿಕೊಡುವುಳು. ಮಾಲತಿ ಗೌಳಗಿತ್ತಿಯನ್ನು ನೋಡಿ ಚತುರಳಾದ ಹೀರೆಯು, ಅಕ್ಕ! ಗಂಗಾಜಲೆ! ನೀನು ನನ್ನ ಕಡೆಗಾಲಕ್ಕೆ ಒದಗಬೇಕವ್ಮ! ಆದರೆ ಈಗ ಏತಕ್ಕೆ ಬಂದೆ? ಎಂದಳು.

ಗಂಗಾಜಲಳು ಹೀರೆಯು ಕಿವಿಯಲ್ಲಿ ಮೆಲ್ಲಮೆಲ್ಲಗೆ ದೇವೇಂದ್ರನು ನಿನ್ನನ್ನು ಕರೆತರಬೇಕೆಂದು ಹೇಳಿದನೆಂದಳು.

ಹೀರಾ ಬಹಳ ಬಳಕೆಯಿಂದ ನಕ್ಕು, ಏನಾದರೂ ಸಿಕ್ಕಿರಬಹುದು. ಲಾಭವಿಲ್ಲದೆ ಉಂಟೆ? ಎಂದಳು.

ಮಾಲತಿಯು ಬೆರಳುಗಳಿಂದ ತಿವಿದು, ಲಾಭವೇನು? ಮರಣವೇ ಲಾಭ; ಮತ್ತೇನು? ನಿನ್ನ ಮನಸ್ಸಿನಲ್ಲಿರುವುದು ನೀನು ಹೇಳಿದೆ. ಈಗ ನಡೆ, ಹೋಗೋಣವೆಂದಳು.

ಹೀರೆಗೆ ಅದೇ ಬೇಕಾಗಿದ್ದುದು. ಅವಳು ಕುಂದಳನ್ನು ಕುರಿತು, ನಾನು ಬಾಬುಗಳ ಮನೆಗೆ ಪುನಃ ಹೋಗಬೇಕು. ಕರೆಯುವುದಕ್ಕೆ ಬಂದಿದ್ದಾರೆ. ಏತಕ್ಕೋ? ಏನೋ? ಯಾರ ಬಲ್ಲರು? ಎಂದು ಹೇಳಿ ದೀಪವನ್ನು ಆಳಿಸಿ ಕೌಶಲದಿಂದ ಕತ್ತಲೆಯಲ್ಲಿ ಉಡುಪು ತೊಡಿಗೆ ಹಾಕಿಕೊಂಡು ಮಾಲತಿ ಗಂಗಾಜಲಳೊಂದಿಗೆ ಹೋದಳು. ಹೋಗುತ್ತ ಇಬ್ಬರೂ ಏಕಕಂಠರಾಗಿ ಕತ್ತಲೆಯಲ್ಲಿ ಹಾಡುತ್ತ ಹೋದರು :—

ಮನಕೆಬಂದಂತರತ್ನಕ್ಕೆ। ನನಗೆ ಮನಕೆ ಬಂದಂತರತ್ನಕ್ಕೆ।

ತನುಪತನಾವಧಿ-ಶೋ-ಷಿಸುವೆ ಸಾಗರಕೆ। ಶೋಷಿಸುವೆ ಸಾಗರಕೆ॥

ದೇವೇಂದ್ರನ ಬೈಠಕಖಾನೆಯೊಳಗೆ ಹೀರಾ ಒಬ್ಬಳೇ ಹೋದಳು. ದೇವೇಂದ್ರನು ದೇವಿಯ ಆರಾಧನೆಯನ್ನು ಮಾಡುತಲಿದ್ದನು. ಇನ್ನೂ

ಪೂರಾ ಏರಿಸಲಿಲ್ಲ. ಜ್ಞಾನವು ಹಾಗಾಗೆ ಇತ್ತು. ಅವನು ಇಂದು ಹೀರೆಯು ಸ್ತವಸ್ತುತಿ ಏನೂ ಮಾಡಲಿಲ್ಲ. ಜ್ಞಾನದಿಂದ ಹೀರಾ! ಆ ಹೊತ್ತು ನಾನು ಬಹಳ ಕುಡಿದಿದ್ದೆ; ನೀನು ಹೇಳಿದ್ದನ್ನು ಯಾವದೂ ತಿಳಿಯಲಾರದೆ ಹೋದೆನು. ಏತಕ್ಕೆ ಬಂದಿದ್ದೆಯೋ ಅದನ್ನು ವಿಚಾರಿಸಲು ನಿನ್ನನ್ನು ಈಗ ಕರೆಸಿದೆನೆಂದು ಹೇಳಿದನು.

ಹೀರಾ—ತಮ್ಮ ದರ್ಶನಮಾಡಿಕೊಂಡು ಹೋಗೋಣವೆಂದು ಬಂದಿದ್ದೆ. ದೇವೇಂದ್ರನು ನಕ್ಕು, ನೀನು ಬಹಳ ಬುದ್ಧಿವಂತಳು. ಅದೃಷ್ಟವಿದ್ದದರಿಂದ ನಾಗೇಂದ್ರನು ನಿನ್ನಂತಹ ದಾಸಿಯನ್ನು ಪಡೆದಿದ್ದಾನೆ. ನೀನು ಹರಿದಾಸಿ ವೈಷ್ಣವಿಯ ಸಮಾಚಾರವನ್ನು ತಿಳಿದುಕೊಳ್ಳುವುದಕ್ಕೂ, ನಾನು ಏನುಕಾರಣ ವೈಷ್ಣವಿಯಾಗಿ ದತ್ತನ ಮನೆಗೆ ಬಂದೆನೆಂಬದುನ್ನೆಲ್ಲ ತಿಳಿದುಕೊಳ್ಳುವುದಕ್ಕೂ ಬಂದಿದ್ದೆ. ಬಂದು ಎಲ್ಲ ಸಂಗತಿಯನ್ನೂ ತಿಳಿದುಕೊಂಡೆ. ನಾನು ಇದನೆಲ್ಲ ನಿನ್ನಿಂದ ಮರೆಪಡಿಸುವುದಿಲ್ಲ. ನೀನು ಪ್ರಭುವಿನ ಕೆಲಸಮಾಡಿ ಪ್ರಭುವಿನಿಂದ ಪುರಸ್ಕಾರವನ್ನು ಹೊಂದಿದ್ದೆ; ಅದಕ್ಕೆ ಸಂದೇಹವಿಲ್ಲ. ಈಗ ನನಗೆ ಬಂದು ಕೆಲಸವನ್ನುಮಾಡಿ ಕೊಟ್ಟರೆ ನಾನೂ ಪುರಸ್ಕಾರವನ್ನು ಕೊಡುತ್ತೇನೆಂದು ಹೇಳಿದನು.

ಮಹಾಪಾಪದಲ್ಲಿ ಮಗ್ನರಾದವರ ಮಾತುಕಥೆಗಳನ್ನೆಲ್ಲ ಬರೆದು ಸ್ಪಷ್ಟಪಡಿಸುವುದು ಬಹಳ ಕಷ್ಟ. ದೇವೇಂದ್ರನು ಹೀರೆಗೆ ಬಹಳ ದ್ರವ್ಯವನ್ನು ಕೊಡುವುದಾಗಿ ಆಶೆಯನ್ನು ಕೊಟ್ಟು ಕುಂದಳನ್ನು ಮಾರಿಬಿಡೆಂದು ಹೇಳಿದನು. ಹೀರಾ ಇದನ್ನು ಕೇಳಿ ಬಹಳ ಕೋಪವನ್ನು ತಾಳಿ ಅವಳ ಪದ್ಮಪಲಾಶದ ಹಾಗಿದ್ದ ಕಣ್ಣುಗಳು ರಕ್ತಮಯವಾದವು. ಕಿವಿಯಲ್ಲಿ ಅಗ್ನಿವೃಷ್ಟಿಯಾದ ಹಾಗಾಯಿತು. ಅವಳು ಕೂಡಲೇ ಎದ್ದು, ನಾನು ದಾಸಿಯೆಂದು ಹೀಗೆ ಹೇಳೋಣವಾಯಿತು. ಸ್ವಾಮಿ! ಇದಕ್ಕೆ ನಾನು ಉತ್ತರವನ್ನು ಕೊಡಲಾರೆನು. ನಮ್ಮ ಯಜಮಾನರು ಕೊಡುವರು. ಅವರು

ಇದಕ್ಕೆ ಸರಿಯಾದ ಉತ್ತರವನ್ನು ಹೇಳುವುರು, ಎಂದು ಹೇಳಿ, ಹೊರಟು ಹೋದಳು. ದೇವೇಂದ್ರನು ಸ್ವಲ್ಪ ಹೊತ್ತು ಏನೂ ತೋಚದೆ ಭಗ್ನೋತ್ಸಾಹನಾಗಿ ಸುಮ್ಮನಿದ್ದು, ಅನಂತರ ದಣಿಯಿಂಗುವಹಾಗೆ ಎರಡುಗ್ಲಾಸು ಬ್ರಾಂದಿಯನ್ನು ಕುಡಿದನು. ಆಗ ಪ್ರಕೃತಸ್ಥನಾಗಿ ಮೃದುಮೃದುವಾಗಿ ರಾಗವನ್ನೆತ್ತಿದನು.

---

## ಇಪ್ಪತ್ತನೆಯ ಪರಿಚ್ಛೇದ.

### ಹೀರೆಯದ್ವೇಷ.

ಬೆಳಗ್ಗೆ ಎದ್ದು ಹೀರಾ ಕೆಲಸಕ್ಕೆ ಹೋದಳು. ದತ್ತನ ಮನೆಯಲ್ಲಿ ಎರಡು ದಿನಗಳಿಂದ ಬಹಳ ಗದ್ದಲ. ಕುಂದನಂದಿನಿಯು ಎಲ್ಲಿಯೂ ಕಾಣಿಸಲಿಲ್ಲ. ಮನೆಯವರೆಲ್ಲರೂ ಅವಳು ಕೋಪಮಾಡಿಕೊಂಡು ಎಲ್ಲಿಯೋ ಹೋದಳೆಂದು ಅರಿತಿದ್ದರು. ನೆರೆಯವರಲ್ಲಿ ಕೆಲವರಿಗೆ ಗೊತ್ತು; ಕೆಲವರಿಗೆ ಗೊತ್ತಿಲ್ಲ. ನಾಗೇಂದ್ರನಿಗೆ ಕುಂದಳು ಮನೆಬಿಟ್ಟುಹೋದಳೆಂದು ತಿಳಿಯಿತು; ಆದರೆ ಏತಕ್ಕೆ ಹೋದಳೆನ್ನುವುದು ಅವನಿಗೆ ಯಾರೂ ತಿಳಿಸಲಿಲ್ಲ. ಅವನು ನಾನು ಅವಳಿಗೆ ಹೇಳಿದ್ದದು ಕೇಳಿ ಮನೇಲಿರುವುದು ಅನುಚಿತವೆಂದು ತಿಳಿದುಕೊಂಡು ಮನೆಯನ್ನು ಬಿಟ್ಟು ಹೋಗಿರಬೇಕೆಂದು ತಿಳಿದುಕೊಂಡನು. ಹಾಗಿದ್ದರೆ ಕಮಲಳ ಸಂಗಡ ಏತಕ್ಕೆ ಹೋಗಲಿಲ್ಲ? ನಾಗೇಂದ್ರನ ಮುಖವು ಮೇಘವು ಕವಿತುಕೊಂಡ ಹಾಗಾಯಿತು. ಅವನ ಹತ್ತಿರ ಹೋಗುವುದಕ್ಕೆ ಯಾರಿಗೂ ಧೈರ್ಯವಿಲ್ಲವಾಗುತ್ತ ಬಂತು. ಸೂರ್ಯಮುಖಿಯ ದೋಷವೇನೋ ಯಾರಿಗೂ ತಿಳಿಯದು, ಆದರೆ ಅವಳ ಸಂಗಡಲೂ ಮಾತು ಬಿಟ್ಟುಬಿಟ್ಟನು. ಗ್ರಾಮಗ್ರಾಮಕ್ಕೂ ಮನೆಮನೆಗೂ ಕುಂದಳನ್ನು ಹುಡಕುವುದಕ್ಕೆ ಜನರನ್ನು ಕಳುಹಿಸಿದನು.

ಸೂರ್ಯಮುಖಿಯು ಕೋಪದಿಂದಲೋ ಈರ್ಷ್ಯೆಯಿಂದಲೋ, ಯಾವದರಿಂದಲೇ ಆಗಲಿ, ಕುಂದಳು ಓಡಿಹೋದುದನ್ನು ಕುರಿತು ಕಾತರಳಾದಳು. ಕಮಲಳು ದೇವೇಂದ್ರನು ಹೇಳಿದುದನೆಲ್ಲ ನಂಬತಕ್ಕದ್ದಲ್ಲವೆಂತಲೂ, ದೇವೇಂದ್ರನ ಸಂಗಡ ಕುಂದಳು ಗುಪ್ತವಾದ ಪ್ರಣಯ ವುಳ್ಳವಳಾಗಿದ್ದರೆ ಅದು ಹೊರಕ್ಕೆ ಬೀಳುತ್ತಿರಲಿಲ್ಲವೆಂತಲೂ, ಕುಂದಳ ಸ್ವಭಾವವನ್ನು ನೋಡಿದರೆ ಇಂಥಾದ್ದು ಸಂಭವವಿಲ್ಲವೆಂತಲೂ, ದೇವೇಂದ್ರನು ಹೆಂಡಕುಡುಕನಾದುವರಿಂದ ಮದ್ಯದ ದೆಸೆಯಿಂದ ಬಾಯಿನ ಜಂಭಕ್ಕೋಸ್ಕರ ಸುಳ್ಳು ಬೊಗಳಿದ್ದಾನೆಂತಲೂ ಸೂರ್ಯಮುಖಿಗೆ ಸಕಾರಣವಾಗಿ ತಿಳಿಯಹೇಳಿದಳು. ಸೂರ್ಯಮುಖಿಯು ಇದನ್ನೆಲ್ಲ ತಿಳಿದವಳಾಗಿ ಅವಳ ಅನುತಾಪವು ಸ್ವಲ್ಪ ಹೆಚ್ಚಾಗಿ, ಅದರಿಂದ ಸ್ವಾಮಿಯ ವಿರಾಗವು ಮತ್ತಷ್ಟು ಮನಸ್ಸಿನ ವ್ಯಥೆಯನ್ನು ಹೆಚ್ಚು ಮಾಡಿತು. ನೂರುಸಲ ಕುಂದಳನ್ನು ಬೈದಳು. ಸಾವಿರಸಲ ತನ್ನನ್ನು ಬೈದುಕೊಂಡಳು. ಕಡೆಗೆ ಅವಳೂ ಕುಂದನಂದಿನಿಯನ್ನು ಹುಡುಕುವುದಕ್ಕೆ ಜನರನ್ನು ಕಳುಹಿಸಿದಳು.

ಕಮಲಳು ಕಲಕತ್ತೆಗೆ ಹೋಗುವ ಪ್ರಯಾಣವನ್ನು ನಿಲ್ಲಿಸಿದಳು. ಅವಳು ಯಾರನ್ನೂ ಬೈಲಿಲ್ಲ. ಸೂರ್ಯಮುಖಿಯುಮೇಲೂ ಆಕ್ಷೇಪಣೆ ಮಾಡಲಿಲ್ಲ. ಅವಳು ತನ್ನ ಕಂಠದಲ್ಲಿದ್ದ ಹಾರವನ್ನು ತೆಗೆದು ಅದನ್ನು ಮನೆಯಲ್ಲಿದ್ದವರಿಗೆಲ್ಲ ತೋರಿಸಿ, ಯಾರು ಕುಂದಳನ್ನು ಕರೆತರುವರೋ ಅವರಿಗೆ ಈ ಹಾರವನ್ನು ಕೊಡುತ್ತೇನೆಂದು ಹೇಳಿದಳು.

ಪಾಪಿಯಾದ ಹೀರಾ ಇದನ್ನೆಲ್ಲ ಕೇಳಿ ನೋಡಿದಳು, ಆದರೆ ಏನೂ ಹೇಳಲಿಲ್ಲ. ಕಮಲಳ ಹಾರವನ್ನು ನೋಡಿ ಆಶೆಗೆ ವಶಳಾಗುವಳು. ಆದರೆ ಆಶೆಯನ್ನು ಸಂವರಣ ಮಾಡಿಕೊಂಡಳು. ಎರಡನೆಯದಿನ ಕೆಲಸವೂ ಪೂರೈಸಿಕೊಂಡು ಅವಳ ಅಜ್ಜಿಯು ಸ್ನಾನಕ್ಕೆ ಹೋದಕೂಡಲೆ ಹೋಗಿ ಕುಂದಳಿಗೆ ಊಟ ಮಾಡಿಸಿದಳು. ರಾತ್ರಿ ಪುನಃ ಬಂದು ಇಬ್ಬರೂ ಹಾಸಿಗೆ ಹಾಸಿ

ಕೊಂಡು ಮಲಗಿದರು. ಕುಂದಳಾಗಲಿ ಹೀರೆಯಾಗಲಿ ಯಾರೂ ನಿದ್ರೆ ಮಾಡ ಡಲಿಲ್ಲ. ಕುಂದಳು ತನ್ನ ಮನಸ್ಸಿನ ದುಃಖವನ್ನು ಯೋಚಿಸಿಕೊಂಡು ಜಾಗರಿತಳಾಗಿದ್ದಳು. ಹೀರೆಯು ತನ್ನ ಸುಖದುಃಖಗಳನ್ನು ಕುರಿತು ಯೋ ಚಿಸಿಕೊಂಡು ಎಚ್ಚರವಾಗಿದ್ದಳು. ಯೋಚಿಸುತಲಿದ್ದುದು ಬಾಯಿಯಲ್ಲಿ ಹೇಳತಕ್ಕದ್ದೆ? ಅಲ್ಲ. ಮನಸ್ಸಿನಲ್ಲಿಯೇ ಯೋಚಿಸಬೇಕು.

ಓ ಹೀರೆ! ಛಿ! ನೀನು ನೋಡುವುದಕ್ಕೆ ಕುರೂಪಿಯಲ್ಲ. ವಯ ಸ್ಸೋ ಇನ್ನೂ ಚಿಕ್ಕವಯಸ್ಸು. ಹಾಗಾದರೆ ಹೃದಯದಲ್ಲಿ ಇಷ್ಟು ಖಲಕಪ ಟಗಳೇತಕ್ಕೆ? ಬ್ರಹ್ಮನು ಏತಕ್ಕೆ ಅವುಗಳಗೆಲ್ಲಾ ಸಾರ್ಥಕ ಮಾಡದೆ ಮೋ ಸಗೊಳಿಸಿದ್ದಾನೆ? ಅವನು ಎಲ್ಲರಿಗೂ ಮೋಸ ಮಾಡುವುದರಲ್ಲಿಯೇ ಇದ್ದಾನೆ. ಹೀರೆಯನ್ನು ಸೂರ್ಯಮುಖಿಯ ಸ್ಥಾನದಲ್ಲಿಟ್ಟಿದ್ದರೆ ಮನಸ್ಸಿನಲ್ಲಿ ಇಷ್ಟು ಕಪಟವಿರುತ್ತಲಿತ್ತೆ? ಹೀರೆಯನ್ನೇ ಕೇಳಿದರೆ ಇದಕ್ಕೆ ಪ್ರತ್ಯುತ್ತರವಾಗಿ 'ಇಲ್ಲ' ಎಂದು ಹೇಳುತ್ತಾಳೆ. ಹೀರೆಯನ್ನು ಹೀರೆಯ ಪದವಿಯಲ್ಲಿಟ್ಟಿರು ವದರಿಂದಲೇ ಅವಳು ಹೀರೆಯಾಗಿದ್ದಾಳೆ. ಪ್ರಪಂಚದಲ್ಲಿ ಜನರು ದುಷ್ಟರ ಸಹವಾಸದಿಂದ ಎಲ್ಲರೂ ದುಷ್ಟರಾಗುತ್ತಾರೆಂದು ಹೇಳುತ್ತಾರೆ. ದುಷ್ಟನು, ನಾನು ಒಳ್ಳೇತಮನುಷ್ಯ, ಆದರೆ ಜನರ ಸಹವಾಸದಿಂದ ನಾನೂ ದುಷ್ಟ ನಾದೆನೆಂದು ಹೇಳುತ್ತಾನೆ. ಜನರು, ಐದು ಏಳಾಗುವುದಿಲ್ಲ, ಏಳು ಐದಾ ಗುವುದಿಲ್ಲವೆನ್ನುತ್ತಾರೆ, ಐದೆ, ಇನ್ನೆರಡು ಸೇರಿಸಿದರೆ ಏಳಾಗುತ್ತೆಂತಲೂ; ವಿಧಾತನು ನನಗೆ ಇನ್ನೆರಡು ಕೊಟ್ಟರೆ ನಾನೂ ಏಳಾಗುವೆನೆಂತಲೂ ಹೇಳು ತ್ತದೆ. ಹೀರೆಯೂಕೂಡ ಹಾಗೆಯೇ ಯೋಚಿಸುತಲಿದ್ದಳು.

ಹೀರೆಯು ಬಹಳ ಯೋಚಿಸಿದಳು. ಆ ಯೋಚನೆಯ ಪರಂಪರೆ ಯನ್ನು ಬರೆದು ಮುಗಿಯದು. ಅವಳು, ಈಗ ಪರಮೇಶ್ವರನು ಎಲ್ಲಾ ಅನುಕೂಲಗಳನ್ನು ಒದಗಿಸಿಕೊಟ್ಟಿದ್ದಾನೆ, ನನ್ನ ತಪ್ಪಿನಿಂದಲೇ ಅದನ್ನೆಲ್ಲ ಹೋಗಲಾಡಿಸಿಕೊಳ್ಳಕೂಡದು. ಬಂದುಕಡೆಯಲ್ಲಿ ಕುಂದಳನ್ನು ದತ್ತನ

ಮನೆಗೆ ಕರೆದುಕೊಂಡು ಹೋದರೆ, ಕಮಲಳು ಹಾರವನ್ನು ಕೊಡುತ್ತಾಳೆ, ಯಜಮಾನಿಯೂ ಏನಾದರೂ ಕೊಡುವಳು ; ಯಜಮಾನನನ್ನು ಬಿಟ್ಟೇನೆ? ಮತ್ತೊಂದುಕಡೆಯಲ್ಲಿ ಕುಂದಳನ್ನು ದೇವೇಂದ್ರನಿಗೆ ಒಪ್ಪಿಸಿದರೆ ಬಹಳ ಹಣವನ್ನು ನಗದಾಗಿ ಕೊಡುತ್ತಾನೆ; ಆದರೆ ಅವಳು ಪ್ರಾಣವನ್ನು ಇಟ್ಟು ಕೊಳ್ಳುವುದಿಲ್ಲ. ಒಳ್ಳೇದು. ದೇವೇಂದ್ರನು ಕುಂದಳನ್ನು ಅಷ್ಟು ಸುಂದರಳೆಂದು ಏತಕ್ಕೆ ಭಾವಿಸಬೇಕು? ನಾನು ನಿತ್ಯವೂ ದೇಹಶ್ರಮಪಟ್ಟು ಹೊಟ್ಟೆಯನ್ನು ಹೊರಲಾರೆ; ನನಗೂ ಸುಖವಾಗಿರಲು ಆಶೆಯಿಲ್ಲವೆ? ಅವಳು ದೇವೇಂದ್ರನ ಮರ್ಮವನ್ನು ತಿಳಿಯಲಾರಳು. ಸುಂದರಳಾಗಿರಬಹುದು ; ಪಂಕವಿಲ್ಲದಿದ್ದರೆ ಪದ್ಮವು ಹುಟ್ಟುವುದಿಲ್ಲ. ಕುಂದಳು ಇಲ್ಲದಿದ್ದರೆ ದೇವೇಂದ್ರನ ಪ್ರೀತಿಯು ಹುಟ್ಟಲಾರದಲ್ಲವೆ! ಅವರವರ ಅದೃಷ್ಟ. ಅದು ಹೋಗಲಿ. ನಾನು ಏತಕ್ಕೆ ಕೋಪ ಮಾಡಬೇಕು? ಅಯ್ಯೋ, ಅದೃಷ್ಟವೆ! ಪ್ರೀತಿಯೆಂದರೆ ಏನು? ಬರೀ ಬಾಯಿಮಾತು. ಬೇಕಾದವರು ಪ್ರೀತಿಸಿಕೊಳ್ಳಲಿ. ನಾನು ಯಾರನ್ನೂ ಪ್ರೀತಿಸುವುದಿಲ್ಲ. ವೈರಾಗ್ಯವೂ ಅಷ್ಟೆ. ವೈರಾಗ್ಯಕ್ಕೆ ಕೂತರೆ ಕಡೆಗೆ ಗಂಗೆಯ ನೀರಿನಲ್ಲಿ ಮುಣುಗು ಹಾಕುವುದೇ ಲಾಭ. ಕಳ್ಳನನ್ನು ಹುಡುಕುವುದಕ್ಕೆ ಹೋಗಿ ನನ್ನ ಮನಸ್ಸೇ ಕಳವಾಗಿ ಹೋಗಿದೆ! ಎಂತಹ ಮುಖ! ಎಂತಹ ಕಣ್ಣು! ಎಂತಹ ಕಂಠ! ಹಾಗೆ ಯಾರಿಗೂ ಇಲ್ಲ. ನನ್ನನ್ನು ಕಣ್ಣಾರೆ ನೋಡಿ ಕುಂದಳನ್ನು ತಂದುಕೊಡೆಂದು ನನಗೆನೇ ಹೇಳಿದನಲ್ಲ! ಒಳ್ಳೇದು, ಹೇಗಾದರೂ ಆಗಲಿ. ಆ ಮಾರ್ಗ ಸರಿಯಾದುದಲ್ಲ. ಈ ಜನ್ಮದಲ್ಲಿ ನನ್ನ ಸುಖದುಃಖಗಳನ್ನೆಲ್ಲ ದೇವರು ನೋಡಿಕೊಳ್ಳಲಿ. ಕುಂದಳನ್ನು ದೇವೇಂದ್ರನ ಕೈಗೆ ಕೊಡಲಾರೆ. ಅದು ಜ್ಞಾಪಕ್ಕೆ ಬಂದರೆ ಮೈಯೆಲ್ಲಾ ಉರಿಯುತ್ತದೆ. ಅವನು ವೈಷ್ಣವಿಯೇ ಆಗಲಿ, ವಾಸುದೇವನೇ ಆಗಲಿ; ಕುಂದಳು ಅಲ್ಲಿಗೆ ಹೋಗಲಾರಳು. ಹಾಗಾದರೆ ಕುಂಧಳು ಮೊದಲಿದ್ದ ಮನೆಗೆ ಹೋಗಬೇಕು. ಆದರೆ ಅವಳು ಹೋಗುವು

ದಿಲ್ಲ. ಆದರೆ ಎಲ್ಲರೂ ಸೇರಿ ಹೇಳಿದರೆ ಹೋದರೂ ಹೋಗಬಹುದು. ಹಾಗಾದರೆ ದೇವರು ಏನು ಮಾಡುವ್ರನು? ಸೂರ್ಯಮುಖಿಯ ಕಮಲದಂತಹ ಮುಖವು ಕಪಿಮುಖವಾಗುವುದು. ದೇವರ ಚಿತ್ತಕ್ಕೆ ಬಂದು ಹಾಗೆಯೇ ಆಗಬೇಕು. ಒಳ್ಳೇದು, ಸೂರ್ಯಮುಖಿಯ ಮೇಲೆ ನನಗೇತಕ್ಕೆ ಕೋಪ. ಅವಳು ನನಗೆ ಯಾವಾಗಲೂ ಕೆಟ್ಟದು ಮಾಡಿಲ್ಲ. ಒಳ್ಳೆದೇ ಮಾಡುತ್ತಾಳೆ. ಹಾಗಾದರೆ ಅವಳ ಮೇಲೆ ಕೋಪವೇತಕ್ಕೆ? ಹೀರೆಗೆ ಗೊತ್ತಿಲ್ಲವೆ? ಏತಕ್ಕೆ ಹೇಳಬೇಕು? ಸೂರ್ಯಮುಖಿಯು ಸುಖಿ! ನಾನು ದುಃಖಿ! ಆದಕಾರಣವೇ ಕೋಪ. ಅವಳು ದೊಡ್ಡವಳು; ನಾನು ಬಡವಳು; ಅವಳು ಯಜಮಾನಿ; ನಾನು ಬಾಂದಿ; ಆದಕಾರಣ ಅವಳ ಮೇಲೆ ನನಗೆ ಬಹಳ ಕೋಪ. ದೇವರು ಅವಳನ್ನು ಚೆನ್ನಾಗಿಟ್ಟಿದ್ದರೆ ಅವಳ ತಪ್ಪೇನು? ನಾನೇತಕ್ಕೆ ಅವಳಿಗೆ ಹಿಂಸೆ ಕೊಡಬೇಕು? ಅದಕ್ಕೆ ನಾನು ಹೇಳುವುದೇನೆಂದರೆ; ದೇವರು ನನ್ನನ್ನು ಹಿಂಸೆಕೊಡುವುದಕ್ಕೇನೇ ಹುಟ್ಟಿಸಿದ್ದಾನೆ. ನನ್ನ ತಪ್ಪೇನು? ನಾನು ಬೇಕೆಂದು ಅವಳಿಗೆ ಕೆಟ್ಟದ್ದು ಮಾಡುವುದಿಲ್ಲ. ಆದರೆ ಅವಳಿಗೆ ಕೆಟ್ಟದ್ದಾದರೆ ನನಗೆ ಒಳ್ಳೇದಾಗುತ್ತದೆ. ಹಾಗಾದರೆ ಏತಕ್ಕೆ ಮಾಡಕೂಡದು? ತಾನು ತನ್ನ ಒಳ್ಳೇದಕ್ಕೆ ಯಾರುತಾನೇ ಮಾಡಿಕೊಳ್ಳುವುದಿಲ್ಲ? ಹಾಗೆ ಲೆಕ್ಕ ಹಾಕಿ ನೋಡಿದರೆ ಯಾರಿಂದ ಯಾರಿಗೆ ಏನು ಆದೀತು? ನನಗೆ ಈಗ ಹಣ ಬೇಕಾಗಿದೆ; ಇನ್ನು ಚಾಕರಿ ಮಾಡಲಾರೆ. ದುಡ್ಡು ಎಲ್ಲಿಂದ ಬರಬೇಕು? ದತ್ತನ ಮನೆಯಿಂದಲ್ಲದೆ ಬೇರೇಕಡೆಯಿಂದ ಬರುವುದಿಲ್ಲ. ಅದು ಹೇಗೆ ಬರಬೇಕು? ಬಾಬುಯವರ ಕಣ್ಣು ಕುಂದಳ ಮೇಲೆ ಬಿದ್ದಿರುವುದು ಎಲ್ಲರಿಗೂ ಗೊತ್ತೇ ಇದೆ. ಬಾಬುಯವರು ಈಗ ಕುಂದಮಂತ್ರವನ್ನೇ ಜಪಿಸುತಲಿದ್ದಾರೆ. ದೊಡ್ಡವರ ಮಾತು. ಇಷ್ಟಬಂದಹಾಗೆ ಮಾಡಬಲ್ಲರು. ಸೂರ್ಯಮುಖಿಗೋಸ್ಕರ ಸ್ವಲ್ಪ ಹಿಂಜರಿಯುವುದು ಸರಿಯಲ್ಲ. ಅವರಿಬ್ಬರಿಗೂ ಪರಸ್ಪರ ಮನಃಕಷಾಯವುಂಟಾದರೆ ದೊಡ್ಡ ಸೂರ್ಯಮುಖಿಯ ಕಹರು ಅಷ್ಟು

ನಡೆಯಲಾರದು. ಅವರವರಿಗೆ ಸ್ವಲ್ಪ ಮನಃಕಷಾಯವುಂಟಾಗುವಹಾಗೆ ಮಾಡಬೇಕು. ಹಾಗೆ ಮಾಡಿಬಿಟ್ಟರೆ ಬಾಬುವು ಕುಂದಳಿಗೆ ಷೋಡಶೋಪಚಾರವನ್ನು ಮಾಡಲಾರಂಭಿಸುವನು. ಕುಂದಳು ಶುದ್ಧ ಮೊಂಕುಹುಡುಗಿ; ನಾನು ಆಗ ಬುದ್ಧಿವಂತಳಾಗುತ್ತೇನೆ. ಕುಂದಳನ್ನು ಶೀಘ್ರವಾಗಿ ವಶಮಾಡಿಕೊಂಡು ಅವಳಿಂದ ಏನು ಬೇಕಾದರೂ ಮಾಡಿಸಿಕೊಳ್ಳಬಹುದು. ಕುಂದಳ ಪೂಜೆಗೆ ಆರಂಭವಾಗುತ್ತಲೇ ಬಾಬುವು ಅವಳ ಆಜ್ಞಾಕಾರಿಯಾಗುವನು. ಕುಂದಳು ನನ್ನ ಆಜ್ಞಾಕಾರಿಯಾಗುವಳು. ಆಗ ಪೂಜೆಗೆ ಸಾಧ್ಯಸಾಧನಗಳು ನನ್ನಲ್ಲಿ ನಿಲ್ಲುತವೆ. ಇರಲಿ, ದುರ್ಗೆ ಏನು ಮಾಡುವುಳೋ, ನೋಡೋಣ. ನಾಗೇಂದ್ರನಿಗೆ ಕುಂದಳನ್ನು ಒಪ್ಪಿಸಬೇಕು. ಆದರೆ ಕೂಡಲೇ ಒಪ್ಪಿಸಕೂಡದು. ಮೊದಲು ಅವಳನ್ನ ಕೆಲದಿನ ಅವನ ಕಣ್ಣುಮರೆಯಾಗಿಟ್ಟು ನೋಡಬೇಕು. ವಿಚ್ಛೇದವೇ ಪ್ರಥಮಪಾಕ. ವಿಚ್ಛೇದವುಂಟಾದರೆ ಬಾಬುವಿನ ಪ್ರೀತಿಯು ಚೆನ್ನಾಗಿ ಪಕ್ವಕ್ಕೆ ಬರುತ್ತದೆ. ಆಮೇಲೆ ಕುಂದಳನ್ನು ಹೊರಕ್ಕೆ ತೆಗಿಯಬೇಕು. ಅದರೊಳಗೆ ಸೂರ್ಯಮುಖಿಯು ಮೆತ್ತಗಾಗುವುಳು. ಈ ಅವಕಾಶದಲ್ಲಿ ಕುಂದಳನ್ನು ಕೂತುಕೋ ಅಂದರೆ ಕೂತುಕೋಬೇಕು. ಏಳು ಅಂದರೆ ಏಳಬೇಕು; ಹಾಗೆ ಮಾಡಿಕೊಳ್ಳುತ್ತೇನೆ. ಮೊದಲು ನನ್ನ ಅಜ್ಜಿಯನ್ನು ಊರಿಗೆ ಕಳುಹಿಸಿಬಿಡಬೇಕು. ಇಲ್ಲದಿದ್ದರೆ ಕುಂದಳನ್ನು ಗೋಪ್ಯವಾಗಿ ಇಡಲಸಾಧ್ಯ; ಎಂದು ಮುಂತಾಗಿ ಯೋಚನೆ ಮಾಡಿದಳು.

ಹೀಗೆ ಯೋಚಿಸಿ ಪಾಪಿಷ್ಠಳಾದ ಹೀರೆಯು ಹಾಗೆಯೇ ಆಚರಣೆಗೆ ಪ್ರಾರಂಭಿಸಿದಳು. ಏನೋ ನೆಪಗಳನ್ನು ಹೇಳಿ ತನ್ನ ಅಜ್ಜಿಯನ್ನು ಊರಿಗೆ ಕಳುಹಿಸಿಕೊಟ್ಟಳು. ಕುಂದಳನ್ನು ಯಾರಿಗೂ ಗೊತ್ತಾಗದೆ ತನ್ನ ಮನೆಯಲ್ಲಿಟ್ಟುಕೊಂಡಳು. ಕುಂದಳು ಅವಳ ಉಪಚಾರಗಳಿಂದ ಬಹಳ ಸಂತುಷ್ಟಳಾಗಿ ಹೀರೆಯಂತಹ ಮನುಷ್ಯಳು ಯಾರೂ ಇಲ್ಲವೆಂತಲೂ ಕಮಲಳೂಕೂಡ ಇಷ್ಟು ಪ್ರೀತಿಸಲಿಲ್ಲವೆಂತಲೂ ತಿಳಿದುಕೊಂಡಳು.

---

## ಇಪ್ಪತ್ತೊಂದನೆಯ ಪರಿಚ್ಛೇದ.

### ಹೀರೆಯ ಕಲಹ–ವಿಷವೃಕ್ಷದ ಮುಕುಳ.

ಕುಂದಳೇನೋ ವಶವಾದಹಾಗಾಯಿತು. ಆದರೆ ನಾಗೇಂದ್ರ ಸೂರ್ಯಮುಖಿ ಇವರಿಬ್ಬರ ಕಣ್ಣುಗಳು ವಿಷಾಕ್ತವಾಗದಿದ್ದರೆ ಯಾವದೂ ನಡೆಯದು. ಇನ್ನು ಅವರ ಅಭಿನ್ನವಾದ ಮನಸ್ಸನ್ನು ಒಡೆಯುವ ಪ್ರಯತ್ನಕ್ಕೆ ಪ್ರಾರಂಭಿಸಿದಳು.

ಒಂದುದಿನ ಪಾಪಿಷ್ಠಳಾದ ಹೀರೆಯು ಯಜಮಾನನ ಮನೆಗೆ ಬಂದು ಕೆಲಸಕ್ಕೆ ಪ್ರಾರಂಭಿಸಿದಳು. ಕೌಸಲ್ಯೆ ಎಂಬ ಇನ್ನೊಬ್ಬ ಪರಿಚಾರಕಳಿದ್ದಳು. ಹೀರೆಯು ಎಲ್ಲರಮೇಲೂ ವಿಚಾರಕಳಾಗಿದ್ದುದರಿಂದ ಅವಳಿಗೆ ತೊಂದರೆಕೊಡುತಲಿದ್ದಳು. ಆದಿನ ಹೀರೆ ಕೌಸಲ್ಯೆಯನ್ನು ಕುರಿತು, ಕುಶಕ್ಕಾ! ನನಗೆ ಒಂದು ಮೈಗೆ ಹೇಗೇಗೋ ಇದೆ, ನನ್ನ ಕೆಲಸವೆಲ್ಲ ನೀನು ಮಾಡುವಿಯಾ? ಎಂದಳು. ಕೌಸಲ್ಯೆಯು ಹೀರೆಗೆ ಹೆದರುತಿದ್ದಳಾಗಿ ಒಪ್ಪಿಕೊಂಡು, ಅದಕ್ಕೇನು, ಮಾಡುತ್ತೇನೆ, ಯಾವಾಗಲೂ ಒಂದೇ ರೀತಿಯಾಗಿರಲಾರದು. ತಲೆನೋವು ಮೂಗುನೋವು ಬಂದೇಬರುತ್ತದೆ; ಎಲ್ಲರೂ ಒಂದು ಮನೇಲಿ ಕೆಲಸಮಾಡುವವರು. ಮಾಡದೆ ಏನಮ್ಮ! ಮಾಡುತ್ತೇನೆಂದಳು. ಹೀರೆಯು ಏನಾದರೂ ಮಾಡಿ ಜಗಳ ತೆಗಿಯಬೇಕೆಂದಿದ್ದಳಾದಕಾರಣ, ತಲೆಯನ್ನು ಅಲ್ಲಾಡಿಸುತ್ತ, ಇದೇನೆ? ಬೈಯುತ್ತಿಯೆಂದಳು. ಕೌಸಲ್ಯೆಯು ಚಮಕಿತಳಾಗಿ, ನಾನು ಯಾವಾಗಲೆ ನಿನ್ನನ್ನು ಬೈದದ್ದು? ಎಂದಳು.

ಹೀರಾ–ಸೈ, ಕಲಕೇತಿ! ಬೈದುಬಿಟ್ಟು, ಯಾವಾಗಲೆ? ಯಾರಿಗೆ ತಲೆನೋವು ಮೂಗುನೋವು? ನಾನು ಸಾಯಬೇಕೇನು? ನೀನೇ ಸಾಯಿ! ನಿನಗೆ ಬರಲಿ, ಯಾರಿಗೂ ಇಲ್ಲದರೋಗ.

ಕೌಸಲ್ಯ—ಆಗಲಿ, ಬರಬೇಕಾದರೆ ನಿನ್ನನ್ನು ಕೇಳಿ ಬರುವುದಿಲ್ಲ. ಸುಮ್ಮನೆ ಕೋಪವೇತಕ್ಕೆ? ಒಂದುದಿನ ಸಾಯಬೇಕು. ಯಮನು ನಿನ್ನನ್ನು ಮರೆತುಬಿಡುವುದಿಲ್ಲ. ನನ್ನನ್ನೂ ಮರೆಯುವುದಿಲ್ಲ.

ಹೀರಾ—ನಿನಗೆ ಬೇಸಬರಲಿ, ನೀನೇ ಹಾಳಾಗು, ನಿನ್ನ ಮೋರೆಗೆ ಬೆಂಕಿ ಹಾಕ. ನಿನ್ನ ತಲೆ ನೀನು ತಿಂದುಕೊಳ್ಳ.

ಕೌಸಲ್ಯೆಯು ಇನ್ನು ತಡೆಯಲಾರದೆಹೋದಳು. ಈ ವಿದ್ಯೆಯಲ್ಲಿ ಹೀರೆಗಿಂತಲೂ ಶತಗುಣ ಸಮರ್ಥಳು. ಹೀರೆಯನ್ನು ಸಹಸ್ರವಿಧವಾಗಿ ವರ್ಣಿಸಿ, ಅವಳ ಸೊಲ್ಲು ಹೊರಡದಹಾಗೆ ಮಾಡಿದಳು.

ಹೀರೆ ಪ್ರಭುಪತ್ನಿಯಲ್ಲಿ ಫಿರ್ಯಾದುಮಾಡಲು ಹೋದಳು. ಅವಳು ಹೋಗುವಾಗ ನೋಡಿದ್ದರೆ ಅವಳ ಮುಖದಲ್ಲಿ ಕೋಪಲಕ್ಷಣಗಳೇ ಇರಲಿಲ್ಲ. ಮುಗುಳುನಗುವು ಮುಖದಲ್ಲಿ ಕಾಣುತಲಿತ್ತು. ಸೂರ್ಯಮುಖಿಯ ಹತ್ತರ ಹೋಗುತ್ತಲೇ ವಿಲಕ್ಷಣವಾದ ಕ್ರೋಧಲಕ್ಷಣಗಳು ಮುಖದಲ್ಲಿ ತೋರಿದವು. ಅದಲ್ಲದೆ ಸ್ತ್ರೀಯರಿಗೆ ಈಶ್ವರನು ಕೊಟ್ಟಿರುವ ಅಸ್ತ್ರವನ್ನು ಬಿಟ್ಟಳು; ಅಂದರೆ, ಅತ್ತು ದೇಶವನ್ನೇ ಮುಣುಗಿಸಿದಳು.

ಸೂರ್ಯಮುಖಿಯು ಫಿರ್ಯಾದನ್ನು ವಿಚಾರಿಸಿ ವಿಹಿತವಾದ ವಿಚಾರಣೆ ಮಾಡಿ ನೋಡಲಾಗಿ ತಪ್ಪು ಹೀರೆದೇ ಆಗಿತ್ತು. ಆದರೂ ಸೂರ್ಯಮುಖಿಯು ಹೀರೆಯು ಹೇಳಿಕೊಂಡದ್ದರಮೇಲೆ ಕೌಸಲ್ಯೆಯನ್ನೇ ಗದರಿಸಿಕೊಂಡಳು. ಹೀರೆ ಇದರಿಂದ ಸಂತುಷ್ಟಳಾಗದೆ, ಆ ಹೆಂಗಸನ್ನು ಕೆಲಸದಿಂದ ತಪ್ಪಿಸಿದ ಹೊರ್ತು ನಾನು ಇರಲಾರೆನೆಂದು ಹೇಳಿದಳು.

ಆಗ ಸೂರ್ಯಮುಖಿಯು ಹೀರೆಯಮೇಲೆ ಸ್ವಲ್ಪ ವಿರಕ್ತಳಾಗಿ, ಹೀರೆ! ನಿನ್ನದು ಬಹಳ ಹೆಚ್ಚಾಯಿತು; ಮೊದಲು ಬೈದವಳು ನೀನು. ತಪ್ಪೆಲ್ಲ ನಿನ್ನದಾಗಿದೆ. ಇದರಲ್ಲಿ ನಿನ್ನ ಕೋರಿಕೆಪ್ರಕಾರ ಅವಳನ್ನು ಬಿಟ್ಟುಬಿಡ ಬೇಕಲ್ಲವೆ? ನಾನು ಅಷ್ಟು ಅನ್ಯಾಯಕ್ಕೆ ಹೋಗಲಾರೆ, ನೀನು ಹೋಗ

ಬೇಕಾದರೆ ನಾನು ಇರು ಎಂದು ಹೇಳುವುದಿಲ್ಲವೆಂದಳು.

ಹೀರೆಗೆ ಬೇಕಾಗಿದ್ದದ್ದೂ ಅಷ್ಟೆ. ಹಾಗಾದರೆ ಹೋಗುತ್ತೇನೆಂದು ಹೇಳಿ ಕಣ್ಣೀರಿನಿಂದ ಮುಖವೆಲ್ಲ ತೋಯಿಸಿಕೊಂಡು ಹೋಗಿ ಬಾಬುವಿನ ಇದುರಾಗಿ ನಿಂತಳು.

ಬಾಬುವು ಬೈಠಕಖಾನೆಯಲ್ಲಿ ಒಬ್ಬನೇ ಕುಳಿತಿದ್ದನು. ಹೀರೆ ಅಳುವುದನ್ನು ನೋಡಿ, ಹೀರೆ! ಏತಕ್ಕೆ ಅಳುತ್ತಿ ? ಎಂದು ಕೇಳಿದನು.

ಹೀರಾ—ನನ್ನ ಸಂಬಳವನ್ನ ಲೆಕ್ಕಾಚಾರಮಾಡಿ ಅಪ್ಪಣೆಕೊಡಿಸಬೇಕು.

ನಾಗೇಂದ್ರ-(ವಿಸ್ಮಿತನಾಗಿ)-ಅದೇತಕ್ಕೆ ? ಏನಾಯಿತು ?

ಹೀರಾ—ನನಗೆ ಅಪ್ಪಣೆ ಆಯಿತು. ಯಜಮಾನಿಯು ಹೋಗೆಂದು ಹೇಳಿಬಿಟ್ಟರು.

ನಾಗೇಂದ್ರ—ನೀನೇನು ಮಾಡಿದ್ದು ?

ಹೀರಾ—ಕುಶಿಯು ನನ್ನನ್ನು ಬೈದಳು ; ನಾನು ಹೋಗಿ ಹೇಳಿಕೊಂಡೆ. ಅವಳ ಮಾತನ್ನು ನಂಬಿ ನನ್ನನ್ನು ಹೋಗೆಂದರು.

ನಾಗೇಂದ್ರನು ತಲೆಯನ್ನು ಅಲ್ಲಾಡಿಸುತ್ತ, ಅದು ಕೆಲಸಕ್ಕೆ ಬಾರದ ಮಾತು, ಮುಖ್ಯಸಂಗತಿ ಏನು ? ಹೇಳು ಎಂದನು.

ಹೀರೆಯು ಕೊರಳು ಸರಿಮಾಡಿಕೊಂಡು, ಮುಖ್ಯಸಂಗತಿ ಏನೆಂದರೆ, ನಾನು ಇರುವುದಕ್ಕೆ ಇಷ್ಟವಿಲ್ಲವೆಂದಳು.

ನಾಗೇಂದ್ರ—ಏತಕ್ಕೆ ?

ಹೀರಾ—ಯಜಮಾನಿಯು ಮನಸ್ಸು ಏನೋ ಆಗಿಹೋಗಿದೆ. ಯಾವ ವೇಳೆಯಲ್ಲಿ ಯಾರಿಗೆ ಏನು ಹೇಳಿಬಿಡುವರೋ ಗೊತ್ತಿಲ್ಲ.

ನಾಗೇಂದ್ರನು ಹುಬ್ಬು ಗಂಟುಹಾಕಿಕೊಂಡು ಕ್ರೂರದೃಷ್ಟಿಯಿಂದ ನೋಡುತ್ತ ಅದೇನು ? ಎಂದನು.

ಹೀರೆ ಏನು ಹೇಳಬೇಕೆಂದು ಬಂದಿದ್ದಳೋ ಅದನ್ನು ಹೇಳಿದಳು. ಅವಳು, ಆದಿನ ಕುಂದಠಾಕೂರಣಿಗೆ ಏನೇನೋ ಹೇಳಬಿಟ್ಟರು. ಅದನ್ನು ಕೇಳಿ ಕುಂದಠಾಕೂರಣಿಯು ದೇಶವೇ ಬಿಟ್ಟು ಹೊರಟುಹೋದರು. ನನಗೂ ಭಯವಾಗುತ್ತದೆ. ಹಾಗೆಯೇ ನನಗೂ ಏನಾದರೂ ಹೇಳಬಿಟ್ಟಾರು. ನನಗೆ ಹೇಳಬಿಟ್ಟರೆ ನಾನಲ್ಲಿ ಬದುಕೇನು? ಮೊದಲೇ ದೂರವಿರುವುದು ಒಳ್ಳೇದೆಂದಳು.

ನಾಗೇಂದ್ರ—ಅದು ಏನು ಹೇಳಿದ್ದು ?

ಹೀರಾ—ಅದನ್ನೆಲ್ಲ ತಮ್ಮ ಇದುರಿಗೆ ಹೇಳಲು ನಾಚಿಗೆಯಾಗುತ್ತದೆ ನಾನು ಹೇಳಲಾರೆ.

ಕೇಳಿ ನಾಗೇಂದ್ರನ ಮುಖವು ಕಪ್ಪಾಯಿತು. ಅವನು ಹೀರೆಗೆ ಈಗ ಮನೆಗೆ ಹೋಗು, ನಾಳೆ ಕರೆಸುತ್ತೇನೆಂದನು.

ಹೀರೆಯ ಕೋರಿಕೆಯು ನೆರವೇರಿತು. ಇದಕ್ಕೋಸ್ಕರವೇ ಅವಳು ಕೌಸಲ್ಯೆಯ ಸಂಗಡ ವಾಚಾಟಮಾಡಿದ್ದು.

ನಾಗೇಂದ್ರನು ಎದ್ದು ಸೂರ್ಯಮುಖಿಯ ಹತ್ತರ ಹೋದನು. ಹೀರಾ ಹಾಗೆಯೇ ಹಿಂದುಹಿಂದಕ್ಕೆ ಹೊರಟುಹೋದಳು.

ನಾಗೇಂದ್ರನು ಸೂರ್ಯಮುಖಿಯನ್ನು ಬಂದುಕಡೆಗೆ ಕರೆದು ನೀನು ಹೀರೆಯನ್ನು ಹೋಗೆಂದು ಹೇಳಿಬಿಟ್ಟೆಯಾ? ಎಂದು ಕೇಳಿದನು. ಸೂರ್ಯಮುಖಿ, ಹೌದು, ಹೇಳಿದೆ, ಎಂದು ಹೇಳಿ, ಅನಂತರ ಹೀರೆ ಮತ್ತು ಕೌಸಲ್ಯೆ ಇವರಿಬ್ಬರ ವೃತ್ತಾಂತವನೆಲ್ಲ ಹೇಳಿದಳು. ಕೇಳಿ ನಾಗೇಂದ್ರನು ಸಾಯಲಿ ಕುಂದನಂದಿನಿಗೆ ನೀನು ಏನು ಹೇಳಿದೆ ಎಂದು ಕೇಳಿದನು.

ನಾಗೇಂದ್ರನು ನೋಡುತಿದ್ದ ಹಾಗೆ ಸೂರ್ಯಮುಖಿಯ ಮುಖವು ಬಾಡಿತು. ಸೂರ್ಯಮುಖಿಯು ಅಸ್ಫುಟಸ್ವರದಿಂದ ಏನು ಹೇಳಿದೆ ಎಂದಳು

ನಾಗೇಂದ್ರ—ಏನೋ ಕೆಟ್ಟಮಾತು ?

ಸೂರ್ಯಮುಖಿಯು ಸ್ವಲ್ಪ ಹೊತ್ತು ಸುಮ್ಮನಿದ್ದು, ಕಡೆಗೆ ತಾವು ನನಗೆ ಸರ್ವಸ್ವಸ್ವರೂಪರು. ನನಗೆ ಇಹಪರ ಎರಡೂ ತಾವೇ. ತಮ್ಮಲ್ಲಿ ನಾನೇತಕ್ಕೆ ಮರೆಮಾಚಬೇಕು? ಯಾವಾಗಲೂ ಯಾವದನ್ನೂ ತಮ್ಮಿಂದ ಮರೆಮಾಡಿಲ್ಲ. ಇಂದು ಕಂಡವಳ ಸಮಾಚಾರವನ್ನೇತಕ್ಕೆ ಮುಚ್ಚಿಡಲಿ? ನಾನು ಕುಂದಳಿಗೆ ಕೆಟ್ಟಮಾತು ಹೇಳಿದೆ. ತಮಗೆ ಕೋಪಬಂದೀತೆಂದು ಹೇಳಲು ಧೈರ್ಯವುಂಟಾಗಲಿಲ್ಲ. ನನ್ನಪರಾಧವನ್ನು ಕ್ಷಮಿಸಬೇಕು. ನಾನು ಎಲ್ಲಾ ಸಂಗತಿಯನ್ನೂ ಹೇಳುತ್ತೇನೆಂದು ಹೇಳಿ, ಹರಿದಾಸಿ ವೈಷ್ಣವಿಯ ಪರಿಚರ್ಯೆಯಿಂದ ಕುಂದಳನ್ನು ತಿರಸ್ಕರಿಸಿದವರೆಗೂ ಕಪಟವಿಲ್ಲದೆ ಎಲ್ಲಾ ವಿವರವಾಗಿ ತಿಳಿಸಿ ನಾನು ಕುಂದಳನ್ನು ತಿರಸ್ಕರಿಸಿ ನನ್ನನ್ನು ನಾನೇ ತಿಂದುಕೊಳ್ಳುವುದಾಗಿದೆ. ನಾನು ಊರೂರಿಗೆ ಅವಳನ್ನು ಹುಡುಕಲು ಜನರನ್ನು ಕಳುಹಿಸಿದ್ದೇನೆ. ಸಿಕ್ಕಿದರೆ ಕರೆತರುತ್ತಾರೆ; ನನ್ನ ತಪ್ಪನ್ನು ಕ್ಷಮಿಸಬೇಕೆಂದು ಹೇಳಿದಳು.

ನಾಗೇಂದ್ರನು ನಿನ್ನಪರಾಧವೇನೂ ವಿಶೇಷವಿಲ್ಲ; ಕುಂದಳ ಕಳಂಕವನ್ನು ಕುರಿತು ನೀನು ಕೇಳಿದಷ್ಟು ಮಾತ್ರವಾದರು ಕೇಳಿದ್ದರೆ ಯಾವ ಸಂಸಾರಿಯಾದ ಪತಿವ್ರತೆಯು ತಾನೇ ಅಂತಹವಳಿಗೆ ಮನೆಯಲ್ಲಿ ಜಾಗವನ್ನು ಕೊಡುತ್ತಿದ್ದಳು? ಆದರೆ ಅವಳಮೇಲಿನ ಅಪವಾದವು ನಿಜವಾದುದೋ ಅಲ್ಲವೋ ವಿಚಾರಮಾಡಿದ್ದರೆ ಚನ್ನಾಗಿತ್ತು ಎಂದನು.

ಸೂರ್ಯಮುಖಿ—ಆಗ ಯೋಚಿಸಲಿಲ್ಲ. ಈಗ ಯೋಚಿಸುತ್ತೇನೆ.

ನಾಗೇಂದ್ರ—ಈಗ ಯೋಚಿಸಿದರೇನು? ಬಿಟ್ಟರೆ ಏನು?

ಸೂರ್ಯಮುಖಿ—ನನ್ನ ಮನಸ್ಸಿಗೆ ಭ್ರಾಂತಿಯಾಗಿ ತೋರಿತು.

ಹೀಗೆ ಹೇಳಿ ಹೇಳುತ್ತ ಸೂರ್ಯಮುಖಿ—ಪತಿಪ್ರಾಣಳಾದ ಸಾಧ್ವೀ—ನಾಗೇಂದ್ರನ ಚರಣದ ಸಮೀಪದಲ್ಲಿ ಹಾಗೆಯೇ ನೆಲದಮೇಲೆ ಕುಳಿತು ಅವನ ಎರಡು ಚರಣಗಳನ್ನೂ ಎರಡು ಕೈಗಳಿಂದ ಹಿಡಿದು ತನ್ನ ಕಣ್ಣೀರಿನಿಂದ ತೋಯಿಸಿ

ಳು. ಅನಂತರ ಮುಖವನ್ನೆತ್ತಿಕೊಂಡು ನೀನು ನನ್ನ ಪ್ರಾಣಕ್ಕಿಂತಲೂ ಅಧಿಕನು, ಈ ಪಾಪಿಷ್ಠಳಾದ ನನ್ನ ಮನಸ್ಸಿನಲ್ಲಿ ಏನು ಇದ್ದರೂ ಮರೆ ಮಾಚಲಾರೆ. ನನ್ನ ಅಪರಾಧವನ್ನು ಮನಸ್ಸಿನಮೇಲೆ ತೆಗೆದುಕೊಳ್ಳಕೂ ಡದೆಂದು ಹೇಳಿದಳು.

ನಾಗೇಂದ್ರನು ನಿನಗೆ ಏನೂ ಹೇಳುವುದಿಲ್ಲ. ನಾನು ಕುಂದನಂದಿನಿ ಯಲ್ಲಿ ಅನುರಕ್ತನಾಗಿದ್ದೇನೆಂದು ನೀನು ಸಂದೇಹವುಳ್ಳವಳಾಗಿದ್ದೀಯೆಂದನು.

ಸೂರ್ಯಮುಖಿಯು ಅವನ ಕಾಲುಗಳಮೇಲೆ ತಲೆಯನ್ನು ಇಟ್ಟು ಕೊಂಡು ಅತ್ತಳು. ಅನಂತರ ಆ ಶಿಶಿರಸಿಕ್ತವಾದ ಕಮಲದೋಪಾದಿಯಲ್ಲಿದ್ದ ಕ್ಲಿಷ್ಟವಾದ ಮುಖಮಂಡಲವನ್ನೆತ್ತಿ ಸರ್ವದುಃಖಾಪಹಾರಿಯಾದ ತನ್ನ ಪತಿ ಯ ಮುಖವನ್ನು ನೋಡುತ್ತ, ನಿನಗೆ ಏನು ಹೇಳಲಿ? ನನಗೆ ಉಂಟಾಗಿ ರುವ ದುಃಖವನ್ನು ನಿನಗೆ ಹೇಗೆ ಹೇಳೇನು? ನಾನು ಸತ್ತರೆ ನಿನ್ನ ದುಃಖ ವು ಹೆಚ್ಚುವದಾದುದರಿಂದ ನಾನು ಸಾಯದೆ ಇದ್ದೇನೆ. ಇಲ್ಲದಿದ್ದರೆ ಬೇ ರೊಬ್ಬಳು ನಿನ್ನ ಹೃದಯಭಾಗಿನಿಯಾಗಿದ್ದಾಳೆಂದು ತಿಳಿದಾಗಲೇ ನಾನು ಸಾ ಯುತಲಿದ್ದೆ. ಎಲ್ಲರೂ ಬಾಯಿಯಿಂದ ಮಾತ್ರ ಸಾಯುತ್ತೇನೆಂದು ಹೇಳುವ ಸಾವು ಅಲ್ಲ. ನಾನು ಯಥಾರ್ಥವಾಗಿ ಕಪಟವಿಲ್ಲದ ಆಂತರಿಕಮನಸ್ಸಿನಿಂದ ಸಾಯುತಲಿದ್ದೆ. ನನ್ನ ಅಪರಾಧವನ್ನು ಮನಸ್ಸಿಗೆ ತೆಗೆದುಕೊಳ್ಳಕೂಡ ದೆಂದಳು.

ನಾಗೇಂದ್ರನು ಬಹಳ ಹೊತ್ತು ಸ್ಥಿರಭಾವದಿಂದಿದ್ದು ಕಡೆಗೆ ನಿಟ್ಟು ಸಿರು ಬಿಟ್ಟು, ಸೂರ್ಯಮುಖಿ! ಅಪರಾಧಗಳೆಲ್ಲ ನನ್ನದೇ ಹೊರ್ತು ನಿನ್ನಪ ರಾಧವೇನೂ ಇಲ್ಲ. ನಾನು ಯಥಾರ್ಥವಾಗಿ ನಿನ್ನಲ್ಲಿ ವಿಶ್ವಾಸಘಾತುಕನಾಗಿ ದ್ದೇನೆ. ಯಥಾರ್ಥವಾಗಿಯೂ ನಿನ್ನನ್ನು ಮರೆತು ಕುಂದನಂದಿನಿಯಲ್ಲಿ– ಏನು ಹೇಳಲಿ? ನಾನು ಅನುಭವಿಸುವ ದುಃಖವು ದುಸ್ಸಹವಾಗಿದೆ; ನಿನಗೆ ಅದೇತಕ್ಕೆ ಹೇಗೆ ಹೇಳಬೇಕು? ನೀನು ನಾನು ನನ್ನ ಚಿತ್ತವನ್ನು ದಮನ

ಮಾಡಲೆತ್ನಪಡಲಿಲ್ಲವೆಂದು ಹೇಳುವೆ; ಹಾಗೆ ತಿಳಿಯಬೇಡ; ನಾನು ನನ್ನನ್ನೇ ತಿರಸ್ಕಾರಮಾಡಿಕೊಂಡಿರುವಷ್ಟು ನೀನು ಮಾಡಲಾರೆ. ನಾನು ಪಾಪಾತ್ಮ-ಮನಸ್ಸು ನನ್ನ ವಶಕ್ಕೆ ಬರಲಿಲ್ಲವೆಂದನು.

ಸೂರ್ಯಮುಖಿಯು ಇನ್ನು ತಾಳಲಾರದೆ ಹೋದಳು. ಕೈಮುಗಿದು ಕೊಂಡು ಕಾತರಸ್ವರದಿಂದ, ನಿನ್ನ ಮನಸ್ಸಿನಲ್ಲಿ ಏನು ಇದ್ದರೂ ಇರಲಿ— ಅದನ್ನು ನನಗೆ ಹೇಳಬೇಡ; ನಿನ್ನ ಮೇಲೆ ವಿರೋಧವಾದ ಮಾತುಗಳು ನನ್ನ ಮನಸ್ಸನ್ನು ಶೂಲವಾಗಿ ಇರಿಯುತ್ತವೆ. ನನ್ನ ಅದೃಷ್ಟದಲ್ಲಿದ್ದುದು ನಡೆಯುತ್ತದೆ. ನಾನಿನ್ನು ಕೇಳಲಿಷ್ಟವುಳ್ಳವಳಾಗಿಲ್ಲ-ಇದನ್ನೆಲ್ಲ ನಾನು ಕೇಳತಕ್ಕದ್ದಲ್ಲವೆಂದಳು.

ಅಲ್ಲ; ಹಾಗಲ್ಲ, ಸೂರ್ಯಮುಖಿ! ಇನ್ನೂ ಕೇಳುವುದು ಇದೆ. ಮಾತುಬಂದಿರುವುದರಿಂದ ಮನಸ್ಸಿನ ಮಾತನ್ನೆಲ್ಲ ಹೊರಗೆ ಹೇಳಿಬಿಡುತ್ತೇನೆ— ಏತಕ್ಕೆಂದರೆ, ಬಹಳ ದಿನಗಳಿಂದ ಹೇಳಬೇಕೆಂದಿದ್ದೆ. ನಾನು ಈ ಸಂಸಾರವನ್ನು ತ್ಯಾಗ ಮಾಡುವೆನು. ಸಾಯುವುದಿಲ್ಲ ಆದರೆ ದೇಶಾಂತರ ಹೋಗಿಬಿಡುವೆನು. ಮನೆ ಬಾಗಲು ಸಂಸಾರದಲ್ಲಿ ನನಗೆ ಸುಖವಿಲ್ಲ. ಇನ್ನು ನನ್ನಿಂದ ನಿನಗೆ ಸುಖವಿಲ್ಲ. ನಾನು ನಿನಗೆ ಯೋಗ್ಯನಾದ ಪತಿಯಲ್ಲ. ಇನ್ನು ಹತ್ತಿರ ಇದ್ದುಕೊಂಡು ನಿನಗೆ ಸಂಕಟವನ್ನುಂಟುಮಾಡಲಾರೆನು. ನಾನು ಕುಂದನಂದಿನಿಯನ್ನು ಹುಡುಕಿಕೊಂಡು ದೇಶಾಂತರ ಅಲಿಯುವೆನು. ನೀನು ಈ ಮನೆಯಲ್ಲಿ ಗೃಹಿಣಿಯಾಗಿರು. ನೀನು ವಿಧವೆಯೆಂದು ತಿಳಿದುಕೊ— ಯಾರ ಪತಿಯು ಇಂತಹ ಪಾಮರನಾಗಿರುವನೋ, ಅವಳು ವಿಧವೆಯಲ್ಲದೆ ಮತ್ತೇನು? ಆದರೆ ನಾನು ಪಾಮರನಾಗಿದ್ದೇನೆ; ಮತ್ತೂ ಆಗುಹೋಗುತ್ತೇನೆ; ನಿನಗೆ ವಂಚಿಸಲಾರೆ. ನಾನು ಅನ್ಯಗತಪ್ರಾಣವುಳ್ಳವನಾಗಿದ್ದೇನೆ. ಇದು ನೀನು ಚೆನ್ನಾಗಿ ತಿಳಿಯಬೇಕು. ಈಗ ದೇಶತ್ಯಾಗಿಯಾಗಿ ಹೊರಟೆ. ಕುಂದನಂದಿನಿಯನ್ನು ಪಡೆತರೆ ಹಿಂದಿರುಗಿ ಬರುವೆನು. ಇಲ್ಲದಿದ್ದರೆ, ಇದೇ

ನನಗೂ ನಿನಗೂ ಕಡೇ ಸಂದರ್ಶನವೆಂದು ಹೇಳಿದನು.

ಈ ಶೂಲಸ್ವರಪವಾದ ಮಾತುಗಳನ್ನು ಕೇಳಿ ಸೂರ್ಯಮುಖಿಯು ಏನು ಹೇಳಬಲ್ಲಳು? ಕೆಲನಿಮಿಷಗಳು ಶಿಲಾಮಯವಾದ ಪ್ರತಿಮೆಯಹಾಗೆ ನೆಲವನ್ನು ನೋಡುತ್ತ ನಿಂತಿದ್ದಳು. ಅನಂತರ ಆ ನೆಲದ ಮೇಲೆ ಮುಖ ಮಡಿಯಾಗಿ ಬಿದ್ದಳು. ನೆಲದ ಮೇಲೆ ಮುಖವನ್ನು ಇಟ್ಟುಕೊಂಡು ಸೂರ್ಯ ಮುಖಿಯು ಅತ್ತಳೆ? ಘಾತುಕವಾದ ವ್ಯಾಘ್ರವು ಹೇಗೆ ಹತವಾದ ಜಂತು ವಿನ ಮರಣಯಾತನೆಯನ್ನು ನಿಂತು ನೋಡುವುದೋ, ಹಾಗೆ ನಾಗೇಂ ದ್ರನು ಸ್ಥಿರಭಾವದಿಂದ ನಿಂತುಕೊಂಡು ನೋಡುತಲಿದ್ದನು. ಮನಸ್ಸಿನಲ್ಲಿ ಇವಳು ಸತ್ತು ಹೋಗುತ್ತಾಳೆ—ಅದಕ್ಕೆ ಇದೇ ಕಾಲವೇನು? ಜಗದ್ವೀಶ್ವ ರನ ಇಷ್ಟ—ನಾನೇನು ಮಾಡುವುದಕ್ಕಾದೀತು? ಹೋಗುವ ಪ್ರಾಣವು ನನ್ನ ಇಷ್ಟಕ್ಕೆ ನಿಂತೀತೆ? ನಾನು ಪ್ರಾಣವನ್ನು ಬಿಡುವುದಕ್ಕೆ ಸಿದ್ಧವಾಗಿ ದ್ದೇನೆ. ಆದರೆ ಇವಳು ಬದುಕಿಕೊಳ್ಳುವಳೆ? ಎಂದಂದುಕೊಂಡನು.

ಇಲ್ಲ. ನಾಗೇಂದ್ರ! ನೀನು ಸತ್ತರೆ ಸೂರ್ಯಮುಖಿಯು ಪ್ರಾಣದಿಂದಿ ರಳು. ಆದರೂ ನೀನು ಸತ್ತಿದ್ದರೆ ಚನ್ನಾಗಿತ್ತು!

ಒಂದು ಘಂಟೇಮೇಲೆ ಸೂರ್ಯಮುಖಿಯು ಎದ್ದು, ಗಂಡನ ಕಾಲು ಗಳನ್ನು ಹಿಡಿದುಕೊಂಡು, ನನ್ನದೊಂದು ಭಿಕ್ಷೆಯುಂಟೆಂದಳು.

ನಾಗೇಂದ್ರ—ಏನು ಭಿಕ್ಷೆ?

ಸೂರ್ಯಮುಖಿ—ಇನ್ನೊಂದು ತಿಂಗಳು ಮನೆಯಲ್ಲಿರಬೇಕು. ಅಷ್ಟ ರೊಳಗೆ ಕುಂದನಂದಿನಿಯು ಸಿಕ್ಕದೆ ಹೋದರೆ ದೇಶಾಂತರ ಹೊರಟು ಹೋ ಗಲು ನನ್ನ ಅಭ್ಯಂತರವಿರುವುದಿಲ್ಲ.

ನಾಗೇಂದ್ರನು ಮೌನದಿಂದ ಹೊರಕ್ಕೆ ಹೊರಟು ಹೋದನು. ಮನ ಸ್ಸಿನಲ್ಲಿ ಒಂದು ತಿಂಗಳು ಇರುವೆನೆಂದು ಹೇಳಿಕೊಂಡನು. ಸೂರ್ಯಮುಖಿ ಯೂ ಹಾಗೆಯೇ ತಿಳಿದಳು. ಅವಳು ಆ ಗಮನಶೀಲನಾದ ನಾಗೇಂದ್ರನ

ಮೂರ್ತಿಯನ್ನು ನೋಡುತ್ತ, ಮನಸ್ಸಿನಲ್ಲಿ ನನ್ನ ಸರ್ವಸ್ವಧನವೆ! ನಿನ್ನ ಚರಣದಲ್ಲಿ ಒಂದು ಮುಳ್ಳು ತಗಲಿದರೂ ನಾನು ಪ್ರಾಣವನ್ನು ಇಟ್ಟುಕೊಳ್ಳಲಾರೆನು. ನೀನು ಈ ಪಾಪಿಷ್ಠಳಾದ ಅಧಮಾಧಮ ಹೆಂಗಸು ಸೂರ್ಯಮುಖಿಗೋಸ್ಕರ ದೇಶತ್ಯಾಗಿಯಾಗುವೆಯಲ್ಲ? ನನ್ನ ಶಿರಸ್ಸಿನ ರತ್ನವೆ! ನೀನು ಹೆಚ್ಚೋ ನಾನು ಹೆಚ್ಚೋ ಎಂದಂದುಕೊಂಡಳು.

---

## ಇಪ್ಪತ್ತೆರಡನೆಯ ಪರಿಚ್ಛೇದ.

### ಕಳ್ಳನಮೇಲೆಯೇ ದರೋಡೆ.

ಹೀರಾದಾಸಿಗೆ ಚಾಕರಿ ಹೋಯಿತು. ಆದರೆ ದತ್ತನ ಮನೆಯ ಸಂಬಂಧವು ತಪ್ಪಲಿಲ್ಲ. ಆ ಮನೆಯ ಸಮಾಚಾರದ ವಿಚಾರದಲ್ಲಿ ಅವಳು ಸರ್ವದಾ ಆತುರವುಳ್ಳವಳಾಗಿದ್ದಳು. ಆ ಮನೆಯ ಜನರು ಸಿಕ್ಕಿದರೆ ಅವರನ್ನು ಕುಳ್ಳಿರಿಸಿಕೊಂಡು ಮಾತುನಾಡುತ್ತ ಸೂರ್ಯಮುಖಿಗೂ ನಾಗೇಂದ್ರನಿಗೂ ಹೇಗೆಯಿದೆಯೆಂದು ವಿಚಾರಿಸಿಕೊಳ್ಳುತ್ತಿದ್ದಳು. ಜನರು ಯಾರೂ ಸಿಕ್ಕದಿದ್ದರೆ ಏನಾದರೂ ನೆಪಮಾಡಿಕೊಂಡು ಬಾಬುವಿನ ಮನೆಗೆ ಹೋಗಿ ಅಲ್ಲಿ ದಾಸಿಗಳಿರುವ ಮಹಲಿಗೆ ಹೋಗಿ ಅದೂ ಇದೂ ಮಾತನಾಡುತ್ತ ಸಮಾಚಾರವನ್ನು ತಿಳಿಯುವಳು.

ಹೀಗೆ ಕೆಲದಿನಗಳು ಕಳೆದವು. ಆದರೆ ಒಂದುದಿನ ಬಹಳ ಗದ್ದಲಕ್ಕೆ ಕಾರಣವಾಯಿತು.

ಹೀರೆಗೂ ದೇವೇಂದ್ರನಿಗೂ ಪರಿಚಯವಾದ ದಿನದಿಂದ ಗೌಳಗಿತ್ತಿ ಗಂಗಾಜಲಳು ಹೀರೆಯಮನೆಗೆ ಬಂದು ಹೋಗುವುದು ಹೆಚ್ಚಾಯಿತು. ಇದು ಹೀರೆಗೆ ಇಷ್ಟವಿಲ್ಲವೆಂಬುದು ಗೌಳಗಿತ್ತಿ ತಿಳಿದುಕೊಂಡಳು. ಆದಲ್ಲದೆ ಮನೆ

ಯಲ್ಲಿ ಒಂದು ಕೊಠಡಿಯ ಬಾಗಲು ಯಾವಾಗಲೂ ಹಾಕಿರುವುದನ್ನು ನೋಡಿದಳು. ಹೀರೆಯು ಬಹಳ ಜಾಗರೂಕತೆಯಿಂದ ಬೀಗಹಾಕಿಕೊಳ್ಳುತ್ತಿದ್ದಳು. ಆದರೆ ಒಂದು ದಿನ ಅಕಸ್ಮಾತ್ತಾಗಿ ಗೌಳಗಿತ್ತಿ ಬಂದು ನೋಡಿದಾಗ ಬೀಗವು ಹಾಕಿರಲಿಲ್ಲ. ಅವಳು ಚಿಲಕವನ್ನು ತೆಗೆದು ಬಾಗಲನ್ನು ತಳ್ಳಿದಳು. ಒಳಗಿನಿಂದ ಚಿಲಕವು ಹಾಕಿತ್ತು. ಆಗ ಗೌಳಗಿತ್ತಿಗೆ ಒಳಗೆ ಯಾರೋ ಮನುಷ್ಯರು ಇರಬೇಕೆಂದು ಗೊತ್ತಾಯಿತು.

ಗೌಳಗಿತ್ತಿಯು ಹೀರೆಗೆ ಏನೂ ಹೇಳದೆ, ಮನಸ್ಸಿನಲ್ಲಿ, ಮನುಷ್ಯರು ಯಾರು ಇರಬಹುದು ? ಯಾರೋ ಉಪಪತಿಯು ಇರಬಹುದೆಂದು ಯೋಚಿಸಿದಳು. ಅವಳಿಗೆ ಯಾರು ಯಾರಿಗೆ ಉಪಪತಿಯೆಂಬುವದೆಲ್ಲ ಗೊತ್ತು. ಕಡೆಗೆ ಅವಳ ಮನಸ್ಸಿನಲ್ಲಿ ಇಲ್ಲಿ ಕುಂದಳೇ ಇರಬೇಕೆಂದು ಯೋಚಿಸಿದಳು. ಕುಂದಳು ಓಡಿಹೋಗಿದ್ದ ಸಮಾಚಾರವು ಎಲ್ಲರಿಗೂ ಗೊತ್ತಾಗಿತ್ತು. ಸಂದೇಹ ನಿವೃತ್ತಿಗೆ ಒಂದುಪಾಯವನ್ನು ಮಾಡಿದಳು. ಹೀರೆಯು ಬಾಬುವಿನ ಮನೆಯಿಂದ ಒಂದು ಹರಿಣ ಶಿಶುವನ್ನು ತಂದಿಟ್ಟುಕೊಂಡಿದ್ದಳು. ಅದು ಬಹಳ ಚಂಚಲವುಳ್ಳದಾದುದರಿಂದ ಕಟ್ಟಿಹಾಕಿದ್ದಳು. ಆದಿನ ಗೌಳಗಿತ್ತಿಯು ಅದಕ್ಕೆ ಹುಲ್ಲು ತಿನ್ನಿಸುತ್ತ ಹೀರೆಗೆ ತಿಳಿಯದಹಾಗೆ ಹಗ್ಗವನ್ನು ಬಿಚ್ಚಿಬಿಟ್ಟಳು. ಜಿಂಕೆ ಮರಿಯು ಬಿಚ್ಚಿಬಿಡುತ್ತಲೇ ಹೊರಗೆ ಓಡಿಹೋಯಿತು. ಹೀರೆಯು ಅದನ್ನು ಹಿಡಿದು ತರುವುದಕ್ಕೆ ಓಡಿಹೋದಳು.

ಹೀರೆಯು ಹೊರಕ್ಕೆ ಓಡಿಹೋದಮೇಲೆ, ಗೌಳಗಿತ್ತಿಯು ಬಂದು ವಿಕಾರವಾದ ಸ್ವರದಿಂದ, ಹೀರೆ! ಹೀರೆ! ಓ ಗಂಗಾಜಲೆ! ಎಂದು ಕೂಗುತ್ತ ಅಳುವುದಕ್ಕೆ ತೊಡಗಿ, ಅಯ್ಯೋ! ನಮ್ಮ ಗಂಗಾಜಲಳು ಏತಕ್ಕೆ ಹೀಗಾದಳು! ಎಂದು ಕೂಗುತ್ತ ಕುಂದಳು ಇದ್ದ ಕೊಠಡಿಯ ಬಾಗಲು ತಟ್ಟಿ, ಕುಂದ! ಕುಂದನಂದಿನಿ! ಬೇಗ ಹೊರಗೆ ಬಾರೆ! ಗಂಗಾಜಲೆ

ಏನೋ ಆಗಿಹೋಗಿದ್ದಾಳೆಂದು ಆರ್ತಸ್ವರದಿಂದ ಕೂಗಿದಳು. ಕುಂದಳು ವ್ಯಸ್ತಳಾಗಿ ಬಾಗಲು ತೆಗೆದಳು. ಗೌಳಗಿತ್ತಿಯು ಅವಳನ್ನು ನೋಡಿ ನಕ್ಕು ಓಡಿಹೋದಳು.

ಕುಂದಳು ಬಾಗಲುಹಾಕಿಕೊಂಡಳು. ಹೀರೆಯು ತಿರಸ್ಕಾರ ಮಾಡು ವಳೆಂಬ ಭಯದಿಂದ ಅವಳಿಗೆ ಇದನ್ನು ತಿಳಿಸಲಿಲ್ಲ.

ಗೌಳಗಿತ್ತಿಯು ಹೋಗಿ ದೇವೇಂದ್ರನಿಗೆ ತಿಳಿಸಿಬಿಟ್ಟಳು. ದೇವೇಂ ದ್ರನು ತಾನೇ ಸ್ವಂತವಾಗಿ ಹೀರೆಯ ಮನೆಗೆ ಹೋಗಿ ನೋಡಿಕೊಂಡು ಬರಬೇಕೆಂದು ಯೋಚಿಸಿದನು. ಆದರೆ ಆದಿನ ಮನೆಯಲ್ಲಿ ಒಂದು 'ಪಾರ್ಟಿ' * ಗೋಸ್ಕರ ಏರ್ಪಾಡಾಗಿದ್ದ ಕಾರಣ ನಾಳೆ ಹೋಗಬೇಕೆಂ ದಿದ್ದನು.

## ಇಪ್ಪತ್ತುಮೂರನೆಯ ಪರಿಚ್ಛೇದ.

### ಪಿಂಜರದ ಪಕ್ಷಿ.

ಈಗ ಕುಂದಳು ಪಿಂಜರದ ಪಕ್ಷಿಯಾಗಿ ಸರ್ವದಾ ಚಂಚಲಳಾಗಿ ದ್ದಳು. ಎರಡು ಬೇರೆ ಬೇರೆ ದಿಕ್ಕುಗಳಿಂದ ಹರಿದುಬರುವ ಪ್ರವಾಹ ವುಳ್ಳ ನದಿಗಳು ಪರಸ್ಪರ ಪ್ರತಿಹತವಾಗಿ ಪ್ರವಾಹದ ವೇಗದಿಂದ ಜಲ ರಾಶಿಯು ಉಬ್ಬಿ ಏರುವಹಾಗೆ ಕುಂದಳ ಹೃದಯವೂ ಉಬ್ಬಿತು. ಒಂದು ಕಡೆಯಲ್ಲಿ ಮಹಾಲಜ್ಜೆ–ಅವಮಾನ–ತಿರಸ್ಕಾರ–ಮುಖ ತೋರಿಸುವದಕ್ಕೆ ಉಪಾಯವಿಲ್ಲ. ಸೂರ್ಯಮುಖಿಯು ಮನೆಯಿಂದ ಹೊರಡಿಸಿರುತ್ತಾಳೆ. ಆ ಲಜ್ಜಾಸ್ರೋತದಮೇಲೆ ಪ್ರಣಯಸ್ರೋತವು ಬಂದು ಬಿದ್ದು ಪರಸ್ಪರ

* "ಪಾರ್ಟಿ" [Party] ಸ್ನೇಹಿತರು ವಿನೋದವಾಗಿ ಆಟ ಫಲಾಹಾರ ಮುಂತಾದ್ದು ಮಾಡಲು ಸೇರುವುದು.

ಪ್ರತಿಘಾತವಾಗಿ ಪ್ರಣಯಸ್ರೋತವೇ ಹೆಚ್ಚಾಗಿ ಎದ್ದು, ದೊಡ್ಡ ನದಿಯು ಒಂದು ಚಿಕ್ಕ ನದಿಯನ್ನು ಹೊಡೆದುಕೊಂಡು ಹೋಗುವ ಹಾಗೆ ಸೂರ್ಯಮುಖಿಯಿಂದ ಮಾಡಲ್ಪಟ್ಟ ಅಪಮಾನವು ಕ್ರಮವಾಗಿ ವಿಲುಪ್ತವಾಗಿ ಹೋಗಿ ಸೂರ್ಯಮುಖಿಯನ್ನು ಶುದ್ಧವಾಗಿ ಮರೆತುಬಿಟ್ಟಳು. ಸರ್ವತ್ರ ನಾಗೇಂದ್ರನೇ ಕಣ್ಣಿಗೆ ಬೀಳುತಲಿದ್ದನು. ಕ್ರಮೇಣ ಕುಂದಳು ನಾನು ಆ ಮನೆಯನ್ನು ಏತಕ್ಕೆ ಬಿಟ್ಟುಬಂದೆ? ಎರಡು ಮಾತಿನಿಂದ ನನಗೆ ಏನು ನಷ್ಟವಾಗಿತ್ತು? ನಾನೇನೋ ನಾಗೇಂದ್ರನನ್ನು ನೋಡುತಲಿದ್ದೆ. ಈಗ ಒಂದು ತಡವೆಯೂ ನೋಡುವುದಕ್ಕೆ ಇಲ್ಲ. ಪುನಃ ಆ ಮನೆಗೆ ಹಿಂದಿರುಗಿ ಹೋಗಲೆ? ಅವಳು ಓಡಿಸದೆ ಇದ್ದರೆ ಹೋಗುತ್ತೇನೆ. ಆದರೆ ಪುನಃ ಮನೆಯಿಂದ ಓಡಿಸಿಬಿಟ್ಟರೆ? ಓಡಿಸಿಬಿಡುವಳೆ? ಎಂದು ರಾತ್ರೀಹಗಲೂ ಚಿಂತಿಸುತಲಿದ್ದಳು. ದತ್ತನ ಮನೆಗೆ ಹೋಗಬೇಕೇ, ಬೇಡವೆ ಎಂಬ ಯೋಚನೆಯು ಬಹಳಕಾಲ ಹಿಡಿಯಲಿಲ್ಲ. ಒಂದೆರಡು ದಿನಗಳಲ್ಲಿಯೇ ವ್ಯವಸ್ಥೆಯನ್ನು ಹೊಂದಿ ಹೋಗಬೇಕೆಂತಲೇ ಸಿದ್ಧಾಂತವಾಯಿತು—ಹೋಗದಿದ್ದರೆ ಪ್ರಾಣ ನಿಲ್ಲುವುದಿಲ್ಲ. ಹೋದರೆ ಸೂರ್ಯಮುಖಿಯು ಓಡಿಸಿಬಿಡುವಳೆ ಎಂಬ ಅಂಶವು ಆಲೋಚಿತವಾಗಿ, ಅವಳ ದುರ್ದಶೆಗೆ ತಕ್ಕಹಾಗೆ ಅವಳು ಹೊರಡಿಸಿದರೂ ಹೊರಡಿಸಲಿ—ಏನಾದರೂ ಮಾಡಲಿ—ಹೋಗುವುದೆಂತಲೇ ಸಿದ್ಧಾಂತ ಮಾಡಿಕೊಂಡಳು.

ಆದರೆ ಕುಂದಳು ಏನೆಂದು ಹೇಳಿ ಆ ಮನೆಯ ಮುಂದೆ ಹೋಗಿ ನಿಲ್ಲಬೇಕು? ಒಬ್ಬಳೇ ಹೋಗುವುದಕ್ಕೆ ಲಜ್ಜೆ—ಹೀರೆಯನ್ನು ಸಂಗಡ ಕರೆದುಕೊಂಡು ಹೋದರೆ ಹೋಗಬಹುದು. ಆದರೆ ಹೀರೆಗೆ ಇದನ್ನು ಬಾಯಿಬಿಟ್ಟು ಹೇಳುವುದು ಹೇಗೆ?

ಹೃದಯವು ಪ್ರಾಣಾಧಿಕನನ್ನು ನೋಡದಿರುವುದನ್ನು ಇನ್ನು ಸಹಿಸಲಾರದು. ಒಂದು ರಾತ್ರಿ ಇನ್ನು ಬೆಳಗಾಗುವುದಕ್ಕೆ ಒಂದೆರಡು ಪ್ರಹರವಿ

ರುವುದಕ್ಕಿಂತ ಮುಂಚೆ ಹಾಸಿಗೆಯನ್ನು ಬಿಟ್ಟು ಎದ್ದು, ಹೀರೆಯು ಇನ್ನೂ ನಿದ್ರಿತಳಾಗಿದ್ದಾಗ, ನಿಶ್ಯಬ್ದವಾಗಿ ಬಾಗಲು ತೆಗೆದು ಮನೆಯ ಹೊರಗೆ ಬಂದಳು. ಕೃಷ್ಣಪಕ್ಷಾವಶೇಷದ ಕ್ಷೀಣನಾದ ಚಂದ್ರನು ಆಕಾಶಪ್ರಾಂತದಲ್ಲಿ ಸಮುದ್ರದಲ್ಲಿ ಬಿದ್ದ ಬಾಲಳಾದ ಸುಂದರಿಯಹಾಗೆ ತೇಲುತಲಿದ್ದನು. ವೃಕ್ಷಾಂತರಾಳಗಳಲ್ಲಿ ರಾಶಿರಾಶಿ ಅಂಧಕಾರವು ಬಾತುಕೊಂಡಿತ್ತು. ಅತಿ ಶೀತಲವಾದ ಮಂದವಾಯುವಿನಿಂದ ಮಾರ್ಗದ ಪಾರ್ಶ್ವದಲ್ಲಿದ್ದ ಸರೋವರದಲ್ಲಿ ಪದ್ಮಪತ್ರಗಳಿಂದಲೂ ಪಾಚಿಮುಂತಾದವುಗಳಿಂದಲೂ ಮರೆಮಾಡಲ್ಪಟ್ಟಿದ್ದ ಜಲದಲ್ಲಿ ಅಲೆಗಳು ಏಳುತ್ತಿರಲಿಲ್ಲ. ಅಸ್ಪಷ್ಟವಾಗಿ ಕಾಣುವ ವೃಕ್ಷಾಗ್ರದ ಮೇಲುಗಡೆ ಅತಿ ನೀಲವಾದ ನೀಲಾಕಾಶವು ಶೋಭಿಸುತಲಿತ್ತು. ಮಾರ್ಗದಲ್ಲಿ ನಾಯಿಗಳು ಇನ್ನೂ ನಿದ್ರೆಹೋಗುತಲಿದ್ದವು. ಪ್ರಕೃತಿಯು ಸ್ನಿಗ್ಧವಾದ ಗಾಂಭೀರ್ಯವನ್ನು ಹೊಂದಿತ್ತು. ಕುಂದಳು ಮಾರ್ಗವನ್ನು ಹುಡುಕುತ್ತ ಸಂದೇಹದಿಂದುಂಟಾದ ಮಂದಗಮನದಲ್ಲಿ ದತ್ತನ ಗೃಹಾಭಿಮುಖವಾಗಿ ಹೋಗುತ್ತಿದ್ದಳು. ಮನೆಗೆ ಹೋಗುವುದಕ್ಕೆ ಇನ್ನೂ ಪೂರಾ ಮನಸ್ಸಿಲ್ಲ— ಕೇವಲ ನಾಗೇಂದ್ರನು ದೃಷ್ಟಿಗೆ ಬಿದ್ದರೂ ಬೀಳಬಹುದೆಂದು ಹೋಗುತ್ತಿದ್ದಳು. ದತ್ತನ ಮನೆಗೆ ಹೋಗುವ ಸಂಭವವುಂಟಾಗಲಾರದು. ಯಾವಾಗ ಅಂತಹ ಸಂಭವ ಬರುವುದೋ ಬರಲಿ—ಇಷ್ಟರೊಳಗೆ ಒಂದುಸಲ ಹೋಗಿ ನೋಡಿಕೊಂಡು ಬಂದರೆ ನಷ್ಟವೇನು? ಆದರೆ ಯಾವಾಗ ಹೇಗೆ ಬಾತುಕೊಂಡು ನೋಡಬೇಕು? ಇದನ್ನುಕುರಿತು ಕುಂದಳು ಚಿಂತಿಸಿ ಚಿಂತಿಸಿ ಕಡೆಗೆ ಬೆಳಗಾಗುವುದಕ್ಕೆ ಮುಂಚಿತವಾಗಿ ಕತ್ತಲೆಯಾಗಿರುವಾಗಲೇ ಮನೆಯ ಸುತ್ತಲೂ ತಿರುಗಾಡುತಲಿದ್ದರೆ, ನಾಗೇಂದ್ರನನ್ನು ಗವಾಕ್ಷದಲ್ಲಿಯೋ, ಮಹಡಿಯಮೇಲೋ, ಉದ್ಯಾನದಲ್ಲಿಯೋ ಅಥವಾ ಮಾರ್ಗದಲ್ಲಿಯೋ ಎಲ್ಲಾದರೂ ನೋಡಬಹುದೆಂದು ತಿಳಿದು ಅಷ್ಟುಹೊತ್ತಿನಲ್ಲಿ ಎದ್ದು ಹೊರಟಿದ್ದಳು. ನಾಗೇಂದ್ರನು ಪ್ರಭಾತದಲ್ಲಿ ಎದ್ದಿರುವನು. ಆಗ ಅವನನ್ನು ಕಂಡಕೂಡಲೇ

ಹಿಂದಿರುಗಿ ಬರಬೇಕೆಂದು ಯೋಚಿಸಿಕೊಂಡಿದ್ದಳು.

ಹೀಗೆ ಯೋಚಿಸುತ್ತ ಮಹಡಿ ಹತ್ತಿರ ಹೋಗಿ ನೋಡಿದಳು; ನಾಗೇಂದ್ರನು ಇರಲಿಲ್ಲ. ಇನ್ನೂ ಗವಾಕ್ಷದ ಹತ್ತಿರ, ಉದ್ಯಾನದ ಹತ್ತಿರ ಮತ್ತು ಇತರಕಡೆಯಲ್ಲೆಲ್ಲ ನೋಡಿದಳು. ನಾಗೇಂದ್ರನು ಕಾಣಿಸಲಿಲ್ಲ. ಇನ್ನೂ ಎದ್ದಿಲ್ಲವೆಂದು ತಿಳಿದಳು. ಅಲ್ಲಿಂದ ಮರದ ಕೆಳಗೆ ಇರೋಣ, ಏಳಲೆಂದು ಮರದ ಕೆಳಗೆ ಹೋಗಿ ಕೂತಳು. ಅಲ್ಲಿ ಬಹಳ ಕತ್ತಲೆ—ಮರದ ಹಣ್ಣು ಒಂದೊಂದು ತೊಟ್ಟು ಕಳಚಿ ತಟಪಟನೆ ನೀರಿನಲ್ಲಿ ಬಿದ್ದು ಶಬ್ದವಾಯಿತು. ಮರದ ಮೇಲೆ ಇದ್ದ ಪಕ್ಷಿಯು ರೆಕ್ಕೆಯನ್ನು ಹೊಡೆದುಕೊಳ್ಳುತ್ತಿತ್ತು. ಮನೆಯ ಆಳುಗಳು ಬಾಗಿಲು ತೆಗಿಯುವ ಶಬ್ದವಾಯಿತು. ಕಡೆಗೆ ಉಷಾಸೂಚಕಪವನ ಶೀತಲವಾದ ಮಂದಮಾರುತವು ಬೀಸಿತು.

ಆಗ ಕೆಲವು ಪಕ್ಷಿಗಳು ಸ್ವರಲಹರಿಯಿಂದ ಆಕಾಶದಲ್ಲಿ ಶಬ್ದ ಮಾಡಿ ಕುಂದಳ ತಲೆಯ ಮೇಲೆ ಕೂಗಿದವು. ಅನಂತರ ಮರದ ಮೇಲೆ ಕೋಕಿಲವು ಧ್ವನಿಮಾಡಿತು. ಕಡೆಗೆ ಪಕ್ಷಿಗಳೆಲ್ಲ ಗದ್ದಲ ಮಾಡಿದವು. ಆಗ ಕುಂದಳ ಆಶೆಯು ಹೋಗುತ್ತ ಬಂತು. ಇನ್ನು ಮರದ ಬುಡದಲ್ಲಿ ಕೂತಿರಲಾಗದು. ಬೆಳಕಾಗುತ್ತ ಬಂತು. ಅಲ್ಲಿದ್ದರೆ ಯಾರಾದರು ಕಂಡುಬಿಡುವರು. ಆದಕಾರಣ ಹಿಂದಿರುಗಿ ಹೊರಟು ಹೋಗಲು ಎದ್ದಳು. ಬಂದಾಶೆಯು ಪ್ರಬಲವಾಗಿ ಬಾಧಿಸಿತು. ಪ್ರಭಾತದಲ್ಲಿ ನಾಗೇಂದ್ರನು ಎದ್ದು ಬಂದೊಂದು ದಿನ ಅಂತಃಪುರಕ್ಕೆ ಸೇರಿದಹಾಗಿರುವ ಪುಷ್ಪೋದ್ಯಾನದಲ್ಲಿ ಬಂದು ವಾಯುಸೇವನೆಯನ್ನು ಮಾಡುತಲಿದ್ದನು. ಈಗ ಅಲ್ಲಿ ಶತಪದ ತಿರುಗುತಲಿದ್ದರೂ ಇರಬಹುದು. ಬಂದುಸಲ ಅಲ್ಲಿ ಹೋಗಿ ನೋಡದೆ ಹೋಗಲು ಅವಳಿಗೆ ಇಷ್ಟವಿರಲಿಲ್ಲ. ಆದರೆ ಉದ್ಯಾನಕ್ಕೆ ಸುತ್ತಲೂ ಗೋಡೆ. ಸಣ್ಣ ಬಾಗಲು ತೆಗಿಯದೆ ಒಳಗೆ ಪ್ರವೇಶಕ್ಕೆ ಮಾರ್ಗವಿಲ್ಲ. ಹೊರಗಿನಿಂದ ನೋಡುವುದಕ್ಕೆ ಗೋಡೆ ಎತ್ತರ. ಸಣ್ಣ ಬಾಗಲು ತೆಗೆದು ಇದಿಯೋ ಇಲ್ಲವೋ ನೋಡೋ

ಣವೆಂದು ಕುಂದಳು ಅತ್ತ ಕಡೆ ಹೋದಳು !

ಹೋಗಿ ನೋಡಲಾಗಿ ಬಾಗಲು ತೆರೆದಿತ್ತು. ಕುಂದಳು ಸಾಹಸ ಮಾಡಿ ಒಳಗೆ ಪ್ರವೇಶ ಮಾಡಿ ಮೆಲ್ಲಮೆಲ್ಲಗೆ ಹೋಗಿ ಒಂದು ವಕುಳಮರದ ಮರೆಯಲ್ಲಿ ನಿಂತುಕೊಂಡಳು.

ಉದ್ಯಾನವು ತರು ಗುಲ್ಮ ಲತಾದಿಗಳಿಂದ ಪರಿವೃತವಾಗಿತ್ತು. ವೃಕ್ಷಗಳ ಸಾಲುಗಳ ಮಧ್ಯದಲ್ಲಿ ಸೊಗಸಾದ ದಾರಿ ; ಅಲ್ಲಲ್ಲಿ ಶ್ವೇತ ರಕ್ತ ಪೀತ ನೀಲ ವರ್ಣಗಳ ಅನೇಕವಾದ ಕುಸುಮರಾಶಿಯಿಂದ ಪರಿಶೋಭಿತವಾದ ವೃಕ್ಷಾದಿಗಳು ಅಲಂಕರಿಸುತಲಿದ್ದುವು. ಅವುಗಳ ಮೇಲೆ ಪ್ರಭಾತದ ಮಧುವಿನಲ್ಲಿ ಲುಬ್ಧವಾದ ಭ್ರಮರಮಕ್ಷಿಕಾದಿ ಹುಳುಗಳು ದಳದಳವಾಗಿ ತಿರುಗುವುದು, ಕೂಡುವುದು, ಏಳುವುದು ; ಝುಂಕಾರಶಬ್ಧ ಮಾಡುವುದು. ಒಂದೊಂದು ಹುಳುವು ಮನುಷ್ಯರನ್ನು ಅನುಕರಣಮಾಡುವಂದದಿ, ಮಧುಯುಕ್ತವಾದ ಪುಷ್ಪಗಳ ಮೇಲೆ ಝೋಲಿ ಹೊಡಿಯುತಲಿತ್ತು. ವಿಚಿತ್ರ ವರ್ಣಗಳುಳ್ಳ ಅತಿ ಚಿಕ್ಕದಾದ ಹಕ್ಕಿಗಳು ಅರಳಿದ ಪುಷ್ಪಗೊಂಚಲಗಳ ಮೇಲೆ ಮರದ ಹಣ್ಣುಗಳ ಹಾಗೆ ಕೂತುಕೊಂಡು ಪುಷ್ಪರಸವನ್ನು ಪಾನ ಮಾಡುತ್ತ, ಅವುಗಳಲ್ಲಿ ಒಂದೊಂದರ ಕಂಠದಲ್ಲಿ ಸಪ್ತಸ್ವರಸಮ್ಮಿಳಿತವಾದ ಧ್ವನಿಯು ಹೊರಡುತಲಿತ್ತು. ಪ್ರಭಾತದ ಮಂದಮಾರುತದ ಹಿಲ್ಲೋಲದಿಂದ ಪುಷ್ಪಭಾರದಿಂದ ಬಗ್ಗಿರುವ ಸಣ್ಣಸಣ್ಣ ಕೊಂಬೆಗಳು ತೂಗಾಡುತ್ತವೆ. ಪುಷ್ಪವಿಲ್ಲದ ರಂಬೆಗಳು ತೂಗಾಡುವುದಿಲ್ಲ. ಏತಕ್ಕೆಂದರೆ, ಅವು ನಮ್ರವಲ್ಲ. ಕೋಕಿಲವು ವಕುಳದ ಪೊದರಿನಲ್ಲಿ ತನ್ನ ಕಪ್ಪುವರ್ಣವನ್ನು ಮರೆಮಾಡಿಕೊಂಡು ಕಂಠದಿಂದ ಎಲ್ಲರನ್ನು ಜಯಿಸುತಲಿತ್ತು.

ಉದ್ಯಾನದ ಮಧ್ಯದಲ್ಲಿ ಬಿಳುಪಾದ ಶಿಲೆಯಿಂದ ನಿರ್ಮಿತವಾದ ಒಂದು ಲತಾಮಂಟಪ. ಅದನ್ನು ಅವಲಂಬನ ಮಾಡಿಕೊಂಡು ಪುಷ್ಪರಾಶಿಯಿಂದ ಲಂಕೃತವಾದ ನಾನಾವಿಧವಾದ ಲತೆಗಳು ಮಂಟಪದ ಸುತ್ತಲೂ ವೃತ್ತಿಕಾ

ಧಾರ ಪಾತ್ರೆಗಳಲ್ಲಿ ಹಾಕಿರುವ ಪುಷ್ಪಸಮೇತವಾದ ಗುಲ್ಮಾದಿಗಳ ಸಾಲು.

ಕುಂದನಂದಿನಿಯು ವಕುಳದ ಅಂತರಾಳದಿಂದ ಇಣಿಕಿ ನೋಡಿದಳು. ಉದ್ಯಾನದಲ್ಲಿ ನಾಗೇಂದ್ರನ ದೀರ್ಘಾಯತನವಾದ ದೇವಸದೃಶವಾದ ಮೂರ್ತಿಯು ಕಂಡುಬರಲಿಲ್ಲ. ಲತಾಮಂಟಪ ಮಧ್ಯದಲ್ಲಿ ದೃಷ್ಟಿಸಿ ನೋಡಲಾಗಿ ಅಲ್ಲಿ ಆ ಪ್ರಸ್ತರನಿರ್ಮಿತವಾದ ನೆಲದ ಮೇಲೆ ಯಾರೋ ಮಲಗಿದ್ದ ಹಾಗೆ ಕಂಡಿತು. ಆ ವ್ಯಕ್ತಿಯು ನಾಗೇಂದ್ರನಾಗಿರಬಹುದೆಂದು ತಿಳಿದಳು. ಚೆನ್ನಾಗಿ ನೋಡಬೇಕೆಂದು ಮರಗಳ ಮರೆಯಲ್ಲಿಯೇ ಮೆಲ್ಲಮೆಲ್ಲಗೆ ಮುಂದೆ ಮುಂದೆ ಬಂದಳು. ಅವಳ ದುರದೃಷ್ಟಕ್ಕೆ ಸರಿಯಾಗಿ ಮಲಗಿದ್ದ ವ್ಯಕ್ತಿಯು ಎದ್ದು ಹೊರಗೆ ಬಂದ ಮೇಲೆ ನೋಡಲಾಗಿ ನಾಗೇಂದ್ರನಾಗಿರಲಿಲ್ಲ; ಸೂರ್ಯಮುಖಿಯಾಗಿದ್ದಳು.

ಕುಂದಳು ಭಯಪಟ್ಟು ಬಂದು ಪ್ರಸ್ಫುಟಿತವಾದ ಕಾಮಿನೀಲತೆಯ ಹಿಂದುಗಡೆ ನಿಂತಳು. ಭಯದಿಂದ ಮುಂದಾಗಲಿಲ್ಲ—ಹಿಂದಕ್ಕೂ ಹೋಗಲಾರದೆ ಹೋದಳು. ಹಾಗೆಯೇ ನೋಡುತ್ತಿರಲಾಗಿ ಸೂರ್ಯಮುಖಿಯು ಉದ್ಯಾನದಲ್ಲಿ ಪುಷ್ಪಗಳನ್ನು ಎತ್ತುತ್ತ ಅಲ್ಲಲ್ಲಿ ತಿರುಗಾಡುತಲಿದ್ದಳು. ಕುಂದಳು ಬಚ್ಚಿಟ್ಟುಕೊಂಡಿದ್ದ ಕಡೆಗೆ ಕ್ರಮೇಣ ಬರಲಾರಂಭಿಸಿದಳು. ಕುಂದಳು ಸಿಕ್ಕಿಬಿದ್ದೆನೆಂದಂದುಕೊಂಡಳು ಕಡೆಗೆ ಸೂರ್ಯಮುಖಿಯು ಕುಂದಳನ್ನು ಕಂಡಳು. ದೂರದಿಂದ ಗೊತ್ತಾಗದೆ, ಅದು ಯಾರಮ್ಮಾ! ಎಂದು ಕೇಳಿದಳು.

ಕುಂದಳು ಭಯದಿಂದ ಸುಮ್ಮನಿದ್ದಳು, ಕಾಲೇ ಬಾರದು. ಸೂರ್ಯಮುಖಿಯು ಹತ್ತರ ಬಂದು ನೋಡಲಾಗಿ ಕುಂದಳಾಗಿದ್ದಳು. ಆಶ್ಚರ್ಯಪಟ್ಟು, ಕುಂದಳಲ್ಲವೆ! ಎಂದಳು.

ಕುಂದಳಿಗೆ ಮಾತೇ ಹೊರಡದು. ಸೂರ್ಯಮುಖಿಯು ಕುಂದಳ ಕೈಯನ್ನು ಹಿಡಿದುಕೊಂಡು, ಕುಂದ! ಬಾ, ತಂಗಿ! ಬಾರಮ್ಮ, ಇನ್ನು

ಮೇಲೆ ನಾನು ಏನೂ ಹೇಳುವುದಿಲ್ಲವೆಂದಳು.

ಹೀಗೆ ಹೇಳಿ ಕುಂದಳನ್ನು ಕೈಹಿಡಿದುಕೊಂಡು ಅಂತಃಪುರಕ್ಕೆ ಕರೆದುಕೊಂಡು ಹೋದಳು.

## ಇಪ್ಪತ್ತುನಾಲ್ಕನೆಯ ಪರಿಚ್ಛೇದ.

### ಅವತರಣ.

ಆದೇದಿನ ರಾತ್ರಿಯಲ್ಲಿ ದೇವೇಂದ್ರದತ್ತನು ಒಬ್ಬನೇ ಛದ್ಮವೇಷದಿಂದ ಪೂರಾ ಸುರಾಪಾನ ಮಾಡಿ ಕುಂದನಂದಿನಿಯ ಅನುಸಂಧಾನ ಮಾಡುತ್ತ ಹೀರೆಯ ಮನೆಗೆ ಹೋದನು ಅಲ್ಲಿ ಮನೆಯಲ್ಲಿ ಹುಡುಕಿದನು. ಕುಂದನಂದಿನಿಯು ಇರಲಿಲ್ಲ. ಹೀರೆಯು ಬಾಯಿಗೆ ಬಟ್ಟೆ ಇಟ್ಟುಕೊಂಡು ನಕ್ಕಳು. ದೇವೇಂದ್ರನು ಕುಪಿತನಾಗಿ ಏತಕ್ಕೆ ನಗುತ್ತಿಯೆಂದು ಕೇಳಿದನು.

ಹೀರಾ—ನಿನ್ನ ದುಃಖವನ್ನು ನೋಡಿ--ಪಂಜರದಲ್ಲಿದ್ದ ಪಕ್ಷಿಯು ಹಾರಿ ಹೋಯಿತು. ನನ್ನ ಮನೆಯಲ್ಲಿ ಹುಡುಕಿದರೆ ಸಿಕ್ಕುವುದಿಲ್ಲ.

ಆಗ ದೇವೇಂದ್ರನು ಪ್ರಶ್ನೆಗಳನ್ನು ಮಾಡಿ ಅವಳಿಗೆ ತಿಳಿದಿದ್ದುದನ್ನೆಲ್ಲ ತಿಳಿದುಕೊಂಡನಂತರ ಹೀರೆಯು ಈ ಹೊತ್ತು ಬೆಳಗ್ಗೆ ಹುಡುಕುತ್ತ ಹೋಗಿ ನೋಡಲಾಗಿ ಕುಂದಳು ಬಾಬುವಿನ ಮನೆಯಲ್ಲಿದ್ದಳು. ಅವಳಿಗೆ ಈಗ ಬಹಳ ಆದರವನ್ನು ಮಾಡುತ್ತಾರೆಂದಳು.

ದೇವೇಂದ್ರನು ನಿರಾಶನಾಗಿ ಹೊರಟು ಹೋಗುತಲಿದ್ದನು. ಆದರೆ ಮನಸ್ಸಿನಲ್ಲಿ ಸಂಶಯವುಂಟಾಗಿ, ಇನ್ನೂ ಸ್ವಲ್ಪ ಹೀರಾವಿನ ಭಾವಗತಿಕವನ್ನು ನೋಡಿಕೊಂಡು ಹೋಗೋಣವೆಂದು ಯೋಚಿಸಿದನು. ಆಕಾಶದಲ್ಲಿ ಒಂದೆರಡು ಮೋಡವು ಕಂಡು, ಮಳೆ ಬರಬಹುದೆಂದು ಹೇಳಿಕೊಂಡು ಅತ್ತ ಇತ್ತ ನೋಡಿದನು. ಹೀರೆಗೂ ಅವನು ಸ್ವಲ್ಪಹೊತ್ತು ಕೂತಿರಲೆಂದು ಆಶೆ—ಆದರೆ ಅವಳು ಹೆಂಗಸು—ಮನೆಯಲ್ಲಿ ಒಬ್ಬಳೇ ಒಬ್ಬಳು-

ಅದರಲ್ಲಿಯೂ ರಾತ್ರಿ, ಆದಕಾರಣ ಕೂತುಕೊಳ್ಳುವಂತೆ ಹೇಳಲು ಧೈರ್ಯ ಸಾಲದು. ಹಾಗೆ ಹೇಳಿದರೆ ಅಧಃಪಾತಕ್ಕೆ ಇನ್ನೊಂದು ಮೆಟ್ಟಲು ಇಳಿದ ಹಾಗಾಗುತ್ತದೆ. ಆದರೆ ಅವಳ ಹಣೆಬರಹವೂ ಹಾಗೆಯೇ ಇತ್ತು. ದೇವೇಂದ್ರನು, ನಿನ್ನ ಮನೆಯಲ್ಲಿ ಕೊಡೆಯಿದಿಯೇ ಎಂದು ಕೇಳಿದನು.

ಹೀರೆಯು ಮನೆಯಲ್ಲಿ ಕೊಡೆ ಇರಲಿಲ್ಲ. ದೇವೇಂದ್ರನು ನಿಮ್ಮ ಮನೆಲಿ ಸ್ವಲ್ಪ ಹೊತ್ತು ಮಳೆ ನೋಡಿಕೊಂಡು ಹೋದರೆ ಯಾರಾದರೂ ಏನಾದರೂ ಹೇಳುವುರೋ ಎಂದು ಕೇಳಿದನು.

ಹೀರಾ–ಹೇಳದೇ ಏನು? ಆದರೆ ಯಾವ ದೋಷವುಂಟಾಗುವುದೋ ಅದು ತಾವು ರಾತ್ರಿಹೊತ್ತಿನಲ್ಲಿ ಬಂದುದರಿಂದಲೇ ಉಂಟಾಗಿದೆ.

ದೇವೇಂದ್ರ–ಹಾಗಾದರೆ ಕೂತಿರಬಹುದು?

ಹೀರಾ ಉತ್ತರವನ್ನು ಕೊಡಲಿಲ್ಲ. ದೇವೇಂದ್ರನು ಕೂತುಕೊಂಡನು.

ಆಗ ಹೀರೆಯು ಮಂಚದ ಮೇಲೆ ಅತಿ ಪರಿಷ್ಕಾರವಾಗಿ ಹಾಸಿಗೆಯನ್ನು ಹಾಸಿ ದೇವೇಂದ್ರನನ್ನು ಕುಳ್ಳಿರಿಸಿದಳು. ಮತ್ತು ಪೆಟ್ಟಿಗೆಯಿಂದ, ಬೆಳ್ಳಿ ಕಟ್ಟುಹಾಕಿದ್ದ ಹುಕ್ಕಾವನ್ನು ತೆಗೆದು, ಅದಕ್ಕೆ ಅತಿ ಶೀತಲವಾದ ನೀರನ್ನು ತುಂಬಿ ಸೊಗಸಾದ ಗುಡಿಗುಡಿ ತಂಬಾಕನ್ನು ಸಿದ್ಧಪಡಿಸಿ ಅದರ ಮುಖನಾಳವನ್ನು ಆವನಿಗೆ ಕೊಟ್ಟಳು.

ದೇವೇಂದ್ರನು ತನ್ನ ಪಾಕೆಟ್ಟಿನಿಂದ ಬಂದು ಬ್ರಾಂದಿಫ್ಲಾಸ್ಕನ್ನು (Flask–ಶೀಸೆ) ತೆಗೆದು ಅದಕ್ಕೆ ನೀರು ಸೇರಿಸದೆ ಕುಡಿದು ಅದರಿಂದ ರಾಗಯುಕ್ತನಾಗಿ ನೋಡಲಾಗಿ ಹೀರೆಯು ಕಣ್ಣುಗಳು ಬಹಳ ಸುಂದರವಾಗಿ ಕಂಡವು. ವಸ್ತುತಃ ಅವಳ ಕಣ್ಣುಗಳು ಬಹಳ ಸುಂದರವಾದವು. ಕಣ್ಣುಗಳು ದೊಡ್ಡವು. ನಿಬಿಡವಾದ ಕೃಷ್ಣತಾರಾಯುಕ್ತವಾಗಿ ಪ್ರದೀಪ್ತವಾಗಿ ವಿಲೋಲಕಟಾಕ್ಷವುಳ್ಳದ್ದಾಗಿದ್ದವು.

ದೇವೇಂದ್ರನು, ನಿನ್ನ ಕಣ್ಣುಗಳು ಬಹಳ ದಿವ್ಯವಾದ ಕಣ್ಣುಗಳು

ಎಂದು ಹೇಳಿದನು. ಹೀರಾ ಮೃದುವಾಗಿ ನಕ್ಕಳು. ದೇವೇಂದ್ರನು ಅಲ್ಲಿ ಒಂದು ಹಳತಾದ ಸಾರಂಗವು ಬಿದ್ದಿದ್ದನ್ನು ನೋಡಿ, ಅದನ್ನು ತೆಗೆದುಕೊಂಡು ಹಾಡುವುದಕ್ಕೆ ಪ್ರಾರಂಭಿಸಿದನು. ಅದು ಸರಿಯಾಗಿಲ್ಲದೆ, ಇದನ್ನು ಎಲ್ಲಿ ತೆಗೆದುಕೊಂಡೆಯೆಂದು ಕೇಳಿದನು.

ಹೀರಾ—ಒಬ್ಬ ಭಿಕ್ಷುಕನಿಂದ ಬೆಲೆಗೆ ತೆಗೆದೆ.

ದೇವೇಂದ್ರನು ಅದನ್ನೇ ಬಾರಿಸುತ್ತ ಮಧುರವಾದ ಸ್ವರದಿಂದ ಮಧುರವಾದ ಭಾವಯುಕ್ತವಾದ ಮಧುರವಾದ ಪದವನ್ನು ಮಧುಭಾವದಿಂದ ಗಾನ ಮಾಡಿದನು. ಸ್ವಲ್ಪ ಹೊತ್ತಿನಲ್ಲಿಯೇ ಹೀರೆಯು ಸಂಪೂರ್ಣವಾಗಿ ಮೈಮರೆತವಳಾದಳು. ತಾನು ಹೀರೆಯೆಂಬುದನ್ನೂ ಅವನು ದೇವೇಂದ್ರನೆಂಬುದನ್ನೂ ಸಹ ಮರೆತಳು. ಮನಸ್ಸಿನಲ್ಲಿ ಇವನು ಪತಿ, ನಾನು ಪತ್ನಿಯೆಂತಲೂ, ಬ್ರಹ್ಮನು ಇಬ್ಬರನ್ನೂ ಪರಸ್ಪರರಿಗೋಸ್ಕರ ಸೃಷ್ಟಿಮಾಡಿದ್ದಾನೆಂತಲೂ, ಬಹುಕಾಲದಿಂದ ಇಬ್ಬರೂ ಸೇರಿ ಇಬ್ಬರ ಪ್ರಣಯದಿಂದ ಪರಸ್ಪರ ಸುಖಿಗಳಾಗಿರುವಂತೆಯೂ ತಿಳಿದಳು. ಈರೀತಿಯಾಗಿ ಮೋಹಾಭಿಭೂತಳಾದ ಹೀರೆಯ ಮನಸ್ಸಿನಭಾವವು ಬಾಯಿಯಿಂದ ವ್ಯಕ್ತವಾಯಿತು. ಅವಳು ಅರ್ಧ ವ್ಯಕ್ತವಾದ ಸ್ವರದಿಂದ ಹೊರಪಡಿಸಿದ ಅವಳ ಮನೋಭಾವವನ್ನು ಕೇಳಿ, ಹೀರೆಯು ತನ್ನಲ್ಲಿ ಪ್ರಾಣಸಮರ್ಪಣೆಯನ್ನು ಮಾಡಿದ್ದಾಳೆಂದು ದೇವೇಂದ್ರನು ತಿಳಿದನು.

ಬಾಯಿಯಿಂದ ತನ್ನ ಮನೋಭಾವವು ಹೊರಪಟ್ಟಮೇಲೆ ಹೀರೆಯು ಎಚ್ಚರಿಸಿಕೊಂಡಳು. ಅವಳ ತಲೆಯು ತಿರುಗಿತು. ಆಗವಳು ಉನ್ಮತ್ತಳಹಾಗೆ ಆಕುಲಚಿತ್ತಳಾಗಿ, ತಾವು ಬೇಗ ನನ್ನ ಮನೆಯಿಂದ ಹೊರಟು ಹೋಗೋಣಾಗಲಿ ಎಂದಳು.

ದೇವೇಂದ್ರನು ವಿಸ್ಮಿತನಾಗಿ, ಅದೇತಕ್ಕೆ ಹೀರೆ? ಎಂದನು.

ಹೀರಾ—ತಾವು ಬೇಗನೆ ಹೋಗೋಣಾಗಲಿ—ಇಲ್ಲದಿದ್ದರೆ ನಾನು ಹೊರಟು ಹೋಗುತ್ತೇನೆ.

ದೇವೇಂದ್ರ—ಅದೇತಕ್ಕೆ ? ಮನೆಯಿಂದ ಹೊರಡಿಸುವಿಯಾ, ಏನು ?

ಹೀರಾ—ನೀವು ಹೋಗಿ ; ಇಲ್ಲದಿದ್ದರೆ ಜನರನ್ನು ಕರೆಯುವೆನು. ನನ್ನನ್ನು ಹಾಳುಮಾಡುವುದಕ್ಕೆ ಬಂದಿರೇನು ?

ಆಗ ಹೀರೆಯು ಹುಚ್ಚಳಹಾಗೆ ವಿವಶಳಾಗಿದ್ದಳು.

ದೇವೇಂದ್ರ—ಇದೇನೇ ಸ್ತ್ರೀಚರಿತ್ರೆಯೆನ್ನುವುದು ?

ಹೀರಾ—(ಕೋಪಗೊಂಡು)—ಸ್ತ್ರೀಚರಿತ್ರೆಯೆ ? ಸ್ತ್ರೀಚರಿತ್ರೆ ಕೆಟ್ಟದ್ದುದಲ್ಲ. ನಿಮ್ಮ ಹಾಗಿರುವ ಪುರುಷರ ಚರಿತ್ರೆ ಬಹಳ ಕೆಟ್ಟದ್ದು. ನಿಮಗೆ ಧರ್ಮಜ್ಞಾನವಿಲ್ಲ. ಇತರರ ಕ್ಷೇಮಚಿಂತನೆಯಿಲ್ಲ. ಕೇವಲ ಸ್ವಂತ ಸುಖವನ್ನು ಹುಡುಕಿಕೊಂಡು ತಿರುಗುತ್ತೀರಿ. ಯಾವ ಹೆಂಗಸನ್ನು ಹೇಗೆ ಹಾಳುಮಾಡುವೆ ಎಂಬ ಪ್ರಯತ್ನದಲ್ಲಿ ಅಲೆಯುತ್ತೀರಿ. ಇಲ್ಲದಿದ್ದರೆ, ನನ್ನಮನೆಗೆ ಬಂದುದೇತಕ್ಕೆ ? ಏತಕ್ಕೆ ಕೂತದ್ದು ? ನನ್ನನ್ನು ಹಾಳುಮಾಡುವುದಕ್ಕಲ್ಲವೆ ಕೂತದ್ದು ? ನಾನು ವೇಶ್ಯಳೆಂಬ ಅಭಿಪ್ರಾಯದಿಂದಲ್ಲವೆ ಕೂತದ್ದು ? ಆದರೆ ನಾನು ವೇಶ್ಯಳಲ್ಲ. ನಾನು ಬಡವಳು, ಮೈಕಷ್ಟಮಾಡಿ ಕಾಲಕ್ಷೇಪ ಮಾಡುತ್ತೇನೆ. ವೇಶ್ಯಳಾಗುವುದಕ್ಕೆ ನನಗೆ ಅವಕಾಶವಿಲ್ಲ. ದೊಡ್ಡವರ ಮನೆಯ ಹೆಂಗಸಾಗಿದ್ದರೆ ಏನಾಗುತಲಿದ್ದೆನೋ ಹೇಳಲಾರೆ ಎಂದು ಹೇಳಿದಳು. ದೇವೇಂದ್ರನು ಭ್ರೂಭಂಗಿಮಾಡಿದನು. ಅದನ್ನು ನೋಡಿ ಹೀರೆಯು ಪ್ರೀತಳಾಗಿ, ಪುನಃ ಮುಖವನ್ನೆತ್ತಿ ದೇವೇಂದ್ರನನ್ನು ನೋಡುತ್ತ ಕೋಮಲತರವಾದ ಸ್ವರದಿಂದ, ಪ್ರಭುವೆ ! ನಾನು ತಮ್ಮ ರೂಪಗುಣಗಳನ್ನು ನೋಡಿ ಹುಚ್ಚಳಾಗಿ ಹೋಗಿದ್ದೇನೆ ; ನನ್ನನ್ನು ಕುಲಗೇಡಿಯೆಂದು ತಿಳಿಯಕೂಡದು. ನಾನು ನಿಮ್ಮನ್ನು ನೋಡಿದ ಮಾತ್ರದಿಂದಲೇ ಸುಖಿಯಾಗುತ್ತೇನೆ. ಆದಕಾರಣ ನೀವು ನನ್ನಮನೇಲಿ ಕೂಡಲು ಇಷ್ಟವುಳ್ಳವಳಾಗಿ ಅಡ್ಡಿಮಾಡಲಿಲ್ಲ. ಆದರೆ ನಾನು ಅಬಲೆ. ಹೆಂಗಸು. ನಾನು ಅಡ್ಡಿಮಾಡಲಾರೆನೆಂಬದರಮೇಲೆ ನೀವು ಕೂತುಕೊಳ್ಳುವುದುಚಿತವೆ ? ನೀವು ಮಹಾಪಾಪಿಷ್ಠರು

ಆದುದರಿಂದಲೇ ನನ್ನ ಮನೆಗೆ ಬಂದು ನನ್ನನ್ನು ಹಾಳುಮಾಡುವ ಪ್ರಯತ್ನ ಮಾಡಿದಿರಿ. ಈಗಲೇ ನೀವು ಇಲ್ಲಿಂದ ಹೊರಟುಹೋಗಿ ಎಂದಳು.

ದೇವೇಂದ್ರನು, ಹೀರೆ! ಬಹಳ ಚೆನ್ನಾಗಿದೆ, ನೀನು ನಮ್ಮ ಸಮಾಜದಲ್ಲಿ ಪ್ರಬಂಧಗಳನ್ನು ಹೇಳಲು ಸಮರ್ಥಳಾಗಿದ್ದೀಯೆ. ನಮ್ಮ ಬ್ರಹ್ಮ ಸಮಾಜದಲ್ಲಿ ಬಂದು ಒಂದುದಿನ ಹೇಳೆಂದನು.

ಹೀರೆಯು ಈ ಹಾಸ್ಯದಿಂದ ಮರ್ಮಪೀಡಿತಳಾಗಿ ರೋಷಕಾತರ ಸ್ವರದಿಂದ, ನಾನು ನಿಮ್ಮ ಹಾಸ್ಯಕ್ಕೆ ಯೋಗ್ಯಳಲ್ಲ. ತಮಗೆ ಸರಿಯಲ್ಲದವಳು ತಮ್ಮನ್ನು ಪ್ರೀತಿಸಿದರೆ ಅದನ್ನು ಕುರಿತು ಹಾಸ್ಯಮಾಡುವುದು ಸರಿಯಲ್ಲ. ನಾನು ಧಾರ್ಮಿಕಳಲ್ಲ. ನಾನು ಧರ್ಮವನ್ನು ಅರಿಯೆನು. ಧರ್ಮಕ್ಕೆ ನನ್ನ ಮನಸ್ಸಿನಲ್ಲಿ ಸ್ಥಳವಿಲ್ಲ. ನಾನು ಕುಲಗೇಡಿಯಲ್ಲವೆಂದು ಖಂಡಿತವಾಗಿ ಹೇಳುತ್ತೇನೆ. ನಾನು ತಮ್ಮ ಪ್ರೀತಿಗೆ ಆಶೆಬಿದ್ದು ಕಳಂಕವನ್ನು ಕೊಂಡುಕೊಳ್ಳಲಾರೆನು. ತಾವು ನನ್ನನ್ನು ಪ್ರೀತಿಸಿದ್ದರೆ ನಾನು ಈ ರೀತಿಯಾಗಿ ಹೇಳುತ್ತಿರಲಿಲ್ಲ. ನನಗೆ ಧರ್ಮಜ್ಞಾನವಿಲ್ಲ. ನನಗೆ ಧರ್ಮದಲ್ಲಿ ಭಕ್ತಿಯಿಲ್ಲ. ತಮ್ಮ ಪ್ರೀತಿಯಿದ್ದರೆ ಕಳಂಕವನ್ನು ತೃಣಪ್ರಾಯವಾಗಿ ನೋಡುತಲಿದ್ದೆ. ಆದರೆ ತಾವು ಪ್ರೀತಿಸುವುದಿಲ್ಲ. ಹಾಗಿದ್ದು ಕಲಂಕವನ್ನು ಯಾವ ಸುಖಕ್ಕಾಗಿ ಕೊಂಡುಕೊಳ್ಳಲಿ? ಯುವತಿಯಾದ ಹೆಂಗಸು ಕೈಗೆ ಸಿಕ್ಕಿದರೆ ಬಿಡುವುದಿಲ್ಲವಾಗಿ ನನ್ನನ್ನು ಅನುಸರಿಸಿದರೂ ಅನುಸರಿಸಬಹುದು, ಆದರೆ ನಾಳೆ ಮರೆತುಬಿಡುವಿರಿ, ಅಥವಾ ಜ್ಞಾಪಕವಿದ್ದರೂ ಇತರರ ಸಂಗಡ ನನ್ನನ್ನು ಕುರಿತು ಮಾತನಾಡುವಾಗ ಹಾಸ್ಯಮಾಡುವಿರಿ. ಆದುದರಿಂದ ನಾನೇತಕೆ ತಮಗೆ ಕಟ್ಟಬೀಳಬೇಕು? ಆದರೆ ಎಂದು ನೀವು ನನ್ನನ್ನು ಯಥಾರ್ಥವಾಗಿ ಪ್ರೀತಿಸುವಿರೋ ಅಂದು ನಾನು ದಾಸಿಯಾಗಿ ತಮ್ಮ ಚರಣಸೇವೆಯನ್ನು ಮಾಡುವೆನೆಂದು ಹೇಳಿದಳು.

ದೇವೇಂದ್ರನು ಹೀರೆಯ ಬಾಯಿಯಿಂದ ಈ ಪ್ರಕಾರವಾದ ಮಾರು

ನಾಲ್ಕುವಿಧವಾದ ಮಾತುಗಳನ್ನು ಕೇಳಿ ಅವಳ ಚಿತ್ತವೃತ್ತಿಯನ್ನು ತಿಳದವನಾಗಿ ಮನಸ್ಸಿನಲ್ಲಿ, ಈಗ ನಿನ್ನ ವಿಚಾರವು ಗೊತ್ತಾಯಿತು, ಸಮಯಬಂದಾಗ ನಿನ್ನಿಂದ ನನ್ನ ಕಾರ್ಯವನ್ನು ಮಾಡಿಕೊಳ್ಳುವೆನೆಂದು ಹೇಳಿಕೊಂಡು ಹೊರಟುಹೋದನು.

ದೇವೇಂದ್ರನು ಹೀರೆಯ ಚಿತ್ತವೃತ್ತಿಯನ್ನು ಸಂಪೂರ್ಣವಾಗಿ ಗೊತ್ತುಮಾಡಿಕೊಳ್ಳಲಿಲ್ಲ.

---

## ಇಪ್ಪತ್ತೆರಡನೆಯ ಪರಿಚ್ಛೇದ.

### ಸಂತೋಷಸಮಾಚಾರ.

ರಾತ್ರಿ ಒಂಬತ್ತು ಘಂಟೆಹೊತ್ತು. ಶ್ರೀಶಬಾಬುವು ಬೈಠಕಖಾನೆಯಲ್ಲಿ ಇಲ್ಲ. ಊಟವಾದಮೇಲೆ ಮನೆಯಜನರು ಜವಾನರು ಎಲ್ಲರೂ ಮಲಗಿದ್ದರು. ನಾಯಿಯು ಬಾಗಿಲಿನಲ್ಲಿ ಮಲಗಿತ್ತು. ಅವಕಾಶಸಿಕ್ಕಿದ್ದರಿಂದ ಪ್ರೇಮಮಯಿಯಾದ ಚಾಕರಳೊಬ್ಬಳು ಒಬ್ಬ ಪರಿಚಾರಕನ ಹತ್ತರ ಕುಳಿತುಕೊಂಡು ಎಲೆಅಡಿಕೆಯನ್ನು ಹಾಕಿಕೊಳ್ಳುತ್ತ ಇಬ್ಬರೂ ಏಕಾಂತವಾಗಿ ಮಾತನಾಡುತಲಿದ್ದರು. ಕಮಲಮಣಿಯು ಶಯ್ಯಾಗೃಹದಲ್ಲಿ ಕೈಯಲ್ಲಿ ಸೂಜಿಯನ್ನು ಹಿಡಿದು ಕಸೂತಿದಾರದಿಂದ ಕಾರ್ಪೆಟ್ಟನ್ನು ಹೆಣೆಯುತ್ತ ಕುಳಿತಿದ್ದಳು. ತಲೆಯ ಕೇಶವಿನ್ಯಾಸವು ಮೈಯೊಳಹ ವಸನಂಗಳು ಸಹ ಸಡಿಲಿದ್ದವು. ಅಲ್ಲಿ ಯಾರೂ ಇರಲಿಲ್ಲ. ಮೊಗುವು ಬಣ್ಣದ ಹುಲಿಯನ್ನಿಟ್ಟುಕೊಂಡು ಆಡುತಲಿತ್ತು. ಸ್ವಲ್ಪದೂರದಲ್ಲಿ ಒಂದು ಬೆಕ್ಕು ಮುಖದಲ್ಲಿ ವಿಜ್ಞತಾಲಕ್ಷಣಗಳನ್ನು ತೋರ್ಪಡಿಸುತ್ತ ಗಂಭೀರಪಾದ ತಾಯಿಯನ್ನೂ ಮೊಗವನ್ನೂ ನೋಡುತ್ತ, ಮನಸ್ಸಿನಲ್ಲಿ, ಮನುಷ್ಯರ ದಸೆಯು ಅತಿಭಯ

ನಕವಾದುದು ; ಯಾವಾಗಲೂ ಕಾರ್ಪೆಟ್ ಹೆಣೆಯುವುದು, ಮಣ್ಣುಬೊಂಬೆಗಳ ಸಂಗಡ ಆಡುವುದು, ಇಂತಹ ತುಚ್ಛವಾದ ಕೆಲಸಗಳಲ್ಲಿ ಮನಸ್ಸು ನಿಂತುಹೋಯಿತು ; ಧರ್ಮಕಾರ್ಯದಲ್ಲಿ ಬುದ್ಧಿಯಿಲ್ಲ ; ಬಿಡಾಲಜಾತಿಗೆ ಆಹಾರವನ್ನು ಕೊಡುವ ಯೋಚನೆಯೇ ಇಲ್ಲ ; ಪರಕಾಲದಲ್ಲಿ ಇವರಗತಿಯೇನಾಗುವುದೋ ? ಎಂದೆಂದುಕೊಂಡು ಆ ಸ್ಥಳವನ್ನು ಬಿಟ್ಟು ಬೇರೆಕಡೆಗೆ ಹೊರಟುಹೋಯಿತು.

ಕಮಲಮಣಿಯು ಸ್ವಲ್ಪ ಹೊತ್ತಿನಲ್ಲಿ ವಿರಕ್ತಳಾಗಿ ಕಾರ್ಪೆಟ್ಟಿನ ಕೆಲಸವನ್ನು ತೆಗೆದಿಟ್ಟು ಮೊಗುವಿನ ಸಂಗಡ ಆಡುತ್ತ ಕುಳಿತಿದ್ದಳು. ಮಕ್ಕಳಾಟವು ತಾಯಿಗಳಿಗೆ ಗೊತ್ತಿರುವದರಿಂದ ಅದನ್ನು ಕುರಿತು ಇಲ್ಲಿ ಹೆಚ್ಚು ವಿವರಿಸಬೇಕಾದುದಿಲ್ಲ. ಮೊಗುವಿಗೆ ನೀನು ಆಫೀಸಿಗೆ ಹೋಗಬೇಡ ; ಹೋದರೆ ಏನಾಗುತ್ತದೆ ಎಂದಳು. ಮೊಗುವು ಅಮ್ಮನು ಹೊಡೆಯುತ್ತಾಳೆಂದು ಹೇಳಿತು. ಹೀಗೆಲ್ಲ ಮಾತನಾಡುತ್ತ ಆಟವಾಡುತಲಿದ್ದಾಗ ಪರಿಚಾರಕಳೊಬ್ಬಳು ಕಣ್ಣೊರಿಸಿಕೊಳ್ಳುತ್ತ ಒಂದು ಕಾಗದವನ್ನು ತಂದು ಕಮಲಮಣಿಯಕೈಲಿ ಕೊಟ್ಟಳು. ಕಮಲಮಣಿಯು ಬಿಚ್ಚಿ ಓದಿದಳು—ವಿಷಣ್ಣಳಾಗಿ ಪುನಃ ಓದಿದಳು. ಮತ್ತೊಂದು ಸಲ ಓದಿಕೊಂಡು ಮೌನವಾಗಿದ್ದಳು. ಕಾಗದದ ಬಕ್ಕಣೆ:—

"ಪ್ರಿಯತಮೆ ! ನೀನು ಕಲಕತ್ತೆಗೆ ಹೊರಟುಹೋದಮೇಲೆ ನನ್ನನ್ನು ಮರೆತಹಾಗೆ ಕಾಣುತ್ತದೆ. ಹಾಗಿಲ್ಲದಿದ್ದರೆ ಒಂದು ಕಾಗದವುನ್ನೂ ಬರೆಯಲಿಲ್ಲವೇತಕ್ಕೆ ? ನಿನ್ನ ಕ್ಷೇಮಸಮಾಚಾರವನ್ನು ಕೇಳಲು ಕುತೂಹಲವುಳ್ಳವಳಾಗಿದ್ದೇನೆಂಬದು ಗೊತ್ತಿಲ್ಲವೆ ?

ನೀನು ಕುಂದನಂದಿನಿಯ ಸಮಾಚಾರವಾಗಿ ಹೇಳಿಕಳುಹಿಸಿದ್ದೆ. ಅವಳು ಸಿಕ್ಕಿದಳು. ಕೇಳಿ ಸಂತೋಷಪಡು. ದೇವರಿಗೆ ತೆಂಗಿನಕಾಯಿ ಒಡಿಸು. ಅದಲ್ಲದೆ ಮತ್ತೊಂದು ಸಂತೋಷವಾದ ಸಮಾಚಾರವುಂಟು. ಕುಂದಳನ್ನು ಕೊಟ್ಟು ನನ್ನ ಸ್ವಾಮಿಗೆ ವಿವಾಹವಾಗುತ್ತದೆ. ಈ ವಿವಾಹವನ್ನು ನಾನೇ

ಘಟನೆಮಾಡಿದೆ. ವಿಧವಾವಿವಾಹವು ಶಾಸ್ತ್ರದಲ್ಲಿ ಉಂಟು. ಹಾಗಿದ್ದರೆ ದೋಷವೇನು? ಇನ್ನು ಒಂದೆರಡು ದಿನಗಳಲ್ಲಿ ವಿವಾಹವಾಗುವುದು. ನೀನು ಅಷ್ಟರೊಳಗೆ ಬಂದು ಬದಗಲಾರೆ. ಅವಕಾಶವಾಗಿದ್ದರೆ ನಿನಗೆ ಲಗ್ನಪತ್ರಿಕೆ ಯನ್ನು ಬರೆಯುತಲಿದ್ದೆ. ಅನುಕೂಲವಾದರೆ ಪ್ರಸ್ತದದಿನವಾದರೂ ಬಂದು ಸೇರಬಹುದು. ನಿನ್ನನ್ನು ನೋಡುವುದಕ್ಕೆ ಬಹಳ ಆಶೆಯುಳ್ಳವಳಾಗಿದ್ದೇನೆ–"

ಕಮಲಳಿಗೆ ಕಾಗದವು ಅರ್ಥವಾಗಲಿಲ್ಲ. ಗಂಡನು ಆಫೀಸಿನಿಂದ ಬಂದಿರಲಿಲ್ಲವಾಗಿ ಸ್ವಲ್ಪಹೊತ್ತು ಕುಪಿತಳಾಗಿ ಕುಳಿತಿದ್ದಳು. ಅನಂತರ ಗಂಡನು ಬಂದು ಊಟಮಾಡಿ ಶಯ್ಯಾಗೃಹಕ್ಕೆ ಬಂದು ಸೋಫಾಮೇಲೆ ಕುಳಿತನು. ಕಮಲೆ ಕೋಪದಿಂದ ಮಲಗಿದ್ದಳು. ಆಗ ಶ್ರೀಶಚಂದ್ರನು ಹುಕ್ಕಾವನ್ನು ತೆಗೆದುಕೊಂಡು, ಅದನ್ನು ಸಾಕ್ಷಿಮಾಡಿ, ಹೇ ಹುಕ್ಕೆ! ನಿನ್ನ ಹೊಟ್ಟೆಯುತುಂಬ ಗಂಗೆಯ ನೀರು, ತಲೇಮೇಲೆ ಅಗ್ನಿ; ನೀನು ಸಾಕ್ಷಿಯಾಗಿರು; ನನ್ನಮೇಲೆ ಕೋಪಗೊಂಡಿರುವವಳು ಇನ್ನು ಸ್ವಲ್ಪಹೊತ್ತಿನಲ್ಲಿ ನನ್ನೊಡನೆ ಮಾತನಾಡುವಳು; ಇಲ್ಲದಿದ್ದರೆ ನಿನ್ನ ತಲೇಮೇಲೆ ಮತ್ತಷ್ಟು ಬೆಂಕಿಹಾಕಿ ಕುಳಿತಿರುವೆನೆಂದನು. ಆಗ ಕಮಲಳು ಈಗ ಆಗಿರುವುದು ಸಾಕು; ಇನ್ನು ಹೆಚ್ಚಾದರೆ ತಲೆಗೆ ಏರಿಹೋಗುವುದೆಂದು ಹೇಳಿ ಹಾಸಿಗೆಯನ್ನು ಬಿಟ್ಟುಬಂದು, ಹಸನ್ಮುಖಳಾಗಿ, ಸೂರ್ಯಮುಖಿಯ ಕಾಗದವನ್ನು ಓದಿಹೇಳಿದಳು.

ಶ್ರೀಶ–ಇದೇನು ನೀನು ಹೇಳುವುದು ವಿನೋದವೊ?

ಕಮಲ–ಕಾಗದದಲ್ಲಿ ಬರೆದಿದೆ.

ಶ್ರೀಶ–ಹಾಗಾದರೆ ನಿಜ.

ಕಮಲ–ನಿಜವಾಗಿದ್ದರೆ ಸೂರ್ಯಮುಖಿಗೆ ಏನೋ ವಿಪತ್ತು.

ಶ್ರೀಶಚಂದ್ರನು ವ್ಯಾಕುಲಚಿತ್ತನಾಗಿ, ನನಗೇನೂ ಗೊತ್ತಾಗುವುದಿಲ್ಲ ನಾಗೇಂದ್ರನಿಗೆ ಕಾಗದ ಬರೆಯಲೆ ಏನು? ಹೇಳು ಎಂದನು.

ಕಮಲಳು ಸಮ್ಮತಳಾದಳು. ಶ್ರೀಶಚಂದ್ರನು ಹಾಸ್ಯಮಾಡಿ ನಾಗೇಂದ್ರನಿಗೆ ಕಾಗದಬರೆದನು. ಕಾಗದಕ್ಕೆ ಪ್ರತ್ಯುತ್ತರಬಂದುದು ಈ ಪರಿಯಾಗಿತ್ತು :—

"ನನ್ನ ಪ್ರಿಯ ಸಹೋದರ! ನನ್ನನ್ನು ತಿರಸ್ಕಾರಮಾಡಬೇಡ. ಹಾಗೆ ನಿನ್ನನ್ನು ಪ್ರಾರ್ಥಿಸಿ ಪ್ರಯೋಜನವೇನು? ತಿರಸ್ಕಾರಾಸ್ಪದವಾದುದು ಆವಶ್ಯಕವಾಗಿ ತಿರಸ್ಕೃತವಾಗಲೇಬೇಕು. ನಾನು ಈ ವಿವಾಹವನ್ನು ಮಾಡಿಕೊಳ್ಳುವೆನು. ಇಲ್ಲದಿದ್ದರೆ ನಾನು ಉನ್ಮಾದಗ್ರಸ್ತನಾಗುವೆನು. ಹಾಗಾಗುವುದಕ್ಕೆ ಹೆಚ್ಚುಬೇಕಾಗಿಲ್ಲ.

ಇಷ್ಟು ಹೇಳಿದ ಮೇಲೆ ಇನ್ನು ಹೇಳಬೇಕಾದುದೇನೂ ಇಲ್ಲವೆಂದು ತೋರುತ್ತದೆ. ನೀನೂ ಸಹ ಇದಕ್ಕೆ ವ್ಯತಿರಿಕ್ತವಾಗಿ ಹೇಳುವುದೇನೂ ಇರಲಾರದು. ಒಂದುವೇಳೆ ನೀನು ಹೇಳುವುದಿದ್ದರೆ ಅದಕ್ಕೆ ಉತ್ತರವನ್ನು ಕೊಡಲು ಸಿದ್ಧವಾಗಿದ್ದೇನೆ.

ಕೆಲವರು ವಿಧವಾವಿವಾಹವು ಹಿಂದುಧರ್ಮಶಾಸ್ತ್ರಕ್ಕೆ ವಿರುದ್ಧವಾದುದೆಂದು ಹೇಳುತ್ತಾರೆ. ಅದಕ್ಕೆ ಉತ್ತರವಾಗಿ ವಿದ್ಯಾಸಾಗರಮಹಾಶಯರ ಪ್ರಬಂಧವನ್ನು ಓದಿಹೇಳುವೆನು. ಅಂತಹ ಶಾಸ್ತ್ರವಿಶಾರದನಾದ ಮಹಾಮಹೋಪಾಧ್ಯಾಯನೇ ವಿಧವಾ ವಿವಾಹವು ಶಾಸ್ತ್ರಸಮ್ಮತವೆಂದು ಹೇಳುವಾಗ ಅದು ಅಶಾಸ್ತ್ರೀಯವೆಂದು ಯಾರುತಾನೇ ಹೇಳಬಲ್ಲರು? ಒಂದುವೇಳೆ ಶಾಸ್ತ್ರಸಮ್ಮತವಾದರೂ ಇದಕ್ಕೆ ಸಮಾಜಸಮ್ಮತಿಯಿಲ್ಲವೆಂತಲೂ ನಾನು ಈ ವಿವಾಹಮಾಡಿಕೊಂಡರೆ ಸಮಾಜಚ್ಯುತನಾಗುವೆನೆಂತಲೂ ಹೇಳುವುದಾದರೆ, ಅದಕ್ಕೆ ಉತ್ತರವೇನೆಂದರೆ :—ಗೋವಿಂದಪುರದಲ್ಲಿ ನನಗೆ ಬಹಿಷ್ಕಾರ ಹಾಕುವುದಕ್ಕೆ ಯಾರಿಗೆ ಸಾಧ್ಯ? ಎಲ್ಲಿ ನಾನೇ ಸಮಾಜವಾಗಿದ್ದೇನೋ ಅಲ್ಲಿ ನನಗೆ ಸಮಾಜಚ್ಯುತಿಯು ಹೇಗೆ ಆದೀತು? ಆದರೂ ನಿಮ್ಮಗಳ ಸಮಾಧಾನಾರ್ಥವಾಗಿ ಈ ವಿವಾಹದ ವಿಚಾರವನ್ನು ಗೋಪ್ಯವಾಗಿಟ್ಟು ಇರುವೆನು. ಆವಾ

ತತಃ ಇದು ಯಾರಿಗೂ ತಿಳಿಯದು.

ಈ ಆಕ್ಷೇಪಣೆಗಳನ್ನು ನೀನು ಮಾಡುವುದಿಲ್ಲ. ನೀನು ಹೇಳುವು ದೇನೆಂದರೆ :—ಎರಡು ವಿವಾಹವು ನೀತಿವಿರುದ್ಧವಾದುದೆಂದು ಹೇಳುವೆ. ಇದು ನೀತಿವಿರುದ್ಧವಾದುದು ಹೇಗೆ? ಇದು ನೀನು ಇಂಗ್ಲೀಷರಿಂದ ತಿಳಿದು ಕೊಂಡಿರುವ ಮಾತು. ಇಲ್ಲದಿದ್ದರೆ ಭಾರತವರ್ಷದಲ್ಲಿ ಈಮಾತು ಇರಲಿಲ್ಲ. ಇಂಗ್ಲೀಷರು ಹೇಳಿದಮಾತ್ರದಿಂದಲೇ ಅದು ಭ್ರಾಂತಿರಹಿತವಾದುದೊ? ಅವರ ಬೈಬಲಿನಲ್ಲಿ ಮೋಜಸ್ ಎಂಬುವನು ಹೇಳಿದ್ದಾನೆಂಬುದರಮೇಲೆ ಇಂ ಗ್ಲೀಷರಿಗೆ ಈ ಸಂಸ್ಕಾರವುಂಟಾಗಿದೆ. ಆದರೆ ನಿನಗೂ ನನಗೂ ಮೂಸಾ ವಿನ ಮಾತು ಈಶ್ವರವಾಕ್ಯವಾಗದು. ಹಾಗಾದರೆ ಯಾವ ಕಾರಣದಿಂದ ಒಬ್ಬ ಪುರುಷನಿಗೆ ಎರಡುವಿವಾಹವು ನೀತಿವಿರುದ್ಧವೆಂದು ಹೇಳುವೆ?

ನೀನು, ಪುರುಷನಿಗೆ ಎರಡು ಹೆಂಡಂದಿರು ಆಗುವುದಾದರೆ ಒಬ್ಬ ಹೆಂ ಗಸಿಗೆ ಇಬ್ಬರು ಗಂಡಂದಿರು ಏತಕ್ಕೆ ಕೂಡದೆಂದು ಕೇಳುವೆ—ಉತ್ತರ. ಒಬ್ಬ ಹೆಂಗಸಿಗೆ ಇಬ್ಬರು ಗಂಡಂದಿರಾದರೆ ಅನೇಕ ಅನಿಷ್ಟಗಳಿಗೆ ಕಾರಣ ವಾಗುತ್ತದೆ. ತಂದೆಯೇ ಮಕ್ಕಳಿಗೆ ಪಾಲಕನು. ತಂದೆಯು ಗೊತ್ತಾಗದೆ ಹೋದರೆ ಸಮಾಜದ ಉಚ್ಛೃಂಖಲತೆಯುಂಟಾಗುತ್ತದೆ. ಆದರೆ ಪುರುಷ ನಿಗೆ ಎರಡು ವಿವಾಹದಿಂದ ತಾಯಿಯ ಅನಿಶ್ಚಿತೆಯುಂಟಾಗುವುದಿಲ್ಲ. ಹೀಗೆ ಅನೇಕ ಹೇಳಬಹುದು. 12362

ಯಾವದು ಬಹುಜನರಿಗೆ ಅನಿಷ್ಟಕಾರಕವೋ ಅದೇ ನೀತಿವಿರುದ್ಧವಾ ದುದು. ನೀನು ಪುರುಷನಿಗೆ ಎರಡು ವಿವಾಹವು ನೀತಿವಿರುದ್ಧವೆಂದು ಹೇ ಳುವವನಾದರೆ ಅದು ಹೆಚ್ಚು ಜನರಿಗೆ ಅನಿಷ್ಟಕರವಾದುದೆಂದು ತೋರಿಸ ಬೇಕು.

ಮನೆಯಲ್ಲಿ ಕಲಹಾದಿಗಳಿಗೆ ಕಾರಣವಾಗುವುದೆಂದು ನೀನು ಯುಕ್ತಿ ಯನ್ನು ಹೇಳುವೆ. ನಾನೊಂದು ಯುಕ್ತಿಯನ್ನು ಹೇಳುತ್ತೇನೆ. ನನಗೆ

ಸಂತಾನವಿಲ್ಲ. ನಾನು ಕಾಲವಾದರೆ ನಮ್ಮ ಪಿತೃಕುಲದ ಹೆಸರು ವಿಲುಪ್ತವಾಗಿ ಹೋಗುತ್ತದೆ. ಈ ವಿವಾಹದಿಂದ ಸಂತಾನವಾಗುವ ಸಂಭಾವನೆಯುಂಟು. ಇದು ಯುಕ್ತಿಯಲ್ಲವೆ?

ಕಡೇದು, ಆಪತ್ತಿ–ಸೂರ್ಯಮುಖಿ–ಸ್ನೇಹಮಯಿಯಾದ ಪತ್ನಿಗೆ ಸಪತ್ನೀಕಂಟಕವನ್ನೇತಕ್ಕೆ ಉಂಟುಮಾಡಬೇಕು? ಇದೊಂದು ಪ್ರಬಲವಾದ ಆಕ್ಷೇಪಣೆ–ಉತ್ತರ. ಸೂರ್ಯಮುಖಿಯು ಈ ವಿವಾಹದಿಂದ ದುಃಖಿತಳಾಗಿಲ್ಲ. ಅವಳೇ ಈ ವಿವಾಹದ ಪ್ರಸ್ತಾಪವನ್ನೆತ್ತಿ, ಅವಳೇ ನನಗೆ ಇದರಲ್ಲಿ ಪ್ರವೃತ್ತಿಯನ್ನುಂಟುಮಾಡಿದಳು. ಅವಳೇ ಇದರಲ್ಲಿ ಉದ್ಯೋಗಿನಿ. ಹಾಗಾದರೆ ಯಾರ ಆಪತ್ತಿ?

ಹೀಗಿರುತ್ತ ಯಾವ ಕಾರಣದಿಂದ ಈ ವಿವಾಹವು ನಿಂದನೀಯವಾದುದು?"

---

## ಇಪ್ಪತ್ತೆರಡನೆಯ ಪರಿಚ್ಛೇದ.

### ಯಾರ ಆಕ್ಷೇಪಣೆ?

ಕಮಲಮಣಿಯು ಕಾಗದವನ್ನು ಓದಿ, "ಯಾವ ಕಾರಣದಿಂದ ನಿಂದನೀಯವೆ?" ಜಗದೀಶ್ವರನೇಬಲ್ಲ! ಆದರೆ ಏನು ಭ್ರಮೆ! ಪುರುಷನಿಗೆ ಏನೂ ಗೊತ್ತಾಗುವುದಿಲ್ಲವೆಂದು ಕಾಣುತ್ತದೆ. ಏನಾದರೂ ಆಗಲಿ, ನೀವು ಸಿದ್ಧರಾಗಬೇಕು: ನಾವು ಗೋವಿಂದಪುರಕ್ಕೆ ಹೋಗಬೇಕು ಎಂದಳು.

ಶ್ರೀಶ–ನೀನು ವಿವಾಹವನ್ನು ನಿಲ್ಲಿಸುವಿಯಾ?

ಕಮಲ–ಇಲ್ಲ. ಅಣ್ಣನೆದುರಿಗೆ ಬಿದ್ದು ಸಾಯುವೆನು.

ಶ್ರೀಶ–ಅದಾಗದು. ಹೊಸಅತ್ತಿಗೆಯ ಮೂಗು ಕುಯಿದುಕೊಂಡು ಬರಬಹುದು. ನಡೆ, ಹಾಗೆ ಮಾಡೋಣ.

ಆಗ ಇಬ್ಬರೂ ಗೋವಿಂದಪುರಕ್ಕೆ ಹೊರಡಲು ಸಿದ್ಧಪಡಿಸಿಕೊಂಡರು. ಮರುದಿನ ಗೋವಿಂದಪುರಕ್ಕೆ ದೋಣಿಯ ಮೇಲೆ ಹೊರಟು ಯಥಾಕಾಲದಲ್ಲಿ ಸೇರಿದರು.

ಮನೆಗೆ ಹೋಗಿ ಸೇರುವುದಕ್ಕೆ ಮೊದಲು ದಾಸಿಗಳನ್ನೂ ಊರಿನ ಹೆಂಗಸರನ್ನೂ ನೋಡಿದರು. ಅನೇಕರು ಕಮಲಳನ್ನು ದೋಣಿಯಿಂದ ಕರೆದುಕೊಂಡು ಹೋಗಲು ಬಂದಿದ್ದರು. ಮದುವೆ ಆಯಿತೋ ಇಲ್ಲವೋ ಎಂಬ ಅಂಶವನ್ನು ತಿಳಿಯಲು ಗಂಡಹೆಂಡಂದಿರಿಬ್ಬರಿಗೂ ಕುತೂಹಲವು ಹೆಚ್ಚಾಗಿತ್ತು. ಆದರೆ ಇಬ್ಬರಲ್ಲಿ ಯಾರೂ ಯಾರನ್ನೂ ಈ ವಿಚಾರವಾಗಿ ವಿಚಾರಿಸಲಿಲ್ಲ—ಈ ಲಜ್ಜಾಕರವಾದ ಮಾತು ಬಾಯಿಬಿಟ್ಟು ಯಾರಿಗೆ ಹೇಳುವುದಕ್ಕಾದೀತು?

ಕಮಲಳು ಅತಿ ವ್ಯಸ್ತಳಾಗಿ ಅಂತಃಪುರಕ್ಕೆ ಪ್ರವೇಶ ಮಾಡಿದಳು. ಈಗ ಸತೀಶನು ಮುಂದಾಗಿ ಬರಲಿಲ್ಲ; ಅವನು ಹಿಂದೆ ಬಿದ್ದನು. ಅವನನ್ನು ಮರೆತುಬಿಟ್ಟಳು. ಮನೆಯೊಳಗೆ ಹೋಗಿ ಸ್ಪಷ್ಟವಾದ ಸ್ವರದಿಂದ ಮನಸ್ಸಿನಲ್ಲಿ ಸ್ವಲ್ಪವೂ ಧೈರ್ಯವಿಲ್ಲದೆ, ದಾಸಿಗಳನ್ನು ಕುರಿತು, ಸೂರ್ಯಮುಖಿ ಎಲ್ಲಿ? ಎಂದು ಕೇಳಿದಳು. ಮನಸ್ಸಿನಲ್ಲಿ, ಯಾರಾದರೂ ವಿವಾಹವು ಆಗಿ ಹೋಯಿತೆಂತಲೂ—ಸೂರ್ಯಮುಖಿಯು ಸತ್ತುಹೋದಳೆಂತಲೂ ಹೇಳಿಬಿಟ್ಟಾರೆಂಬ ಭಯವು ಡಬಡಬ ಹೊಡೆದುಕೊಳ್ಳುತ್ತಿತ್ತು.

ದಾಸಿಯೊಬ್ಬಳು, ಸೂರ್ಯಮುಖಿಯು ಶಯ್ಯಾಗೃಹದಲ್ಲಿದ್ದಾಳೆಂದಳು.

ಕಮಲಳು ಬೇಗನೆ ಅಲ್ಲಿಗೆ ಹೋದಳು. ಹೋಗಿ ನೋಡಲಾಗಿ ಯಾರೂ ಇರಲಿಲ್ಲ. ಮುಹೂರ್ತಕಾಲ ಅಲ್ಲಲ್ಲಿ ನೋಡಿದಳು. ಕಡೆಗೆ ಬಳಗೆ ಬಾಗಲು ಮುಚ್ಚಿದ್ದ ಗವಾಕ್ಷದ ಕೆಳಗೆ ಅಧೋವದನಳಾಗಿ ಒಬ್ಬ ಹೆಂಗಸು ಕುಳಿತಿದ್ದಳು. ಅವಳ ಮುಖವು ಕಾಣಿಸಲಿಲ್ಲ; ಆದರೂ ಕಮ

ಲಳು ಅವಳೇ ಸೂರ್ಯಮುಖಿಯೆಂದು ತಿಳಿದಳು. ಕಡೆಗೆ ಕಮಲಳ ಹೆಜ್ಜೆ ಯ ಶಬ್ದವನ್ನು ಕೇಳಿ ಎದ್ದು ಅವಳ ಪಾರ್ಶ್ವದಲ್ಲಿ ಬಂದು ನಿಂತಳು. ವಿವಾ ಹವು ಆಯಿತೇ ಇಲ್ಲವೇ ಎಂದು ಕೇಳುವುದಕ್ಕೆ ಕಮಲಳಿಗೆ ಬಾಯಿ ಬ ಲಿಲ್ಲಿ. ಸೂರ್ಯಮುಖಿಯ ಭುಜದ ಮೂಳೆಗಳೆಲ್ಲ ಎದ್ದು ಕಾಣಿಸುತಲಿದ್ದ ವು. ಅವಳ ಆ ದೇವದಾರುಸದೃಶವಾದ ದೇಹ ತರುವು ಧನುಸ್ಸಿನಹಾಗೆ ಬಗ್ಗಿ ಹೋಗಿತ್ತು. ಅವಳ ಆ ಪ್ರಫುಲ್ಲವಾದ ಪದ್ಮಪಲಾಶದಹಾಗಿದ್ದ ಚಕ್ಷುಗಳ ಗುಂಡಿಗೆ ಹೋಗಿದ್ದವು. ಅವಳಾಪದ್ಮಸದೃಶವಾದ ಮುಖವು ದೀರ್ಘಾಕೃತಿಯ ಗಿತ್ತು. ವಿವಾಹವಾಯಿತೆಂದು ಕಮಲಳು ತಿಳಿದುಕೊಂಡು, ಯಾವಾ ಆಯಿತೆಂದು ಕೇಳಿದಳು. ಸೂರ್ಯಮುಖಿಯು, ನೆನ್ನೆ ಎಂದಳು.

ಆಗ ಇಬ್ಬರೂ ಅಲ್ಲಿ ಕುಳಿತುಕೊಂಡು ಮೌನವಾಗಿ ಅಳಲಾರಂಭಿಸಿ ದರು. ಯಾರೂ ಏನೂ ಮಾತನಾಡಲಿಲ್ಲ. ಸೂರ್ಯಮುಖಿಯು ಕಮ ಲಳ ಮಡಲು ಮೇಲೆ ತಲೆಯಿಟ್ಟುಕೊಂಡು ಅಳಲಾರಂಭಿಸಿದಳು : ಕಮ ಮಣಿಯು ಕಣ್ಣೀರು ಅವಳ ತಲೆಯ ಮೇಲೆ ಸುರಿಯಿತು.

ಆಗ ನಾಗೇಂದ್ರನು ಚೈತ್ರಕಖಾನೆಯಲ್ಲಿ ಕುಳಿತುಕೊಂಡು ಕುಂದ ನನ್ನ ಕುಂದ! ಎಂದುಮುಂತಾಗಿ ಹೇಳಿಕೊಳ್ಳುತ್ತಿದ್ದನು. ಶ್ರೀಶಚಂದ್ರನ ಬಂದು ಪಾರ್ಶ್ವದಲ್ಲಿ ಕುಳಿತುಕೊಂಡನು. ಅವರವರಿಗೆ ಚೆನ್ನಾಗಿ ಮಾತ ನಡೆಯಲಿಲ್ಲ. ಮನಸ್ಸಿನಲ್ಲಿ ಸೂರ್ಯಮುಖಿಯೇ ಪ್ರಯತ್ನಪಟ್ಟು ಮದು ವೆ ಮಾಡಿದಳು. ಈ ನನ್ನ ಸುಖಕ್ಕೆ ಪಾತ್ರಾರ ಆಕ್ಷೇಪಣೆಯಿದ್ದೀತೆಂದು ದುಕೊಳ್ಳುತ್ತಿದ್ದನು.

G. N. C. Sekharan

Sree Rekha

# ಇಪ್ಪತ್ತೇಳನೆಯ ಪರಿಚ್ಛೇದ.

ಪ್ರದೋಷಕಾಲದಲ್ಲಿ ಇಬ್ಬರೂ ಪರಸ್ಪರ ಮಾತನಾಡಲು ಬಳಕೆ ಆದಾಗ, ಸೂರ್ಯಮುಖಿಯು ಕಮಲಮಣಿಗೆ ನಾಗೇಂದ್ರನಿಗೂ ಕುಂದಳಿಗೂ ಆದ ವಿವಾಹ ವೃತ್ತಾಂತವನ್ನೆಲ್ಲ ವಿವರವಾಗಿ ಹೇಳಿದಳು. ಕೇಳಿ ಕಮಲಮಣಿಯು ಆಶ್ಚರ್ಯಪಟ್ಟು, ಈ ಹಾಳು ಮದುವೆ ಎನ್ನುವುದು ನಿನ್ನ ಪ್ರಯತ್ನದಿಂದಲೇ ಆದಹಾಗಾಯಿತು. ನೀನೇ ನಿನ್ನ ಮೃತ್ಯುವಿಗೆ ಪ್ರಯತ್ನಪಟ್ಟಹಾಗಾಯಿತು, ಎಂದಳು.

ಸೂರ್ಯಮುಖಿಯು ನಕ್ಕು, ನಾನು ಯಾರು? ಮೃದುವಾದ ಕ್ಷೀಣವಾದ ನಗು—ದೃಷ್ಟಿಯಾದಮೇಲೆ ಆಕಾಶಪ್ರಾಂತದಲ್ಲಿ ಛಿನ್ನವಾದ ಮೇಘದಲ್ಲಿ ಮಿನಗುವ ಮಿಂಚಿನಹಾಗಿರುವ ನಗುವನ್ನು ನಕ್ಕು, ನಾನು ಯಾರು? ಹೋಗಿ ಒಂದುಸಲ ನಿಮ್ಮ ಅಣ್ಣಂದಿರನ್ನು ನೋಡಿ ಬಾ—ಆ ಮುಖದಲ್ಲಿ ತುಂಬಿರುವ ಆಹ್ಲಾದವನ್ನು ನೋಡಿ ಬಾ—ಆಗ ಅವರು ಇಂದು ಎಷ್ಟು ಆನಂದಿತರಾಗಿ ಸುಖವಾಗಿದ್ದಾರೆಂದು ಗೊತ್ತಾಗುತ್ತದೆ. ಅವರು ಇಷ್ಟು ಸುಖವಾಗಿರುವುದನ್ನು ನೋಡಿದರೆ ನನ್ನ ಜನ್ಮ ಸಾರ್ಥಕವಾಗಲಿಲ್ಲವೆ? ಯಾವ ಸುಖದ ಆಶೆಗೋಸ್ಕರ ಅವರನ್ನು ಅಸುಖಿಯಾಗಿಮಾಡಲಿ? ಯಾರು ಒಂದು ನಿಮಿಷ ಅಸುಖಿಗಳಾದರೆ ನಾನು ಪ್ರಾಣವನ್ನು ಬಿಡುವುದಕ್ಕೂ ಸಿದ್ಧಳಾಗಿದ್ದೇನೋ, ಅಂತಹವರು ಹಗಲೂ ರಾತ್ರಿ ಮರ್ಮಾಂತಿಕವಾಗಿ ಅಸುಖಿಗಳಾಗಿದ್ದುದನ್ನು ನೋಡಿದೆನು. ಅವರು ಸಕಲ ಸುಖವನ್ನೂ ವಿಸರ್ಜನೆ ಮಾಡಿಬಿಟ್ಟು ದೇಶತ್ಯಾಗಿಯಾಗಬೇಕೆಂದು ಪ್ರಯತ್ನಪಡುತಲಿದ್ದರು. ಹಾಗಾದರೆ ನನ್ನ ಸುಖವೇನುಳಿದಹಾಗಾಯಿತು? ನಾನು, ಪ್ರಭುವೆ! ತಮ್ಮ ಸುಖವೇ ನನ್ನ ಸುಖ; ತಾವು ಕುಂದಳನ್ನು ವಿವಾಹಮಾಡಿಕೊಳ್ಳಬ

ಹುದು—ನಾನು ಸುಖಿಯಾಗುವೆನೆಂದು ಹೇಳಿದೆನು. ಅವರು ಮದುವೆಮಾ
ಕೊಂಡರು, ಎಂದು ಹೇಳಿದಳು.

ಕಮಲ—ನೀನು ಸುಖಿಯಾದೆಯೊ ?

ಸೂರ್ಯಮುಖಿ—ಇನ್ನು ನನ್ನ ಮಾತು ಏತಕ್ಕೆ ಕೇಳುತ್ತಿ ? ನಾನ
ಯಾರು ? ನಡೆಯುವಾಗ ಅವರಿಗೆ ಕಾಲಿಗೆ ಕಲ್ಲು ತಗಲಿದರೆ ನನ್ನ ನಾಲಿ
ಯನ್ನು ಬಿಚ್ಚಿ ನಡೆಯುವುದಕ್ಕೆ ಹಾಸಿಕೊಡಲಿಲ್ಲವೇತಕ್ಕೆಂದು ವ್ಯಸ
ಪಡುತ್ತೇನೆ.

ಹೀಗೆಂದು ಹೇಳಿ ಸೂರ್ಯಮುಖಿಯು ಕ್ಷಣಕಾಲ ಸುಮ್ಮನಿದ್ದಳ
ಅವಳ ಕಣ್ಣಿನ ನೀರನಿಂದ ಉಟ್ಟಿದ್ದ ಬಟ್ಟೆಯು ತೋಯಿದುಹೋಯಿತ
ಅನಂತರ ಮುಖವೆತ್ತಿ, ಕಮಲೆ ! ಯಾವೋದೇಶದಲ್ಲಿ ಹೆಣ್ಣುಮಕ್ಕಳ
ಹುಟ್ಟಿದರೆ ಕೊಂದುಹಾಕುತ್ತಾರಂತೆ ; ಅದು ಯಾವದೇಶ ? ಎಂದು ಕೇ
ದಳು.

ಅವಳ ಮನಸ್ಸಿನ ಭಾವವನ್ನು ತಿಳಿದು ಕಮಲಳು :—ಹೆಣ್ಣಾಗಿ ಹುಟ
ದಮಾತ್ರಕ್ಕೆ ದೋಷವೇನು ? ಅವರವರ ಅದೃಷ್ಟದಲ್ಲಿದ್ದಹಾಗಾಗುತ್ತ

ಸೂರ್ಯಮುಖಿ—ನನಗಿಂತಲೂ ಅದೃಷ್ಟಶಾಲಿಗಳು ಯಾರು ಇರ
ವುರು ? ಯಾರು ಇಷ್ಟು ಭಾಗ್ಯಶಾಲಿ ? ಯಾರಿಗೆ ಇಂತಹ ಸ್ವಾಮಿಯು
ಟು ? ರೂಪ ಐಶ್ವರ್ಯ ಸಂಪತ್ತು ಅದೆಲ್ಲ ಪ್ರಯೋಜನವಿಲ್ಲ. ಇವರಹಾ
ಗುಣಪರಿಪೂರ್ಣರಾದ ಸ್ವಾಮಿಯು ಇನ್ನಾರಿಗೆ ಇದ್ದಾರೆ ! ನನ್ನ ಅದೃಷ್ಟ
ಬಲವಾದುದೇ ಹೌದು. ಆದರೂ ಹೀಗೆ ಏತಕ್ಕೆ ಆಯಿತೋ ಗೊತ್ತಾಗು
ದಿಲ್ಲ.

ಕಮಲ—ಅದೂ ಅದೃಷ್ಟವೆ.

ಸೂರ್ಯಮುಖಿ—ಆದರೆ ಜ್ವಾಲೆಯಿಂದ ಮನಸ್ಸು ಸುಡುವುದೇತಕ್ಕೆ

ಕಮಲ—ನೀನು ಸ್ವಾಮಿಯು ಇಂದಿನ ಆಹ್ಲಾದಪರಿಪೂರ್ಣವಾದ ಮ

ಶಿವನನ್ನು ನೋಡಿ ಸುಖಿಯಾಗಿದ್ದೇನೆಂದು ಹೇಳುತ್ತಿ—ಆದರೂ ಜ್ವಾಲೆಯಿಂದ ಮನಸ್ಸು ಸುಡುವುದಾಗಿಯೂ ಹೇಳುತ್ತಿ—ಎರಡೂ ನಿಜವಾದ ಮಾತೆ?

ಸೂರ್ಯಮುಖಿ—ಎರಡೂ ನಿಜವಾದ ಮಾತು. ನಾನು ಅವರ ಸುಖದಲ್ಲಿ ಸುಖಿಯಾಗಿದ್ದೇನೆ. ಆದರೆ ನನ್ನನ್ನು ಕಾಲಿನಿಂದ ತಳ್ಳಿಬಿಟ್ಟರು. ಕಾಲಿನಿಂದ ತಳ್ಳಿದೆನೆಂದು ಅವರಿಗೆ ಇಷ್ಟು ಸಂತೋಷ.—

ಸೂರ್ಯಮುಖಿಗೆ ಮುಂದೆ ಮಾತು ಹೊರಡಲಿಲ್ಲ— ಕಂಠರೋಧವಾಯಿತು—ಕಣ್ಣುಗಳು ನೀರು ತುಂಬಿದವು. ಆದರೆ ಸೂರ್ಯಮುಖಿಯ ಪೂರ್ಣವಾಗದ ಮಾತಿನ ಮರ್ಮವನ್ನು ಕಮಲಮಣಿಯು ಸಂಪೂರ್ಣವಾಗಿ ತಿಳಿದುಕೊಂಡು, ಅವರು ನಿನ್ನನ್ನು ಕಾಲಿನಿಂದ ತಳ್ಳಿದ್ದಾರೆಂದು ನಿನಗೆ ಅಂತರಜ್ವಾಲೆಯು ಹತ್ತಿದೆ. ಹಾಗಿದ್ದರೂ "ನಾನು ಯಾರು?" ಎಂದು ಏತಕ್ಕೆ ಹೇಳಬೇಕು? ನಿನ್ನ ಅಂತಃಕರಣದಲ್ಲಿ "ನಾನು" ಎಂಬುದು ತುಂಬಿದೆಯೆಂದು ಕಾಣುತ್ತದೆ. ಇಲ್ಲದಿದ್ದರೆ, ನೀನು ಆತ್ಮವಿಸರ್ಜನೆಯನ್ನು ಮಾಡಿದ್ದರೂ ಅನುತಾಪಪಡಲೇತಕ್ಕೆ? ಎಂದಳು.

ಸೂರ್ಯಮುಖಿ.—ಅನುತಾಪಪಡುವುದಿಲ್ಲ. ಒಳ್ಳೇದೇ ಮಾಡಿದ್ದೇನೆ. ಅದರಲ್ಲಿ ಸಂಶಯವಿಲ್ಲ. ಆದರೆ ಮರಣದಲ್ಲಿ ಯಾತನೆಯುಂಟಷ್ಟೆ. ಮರಣವು ಒಳ್ಳೇದೆಂದು ನನ್ನ ಮರಣವನ್ನು ನಾನೇ ತಂದುಕೊಂಡೆ. ಆ ಮರಣಸಮಯದಲ್ಲಿ ಯಾತನೆಗೋಸ್ಕರ ನಿನ್ನಮುಂದೆ ಅಳಬಾರದೆ ಏನು?

ಸೂರ್ಯಮುಖಿಯು ಅತ್ತಳು. ಕಮಲಳು ಅವಳ ಮುಖವನ್ನು ತನ್ನ ಹೃದಯಕ್ಕೆ ತಬ್ಬಿ ಹಿಡಿದುಕೊಂಡಳು. ಮಾತುಗಳಿಂದ ಅಭಿಪ್ರಾಯವೆಲ್ಲ ವ್ಯಕ್ತವಾಗುತ್ತಿರಲಿಲ್ಲ. ಆದರೆ ಮನಸ್ಸಿನಲ್ಲಿಯೇ ಪರಸ್ಪರ ಮಾತು ನಡೆಯುತಲಿತ್ತು. ಕಮಲಳು ತನ್ನ ಮನಸ್ಸಿನಲ್ಲಿ ಸೂರ್ಯಮುಖಿಯು ಎಷ್ಟರಮಟ್ಟಿಗೆ ದುಃಖಿಯಾಗಿದ್ದಾಳೆಂಬುದನ್ನು ತಿಳಿದಳು. ಸೂರ್ಯಮುಖಿಯೂ ತನ್ನ ಮನಸ್ಸಿನಲ್ಲಿ ಕಮಲಳು ತನ್ನ ದುಃಖದ ಅಳವನ್ನು ತಿಳಿದಿ

ದ್ದಾಳೆಂದು ತಿಳಿದುಕೊಂಡಳು.

ಇಬ್ಬರೂ ರೋದನವನ್ನು ನಿಲ್ಲಿಸಿ ಕಣ್ಣೊರಸಿಕೊಂಡರು. ಸೂರ್ಯ ಮುಖಿಯು ತನ್ನ ಸ್ವಂತ ವಿಚಾರವನ್ನು ಬಿಟ್ಟು ಬೇರೆ ಪ್ರಸ್ತಾಪವನ್ನೆತ್ತಿದಳು. ಮಗು ಸತೀಶಚಂದ್ರನನ್ನು ಕರೆಸಿ ಅವನನ್ನು ಆದರಿಸಿ ಅವನಸಂಗಡ ಮಾತನಾಡಿದಳು. ಕಮಲಳೊಂದಿಗೆ ಸತೀಶ ಮತ್ತು ಶ್ರೀಶಚಂದ್ರನ ವಿಚಾರವಾಗಿ ಮಾತುನಾಡಿದಳು. ಸತೀಶನಿಗೆ ವಿದ್ಯೆ ಕಲಿಸುವುದು, ಅವನ ಮದುವೆ ಇತ್ಯಾದಿವಿಷಯವಾಗಿ ಅನೇಕ ಸಂತೋಷಕರವಾದ ಮಾತುಗಳು ಜರಗಿದವು. ಈರೀತಿಯಾಗಿ ರಾತ್ರಿ ಬಹಳ ಹೊತ್ತಿನವರೆಗೂ ಮಾತು ಕಥೆ ನಡೆದು ಕಡೆಗೆ ಸೂರ್ಯಮುಖಿಯು ಕಮಲಳನ್ನು ಸ್ನೇಹಪೂರ್ಣವಾಗಿ ಆಲಿಂಗನೆ ಮಾಡಿಕೊಂಡು, ಅನಂತರ ಸತೀಶನನ್ನು ತೊಡೆಯ ಮೇಲೆ ಎತ್ತಿಕೊಂಡು ಮುಖಚುಂಬನ ಮಾಡಿದಳು. ಅನಂತರ ಅವರಿಬ್ಬರೂ ಹೊರಟು ಹೋಗುವಾಗ ಸೂರ್ಯಮುಖಿಯು ಕಣ್ಣುಗಳಿಂದ ಪುನಃ ಸಂವರಣ ಮಾಡಲಸಾಧ್ಯವಾಗಿ ನೀರು ಹರಿಯಿತು. ರೋದನ ಮಾಡುತ್ತಲೇ ಅವಳು ಸತೀಶನಿಗೆ ಆಶೀರ್ವಾದ ಮಾಡಿ, ಮಗು! ನೀನು ನಿನ್ನ ಸೋದರಮಾವಂದಿರಹಾಗೆ ಅಕ್ಷಯವಾದ ಗುಣಗಳುಳ್ಳವನಾಗು. ಇದಕ್ಕಿಂತ ನಿನಗೆ ಹೆಚ್ಚಾದ ಆಶೀರ್ವಾದಗಳನ್ನು ಮಾಡಲಾರೆನು ಎಂದಳು.

ಸೂರ್ಯಮುಖಿಯು ಸ್ವಾಭಾವಿಕವಾದ ಅವಳ ಮೃದುವಾದ ಸ್ವರದಿಂದ ಹೇಳಿದಳು. ಆದರೆ ಆ ಕಂಠಸ್ವರವು ಸ್ವಲ್ಪ ವಿಜಾತಿಯಾಗಿದ್ದುದನ್ನು ಕಂಡು ಕಮಲಳು ಚಮಕಿತಳಾಗಿ, ಅತ್ತಿಗೆ! ನಿನ್ನ ಮನಸ್ಸಿಗೆ ಏನಾಗುತ್ತದೆ? ಏನು? ಹೇಳಕೂಡದೆ? ಎಂದಳು.

ಸೂರ್ಯಮುಖಿ—ಏನೂ ಇಲ್ಲ.

ಕಮಲ—ನನ್ನ ಹತ್ತಿರ ಮುಚ್ಚುಮರೆ ಮಾಡಬೇಡ.

ಸೂರ್ಯಮುಖಿ—ನಿನಗೆ ಹೇಳದ ಮಾತು ಏನೂ ಇಲ್ಲ.

ಕಮಲಳು ಆಗ ಸ್ವಸ್ಥಚಿತ್ತಳಾಗಿ ತನ್ನ ಶಯನಮಂದಿರಕ್ಕೆ ಹೊರಟು ಹೋದಳು. ಆದರೆ ಸೂರ್ಯಮುಖಿಯು ಅವಳಿಗೆ ತಿಳಿಸದೆ ಒಂದು ಮಾತು ಮರೆಮಾಚಿದ್ದಳು. ಅದು ಕಮಲಳಿಗೆ ಬೆಳಗಾಗುತ್ತಲೇ ಗೊತ್ತಾಯಿತು. ಬೆಳಗಾದ ಮೇಲೆ ಕಮಲಳು ಸೂರ್ಯಮುಖಿಯನ್ನು ನೋಡಲು ಅವಳ ಶಯ್ಯಾಗೃಹಕ್ಕೆ ಹೋದಳು. ಸೂರ್ಯಮುಖಿಯು ಅಲ್ಲಿ ಇರಲಿಲ್ಲ. ಹಾಸಿಗೆಯು ಹಾಸಿದ್ದಹಾಗೆಯೇ ಇತ್ತು. ಅದರ ಮೇಲೆ ರಾತ್ರಿ ಯಾರೂ ಮಲಗಿದ್ದಹಾಗೆ ಕಾಣಿಸಲಿಲ್ಲ. ಅದರ ಮೇಲೆ ಒಂದು ಕಾಗದಮಾತ್ರ ಇತ್ತು. ಕಾಗದವನ್ನು ನೋಡಿ ಅವಳಿಗೆ ಮನಸ್ಸಿನಲ್ಲಿ ಏನೋ ಆದಹಾಗಾಯಿತು. ಕಾಗದವನ್ನು ಅವಳು ಓದಲಿಲ್ಲ. ಓದದೇನೇ ಎಲ್ಲ ತಿಳಿದುಕೊಂಡಳು. ಅವಳು ಸೂರ್ಯಮುಖಿಯು ಎಲ್ಲಿಯೋ ಹೊರಟು ಹೋಗಿದ್ದಾಳೆಂದು ತಿಳಿದಳು. ಕಾಗದವನ್ನು ಬಿಚ್ಚಿ ಓದಲು ಇಷ್ಟವುಂಟಾಗಲಿಲ್ಲ. ಅದನ್ನು ಹಾಗೆಯೇ ಕೈಲಿ ಮುದರಿಟ್ಟುಕೊಂಡಳು. ಕಡೆಗೆ ತಲೆಯ ಮೇಲೆ ಕೈಯಿಟ್ಟುಕೊಂಡು ಹಾಸಿಗೆಯ ಮೇಲೆ ಕುಳಿತುಕೊಂಡು ಕಾಗದವನ್ನೋದಿ, ನಾನು ಹುಚ್ಚಳು, ನೆನ್ನೆರಾತ್ರಿ ಅವಳನ್ನು ಬಿಟ್ಟು ಹೋಗುವಾಗ ಮನಸ್ಸಿಗೆ ಗೊತ್ತಾಗಿದ್ದರೂ ತಿಳಿದುಕೊಳ್ಳಲಾರದೆ ಹೋದೆನೇತಕ್ಕೆ? ಎಂದಂದುಕೊಂಡಳು, ಸತೀಶನು ಹತ್ತಿರ ನಿಂತಿದ್ದವನು ತಾಯಿಯು ಕೈಯಿಂದ ತಲೆಯನ್ನು ಹೊಡದುಕೊಂಡದ್ದನ್ನು ನೋಡಿ ಅಳುವುದಕ್ಕೆ ತೊಡಗಿದನು.

---

## ಇಪ್ಪತ್ತೆಂಟನೆಯ ಪರಿಚ್ಛೇದ.

### ಆಶೀರ್ವಾದ ಕಾಗದ.

ಶೋಕದ ಮೊದಲಿನ ವೇಗವು ಶಮನವಾದ ಮೇಲೆ ಕಮಲಮಣಿಯು ಕಾಗದವನ್ನು ಬಿಚ್ಚಿ ಓದಿದಳು. ಕಾಗದದ ಮೇಲ್ವಿಳಾಸವು ಅವಳಿಗೇನೇ

ಬರೆದಿತ್ತು-ಕಾಗದವು ಈ ಪರಿಯಾಗಿತ್ತು.-

"ಎಂದು ನನ್ನ ಸ್ವಾಮಿಯು ಬಾಯಿಯಿಂದ, ನನ್ನಿಂದ ಅವರಿಗೆ ಇನ್ನು ಸುಖವಿಲ್ಲವೆಂತಲೂ ಅವರು ಕುಂದನಂದಿನಿಗೋಸ್ಕರ ಉನ್ಮಾದಗ್ರಸ್ತರಾಗಿದ್ದಾರೆಂತಲೂ, ಕುಂದನಂದಿನಿಗೋಸ್ಕರ ಪ್ರಾಣವನ್ನೂ ಕೂಡ ಬಿಡುವುದಾಗಿದ್ದಾರೆಂತಲೂ ಕೇಳಿದೆನೋ, ಅಂದೇ ಮನಸ್ಸಿನಲ್ಲಿ, ಕುಂದನಂದಿನಿಯು ಸಿಕ್ಕಿದರೆ ಅವಳ ಕೈಯಲ್ಲಿ ಸ್ವಾಮಿಯನ್ನು ಸಮರ್ಪಣೆ ಮಾಡಿಬಿಟ್ಟು ಅವರನ್ನು ಸುಖಿಯಾಗಿ ಮಾಡಬೇಕೆಂತಲೂ, ಕುಂದನಂದಿನಿಗೆ ಸ್ವಾಮಿಯನ್ನು ದಾನ ಮಾಡಿಬಿಟ್ಟು ನಾನು ಮನೆಯನ್ನು ಬಿಟ್ಟು ಹೊರಟು ಹೋಗಬೇಕೆಂತಲೂ ಸಂಕಲ್ಪ ಮಾಡಿಕೊಂಡಿದ್ದೆನು. ಏತಕ್ಕೆಂದರೆ, ನನ್ನ ಸ್ವಾಮಿಯು ಕುಂದನಂದಿನಿಗೆ ಸೇರಿ ಅವಳವರಾದರೆ ಅದನ್ನು ಕಣ್ಣಿನಿಂದ ನೋಡಲಾರೆನು. ಈಗ ಕುಂದನಂದಿನಿಯು ಸಿಕ್ಕಿದಳು. ಅವಳಿಗೆ ನನ್ನ ಸ್ವಾಮಿಯನ್ನು ದಾನಾ ಮಾಡಿದೆ. ನಾನು ಗೃಹತ್ಯಾಗ ಮಾಡಿ ಹೊರಟೆನು.

ನಾನು ಮೊನ್ನೆದಿನ ವಿವಾಹವಾದಕೂಡಲೇ ರಾತ್ರಿಯಲ್ಲಿ ಮನೆಯನ್ನು ಬಿಟ್ಟು ಹೊರಟು ಹೋಗಬೇಕೆಂದಿದ್ದೆನು. ಆದರೆ ಸ್ವಾಮಿಯು ಸುಖಕ್ಕೋಸ್ಕರ ಪ್ರಾಣವನ್ನು ಬಿಡುವುದಕ್ಕೂ ಸಿದ್ಧವಾಗಿರುವ ನಾನು ಸ್ವಾಮಿಯ ಆ ಸುಖವನ್ನು ಒಂದೆರಡು ದಿನ ಕಣ್ಣಾರೆ ನೋಡಬೇಕೆಂದು ಆಶೆಯಿತ್ತು. ಅದಲ್ಲದೆ ನಿನ್ನನ್ನು ಒಂದುತಡವೆ ನೋಡಬೇಕೆಂತಲೂ ಕುತೂಹಲವಿತ್ತು. ನೀನು ಬರಬೇಕೆಂದು ಕಾಗದವನ್ನು ಬರೆದೆನು. ನೀನು ಬರುವೆಯೆಂದು ಭರವಸೆಯೂ ಇತ್ತು. ಈಗ ಆ ಎರಡು ಆಶೆಯೂ ತೀರಿತು. ನನ್ನ ಪ್ರಾಣಾಧಿಕರಾದವರು ಸುಖಿಯಾದರು. ಅದನ್ನು ಕಣ್ಣುತುಂಬ ನೋಡಿದೆನು. ನಿನ್ನಿಂದಲೂ ಅಪ್ಪಣೆಯನ್ನೂ ತೆಗೆದುಕೊಂಡದ್ದಾಯಿತು. ಈಗ ಹೊರಟೆನು.

ನೀನು ಈ ಕಾಗದವನ್ನು ಓದುವುದರೊಳಗಾಗಿ ನಾನು ಬಹಳದೂರ ಹೊರಟು ಹೋಗಿರುವೆನು ನಿನಗೆ ಮನೆಯನ್ನು ತ್ಯಜಿಸಿ ಹೋಗುತ್ತೇನೆಂದು ಹೇಳಿದ್ದರೆ ನೀನು ನನ್ನನ್ನು ಬಿಡುತಲಿರಲಿಲ್ಲವಾದಕಾರಣ ಹೊರಡುವಾಗ ನಿನಗೆ ಹೇಳಲಿಲ್ಲ. ಈಗ ನಿನ್ನನ್ನು ಪ್ರಾರ್ಥಿಸುವುದೇನೆಂದರೆ–ನೀವು ನನ್ನನ್ನು ಹುಡುಕದಿರಬೇಕು. ಇದೇ ನನ್ನ ಪ್ರಾರ್ಥನೆಯಾಗಿದೆ.

ಪುನಃ ನಿನ್ನನ್ನು ನೋಡುವ ಭರವಸೆಯು ನನಗೆ ಇಲ್ಲ. ಕುಂದನಂದಿನಿಯು ಇರುವವರೆಗೆ ನಾನು ಈದೇಶಕ್ಕೆ ಬರುವುದಿಲ್ಲ–ಮತ್ತು ನಾನು ಇರುವ ಸ್ಥಳವೂ ನಿಮಗೆ ಗೊತ್ತಾಗಲಾರದು. ನಾನು ಈಗ ಬೀದಿಯ ಭಿಕ್ಷುಕಳು. ಭಿಕ್ಷುಗಳ ವೇಷದಲ್ಲಿ ದೇಶದೇಶ ತಿರುಗುವೆನು. ಭಿಕ್ಷೆಯಿಂದ ಕಾಲಹರಣೆ ಮಾಡುವೆನು. ನನ್ನನ್ನು ಯಾರುತಾನೇ ಗುರ್ತಿಸುವುರು. ಹೊರಡುವಾಗ ಹಣಕಾಸು ತೆಗೆದುಕೊಂಡು ಹೊರಡಬಹುದಾಗಿತ್ತು. ಆದರೆ ಇಷ್ಟ ವುಂಟಾಗಲಿಲ್ಲ. ನನ್ನ ಸ್ವಾಮಿಯನ್ನೇ ತ್ಯಾಗಮಾಡಿ ಹೊರಟುಬಿಟ್ಟೆನು. ಇನ್ನು ಚಿನ್ನಾ ಬೆಳ್ಳಿ ತೆಗೆದುಕೊಳ್ಳುವೆನೆ?

ನನಗೋಸ್ಕರ ಒಂದು ಕೆಲಸಮಾಡು. ನನ್ನ ಸ್ವಾಮಿಯ ಚರಣಕಮಲದಲ್ಲಿ ನನ್ನ ಕೋಟಿಕೋಟಿ ಪ್ರಣಾಮವನ್ನು ವಿಜ್ಞಾಪಿಸು. ನಾನು ಹೊರಡುವಾಗ ಅವರಿಗೆ ಒಂದು ಕಾಗದವನ್ನು ಬರೆಯಬೇಕೆಂದು ಬಹಳ ಪ್ರಯತ್ನಪಟ್ಟೆನು. ಆದರೆ ಸಾಧ್ಯವಾಗಲಿಲ್ಲ. ಕಣ್ಣಿನ ನೀರಿನಿಂದ ಅಕ್ಷರಗಳು ಕಾಣಿಸವು. ಕಾಗದವು ತೊಯಿದುಹೋಯಿತು. ಅದನ್ನು ಹರಿದು ಹಾಕಿಬಿಟ್ಟು ಪುನಃ ಬರೆದೆ. ಪುನಃ ಹರಿದುಬಿಟ್ಟೆ. ಆದರೆ ನಾನು ಹೇಳಬೇಕಾದುದನೆಲ್ಲ ಎಷ್ಟು ಕಾಗದದಲ್ಲಿ ಬರೆದು ಪೂರೈಸೀತು? ಮಾತನಾಡುವುದಕ್ಕೂ ಆಗದೆ ಹೋದುದರಿಂದ ಕಾಗದವನ್ನೂ ಬರೆಯಲಾರದೆ ಹೋದೆನು. ನೀನು ಚೆನ್ನಾಗಿ ವಿವೇಚನೆಯನ್ನು ಮಾಡಿ, ಹೇಗೋ ಹಾಗೆ ನಾನು ಅವರ ಮೇಲೆ ಕೋಪಗೊಂಡು ದೇಶಾಂತರ ಹೊರಟು ಹೋಗಲಿಲ್ಲವೆಂದು ಅವರಿಗೆ

ತಿಳಿಯಹೇಳು. ನನಗೆ ಅವರಮೇಲೆ ಕೋಪವಿಲ್ಲ.! ಯಾವಾಗಲೂ ಅವರ ಮೇಲೆ ನಾನು ಕೋಪಮಾಡಿಲ್ಲ! ಎಂದಿಗೂ ಮಾಡಲಾರೆನು. ಯಾರನ್ನು ಮನಸ್ಸಿನಲ್ಲಿ ಜ್ಞಾಪಿಸಿಕೊಂಡ ಮಾತ್ರದಿಂದಲೇ ಮನಸ್ಸಿಗೆ ಆಹ್ಲಾದವುಂಟಾ ಗುತ್ತದೋ ಅಂತಹವರಮೇಲೆ ಕೋಪಮಾಡುವುದು ಹೇಗೆ? ಅವರ ಮೇಲಿನ ಭಕ್ತಿಯು ಅಚಲವಾಗಿರುವುದು. ಮಣ್ಣಿನ ಸಂಗಡ ಈ ಮಣ್ಣು ಸೇರಿಹೋಗುವವರೆಗೂ ಆ ಭಕ್ತಿಯು ಹಾಗೆಯೇ ಅಚಲವಾಗಿರುವುದು. ಏತಕ್ಕೆಂದರೆ, ಅವರ ಸಾವಿರಾರುಗುಣಗಳನ್ನು ನಾನೆಂದಿಗೂ ಮರೆಯಲಾ ರೆನು. ಇಷ್ಟು ಗುಣಗಳು ಯಾರಿಗೂ ಇಲ್ಲವೆಂತಲೇ ನಾನು ಅವರ ದಾಸಿ ಯಾಗಿದ್ದೇನೆ. ಒಂದು ದೋಷಕ್ಕೆ ಅವರ ಸಹಸ್ರ ಗುಣಗಳನ್ನು ಮರೆ ಯುವದಾದರೆ ನಾನವರ ದಾಸಿಯಾಗಲು ಯೋಗ್ಯಳೇ ಅಲ್ಲ. ನಾನು ಈ ಜನ್ಮದಲ್ಲಿ ಅವರಿಂದ ಅಪ್ಪಣೆಯುನ್ನು ತೆಗದುಕೊಂಡಹಾಗಾಯಿತು. ನನ್ನ ಸ್ವಾಮಿಯಿಂದ ಈ ಜನ್ಮದಲ್ಲಿ ಅಪ್ಪಣೆಯನ್ನು ತೆಗೆದುಕೊಂಡಿರುವದರಿಂದಲೇ ನಾನು ಎಷ್ಟು ದುಃಖದಿಂದ ಸರ್ವತ್ಯಾಗಿಯಾಗಿರಬೇಕೆಂದು ಗೊತ್ತಾಗ ಬಹುದು.

ನಿನ್ನಿಂದಲೂ ಈ ಜನ್ಮದಲ್ಲಿ ಅಪ್ಪಣೆಯನ್ನು ತೆಗೆದುಕೊಂಡೆನು. ನಿನ್ನ ಸ್ವಾಮಿಯೂ ನಿನ್ನಮಗುವೂ ಸಹ ದೀರ್ಘಜೀವಿಗಳಾಗಿರಲೆಂದು ಆಶೀ ರ್ವಾದ ಮಾಡುತ್ತೇನೆ. ನೀನು ಚಿರಸುಖಿಯಾಗಿರು. ಯಾವ ದಿನ ನಿನ್ನ ಸ್ವಾಮಿಯ ಪ್ರೇಮದಿಂದ ವಂಚಿತಳಾಗುವಿಯೋ ಆ ದಿನ ನಿನ್ನ ಆಯುಸ್ಸು ಮುಗಿಯಲೆಂತಲೂ ಆಶೀರ್ವಾದ ಮಾಡುತ್ತೇನೆ. ನನಗೆ ಇಂತಹ ಆಶೀರ್ವಾ ದವನ್ನು ಯಾರೂ ಮಾಡದೆ ಹೋದರು"

# ಇಪ್ಪತ್ತೊಂಭತ್ತನೆಯ ಪರಿಚ್ಛೇದ.

## ವಿಷವೃಕ್ಷವು ಯಾವದು?

ಯಾವ ವಿಷವೃಕ್ಷದ ಬೀಜವನ್ನು ಬಿತ್ತುವದರ ಮೊದಲ್ಗೊಂಡು ಫಲೋತ್ಪತ್ತಿಯವರೆಗೂ ಮತ್ತು ಫಲಾನುಭೋಗದವರೆಗೂ ವ್ಯಾಖ್ಯಾನ ಮಾಡುವುದರಲ್ಲಿ ಪ್ರವೃತ್ತರಾಗಿದ್ದೇವೋ ಆ ವಿಷವೃಕ್ಷದ ಬೀಜವು ಎಲ್ಲರ ಮನೆಯ ಅಂಗಳದಲ್ಲಿಯೂ ಹಾಕಲ್ಪಟ್ಟದೆ. ಅರಿಷಡ್ವರ್ಗಗಳ ಪ್ರಾಬಲ್ಯವೇ ಈ ಮರಕ್ಕೆ ಬೀಜ; ಅದು ಘಟನಾಧೀನವಾಗಿ ಎಲ್ಲಾ ಕ್ಷೇತ್ರದಲ್ಲಿಯೂ ಹಾಕಲ್ಪಟ್ಟದೆ. ರಾಗದ್ವೇಷ ಕಾಮಕ್ರೋಧಾದಿಗಳಿಂದ ಅಸ್ಪೃಶ್ಯವಾದ ಮನಸ್ಸುಳ್ಳ ಮನುಷ್ಯನು ಯಾರೂ ಇಲ್ಲ. ಜ್ಞಾನಿಗಳಾದವರಲ್ಲಿಯೂ ಕೂಡ ಸ್ವಭಾವಸಿದ್ಧವಾಗಿ ಈ ಅರಿವರ್ಗಗಳಿಂದ ಚಲಿತರಾಗದವರು ವಿರಳರಾಗಿದ್ದಾರೆ. ಮನುಷ್ಯನಲ್ಲಿ ಪ್ರತಿ ಒಬ್ಬನಿಗೂ ಇರುವ ಭೇದವೇನಂದರೆ :—ಯಾವನು ಉದ್ದಂಡವಾಗಿ ಉದ್ಧತ ಸ್ವಭಾವವುಳ್ಳ ಮನೋವೃತ್ತಿಯನ್ನು ದಮನ ಮಾಡುವುದಕ್ಕೆ ಸಮರ್ಥನಾಗಿ ಹಾಗೆ ಅದನ್ನು ಅದಮಿ ವಶದಲ್ಲಿಟ್ಟುಕೊಳ್ಳುವನೋ ಅಂತಹವನೇ ಮಹಾತ್ಮನಾಗಿರುವುನು. ಯಾರು ಹಾಗೆ ಚಿತ್ತವೃತ್ತಿಯನ್ನು ದಮನ ಮಾಡುವುದಿಲ್ಲವೋ ಅಂತಹವನಿಗೋಸ್ಕರ ಬೀಜವು ನೆಟ್ಟ ಹಾಗಾಗುತ್ತದೆ. ಚಿತ್ತಸಂಯಮದ ಅಭಾವವೇ ಬೀಜಕ್ಕೆ ಅಂಕುರವಾಗುತ್ತದೆ, ಅದರಿಂದಲೇ ವೃಕ್ಷವು ವೃದ್ಧಿಯಾಗುತ್ತದೆ. ಈ ವೃಕ್ಷವು ಬಹಳ ಬಲವಾದುದು. ಒಂದು ಸಲ ಇದರ ಬುಡವು ಪುಷ್ಟಿಯಾಗಿಬಿಟ್ಟರೆ ಪುನಃ ಅದಕ್ಕೆ ನಾಶವಿಲ್ಲ. ಇದರ ಕಾಂತಿಯಾದರೋ ಅತಿಶಯವಾಗಿ ಕಣ್ಣಿಗೆ ಇಂಪಾದುದು. ದೂರದಿಂದ ಇದರ ವಿವಿಧವಾದ ವರ್ಣಗಳುಳ್ಳ ಪಲ್ಲವಗಳೂ ಫುಲ್ಲವಾದ ಪುಷ್ಪದಾಮಗಳೂ ಸಹ ಅತಿರಮಣೀಯವಾದುವು. ಆದರೆ ಇದರ

ಫಲವು ವಿಷಮಯವಾದುದು. ಅದನ್ನು ತಿನ್ನುವವರು ಸಾಯುವರು.

ಕ್ಷೇತ್ರಭೇದದಿಂದ ವಿಷವೃಕ್ಷದಲ್ಲಿ ನಾನಾ ಫಲಗಳುಂಟಾಗುವುದು. ಪಾತ್ರವಿಶೇಷದಿಂದ ವಿಷವೃಕ್ಷದಲ್ಲಿ ರೋಗಶೋಕಾದಿ ನಾನಾವಿಧವಾದ ಫಲಗಳು ಫಲಿಸುವುವು. ಚಿತ್ತವನ್ನು ಸಂಯಮಮಾಡಬೇಕಾದರೆ ಮೊದಲು ಚಿತ್ತಸಂಯಮದಲ್ಲಿ ಪ್ರವೃತ್ತಿ ಹುಟ್ಟಬೇಕು. ಅನಂತರ ಚಿತ್ತಸಂಯಮ ಮಾಡುವುದಕ್ಕೆ ಸಾಮರ್ಥ್ಯವಿರಬೇಕು. ಸಾಮರ್ಥ್ಯವು ಪ್ರಕೃತಿಜನ್ಯವಾದುದು. ಪ್ರವೃತ್ತಿಯು ವಿದ್ಯೆ, ಅಂದರೆ, ಶಿಕ್ಷೆಯಿಂದ ಹುಟ್ಟತಕ್ಕದ್ದು. ಪ್ರಕೃತಿಯೂ ಕೂಡ ಶಿಕ್ಷೆಯಮೇಲೆ ನಿರ್ಭರವಾಗಿರುತ್ತದೆ. ಆದಕಾರಣ ಚಿತ್ತವನ್ನು ಸಂಯಮಮಾಡುವುದಕ್ಕೆ, ಅಂದರೆ, ಚಿತ್ತವನ್ನು ದಮನಮಾಡುವುದಕ್ಕೆ ಶಿಕ್ಷೆಯೇ ಮೂಲವಾದುದು. ಆದರೆ ಗುರೂಪದೇಶ ಮಾತ್ರವೇ ಶಿಕ್ಷೆಯೆಂದು ಹೇಳಿಸಿಕೊಳ್ಳುವುದಿಲ್ಲ. ಅಂತಃಕರಣವು ಶಿಕ್ಷಿತವಾಗಬೇಕಾದರೆ ದುಃಖಭೋಗವು ಮುಖ್ಯವಾದ ಶಿಕ್ಷೆಯಾಗಿರುತ್ತದೆ.

ನಾಗೇಂದ್ರನಿಗೆ ಈ ದುಃಖಭೋಗವೆಂಬ ಶಿಕ್ಷೆಯಾಗಿರಲಿಲ್ಲ. ಜಗದೀಶ್ವರನು ಅವನನ್ನು ಸಕಲ ಸುಖಗಳಿಗೂ ಅಧಿಪತಿಯನ್ನಾಗಿ ಮಾಡಿ ಭೂಮಿಯಮೇಲೆ ಕಳುಹಿಸಿದ್ದನು. ಮನೋಹರವಾದ ರೂಪ ; ಅತುಳೈಶ್ವರ್ಯ ; ರೋಗವಿಲ್ಲದ ಶರೀರ ; ಸರ್ವವ್ಯಾಪಿಯಾದ ವಿದ್ಯೆ ; ಸುಶೀಲವಾದ ಚರಿತ್ರೆ ; ಸ್ನೇಹಮಯಿಯಾದ ಮಹಾಪತಿವ್ರತೆಯಾದ ಹೆಂಡತಿ ; ಪ್ರಾಯಶಃ ಇಷ್ಟು ಒಂದೇಮನುಷ್ಯನ ಭಾಗ್ಯದಲ್ಲಿ ಉಂಟಾಗಿರಲಾರದು. ನಾಗೇಂದ್ರನಲ್ಲಿ ಇಷ್ಟು ಇದ್ದವು. ಮುಖ್ಯವಾಗಿ ನಾಗೇಂದ್ರನು ಅವನ ನೈಜವಾದ ಚರಿತ್ರಗುಣಗಳಿಂದ ಚಿರಸುಖಿಯಾಗಿದ್ದನು. ಅವನು ಸತ್ಯವಾದಿಯಾಗಿಯೂ ಪ್ರಿಯಂವದನಾಗಿಯೂ ಇದ್ದನು. ಪರೋಪಕಾರಿಯಾಗಿಯೂ ನ್ಯಾಯನಿಷ್ಠನಾಗಿಯೂ ಇದ್ದನು. ದಾತನಾಗಿದ್ದರೂ ಮಿತವ್ಯಯಿಯಾಗಿದ್ದನು. ಸ್ನೇಹಶೀಲನಾಗಿಯೂ ಕರ್ತವ್ಯಕಾರ್ಯದಲ್ಲಿ ಸ್ಥಿರಸಂಕಲ್ಪವುಳ್ಳವ

ನಾಗಿಯೂ ಇದ್ದನು. ತಂದೆತಾಯಿಗಳಿದ್ದಾಗ ಅವರಲ್ಲಿ ಬಹಳ ಭಕ್ತಿಯು ಳ್ಳವನಾಗಿಯೂ ಪ್ರಿಯಕಾರಿಯಾಗಿಯೂ ಇದ್ದನು. ಹೆಂಡತಿಯಲ್ಲಿ ಅತ್ಯಂತವಾಗಿ ಅನುರಕ್ತನಾಗಿದ್ದನು. ಬಂಧುಗಳಿಗೆ ಹಿತಕಾರಿಯಾಗಿದ್ದನು. ಭೃತ್ಯರಲ್ಲಿ ಕೃಪೆಯುಳ್ಳವನಾಗಿದ್ದನು. ಅನುಗತರಿಗೆ ಪ್ರತಿಪಾಲಕನಾಗಿದ್ದನು. ಶತ್ರುಗಳಲ್ಲಿ ವಿವಾದಶೂನ್ಯನಾಗಿದ್ದನು. ಪರಾಮರ್ಶವನ್ನು ಕೊಡುವುದರಲ್ಲಿ ವಿಜ್ಞನಾಗಿದ್ದನು. ಕಾರ್ಯದಲ್ಲಿ ಸರಳನಾಗಿದ್ದನು. ಸಂಭಾಷಣೆಯಲ್ಲಿ ನಮ್ರನಾಗಿ, ರಹಸ್ಯದಲ್ಲಿ ವಾಙ್ಮಯನಾಗಿದ್ದನು. ಇಂತಹ ಚರಿತ್ರೆಯುಳ್ಳವನಿಗೆ ಅವಿಚ್ಛಿನ್ನವಾದ ಸುಖವೇ ಪುರಸ್ಕಾರ—ನಾಗೇಂದ್ರನಿಗೆ ಆಶೈಶವದಿಂದಲೂ ಆ ಸುಖವುಂಟಾಗಿತ್ತು. ಅವನಿಗೆ ದೇಶದಲ್ಲಿ ಸನ್ಮಾನ ; ವಿದೇಶದಲ್ಲಿ ಯಶಸ್ಸು ; ಅನುಗತರಾದ ಭೃತ್ಯರು ; ಪ್ರಜೆಗಳಿಗೆ ಅವನಲ್ಲಿ ಭಕ್ತಿ ; ಅವನಿಗೆ ಸೂರ್ಯಮುಖಿಯಲ್ಲಿ ಅಚಲವಾದ ಅಪರಿಮಿತವಾದ ಅಕಲುಷಿತವಾದ ಸ್ನೇಹರಾಶಿ. ಅವನ ಅದೃಷ್ಟದಲ್ಲಿ ಇಷ್ಟುಸುಖವೂ ಇಲ್ಲವಾಗಿದ್ದರೆ ಆವನಿಗೆ ಎಂದಿಗೂ ಇಷ್ಟು ದುಃಖವುಂಟಾಗಿರಲಾರದು.

ಮನುಷ್ಯನು ದುಃಖಿಯಾಗದಿದ್ದರೆ ಆಶೆಗೊಳಗಾಗಲಾರನು. ಯಾರಿಗೆ ಯಾವದು ಅಭಾವವೋ ಅದರಲ್ಲಿ ಅವನಿಗೆ ಲೋಭವುಂಟಾಗುವುದು. ಕುಂದನಂದಿನಿಯನ್ನು ಲುಬ್ಧವಾದ ಲೋಚನಗಳಿಂದ ನೋಡುವುದಕ್ಕೆ ಮೊದಲು ನಾಗೇಂದ್ರನು ಯಾವಾಗಲೂ ಲೋಭದಲ್ಲಿ ಬೀಳಲಿಲ್ಲ. ಏತಕ್ಕೆಂದರೆ;— ಅವನಿಗೆ ಯಾವದರ ಅಭಾವವೂ ಇರಲಿಲ್ಲ; ಮತ್ತು ಅವನು ಯಾವದರ ಅಭಾವವನ್ನೂ ತಿಳಿದಿರಲಿಲ್ಲ ಅದುಕಾರಣ ಲೋಭವನ್ನು ಸಂವರಣ ಮಾಡುವದಕೋಸ್ಕರ ಬೇಕಾದ ಮಾನಸಿಕವಾದ ಅಭ್ಯಾಸ ಅಥವಾ ಶಿಕ್ಷೆಯು ಅವನಿಗೆ ಆಗಿರಲಿಲ್ಲ. ಆದುದರಿಂದಲೇ ಅವನು ಚಿತ್ತವನ್ನು ಸಂಯಮ ಮಾಡುವುದರಲ್ಲಿ ಪ್ರವೃತ್ತನಾದರೂ ಸಾಮರ್ಥ್ಯವುಳ್ಳವನಾಗಲಿಲ್ಲ. ಅವಿಚ್ಛಿನ್ನವಾದ ಸುಖವು ದುಃಖಕ್ಕೆ ಮೂಲ. ಮತ್ತು ಮೊದಲು ದುಃಖವಿಲ್ಲದಿದ್ದರೆ ಸ್ಥಾಯಿಯಾದ ಸುಖವು ಹುಟ್ಟಲಾರದು.

ನಾಗೇಂದ್ರನಲ್ಲಿ ದೋಷವಿಲ್ಲವೆಂದು ನಾವು ಹೇಳುವುದಿಲ್ಲ. ಅವನ ದೋಷವು ಗುರುತರವಾದುದು ; ಅದಕ್ಕೆ ಪ್ರಾಯಶ್ಚಿತ್ತವೂ ಗುರುತರವಾದುದೇ ಪ್ರಾರಂಭವಾಯಿತು.

---

## ಮುವ್ವತ್ತನೆಯ ಪರಿಚ್ಛೇದ.

### ಅನ್ವೇಷಣ.

ಸೂರ್ಯಮುಖಿಯು ಮನೆಯನ್ನು ಬಿಟ್ಟು ಹೊರಟುಹೋದಳೆಂಬ ಸಮಾಚಾರವು ಯಾವಾಗ ಮನೆಯಲ್ಲಿ ಪ್ರಚಾರವಾಯಿತೋ ಆ ಕೂಡಲೇ ದಿಕ್ಕುದಿಕ್ಕುಗಳಲ್ಲಿ ಜನಗಳು ಹುಡುಕುವುದಕ್ಕೆ ಹೋದರೆಂದು ಹೇಳಬೇಕಾದುದಿಲ್ಲ. ನಾಗೇಂದ್ರನು ನಾಲ್ಕುದಿಕ್ಕುಗಳಿಗೂ ಜನಗಳನ್ನು ಓಡಿಸಿದನು. ಶ್ರೀಶಚಂದ್ರನು ಜನಗಳನ್ನು ಕಳುಹಿಸಿದನು. ಕಮಲ ಮಣಿಯೂ ನಾಲ್ಕು ದಿಕ್ಕುಗಳಿಗೆ ಜನರನ್ನು ಕಳುಹಿಸಿದಳು. ದೊಡ್ಡದೊಡ್ಡದಾಸಿಗಳು ಕೊಡಗಳನ್ನು ಬಿಸಾಟು ಹೊರಟರು. ಹಿಂದುಸ್ಥಾನಿ ದ್ವಾರಪಾಲಕರು ಬಿಗುರು ದೊಣ್ಣೆಗಳನ್ನು ತೆಗೆದುಕೊಂಡು ಬನಾತಿನ ಅಂಗಿಗಳನ್ನು ತೊಟ್ಟು ಕಾಲಿನ ಜೋಡಿನ ಚಟಪಟ ಶಬ್ದ ಮಾಡುತ್ತ ನಡೆದರು. ಪರಿಚಾರಕರು ತುವಾಲುಗಳನ್ನು ಹೆಗಲಿನಮೇಲೆ ಹಾಕಿಕೊಂಡು, ನಡಕಟ್ಟು ಬಿಗಿದುಕೊಂಡವರಾಗಿ ಯಜಮಾನಿಯನ್ನು ಹಿಂದಿರುಗಿ ಕರೆತರಲು ಹೊರಟರು ಬಂಧುವರ್ಗದವರು ಗಾಡಿಗಳನ್ನು ಹತ್ತಿಕೊಂಡು ದೊಡ್ಡದೊಡ್ಡ ರಸ್ತೆಗಳಲ್ಲಿ ಹೊರಟರು. ಗ್ರಾಮಸ್ಥರು ಹೊಲ ಗದ್ದೆ ಘಾಟಿಗಳಲ್ಲಿ ಹುಡುಕಲಾರಂಭಿಸಿದರು. ಅಲ್ಲಲ್ಲಿ ಮರದ ಬುಡದಲ್ಲಿ ಕಮಿಟಿ ಮಾಡಿ ಕೂತುಕೊಂಡು ಎಲೆ ಅಡಿಕೆ ಹಾಕಿಕೊಳ್ಳಲಾರಂಭಿಸಿದರು. ದೊಡ್ಡಮನುಷ್ಯರು ಬಂಗಲೆಗಳ ಬರಾಂಡಾಗಳಲ್ಲಿ, ಶಿಬಿರಗಳಲ್ಲಿ, ದೇವಾಲಯಗಳಲ್ಲಿ, " ನ್ಯಾಯಕಚಕಚಿ "

ಬಿರದುಗಳುಳ್ಳ ಭಟ್ಟಾಚಾರ್ಯರ ಪಾಠಶಾಲೆಗಳಲ್ಲಿ, ಮತ್ತು ಅಂತಹ ಅನೇಕ ಸ್ಥಳಗಳಲ್ಲಿ ಹುಡುಕುತ್ತ ಚರ್ಚೆಮಾಡುತಲಿದ್ದರು.

ಹೆಂಗಸರು, ಮುದುಕಿಯರು, ಯುವತಿಯರು ಎಲ್ಲರೂ ಸ್ನಾನಘಾಟ ಮುಂತಾದ ಕಡೆಗಳಲ್ಲಿ. ಹುಡುಕುತ್ತ ಪಂಚಾಯಿತಿ ಮಾಡಲಾರಂಭಿಸಿದರು. ಹುಡುಗರಲ್ಲಿ ಬಹಳ ಗದ್ದಲವಾಯಿತು. ಅನೇಕ ಹುಡುಗರು ಸ್ಕೂಲಿಗೆ ರಜಾ ಬರುವುದೆಂದು ಭರವಸೆಯುಳ್ಳವರಾಗಿದ್ದರು.

ಮೊದಲು ಶ್ರೀಶಚಂದ್ರನು ನಾಗೇಂದ್ರನಿಗೂ ಕಮಲಮಣಿಗೂ ಸಮಾಧಾನಮಾಡುತ್ತ, ಅವಳು ಬಹಳ ದೂರ ಹೋಗಿಲ್ಲ. ಎಷ್ಟುದೂರ ತಾನೇ ಹೋದಾಳು? ಒಂದೆರಡು ಮೈಲಿ ಹೋಗಿ ಎಲ್ಲಿಯೋ ಕುಳಿತಿರ ಬೇಕು, ಈಗಲೇ ಸಿಕ್ಕುವುಳೆಂದು ಭರವಸೆಯನ್ನು ಹೇಳಿದನು ಆದರೆ ಆಗಾಗಲೇ ಎರಡುಮೂರು ಘಂಟೆ ಹೊತ್ತಾಯಿತು. ಆದರೂ ಸೂರ್ಯ ಮುಖಿಯು ಸಿಕ್ಕಲಿಲ್ಲ. ಸಮಾಚಾರವೂ ಬರಲಿಲ್ಲ. ಆಗ ನಾಗೇಂದ್ರನು ಸ್ವಂತವಾಗಿಯೇ ಬಿಸಿಲನಲ್ಲಿ ಅವಳನ್ನು ಹುಡುಕುವುದಕ್ಕೆ ಹೊರಟನು. ಸ್ವಲ್ಪದೂರಹೋಗಿ ಬಿಸಿಲನ್ನು ತಡೆಯಲಾರದೆ, ನಾನು ಸುಮ್ಮನೆ ಹುಡು ಕುತ್ತೇನೆ, ಆದರೆ ಇಷ್ಟು ಹೊತ್ತಿಗೆ ಮನೆಗೆ ಕರತಂದಿರಬಹುದೆಂದುಕೊಂಡು ಮನೆಗೆ ಹಿಂದಿರುಗಿ ಬಂದನು. ಮನೆಗೆ ಬಂದು ನೋಡಲಾಗಿ ಸೂರ್ಯಮು ಖಿಯ ಸಮಾಚಾರವೇ ಇಲ್ಲ. ಪುನಃ ಹೊರಟನು; ಪುನಃ ಮನೆಗೆ ಬಂದನು. ಹೀಗೆ ಮಾಡುವುದರಲ್ಲಿ ಸಂಜೆಯಾಗುತ್ತ ಬಂತು.

ವಸ್ತುತಃ ಶ್ರೀಶಚಂದ್ರನು ಹೇಳಿದ್ದು ನಿಜ. ಸೂರ್ಯಮುಖಿಯು ಯಾವಾಗಲೂ ಮನೆ ಬಿಟ್ಟು ಹೊರಗೆ ಹೊರಟವಳಲ್ಲ. ಎಷ್ಟುದೂರ ತಾನೇ ನಡೆದಾಳು? ಮನೆ ಬಿಟ್ಟು ಎರಡು ಮೈಲಿ ದೂರದಲ್ಲಿ ಒಂದು ಪುಷ್ಕರಿಣಿಯ ಪಾರ್ಶ್ವದಲ್ಲಿದ್ದ ಒಂದು ಮಾವಿನ ತೋಪಿನಲ್ಲಿ ಮಲಗಿದ್ದಳು. ಅಂತಃಪುರದಲ್ಲಿ ಹೋಗಿ ಬರುತಲಿದ್ದ ಪರಿಚಾರಕನೊಬ್ಬನು ಹುಡುಕುತ್ತಾ ಹೋಗಿ ಅಲ್ಲಿ

ಬಂದು ನೋಡಿ ಸೂರ್ಯಮುಖಿಯನ್ನು ಗುರ್ತಿಸಿ, ದಯಮಾಡಿಸಬೇಕೆಂದು ಹೇಳಿದನು.

ಸೂರ್ಯಮುಖಿಯು ಮಾತನಾಡಲಿಲ್ಲ. ಪರಿಚಾರಕನು ಪುನಃ, ದಯಮಾಡಿಸಬೇಕು, ಮನೆಯಲ್ಲಿ ಎಲ್ಲರೂ ಬಹಳ ವ್ಯಸ್ತರಾಗಿದ್ದಾರೆಂದು ಹೇಳಿದನು. ಸೂರ್ಯಮುಖಿಯು ಕೋಪಗೊಂಡು, ನನಗೆ ಹೇಳಲು ನೀನಾರೆಂದು ಗದರಿಸಿಕೊಂಡಳು. ಪರಿಚಾರಕನು ಭೀತಿಗೊಂಡು ನಿಂತುಕೊಂಡನು. ಸೂರ್ಯಮುಖಿಯು, ನೀನು ಇಲ್ಲಿ ನಿಂತುಕೊಂಡಿದ್ದರೆ ನಾನು ಪುಷ್ಕರಿಣಿಯಲ್ಲಿ ಬಿದ್ದುಬಿಡುವೆನೆಂದು ಹೇಳಿದಳು.

ಪರಿಚಾರಕನು ಏನುಮಾಡುವುದಕ್ಕೂ ಆಗದೆ ಓಡಿಹೋಗಿ ನಾಗೇಂದ್ರನಿಗೆ ವರ್ತಮಾನವನ್ನು ಕೊಟ್ಟನು. ನಾಗೇಂದ್ರನು ಪಾಲ್ಕಿಯನ್ನು ತೆಗೆದುಕೊಂಡು ತಾನೇ ಸ್ವಂತವಾಗಿ ಬಂದನು. ಆದರೆ ಅಲ್ಲಿ ಸೂರ್ಯಮುಖಿಯಿರಲಿಲ್ಲ. ಅಲ್ಲಲ್ಲಿ ಹುಡುಕಿದ್ದಾಯಿತು. ಸಿಕ್ಕಲಿಲ್ಲ.

ಸೂರ್ಯಮುಖಿಯು ಅಲ್ಲಿಂದ ಎದ್ದು ಹೋಗಿ ಒಂದು ವನದಲ್ಲಿ ಕುಳಿತಿದ್ದಳು. ಅಲ್ಲಿ ಒಬ್ಬ ಮುದುಕಿಯು ಅವಳನ್ನು ಕಂಡಳು. ಮುದುಕಿಯು ಸೌದೆಗೆ ಬಂದಿದ್ದಳು. ಸೂರ್ಯಮುಖಿಯ ಸಮಾಚಾರವನ್ನು ಹೇಳಿದವರಿಗೆ ಇನಾಂ ಸಿಕ್ಕುವುದಾಗಿ ವರ್ತಮಾನವನ್ನು ಕೇಳಿದ್ದಳಾಗಿ ಸೂರ್ಯಮುಖಿಯನ್ನು ನೋಡಿ ಮುದುಕಿಯು, ನೀವು ಯಾರಮ್ಮ! ನಮ್ಮ ಠಾಕೂರಾಣಿಗಳೇನಮ್ಮ! ಎಂದಳು.

ಸೂರ್ಯಮುಖಿ—ನಾನು ಅಲ್ಲವೆ, ತಾಯಿ!

ಮುದುಕಿ—ಹೌದು, ನೀವೇ ನಮ್ಮ ಠಾಕೂರಾಣಿ.

ಸೂರ್ಯಮುಖಿ—ನಿಮ್ಮ ಠಾಕೂರಾಣಿ ಯಾರಮ್ಮ?

ಮುದುಕಿ—ಬಾಬುಗಳ ಮನೆ ಯಜಮಾನಿ.

ಸೂರ್ಯಮುಖಿ—ನನ್ನ ಮೈಮೇಲೆ ಒಡವೆ ವಸ್ತುವಿದೆಯೆ? ಬಾಬು ಮನೆ ಯಜಮಾನಿಯಾಗುವುದಕ್ಕೆ?

ಮುದುಕಿ—ಅದು ನಿಜ.

ಮುದುಕಿಯು ಹೆಚ್ಚು ತಿಳಿಯದೆ ಬೇರೆ ವನಕ್ಕೆ ಹೊರಟುಹೋದಳು. ಹೀಗೆ ಹಗಲೆಲ್ಲ ವೃಥಾ ಕಳೆದುಹೋಯಿತು. ರಾತ್ರಿಯಲ್ಲಿಯೂ ಏನೂ ಫಲವಾಗಲಿಲ್ಲ. ಆ ಮರುದಿನ, ಅದರ ಮರುದಿನವೂ ಕಾರ್ಯಸಿದ್ಧಿಯಾಗಲಿಲ್ಲ. ಹುಡುಕುವುದು ಕಡಮೆಯಾಗಲಿಲ್ಲ. ಹುಡುಕುವುದಕ್ಕೆ ಹೋಗಿದ್ದವರಲ್ಲಿ ಗಂಡಸರು ಯಾರೂ ಸೂರ್ಯಮುಖಿಯ ಗುರುತನ್ನು ಕಾಣರು. ಅವರು ಅನೇಕ ಬಡ ಹೆಂಗಸರನ್ನೆಲ್ಲ ನಾಗೇಂದ್ರನ ಹತ್ತಿರ ಕರೆತರುವುರು. ಆದರ ಮೇಲೆ ಮರ್ಯಾದಸ್ತರಾದವರ ಮನೆ ಹೆಂಗಸರು ಘಾಟಗಳಲ್ಲಿ ರಸ್ತೆಗಳಲ್ಲಿ ಒಬ್ಬೊಬ್ಬರೇ ಇದ್ದರೆ ಅಂತವರನ್ನೆಲ್ಲ ಪಾಲ್ಕಿಯಲ್ಲಿ ಕುಳ್ಳರಿಸಿ ಕರೆತರುವುರು. ಪಾಲ್ಕಿಯನ್ನು ಹತ್ತದೆ ಇದ್ದ ಅನೇಕರು ಇದೇ ಸಮಯವೆಂದು ಖರ್ಚಿಲ್ಲದೆ ಪಾಲ್ಕಿಯಮೇಲೆ ಕೂತರು.

ಶ್ರೀಶಚಂದ್ರನು ಇನ್ನು ಇರಲು ಅವಕಾಶವಾಗಲಿಲ್ಲ. ಅವನು ಕಲಕತ್ತೆಗೆ ಹೋಗಿ ಅಲ್ಲಿ ಹುಡುಕಲಾರಂಭಿಸಿದನು. ಕಮಲಮಣಿಯು ಗೋವಿಂದಪುರದಲ್ಲಿದ್ದುಕೊಂಡು ಅನುಸಂಧಾನ ಮಾಡುತಲಿದ್ದಳು.

---

## ಮುವ್ವತ್ತೊಂದನೆಯ ಪರಿಚ್ಛೇದ.

---

### ಎಲ್ಲ ಸುಖಕ್ಕೂ ಎಲ್ಲೆಯುಂಟು.

ಕುಂದನಂದಿನಿಯು ಯಾವ ಸುಖಕ್ಕೆ ಆಶೆಪಡುತಲಿದ್ದಳೋ ಆ ಸುಖವನ್ನು ಹೊಂದುವೆನೆಂಬ ಆಶೆಯುಳ್ಳವಳಾಗಿರಲಿಲ್ಲವಾದರೂ ಅದೇ ಸುಖವನ್ನು ಹೊಂದಿದಳು. ಅವಳು ನಾಗೇಂದ್ರನಿಗೆ ಹೆಂಡತಿಯಾದಳು. ವಿವಾಹವಾದದಿನ ಕುಂದನಂದಿನಿಯು ಮನಸ್ಸಿನಲ್ಲಿ ಈ ಸುಖಕ್ಕೆ ಮಿತಿಯಿಲ್ಲ; ಇದಕ್ಕೆ

ಎಲ್ಲೋ ಇಲ್ಲವೆಂದಂದುಕೊಂಡಳು. ಆಗವಳಿಗೆ ಮನಸ್ಸಿನಲ್ಲಿ ಪರಿತಾಪ ಹುಟ್ಟಿ, ಸೂರ್ಯಮುಖಿಯು ನನ್ನನ್ನು ದಿಕ್ಕಿಲ್ಲದಾಗ ರಕ್ಷಿಸಿ ಕಾಪಾಡಿದಳು—ಇಲ್ಲದಿದ್ದರೆ ನಾನೆಲ್ಲಿರುತಲಿದ್ದೆ—ಆದರೆ ಅವಳು ಇಂದು ನನಗೋಸ್ಕರ ಮನೆಯನ್ನು ಬಿಟ್ಟು ಹೋದಳು! ನಾನು ಸುಖಿಯಾಗದೆ ಸತ್ತುಹೋಗಿದ್ದರೆ ಚನ್ನಾಗಿತ್ತೆಂದಂದುಕೊಂಡು, ಸುಖಕ್ಕೆ ಎಲ್ಲೋ ಇದೆಯೆಂದು ತಿಳಿದುಕೊಂಡಳು.

ಪ್ರದೋಷದಲ್ಲಿ ನಾಗೇಂದ್ರನು ಹಾಸಿಗೆಯಲ್ಲಿ ಮಲಗಿದ್ದನು. ಕುಂದನಂದಿನಿಯು ತಲೆಯಕಡೆಯಲ್ಲಿ ಕುಳಿತುಕೊಂಡು ಬೀಸಣಿಗೆಯನ್ನು ಬೀಸುತ್ತಲಿದ್ದಳು. ಇಬ್ಬರೂ ಸುಮ್ಮನಿದ್ದರು. ಇದು ಸುಖಲಕ್ಷಣವಲ್ಲ. ಅಲ್ಲಿ ಮತ್ತಾರೂ ಇಲ್ಲ. ಆದರೂ ಇಬ್ಬರೂ ಮೌನವಾಗಿದ್ದರು—ಸಂಪೂರ್ಣ ಸುಖವಿದ್ದರೆ ಹೀಗಾಗುವುದಿಲ್ಲ.

ಆದರೆ ಸೂರ್ಯಮುಖಿಯು ಓಡಿಹೋದ ಮೊದಲ್ಗೊಂಡು ಇವರಿಗೆ ಅಸಂಪೂರ್ಣವಾದ ಸುಖತಾನೇ ಎಲ್ಲಿ? ಕುಂದನಂದಿನಿಯು ಸರ್ವದಾ ಮನಸ್ಸಿನಲ್ಲಿ, ಏನು ಮಾಡಿದರೆ ಮೊದಲು ಹೇಗೆ ಇತ್ತೋ ಹಾಗೇ ಆಗುವುದು? ಎಂದಂದುಕೊಳ್ಳುತ್ತಿದ್ದಳು, ಈ ಹೊತ್ತು ಬಾಯಿಬಿಟ್ಟು ಏನುಮಾಡಿದರೆ ಮೊದಲು ಹೇಗೆ ಇತ್ತೋ ಹಾಗೆ ಆಗುವುದೆಂದು ಕೇಳಿಕೊಂಡಳು

ನಾಗೇಂದ್ರನು ಸ್ವಲ್ಪ ಬೇಸರಗೊಂಡು ಹೇಗೆ ಇತ್ತು? ಹೇಗೆ ಆಗಬೇಕು? ನಿನ್ನನ್ನು ಮದುವೆ ಮಾಡಿಕೊಂಡೆನೆಂದು ನಿನಗೆ ಅನುತಾಪವುಂಟಾಯಿತೋ ಏನು? ಎಂದು ಕೇಳಿದನು. ಕುಂದನಂದಿನಿಗೆ ವ್ಯಥೆಯುಂಟಾಯಿತು. ಆಗವಳು ತಮ್ಮನ್ನು ಕೈಹಿಡಿದು ಸುಖಿಯಾದೇನೆಂಬ ಆಶೆಯೇ ಇರಲಿಲ್ಲ. ನಾನು ಹಾಗೆ ಹೇಳಲಿಲ್ಲ—ನಾನು, ಏನು ಮಾಡಿದರೆ ಸೂರ್ಯಮುಖಿಯು ಹಿಂದಿರುಗಿ ಬರುವುಳೆಂದು ಹೇಳಿದ ಮಾತು ಎಂದಳು.

ನಾಗೇಂದ್ರ—ಈ ಮಾತು ನಿನ್ನ ಬಾಯಿಯಿಂದ ಹೇಳಬೇಡ. ನಿನ್ನ ಬಾಯಿಯಲ್ಲಿ ಸೂರ್ಯಮುಖಿಯ ಹೆಸರು ಬಂದರೆ ನನಗೆ ಅಂತರ್ದಾಹ

ವು ಹತ್ತುತ್ತದೆ—ನಿನಗೋಸ್ಕರವೇ ಸೂರ್ಯಮುಖಿಯು ನನ್ನನ್ನು ತ್ಯಾಗಮಾಡಿ ಹೊರಟುಹೋದಳು.

ಇದು ಕುಂದನಂದಿನಿಗೆ ಗೊತ್ತು—ಆದರೆ ಅದನ್ನು ನಾಗೇಂದ್ರನು ಹೇಳಿದುದರಿಂದ ಅವಳಿಗೆ ವ್ಯಥೆಯುಂಟಾಗಿ, ಮನಸ್ಸಿನಲ್ಲಿ, ಇದೇನು, ತಿರಸ್ಕಾರವೋ ? ನಾನು ಮಂದಭಾಗ್ಯಳು, ಆದರೆ ನಾನೇನೂ ದೋಷಮಾಡಿಲ್ಲ. ಸೂರ್ಯಮುಖಿಯೇ ಈ ಮದುವೆಯನ್ನು ಮಾಡಿದಳೆಂದಂದುಕೊಂಡು, ಏನು ಮಾತೂ ಹೇಳದೆ ಕೈಲಿದ್ದ ಬೀಸಣಿಗೆಯನ್ನು ಬೀಸುತಲಿದ್ದಳು. ಕುಂದನಂದಿನಿಯು ಬಹಳ ಹೊತ್ತು ಮೌನವಾಗಿದ್ದುದನ್ನು ನೋಡಿ, ನಾಗೇಂದ್ರನು, ಮಾತನಾಡುವುದಿಲ್ಲವೇತಕ್ಕೆ ? ಕೋಪವೋ ? ಎಂದನು.

ಕುಂದಳು — ಇಲ್ಲ ಎಂದಳು.

ನಾಗೇಂದ್ರ—“ ಇಲ್ಲ ”ಎಂದು ಹೇಳಿ ಬಿಟ್ಟು ಪುನಃ ಸುಮ್ಮನಾದೆ. ನನ್ನ ಮೇಲೆ ನಿನಗೆ ವಿಶ್ವಾಸವಿಲ್ಲವೆ ?

ಕುಂದನಂದಿನಿ— ವಿಶ್ವಾಸವಿಲ್ಲದೆ ಉಂಟೆ ?

ನಾಗೇಂದ್ರ——ಉಂಟೆ ಇಲ್ಲವೆ ಎಂದು ಹೇಳುವುದು ಹುಡುಗರನ್ನು ಮರೆಸುವ ಮಾತು. ಕುಂದ ! ನೀನು ನನ್ನನ್ನು ಎಂದಿಗೂ ಪ್ರೀತಿಸಿರಲಿಲ್ಲವೆಂದು ತೋರುತ್ತದೆ.

ಕುಂದ——ಸರಿಯಾಗಿ ಪ್ರೀತಿಸುತ್ತೇನೆ.

ನಾಗೇಂದ್ರನಿಗೆ ತಿಳಿದೂ ಅವನು ತಿಳಿದುಕೊಳ್ಳಲಿಲ್ಲ. ಸೂರ್ಯಮುಖಿಗಿಂತಲೂ ಕಡಮೆಯಾಗಿ ಕುಂದಳು ಪ್ರೀತಿಸಲಿಲ್ಲ. ಆದರೆ ಕುಂದಳಿಗೆ ಮಾತನಾಡುವುದಕ್ಕೆ ಬಾರದು. ಅವಳು ಇನ್ನೂ ಹುಡುಗಿ, ಭೀರುಸ್ವಭಾವವುಳ್ಳವಳು. ಹೇಳುವುದಕ್ಕೆ ಸರಿಯಾದ ಮಾತು ಗೊತ್ತಿಲ್ಲ. ಇನ್ನೇನು ತಾನೇ ಹೇಳಬಲ್ಲಳು ? ಆದರೆ ನಾಗೇಂದ್ರನು ಹಾಗೆ ತಿಳಿದುಕೊಳ್ಳದೆ ಅವನು, ಸೂರ್ಯಮುಖಿಯು ಸರಿಯಾಗಿ ಪ್ರೀತಿಸುತಲಿದ್ದಳು. ವಾನರದ ಕುತ್ತಿಗೆ

ಯಲ್ಲಿ ಹಾರವನ್ನು ಹಾಕಬಹುದೆ ?—ಅದಕ್ಕೆ ಕಬ್ಬಿಣದ ಸರಪಣಿಯೇ ಸರಿ, ಎಂದನು.

ಇದನ್ನು ಕೇಳಿ ಕುಂದಳು ರೋದನವನ್ನು ನಿಲ್ಲಿಸಲಾರದೆ ಹೋದಳು. ಮೆಲ್ಲಮೆಲ್ಲಗೆ ಎದ್ದು ಹೊರಗೆ ಹೊರಟುಹೋದಳು. ಅವಳ ಸಂಗಡ ಅಳುವವರು ಯಾರೂ ಇರಲಿಲ್ಲ. ಕಮಲಳು ಬಂದಾರಭ್ಯ ಅವಳ ಹತ್ತರಕ್ಕೆ ಹೋಗಲಿಲ್ಲ. ಕುಂದನಂದಿನಿಯು ಈ ವಿವಾಹಕ್ಕೆ ತಾನೇ ಮುಖ್ಯ ಅಪರಾಧಿಯೆಂದು ಕಮಲಳಿಗೆ ಲಜ್ಜೆಯಿಂದ ಮುಖವನ್ನು ತೋರಿಸದೆ ಅವಳ ಹತ್ತರಕ್ಕೆ ಹೋಗಲಿಲ್ಲ. ಕಮಲಮಣಿಯು ಕುಂದಳು ಪ್ರಣಯದಲ್ಲಿ ನೈರಾಶ್ಯವನ್ನು ತೋರಿಸಿಕೊಂಡ ದಿನ ಅವಳ ದುಃಖದಲ್ಲಿ ದುಃಖಿತಳಾಗಿ ಅವಳ ಕಣ್ಣೀರೊರಿಸಿದುದನ್ನು ಈಗ ಜ್ಞಾಪಿಸಿಕೊಂಡು ಕಮಲಳ ಹತ್ತಿರ ಹೋದಳು. ಕಮಲಳು ಕುಂದಳನ್ನು ನೋಡಿ ಅಪ್ರಸನ್ನಳಾಗಿ ಅವಳು ಹತ್ತಿರ ಬರುವುದನ್ನು ನೋಡಿ ಆಶ್ಚರ್ಯಪಟ್ಟು ಏನೂ ಹೇಳದೆ ಸುಮ್ಮನಿದ್ದಳು. ಕುಂದಳು ಅವಳ ಬಳಿ ಬಂದು ಕೂತು ಅಳಲಾರಂಭಿಸಿದಳು. ಕಮಲಮಣಿಯು ಏನೂ ಹೇಳಲಿಲ್ಲ. ಆದಕಾರಣ ಕುಂದಳು ತನಗೆ ತಾನೇ ಸುಮ್ಮನಾದಳು. ಕಮಲಳು ಕೆಲಸವಿದೆಯೆಂದು ಹೇಳಿ ಎದ್ದು ಹೊರಟುಹೋದಳು.

ಕುಂದಳು ಎಲ್ಲಾ ಸುಖಕ್ಕೂ ಎಲ್ಲೆ ಇದೆಯೆಂದು ತಿಳಿದಳು.

---

## ಮುವ್ವತ್ತೆರಡನೆಯ ಪರಿಚ್ಛೇದ.

### ವಿಷವೃಕ್ಷದ ಫಲ.

ನಾಗೇಂದ್ರನು ಹರದೇವಘೋಷಾಲಿಗೆ ಬರೆದ ಕಾಗದ;—ನಾನು ಇದುವರೆಗೆ ಮಾಡಿದ್ದ ಕೆಲಸಗಳಲ್ಲೆಲ್ಲಾ ಕುಂದನಂದಿನಿಯನ್ನು ವಿವಾಹಮಾಡಿ

ಕೊಂಡದ್ದು ಎಲ್ಲಾದಕ್ಕಿಂತಲೂ ಹೆಚ್ಚು ಭ್ರಾಂತಿಮೂಲಕವಾದುದೆಂದು ಬರೆಯುತ್ತಿ. ಇದನ್ನು ನಾನು ಒಪ್ಪಿಕೊಳ್ಳುತ್ತೇನೆ. ನಾನು ಈ ಕೆಲಸವನ್ನು ಮಾಡಿ ಸೂರ್ಯಮುಖಿಯನ್ನು ಕಳೆದುಕೊಂಡೆನು. ಸೂರ್ಯಮುಖಿಯಂತಹ ಪತ್ನಿಯನ್ನು ಪಡೆಯುವುದಕ್ಕೆ ಬಹಳ ಅದೃಷ್ಟವಿರಬೇಕು. ಎಲ್ಲರೂ ಖನಿಯಲ್ಲಿ ಹುಡುಕುವರು. ಕೋಹಿನೂರು ಎಂಬ ಅಮೌಲ್ಯವಾದ ವಜ್ರವು ಸಿಕ್ಕುವುದು ಒಬ್ಬನ ಅದೃಷ್ಟಕ್ಕೆ ಬರುವುದೇ ಹೊರ್ತು ಎಲ್ಲರಿಗೂ ಸಿಕ್ಕತಕ್ಕದುದಲ್ಲ. ಸೂರ್ಯಮುಖಿಯು ಆ ಕೋಹಿನೂರು ಎಂಬ ವಜ್ರ. ಕುಂದನಂದಿನಿಯು ಯಾವ ಗುಣಗಳಿಂದತಾನೇ ಅವಳ ಸ್ಥಾನವನ್ನು ಪೂರ್ಣವಾಗಿ ಅಲಂಕರಿಸಬಲ್ಲಳು ?

ಹಾಗಾದರೆ ಕುಂದನಂದಿನಿಯನ್ನು ಅವಳ ಸ್ಥಳದಲ್ಲಿ ಅಭಿಷಿಕ್ತಳನ್ನಾಗಿ ಏತಕ್ಕೆ ಮಾಡಿದೆ ? ಭ್ರಾಂತಿ ! ಶುದ್ಧಭ್ರಾಂತಿ ! ಈಗ ಎಚ್ಚರಿಕೆಯುಂಟಾಯಿತು. ಕುಂಭಕರ್ಣನಿಗೆ ನಿದ್ರಾಭಂಗವಾದುದು ಅವನ ಮರಣಕ್ಕೋಸ್ಕರ—ನನಗೂ ಸಾಯುವದಕ್ಕೆ ಈ ಮೋಹ ನಿದ್ರೆಯಿಂದ ಎಚ್ಚರವಾಯಿತು. ಈಗ ಸೂರ್ಯಮುಖಿಯನ್ನು ಎಲ್ಲಿತಾನೇ ಪಡೆದೇನು ?

ನಾನು ಕುಂದನಂದಿನಿಯನ್ನು ಏತಕ್ಕೆ ವಿವಾಹ ಮಾಡಿಕೊಂಡೆನು ? ನಾನು ಅವಳನ್ನು ಪ್ರೀತಿಸುತ್ತೇನೆಯೆ ? ಪ್ರೀತಿಸುತ್ತೇನೆ—ಅವಳಿಗೋಸ್ಕರ ಉನ್ಮಾದಗ್ರಸ್ತನಾಗಿ ಕೂತಿದ್ದೆನು—ಪ್ರಾಣವೇ ಹೊರಗೆ ಬರುತಲಿತ್ತು. ಈಗ ನೋಡುವುದರಲ್ಲಿ ಅದೆಲ್ಲ ಕಣ್ಣಿನ ನೋಟದ ಮೇಲುಮೇಲಿನ ಪ್ರೀತಿ ವಿಶ್ವಾಸಗಳೆಂದು ಗೊತ್ತಾಗುತ್ತದೆ. ಹಾಗಿಲ್ಲದಿದ್ದರೆ, ವಿವಾಹವಾಗಿ ಇನ್ನು ಹದಿನೈದುದಿನಗಳಾಗಿಲ್ಲ, ಇಷ್ಟರೊಳಗೆ, ಅವಳನ್ನು ಏತಕ್ಕೆ ಪ್ರೀತಿಸಿದೆ? ಏತಕ್ಕೆ ಪ್ರೀತಿಸುತ್ತೇನೆ? ಎಂದು ಮುಂತಾಗಿ ಏತಕ್ಕೆ ಹೇಳುತಲಿದ್ದೆ ? ಆದರೆ ನನ್ನ ಸೂರ್ಯಮುಖಿಯು ಎಲ್ಲಿ ಹೋದಳೋ ? ಹೇಗೆಸಿಕ್ಕುವಳು ? ಬಹಳ ಬರೆಯಬೇಕೆಂದಿದ್ದೆನು. ಆದರೆ ಇಂದು ಬರೆಯಲಾರೆನು.

ಬಹಳಕಷ್ಟ ಬೋಧೆಯಾಗುತ್ತದೆ—ಇತಿ.

ಹರಘೋಷಾಲನು ಬರೆದ ಉತ್ತರ.

ನನಗೆ ನಿನ್ನ ಮನಸ್ಸು ಗೊತ್ತಾಯಿತು. ನೀನು ಕುಂದನಂದಿನಿಯನ್ನು ಪ್ರೀತಿಸದೆ ಇಲ್ಲ. ಈಗಲೂ ಪ್ರೀತಿಸುತ್ತಿ. ಆದರೆ ಅದು ಕಣ್ಣಿನ ನೋಟದ ಮೇಲು ಮೇಲಿನ ಪ್ರೀತಿಯೆಂದು ನೀನು ಬರೆಯುವುದು ನಿಜವಾದುದು. ಸೂರ್ಯಮುಖಿಯಲ್ಲಿ ನಿನಗೆ ಪ್ರಗಾಢವಾದ ಸ್ನೇಹ—ಕೇವಲ ಎರಡು ದಿನದ ಮಟ್ಟಿಗೆ ಕುಂದನಂದಿನಿಯ ಛಾಯೆಯಿಂದ ಅದು ಮರೆಮಾಡಲ್ಪಟ್ಟಿತ್ತು. ಈಗ ಸೂರ್ಯಮುಖಿಯನ್ನು ಕಳೆದುಕೊಂಡು ಅದು ನಿನಗೆ ಗೊತ್ತಾಯಿತು. ಸೂರ್ಯನು ಮೇಘದಿಂದ ಮರೆಯಾಗದವರೆಗೂ ನಾವು ಅವನ ಕಿರಣಗಳಿಂದ ಸಂತಾಪಿತರಾಗುತ್ತೇವೆ. ಆಗ ಮೇಘವೇ ಒಳ್ಳೇದೆಂದು ಅದನ್ನು ಅಪೇಕ್ಷಿಸುತ್ತೇವೆ. ಆದರೆ ಸೂರ್ಯನು ಅಸ್ತಮಿತನಾದಾಗ ಸೂರ್ಯದೇವನೇ ಜಗತ್ತಿಗೆ ಚಕ್ಷುವಾಗಿದ್ದಾನೆಂದು ತಿಳಿಯುತ್ತೇವೆ. ಸೂರ್ಯನು ಇಲ್ಲದಿದ್ದರೆ ಸಂಸಾರವೆಲ್ಲ ಅಂಧಕಾರ.

ನೀನು ನಿನ್ನ ಹೃದಯವನ್ನು ತಿಳಿದುಕೊಳ್ಳದೆ ಇಂತಹ ಗುರುತರವಾದ ಭ್ರಾಂತಿಮೂಲಕವಾದ ಕೆಲಸವನ್ನು ಮಾಡಿದೆ—ಇದಕ್ಕೋಸ್ಕರ ನಾನು ನಿನ್ನನ್ನು ತಿರಸ್ಕಾರಮಾಡುವುದಿಲ್ಲ. ಏತಕ್ಕೆಂದರೆ, ಈಗ ನೀನು ಬಿದ್ದಿರುವ ಭ್ರಮೆಯು ತನಗೆ ತಾನೇ ಹೋಗುವುದು ಬಹಳ ಕಷ್ಟ. ಮನಸ್ಸಿನ ಭಾವಗಳು ಅನೇಕ ಉಂಟು. ಜನರು ಆ ಭಾವಗಳಿಗೆಲ್ಲ ಪ್ರೀತಿ ಅಥವಾ ಪ್ರಣಯವೆಂದು ಹೇಳುತ್ತಾರೆ. ಆದರೆ ಮನಸ್ಸಿನ ಯಾವ ಅವಸ್ಥೆ ಅಥವಾ ಭಾವದಲ್ಲಿ ನಾವು ಅನ್ಯರ ಸುಖಕ್ಕೋಸ್ಕರ ನಮ್ಮ ಸ್ವಂತವಾದ ಸುಖದನ್ನು ವಿಸರ್ಜನೆಮಾಡಲು ನಾವಾಗಿಯೇ ಸಿದ್ಧರಾಗುತ್ತೇವೋ ಮನಸ್ಸಿನ ಆ ಅವಸ್ಥೆ ಅಥವಾ ಭಾವಕ್ಕೆ ಯಥಾರ್ಥವಾದ ಪ್ರೀತಿಯೆಂದು ಹೇಳಬೇಕು. "ನಾವಾಗಿಯೇ ಸಿದ್ಧರಾಗುತ್ತೇವೋ" ಎಂದು ಮೇಲೆ ಹೇಳಿರುವದರ ಅರ್ಥವೇನೆಂದರೆ:— ಧರ್ಮ

ಜ್ಞಾನದಿಂದಾಗಲಿ ಅಥವಾ ಪುಣ್ಯಾಪೇಕ್ಷೆಯಿಂದಾಗಲಿ ಹಾಗೆ ವಿಸರ್ಜನೆಯನ್ನು ಮಾಡಲು ಸಿದ್ಧರಾಗಕೂಡದು, ಯಥಾರ್ಥವಾದ ಪ್ರಣಯದಲ್ಲಿ ಯಾವ ಆಕಾಂಕ್ಷೆಯೂ ಇರಕೂಡದು. ತಾನಾಗಿಯೇ ಮನಸ್ಸಿನ ಆ ಭಾವವು ಉಂಟಾಗಬೇಕು. ಇತರರ ಸುಖಕ್ಕೋಸ್ಕರ ಸ್ವಂತ ಸುಖವನ್ನು ಬಿಟ್ಟು ಬಿಡುವುದಕ್ಕೆ ಇತರ ಆಶೋತ್ತರಗಳಿಲ್ಲದೆ ತಾನಾಗಿಯೇ ಮನಸ್ಸು ಸಿದ್ಧವಾದರೆ ಅಂತಹ ಮನಸ್ಸಿನ ಭಾವಕ್ಕೆ ಪ್ರೀತಿಯೆಂದು ಹೇಳಬೇಕು. ಆದುದರಿಂದ ರೂಪವತಿಯಾದ ಯುವತಿಯ ರೂಪವನ್ನು ಭೋಗಮಾಡುವ ಲಾಲಸೆ, ಅಂದರೆ, ಆಶೆಯು ಪ್ರೀತಿಯೆಂದೆಣಿಸಿಕೊಳ್ಳುವುದಿಲ್ಲ. ಕ್ಷುಧಾತುರನಾದವನ ಕ್ಷುತ್ತಿಗೆ ಅನ್ನದ ಮೇಲಿನ " ಪ್ರೀತಿ " ಎಂದು ಹೇಗೆ ಹೇಳಲಾಗದೋ ಹಾಗೆ ಕಾಮಾತುರನಾದವನ ಚಿತ್ತಚಾಂಚಲ್ಯಕ್ಕೆ, ರೂಪವತಿಯಮೇಲಿನ "ಪ್ರೀತಿ" ಎಂದು ಹೇಳಲಾಗದು. ಆರೀತಿಯಾದ ಚಿತ್ತಚಾಂಚಲ್ಯವನ್ನು ಆರ್ಯಕವಿಗಳು " ಮದನ ಶರಜ " (ಮದನ ಬಾಣದಿಂದ ಹುಟ್ಟಿದ್ದು) ಎಂದು ವರ್ಣನೆ ಮಾಡಿದ್ದಾರೆ. ಮನೋವೃತ್ತಿಯ ಕಲ್ಪಿತವಾದ ಯಾವ ಅವತಾರವು ವಸಂತ ಸಹಾಯದಿಂದ ಮಹಾದೇವನ ತಪಸ್ಸನ್ನು ಭಂಗಮಾಡಲು ಹೋಗಿತ್ತೋ, ಯಾವ ಅವತಾರದ ಪ್ರಸಾದದಿಂದ ಕವಿಗಳ ವರ್ಣನೆಯಲ್ಲಿ ಮೃಗವು ಮೃಗಿಯ ಮೈ ತುರಿಸಿತೆಂತಲೂ ಕರಿಯು ಕರಿಣಿಗೆ ಪದ್ಮದ ಮೃಣಾಳವನ್ನು ಮುರಿದು ತಂದು ಕೊಟ್ಟಿತೆಂತಲೂ ವರ್ಣಿತವಾಗಿದೆಯೋ, ಅವೆಲ್ಲ ಮೇಲೆ ಹೇಳಿದ ರೂಪಜವಾದ ಮೋಹಮಾತ್ರವಾಗಿದೆ. ಈ ವೃತ್ತಿಯೂ ಜಗದೀಶ್ವರನಿಂದ ಪ್ರೇರಿತವಾದುದು. ಇದರಿಂದಲೂ ಸಂಸಾರದಲ್ಲಿ, ಅಂದರೆ, ಜಗತ್ತಿನಲ್ಲಿ ಅನೇಕ ಇಷ್ಟಸಾಧನವುಂಟು ; ಮತ್ತು ಇದು ಸರ್ವಪ್ರಾಣಿಗಳನ್ನೂ ಮುಗ್ಧಮಾಡತಕ್ಕದ್ದು. ಕಾಳಿದಾಸ, ಬೈರ್ರ್ನ, ಜಯದೇವ ಮುಂತಾದವರು ಇದರ ಕವಿಗಳು ; ವಿದ್ಯಾಸುಂದರನು ಇದನ್ನು ವ್ಯಂಗ್ಯಮಾಡಿದ್ದಾನೆ. ಆದರೆ ಇದು ಪ್ರಣಯವೆಂದೆಣಿಸಿಕೊಳ್ಳುವುದಿಲ್ಲ. ಪ್ರಣಯ ಅಥವಾ ಪ್ರೇ

ಮವು ಬುದ್ಧಿವೃತ್ತಿಯಮೂಲಕವಾದುದು. ಪ್ರಣಯಾಸ್ಪದವಾದ ವ್ಯಕ್ತಿಯ ಗುಣಗಳೆಲ್ಲ ಬುದ್ಧಿವೃತ್ತಿದ್ವಾರಾ ಪರಿಗೃಹೀತವಾಗುತ್ತದೆ; ಹೃದಯವು ಆ ಗುಣಗಳಲ್ಲಿ ಮುಗ್ಧವಾಗಿ ಅವುಗಳ ಕಡೆಗೆ ಆಕರ್ಷಿತವಾಗಿ ಸಂಚಾಲಿತವಾಗುತ್ತದೆ. ಅಲ್ಲಿ ಗುಣಾಧಾರವಾದ ವ್ಯಕ್ತಿಯ ಸಂಸರ್ಗದ ಆಶೆಯೂ ಮತ್ತು ಆ ವ್ಯಕ್ತಿಯಲ್ಲಿ ಭಕ್ತಿಯೂ ಹುಟ್ಟುತ್ತದೆ. ಇದಕ್ಕೆ ಫಲವಾಗಿ ಸಹೃದಯತೆಯು ಹುಟ್ಟಿ ಕಡೆಗೆ ಅತ್ಮವಿಸ್ಮೃತಿಯುಂಟಾಗಿ ಆತ್ಮವಿಸರ್ಜನೆಯ ಭಾವವೂ ಉಂಟಾಗುತ್ತದೆ. ಇದೇ ಯಥಾರ್ಥವಾದ ಪ್ರಣಯ; ಷೇಕ್ಸ್‌ಪಿಯರು ವಾಲ್ಮೀಕಿ, ಮಾಡೆಂದೆಸ್ತಾಲ್, ಇವರು ಇದರ ಕವಿಗಳು. ಇದು ರೂಪದಲ್ಲಿ ಹುಟ್ಟುವದಿಲ್ಲ. ಮೊದಲು ಬುದ್ಧಿದ್ವಾರಾ ಗುಣಗ್ರಹಣ; ಗುಣಗ್ರಹಣವಾದಮೇಲೆ ಆಸಂಗದ ಆಶೆ; ಆಸಂಗವ ಆಶೆಯು ಸಫಲವಾದರೆ ಸಂಸರ್ಗ; ಸಂಸರ್ಗದ ಫಲವೇ ಪ್ರಣಯ; ಪ್ರಣಯವುಂಟಾದರೆ ಆತ್ಮವಿಸರ್ಜನೆ. ನಾನು ಇಂತಹದುದಕ್ಕೆ ಪ್ರಣಯವೆಂದು ಹೇಳುತ್ತೇನೆ. ಗಂಡಹೆಂಡಂದಿರ ಪ್ರಣಯವು ಇಂತಹದುದೆಂದು ನನ್ನ ಬುದ್ಧಿಗೆ ತೋರುತ್ತದೆ. ಅನ್ಯವಿಧವಾದ ಪ್ರಣಯದ ಮೂಲವೂ ಹೀಗೆಯೇ ಎಂದು ತೋರುತ್ತದೆ. ಆದುದರಿಂದ ಸ್ನೇಹವು ಒಂದೇ ಕಾರಣದಿಂದ ಹುಟ್ಟುವುದಿಲ್ಲ. ಆದರೆ ಎಲ್ಲಾ ಕಾರಣವೂ ಬುದ್ಧಿವೃತ್ತಿಮೂಲಕವಾದುದು. ಒಂದು ಪಕ್ಷದಲ್ಲಿ ಬುದ್ಧಿವೃತ್ತಿಮೂಲಕವಾದ ಕಾರಣಗಳಿಂದ ಹುಟ್ಟಿದ ಸ್ನೇಹವನ್ನು ಹೊರ್ತು ಮತ್ತಾವದೂ ಸ್ಥಾಯಿಯಾಗುವುದಿಲ್ಲ. ರೂಪಜವಾದ ಮೋಹವು ಅಂತಹದುದಲ್ಲ. ರೂಪದರ್ಶನದಿಂದುಂಟಾವ ಚಿತ್ತದ ವಿಕೃತಿಗಳೆಲ್ಲ ಮೊದಲು ತೇಜಸ್ವಿಯಾಗಿದ್ದು ಬರುತ ಬರುತ ಅದರ ತೀಕ್ಷ್ಣತೆಯು ಕಡಮೆಯಾಗುತ್ತದೆ; ಅಂದರೆ, ಅದಕ್ಕೆ ಬರುತ ಬರುತ ಪರಿತೃಪ್ತಿಯುಂಟಾಗುತ್ತದೆ. ಗುಣದಿಂದ ಹುಟ್ಟಿದುದಕ್ಕೆ ಪರಿತೃಪ್ತಿಯಿಲ್ಲ. ಏತಕ್ಕೆಂದರೆ, ರೂಪವು ಒಂದೇ—ನಿತ್ಯವೂ ಒಂದೇ ಪ್ರಕಾರವಾಗಿ ವಿಕಾಸವಾಗುತ್ತದೆ; ಗುಣವು ನಿತ್ಯವೂ ಹೊಸ ಹೊಸ ಕಾರ್ಯ

ದಲ್ಲಿ ಹೊಸಹೊಸದಾಗಿ ಪ್ರಕಾಶವನ್ನು ಹೊಂದುತ್ತದೆ. ರೂಪದಿಂದಲೂ ಪ್ರಣಯವು ಹುಟ್ಟುತ್ತದೆ, ಗುಣದಿಂದಲೂ ಪ್ರಣಯವು ಹುಟ್ಟುತ್ತದೆ; ಏತಕ್ಕೆಂದರೆ, ಎರಡರಿಂದಲೂ ಆಸಂಗದ ಆಶೆಯು ಹುಟ್ಟುತ್ತದೆ–ರೂಪ ಮತ್ತು ಗುಣ ಇವೆರಡೂ ಒಂದೆಡೆ ಕೂಡಿದ್ದರೆ ಪ್ರಣಯವು ಶೀಘ್ರವಾಗಿ ಹುಟ್ಟುತ್ತದೆ; ಆದರೆ ಒಂದುತಡವೆ ಸಂಸರ್ಗದ ಫಲವಾದ ಪ್ರಣಯವು ಬದ್ಧಮೂಲವಾದರೆ, ಅಂದರೆ, ಬೇರುಬಿಟ್ಟುಕೊಂಡರೆ, ರೂಪವು ಇದ್ದರೂ ಇರಬಹುದು, ಇಲ್ಲದಿದ್ದರೂ ಇರಬಹುದು. ರೂಪವಂತನು ಕುರೂಪಿಯಾದವಳಲ್ಲಿ ಸ್ನೇಹ ಬೆಳಸುವುದು ಇದಕ್ಕೆ ನಿತ್ಯ ಉದಾಹರಣವಾಗಿದೆ.

ಗುಣದಿಂದ ಹುಟ್ಟುವ ಪ್ರಣಯವು ಚಿರಕಾಲಸ್ಥಾಯಿಯಾದುದು–ಅದಕ್ಕೆ ಸಂದೇಹವಿಲ್ಲ. ಆದರೆ ಗುಣವನ್ನು ತಿಳಿಯಬೇಕಾದರೆ ಕಾಲಬೇಕು' ಆದಕಾರಣ ಅಂತಹ ಪ್ರಣಯವು ಒಂದೇ ತಡವಿಗೆ ಹಠಾತ್ತಾಗಿ ಬಲವಾದುದಾಗುವುದಿಲ್ಲ. ಕ್ರಮೇಣ ಸಂಚಾರಿತವಾಗುತ್ತದೆ. ಆದರೆ ರೂಪದಿಂದ ಹುಟ್ಟುವ ಮೋಹವು ಒಂದೇತಡವಿಗೆ ಸಂಪೂರ್ಣವಾಗಿ ಬಲವಾದುದಾಗಿ ಏಳುತ್ತದೆ. ಅದರ ಮೊದಲಿನ ಶಕ್ತಿಯು ಅತಿ ದುರ್ದಮನೀಯವಾಗಿ ಮಿಕ್ಕ ಎಲ್ಲ ವೃತ್ತಿಗಳನ್ನೂ ಬೇರು ಸಮೇತವಾಗಿ ಕಿತ್ತುಹಾಕುತ್ತದೆ. ಇದು ಮೋಹವೆ? ಇದು ಸ್ಥಾಯಿಯಾದ ಪ್ರಣಯವೆ? ಅಲ್ಲವೆ? ಎಂಬದನ್ನು ತಿಳಿದುಕೊಳ್ಳುವ ಶಕ್ತಿಯೇ ಇರುವುದಿಲ್ಲ. ಪ್ರಣಯವು ಅನಂತಕಾಲಸ್ಥಾಯಿಯೆಂದು ಹೇಳಲ್ಪಟ್ಟಿದೆ. ನೀನು ಅದೇರೀತಿಯಾಗಿ ತಿಳಿದಿದ್ದೆ–ಈ ಮೋಹದ ಪ್ರಥಮ ಶಕ್ತಿಯಿಂದ ಸೂರ್ಯಮುಖಿಯಲ್ಲಿ ನಿನಗೆ ಇದ್ದ ಆ ಸ್ಥಾಯಿಯಾದ ಪ್ರೇಮವು ನಿನ್ನ ಕಣ್ಣಿಗೆ ಅದೃಶ್ಯವಾಗಿತ್ತು. ಇದು ನಿನಗೆ ಭ್ರಾಂತಿಯಿಂದುಂಟಾದುದು–ಮನುಷ್ಯನಿಗೆ ಭ್ರಾಂತಿಯು ಸ್ವಭಾವಸಿದ್ಧವಾದುದು. ಆದಕಾರಣ ನಾನು ನಿನ್ನನ್ನು ತಿರಸ್ಕಾರ ಮಾಡುವುದಿಲ್ಲ–ಪರಾಮರ್ಶವನ್ನು ಕೊಡುವೆನು. ಅದರಿಂದ ಸುಖಿಯಾಗುವ ಪ್ರಯತ್ನವನ್ನು ಮಾಡು.

ನೀನು ನಿರಾಶನಾಗಬೇಡ. ಸೂರ್ಯಮುಖಿಯು ಅಗತ್ಯವಾಗಿ ಹಿಂದಿರುಗಿ ಬರುವಳು—ನಿನ್ನನ್ನು ನೋಡದೆ ಅವಳು ಎಷ್ಟುದಿನತಾನೇ ಇರುವಳು ? ಎಷ್ಟು ದಿನದ ವರೆಗೆ ಅವಳು ಹಿಂದಿರುಗಿ ಬರುವುದಿಲ್ಲವೋ, ಅದುವರೆಗೆ ನೀನು ಕುಂದನಂದಿನಿಯಲ್ಲಿ ಸ್ನೇಹವನ್ನು ಬೆಳಸು—ನಿನ್ನ ಕಾಗದಗಳಿಂದ ನೋಡಿದರೆ ಅವಳೂ ಗುಣಹೀನಳಲ್ಲವೆಂದು ಕಾಣುತ್ತದೆ. ರೂಪದಿಂದ ಹುಟ್ಟಿದ ಮೋಹವು ದೂರವಾದ ಮೇಲೆ ಸ್ಥಾಯಿಯಾದ ಪ್ರೇಮದ ಸಂಚಾರವುಂಟಾಗುತ್ತದೆ. ಹಾಗಾದರೆ ಅವಳಿಂದಲೇ ನೀನು ಸುಖಿಯಾಗಿರಬಹುದು. ನಿನ್ನ ಜ್ಯೇಷ್ಠಳಾದ ಭಾರ್ಯೆಯು ಸಿಕ್ಕದಿದ್ದರೆ ಅವಳನ್ನು ಕ್ರಮೇಣ ಮರೆತರೂ ಮರೆಯಬಹುದು. ಕನಿಷ್ಠಳು ನಿನ್ನನ್ನು ವಿಶೇಷವಾಗಿ ಪ್ರೀತಿಸುವಳು. ಪ್ರೀತಿಯನ್ನು ಬೆಳಸುವುದರಲ್ಲಿ ಯತ್ನವಿಲ್ಲದವನಾಗಬೇಡ. ಏತಕ್ಕೆಂದರೆ, ಪ್ರೀತಿಯಿಂದಲೇ ಮನುಷ್ಯನಿಗೆ ನಿರ್ಮಲವಾದ ಅವಿನಶ್ವರವಾದ ಸುಖವುಂಟಾಗುವುದು. ಪ್ರೀತಿಯೇ ಮನುಷ್ಯಜಾತಿಯ ಉನ್ನತಿಯ ಕಡೇ ಉಪಾಯ—ಮನುಷ್ಯರು ಪರಸ್ಪರ ಪ್ರೀತಿಸಿದರೆ ಭೂಮಿಯಲ್ಲಿ ಮನುಷ್ಯಕೃತವಾದ ಅನಿಷ್ಟಗಳೇ ಇರದು—ಇತಿ.

ಇದಕ್ಕೆ ನಾಗೇಂದ್ರನಾಥದತ್ತನ ಪ್ರತ್ಯುತ್ತರ. —

ನಿನ್ನ ಕಾಗದವು ತಲಪಿತು. ಮಾನಸಿಕವಾದ ಕ್ಲೇಶದಿಂದ ಇದುವರೆಗೆ ಅದಕ್ಕೆ ಉತ್ತರವನ್ನು ಬರೆಯಲಾರದೆ ಹೋದೆನು. ನೀನು ಬರೆದುದನ್ನೆಲ್ಲ ತಿಳಿದುಕೊಂಡೆನು ; ನಿನ್ನ ಪರಾಮರ್ಶವು ಬಳ್ಳೇಬುದ್ಧಿವಾದವೆಂತಲೇ ತಿಳಿದೆನು. ಆದರೆ ಮನೆಯಲ್ಲಿದ್ದುಕೊಂಡು ಮನಸ್ಸನ್ನು ಸ್ಥಿರಕ್ಕೆ ತರಲಾರೆನು. ಒಂದು ತಿಂಗಳಾಯಿತು, ನನ್ನ ಸೂರ್ಯಮುಖಿಯು ನನ್ನನ್ನು ಬಿಟ್ಟು ಹೋಗಿ. ಅವಳ ಸಮಾಚಾರವೇ ಇಲ್ಲ. ಅವಳು ಯಾವಮಾರ್ಗವಾಗಿ ಹೋದಳೋ ನಾನೂ ಅದೇಮಾರ್ಗದಲ್ಲಿ ಹೋಗಬೇಕೆಂದಿದ್ದೇನೆ. ನಾನು ಗೃಹತ್ಯಾಗ ಮಾಡುವೆನು. ದೇಶದೇಶದಲ್ಲಿ ಅವಳನ್ನು ಹುಡುಕುತ್ತ

ತಿರುಗುತಲಿರುವೆನು. ಸಿಕ್ಕಿದರೆ ಅವಳನ್ನು ಜತೇಲಿ ಕರೆದುಕೊಂಡು ಮನೆಗೆ ಬರುವೆನು; ಇಲ್ಲದಿದ್ದರೆ ಬರುವುದಿಲ್ಲ. ಕುಂದನಂದಿನಿಯು ಸಂಗಡ ಸಂಸಾರ ಮಾಡಿಕೊಂಡು ಇನ್ನು ಮನೆಯಲ್ಲಿರಲಾರೆನು. ಅವಳು ನನ್ನ ಕಣ್ಣಿಗೆ ಶೂಲವಾಗಿದ್ದಾಳೆ. ಅವಳ ದೋಷವೇನೂ ಇಲ್ಲ—ದೋಷವೆಲ್ಲ ನನ್ನದೇ—ಆದರೆ ಇನ್ನು ಅವಳ ಮುಖವನ್ನು ನೋಡಿ ಸಹಿಸಲಾರೆನು. ಮೊದಲು ನಾನು ಅವಳನ್ನು ಕುರಿತು ಏನೂ ಹೇಳುತ್ತಿರಲಿಲ್ಲ—ಈಗ ನಿತ್ಯವೂ ಅವಳನ್ನು ಗದರಿಸಿಕೊಳ್ಳುತ್ತೇನೆ—ಅವಳು ಅಳುತ್ತಾಳೆ—ನಾನೇನು ಮಾಡಲಿ? ನಾನು ಮನೆಯನ್ನು ಬಿಟ್ಟು ಹೊರಟು ಹೋಗುತ್ತೇನೆ; ಜಾಗ್ರತೆಯಲ್ಲಿ ನಿನ್ನನ್ನು ನೋಡುವೆನು. ನಿನ್ನನ್ನು ನೋಡಿದನಂತರ ಬೇರೇ ಕಡೆ ಹೋಗುವೆನು—ಇತಿ.

ನಾಗೇಂದ್ರನಾಥದತ್ತನು ಕಾಗದದಲ್ಲಿ ಬರೆದಂತೆ ಮಾಡಿದನು. ಆಸ್ತಿಯ ಮೇಲ್ವಿಚಾರಣೆಯನ್ನೆಲ್ಲ ತನ್ನ ದಿವಾನನಿಗೆ ಒಪ್ಪಿಸಿ ಆ ಕೂಡಲೆ ಗೃಹವನ್ನು ತ್ಯಾಗಮಾಡಿ ದೇಶಾಟನೆಗೆ ಹೊರಟನು. ಕಮಲಮಣಿಯು ಮೊದಲೇ ಕಲಕತ್ತೆಗೆ ಹೊರಟು ಹೋಗಿದ್ದಳು. ಆದಕಾರಣ ಈ ಗ್ರಂಥದಲ್ಲಿ ಹೆಸರುಗೊಂಡವರಲ್ಲಿ ಕುಂದನಂದಿನಿಯೊಬ್ಬಳೇ ದತ್ತನ ಮನೆಯಲ್ಲಿ ಉಳಿದಳು. ಮತ್ತು ಹೀರಾದಾಸಿಯು ಅವಳ ಉಪಚಾರಕ್ಕೆ ನಿಂತಳು.

ದತ್ತನ ಆ ವಿಸ್ತಾರವಾದ ಪುರಿಯೆಲ್ಲ ಅಂಧಕಾರವಾಯಿತು. ಬಹು ದೀಪಗಳಿಂದ ಉಜ್ವಲವಾದ ಬಹುಜನ ಸಮಾಕೀರ್ಣವಾದ, ಸಂಗೀತ ಧ್ವನಿಯಿಂದ ಪರಿಪೂರ್ಣವಾದ ನಾಟ್ಯಶಾಲೆಯು, ನಾಟ್ಯವು ಪೂರೈಸಿದ ಮೇಲೆ ಹೇಗೆ ಅಂಧಕಾರವಾಗಿ ಜನಶೂನ್ಯವಾಗಿ ನಿಶ್ಶಬ್ದವಾಗುವುದೋ, ಹಾಗೆ ಈ ಮಹಾಪುರಿಯು ಸೂರ್ಯಮುಖಿ ನಾಗೇಂದ್ರ ಇವರಿಂದ ತ್ಯಜಿಸಲ್ಪಟ್ಟಮೇಲೆ ಕತ್ತಲೆ ಕವಿತುಕೊಂಡು ಜನಶೂನ್ಯವಾಗಿ ಹೋಯಿತು. ಹುಡುಗರು ಚಿತ್ರದ ಬೊಂಬೆಯನ್ನು ಇಟ್ಟುಕೊಂಡು ಒಂದು ದಿನ ಆಡಿಬಿಟ್ಟು, ಅನಂ

ತರ ಅದನ್ನು ಒಡೆದು ಮಣ್ಣಿನಲ್ಲಿ ಹಾಕಿ ಬಿಟ್ಟಮೇಲೆ ಹೇಗೆ ಅದು ಮಣ್ಣಿನಲ್ಲಿ ಬಿದ್ದು ಅದರ ಮೇಲೆ ಮಣ್ಣು ಬಿದ್ದು ಹುಲ್ಲು ಬೆಳೆಯುವುದೋ, ಹಾಗೆ ಕುಂದನಂದಿನಿಯು ಒಡದುಹೋದ ಪ್ರತ್ತಿಲಿಯಹಾಗೆ ನಾಗೇಂದ್ರನಿಂದ ಪರಿತ್ಯಕ್ತಳಾಗಿ ಒಬ್ಬಳೇ ಆ ವಿಸ್ತಾರವಾದ ಪುರಿಯ ಮಧ್ಯದಲ್ಲಿ ಯತ್ನರಹಿತಳಾಗಿ ಬಿದ್ದಿದ್ದಳು. ಕಿಚ್ಚು ಬಿದ್ದು ಕಾಡು ಬೇಯುವಾಗ ಗೂಡುಸಮೇತವಾಗಿ ಮರಿಗಳು ಸುಟ್ಟು ಹೋದಮೇಲೆ ತಾಯಿಯಾದ ಹಕ್ಕಿಯು ಆಹಾರವನ್ನು ತಂದು ನೋಡಿ ಗೂಡು ಸಿಕ್ಕದೆ ಆ ಸುಡುವ ವನದ ಮೇಲುಗಡೆ ಮಂಡಲಾಕಾರವಾಗಿ ಹಾರಾಡುವಂದದಿ ನಾಗೇಂದ್ರನು ಸೂರ್ಯಮುಖಿಯನ್ನು ಹುಡುಕುತ್ತ ದೇಶದೇಶ ಅಲಿಯುತಲಿದ್ದನು. ಅನಂತವಾದ ಸಾಗರದ ಅಗಾಧ ಜಲದಲ್ಲಿ ಬಿದ್ದು ಮುಣುಗಿ ಹೋಗಿ ಕಣ್ಣಿಗೆ ಗೋಚರವಿಲ್ಲದ ರತ್ನಮಣಿಯಂದದಿ ಸೂರ್ಯಮುಖಿಯು ದುಷ್ಪ್ರಾಪಣೀಯಳಾದಳು.

---

## ಮುಪ್ಪತ್ತುಮೂರನೆಯ ಪರಿಚ್ಛೇದ.

### ಪ್ರೀತಿಯ ಚಿಹ್ನೆ.

ನೂಲಿನ ಬಟ್ಟೆಯ ಮಧ್ಯದಲ್ಲಿಟ್ಟ ಬೆಂಕಿಯ ಕೆಂಡದಹಾಗೆ ದೇವೇಂದ್ರನ ಸಮನಿಲ್ಲದ ದೇವಮೂರ್ತಿಯು ಹೀರೆಯ ಅಂತಃಕರಣವನ್ನು ಮಡುಪು ಮಡುಪಾಗಿ ಸುಡುತಲಿತ್ತು. ಅನೇಕಸಲ ಹೀರೆಯ ಧರ್ಮ ಭೀತಿಯೂ ಲಜ್ಜೆಯೂ ಸಹ ಪ್ರಣಯವೇಗದಲ್ಲಿ ತೇಲಿಹೋಗಲಾರಂಭಿಸಿತು ; ಆದರೆ ದೇವೇಂದ್ರನ ಸ್ನೇಹ ಹೀನವಾದ ಇಂದ್ರಿಯ ಪರವಶವಾದ ಚರಿತ್ರೆಯು ಜ್ಞಾಪಕಕ್ಕೆ ಬರುತ್ತಲೆ, ಧರ್ಮಭೀತಿಯೂ ಲಜ್ಜೆಯೂ ಸಹ ತಡೆದು ನಿಲ್ಲುತ್ತಲಿದ್ದವು. ಹೀರೆಯು ಚಿತ್ತವನ್ನು ದಮನಮಾಡುವುದರಲ್ಲಿ ವಿಲಕ್ಷಣವಾದ ಶಕ್ತಿಯುಳ್ಳವಳಾಗಿದ್ದಳು. ಆ ಶಕ್ತಿಯಿದ್ದುದರಿಂದಲೇ, ಅಂತಹ

ವಿಶೇಷವಾದ ಧರ್ಮಭೀತಿಯಿಲ್ಲದಿದ್ದರೂ, ಇದುವರೆಗೂ ಸ್ವಧರ್ಮವಾದ ಸತೀತ್ವವನ್ನು ರಕ್ಷಿಸಿಕೊಳ್ಳಲು ಸಮರ್ಥಳಾಗಿದ್ದಳು. ಆ ಶಕ್ತಿಯ ಪ್ರಭಾವದಿಂದಲೇ ದೇವೇಂದ್ರನಲ್ಲಿ ತಾನು ಇಟ್ಟಿದ್ದ ಅನುರಾಗವು ಅಪಾತ್ರನಲ್ಲಿ ಇಟ್ಟಹಾಗಾಯಿತೆಂದು ತಿಳಿದವಳಾಗಿ ಅದನ್ನು ಶಮನಮಾಡಿಕೊಂಡಿದ್ದಳು. ಚಿತ್ತವನ್ನು ದಮನ ಮಾಡಲು ಉಪಾಯಸ್ವರೂಪವಾಗಿ ಪುನಃ ದಾಸಿಯ ವೃತ್ತಿಯನ್ನು ಅವಲಂಬಿಸಬೇಕೆಂದು ಸ್ಥಿರಮಾಡಿಕೊಂಡಿದ್ದಳು. ಅನ್ಯರ ಮನೆಯ ಕೆಲಸಗಳಲ್ಲಿ ನಿತ್ಯವೂ ನಿರತಳಾಗಿದ್ದರೆ, ಮನಸ್ಸು ಬೇರೆ ಇದ್ದು ಈ ವಿಫಲವಾದ ಅನುರಾಗದ ವೃಶ್ಚಿಕದಂಶನ ಸ್ವರೂಪವಾದ ಜ್ವಾಲೆಯನ್ನು ಮರೆಯಬಹುದು. ಅದಕ್ಕೋಸ್ಕರ, ನಾಗೇಂದ್ರನು ಕುಂದನಂದಿನಿಯನ್ನು ಗೋವಿಂದ ಪುರದ ಮನೆಯಲ್ಲಿಟ್ಟು ಬಿಟ್ಟು ದೇಶಾಟನೆಗೆ ಹೊರಟಾಗ ಅವಳು ಹೋಗಿ ತಾನು ಮೊದಲು ಮಾಡಿದ್ದ ಚಾಕರಿಯ ಬಲದ ಮೇಲೆ ನಾಗೇಂದ್ರನನ್ನು ಕೇಳಿಕೊಂಡಳು. ಅವನು ಕುಂದಳ ಅಭಿಪ್ರಾಯವನ್ನು ತಿಳಿದು ಹೀರೆಯನ್ನು ಕುಂದನಂದಿನಿಯ ಉಪಚಾರಕ್ಕೆ ದಾಸಿಯಾಗಿ ನಿಯಮಿಸಿದನು.

ಹೀರೆಯು ಪುನಃ ದಾಸೀವೃತ್ತಿಯನ್ನು ಒಪ್ಪಿಕೊಳ್ಳುವುದಕ್ಕೆ ಮತ್ತೊಂದು ಕಾರಣವಿತ್ತು. ಪೂರ್ವದಲ್ಲಿ ದ್ರವ್ಯಾದಿಗಳ ಆಶೆಯಿಂದ, ಕುಂದನಂದಿನಿಯು ನಾಗೇಂದ್ರನಿಗೆ ಭವಿಷ್ಯದಲ್ಲಿ ಪ್ರಿಯತಮಳಾಗುವಳೆಂದು ತಿಳಿದು ಅವಳನ್ನು ಮುಂಚಿತವಾಗಿಯೇ ತನ್ನ ಕೈವಶ ಮಾಡಿಕೊಳ್ಳಲು ಪ್ರಯತ್ನಪಟ್ಟಿದ್ದಳಲ್ಲದೆ ನಾಗೇಂದ್ರನ ಹಣವು ಕುಂದಳ ಕೈಗೆ ಸೇರುವುದೆಂತಲೂ ಕುಂದಳ ಕೈಗೆ ಬಂದುದು ತನ್ನ ವಶವಾಗುವುದೆಂತಲೂ ಭಾವಿಸಿಕೊಂಡಿದ್ದಳು. ಈಗ ಕುಂದಳು ನಾಗೇಂದ್ರನ ಗೃಹಿಣಿಯಾದಳು. ಆದರೆ ದುಡ್ಡು ಕಾಸಿನ ವಿಚಾರದಲ್ಲಿ ಅವಳಿಗೆ ಹೆಚ್ಚು ಅಧಿಕಾರವು ಬರಲಿಲ್ಲ. ಆದರೆ ಹೀರೆಗೂ ಹಣಕಾಸಿನ ಮೇಲೆ ಅಷ್ಟು ಇಷ್ಟವಿರಲಿಲ್ಲ. ಅದರ ಯೋಚನೆ

ಯನ್ನು ಬಿಟ್ಟಳು. ಕುಂದಳಲ್ಲಿ ಏನೂ ಸಿಕ್ಕದು; ಸಿಕ್ಕಿದ್ದರೂ ಅದನ್ನು ವಿಷದಹಾಗೆ ನೋಡುವವಳಾಗಿದ್ದಳು.

ಹೀರೆಯು ತನ್ನ ನಿಷ್ಫಲವಾದ ಪ್ರಣಯದ ಯಾತನೆಯನ್ನು ಸಹಿಸ ಬಲ್ಲಳಾಗಿದ್ದರೂ ಕುಂದನಂದಿನಿಯಮೇಲೆ ದೇವೇಂದ್ರನ ಅನುರಾಗವನ್ನು ನೋಡಿ ಸಹಿಸಲಾರದವಳಾಗಿದ್ದಳು. ಹೀರೆಯು ನಾಗೇಂದ್ರನು ಕುಂದನಂದಿನಿಯನ್ನು ಮನೆಯಲ್ಲಿಟ್ಟು ದೇಶಾಂತರ ಹೊರಟುಹೋಗುತ್ತಾನೆಂದು ಕೇಳಿದಾಗ, ಹರಿದಾಸಿ ವೈಷ್ಣವಿಯು ಜ್ಞಾಪಕಕ್ಕೆ ಬಂದು ಅವಳಿಗೆ ಬಹಳ ಭಯವುಂಟಾಯಿತು. ಅವಳು ಆ ಹರಿದಾಸಿ ವೈಷ್ಣವಿಯು ಬಂದುಹೋಗುವ ಮಾರ್ಗಕ್ಕೆ ಮುಳ್ಳುಹಾಕುವದಕ್ಕೋಸ್ಕರ ಕಾವಲುಗಾರಳಾಗಿ ದಾಸಿಯ ವೃತ್ತಿಯಲ್ಲಿಬಂದು ನಿಂತಳು.

ಹೀರೆಯು ಕುಂದನಂದಿನಿಯ ಕ್ಷೇಮಚಿಂತಕಳಾಗಿ ಈ ಯೋಚನೆಯನ್ನು ಮಾಡಲಿಲ್ಲ. ಅವಳು ಈರ್ಷೆಗೆ ವಶಳಾಗಿ ಕುಂದನಂದಿನಿಯನ್ನು ಹಾಳುಮಾಡಬೇಕೆಂದು ಹೀಗೆ ಪ್ರವೃತ್ತಳಾದಳು. ನಾಗೇಂದ್ರನ ಹೆಂಡತಿಯಾದ ಕುಂದನಂದಿನಿಯನ್ನು ದೇವೇಂದ್ರನು ನೋಡಿಬಿಟ್ಟರೆ ಕೆಲಸ ಕೆಟ್ಟು ಹೋಗುವುದೆಂಬ ಭಯದಿಂದ ಅವಳಮೇಲೆ ಕಾವಲುಗಾರಳಾಗಿ ನಿಂತಳು.

ಹೀರೆಯು ಕುಂದಳಿಗೆ ಯಾತನೆಯುಂಟುಮಾಡಲು ಕಾರಣಳಾದಳು. ಕುಂದಳು ಕ್ರಮೇಣ ನೋಡಲಾಗಿ ಹೀರೆಗೆ ಮೊದಲಿನಂತೆ ಆ ಪ್ರೀತಿ ಮಮತೆಯಿದ್ದಹಾಗೆ ಕಂಡುಬರಲಿಲ್ಲ. ಅವಳು ದಾಸಿಯಾಗಿ ಬಂದಾರಭ್ಯ, ತನ್ನಮೇಲೆ ಶ್ರದ್ಧೆಯಿಲ್ಲದೆ ತಿರಸ್ಕಾರಮಾಡುತ್ತ ಅಪಮಾನ ಮಾಡುತ್ತಾಳೆಂದು ಗೊತ್ತಾಯಿತು. ಕುಂದಳು ಅತ್ಯಂತ ಶಾಂತವಾದ ಸ್ವಭಾವವುಳ್ಳವಳು; ಹೀರೆಯ ಆಚರಣೆಯಿಂದ ಪೀಡಿತಳಾದರೂ ಅವಳಿಗೆ ಬಂದು ಮಾತನ್ನು ಹೇಳುತ್ತಿರಲಿಲ್ಲ. ಕುಂದಳು ಶೀತಲಪ್ರಕೃತಿಯವಳು; ಹೀರೆಯು ಉಗ್ರಪ್ರಕೃತಿಯವಳು. ಆದಕಾರಣ ಕುಂದಳು ಪ್ರಭುವಿನ ಪತ್ನಿಯಾಗಿ

ದ್ದರೂ ದಾಸಿಯು ಹತ್ತರ ದಾಸಿಯಹಾಗೆ ಇರುತ್ತಿದ್ದಳು. ಹೀರೆ ದಾಸಿಯಾದರೂ ಪ್ರಭುಪತ್ನಿಯು ಪ್ರಭುವಾಗಿದ್ದಳು. ಮನೆಯಲ್ಲಿದ್ದ ಇತರ ಹೆಂಗಸರು ಕುಂದಳ ಯಾತನೆಯನ್ನು ನೋಡಿ ಸಹಿಸಲಾರದೆ ಹೀರೆಯನ್ನು ಗದರಿಸಿಕೊಳ್ಳುತ್ತಿದ್ದರು ; ಆದರೆ ಹೀರೆಯ ಬಾಯಿನ ಮುಂದೆ ಯಾರೂ ನಿಲ್ಲುತ್ತಿರಲಿಲ್ಲ. ದಿವಾನನು ಇದನ್ನೆಲ್ಲ ಕೇಳಿ ಹೀರೆಯನ್ನು ಕುರಿತು, ನೀನು ಮನೆಯನ್ನು ಬಿಟ್ಟು ಹೋಗು, ನಿನ್ನನ್ನು ಕೆಲಸದಿಂದ ತೆಗೆದುಹಾಕಿದ್ದೇನೆಂದು ಹೇಳಿದನು. ಅದಕ್ಕವಳು ಕಣ್ಣುಗಳಲ್ಲಿ ಕೆಂಡವನ್ನು ಸುರಿಸುತ್ತ, ಕೆಲಸದಿಂದ ತೆಗೆದುಹಾಕುವುದಕ್ಕೆ ನೀನಾರು ? ಯಜಮಾನರು ನನ್ನನ್ನು ಇಟ್ಟಿರುವರು, ಅವರು ಹೇಳಿದ ಹೊರ್ತು ನಾನು ಬಿಟ್ಟು ಹೋಗುವುದಿಲ್ಲ. ನನ್ನನ್ನು ಹೋಗೆಂದು ಹೇಳುವುದಕ್ಕೆ ನಿನಗೆ ಎಷ್ಟು ಸ್ವಾತಂತ್ರ್ಯವೋ ನಿನ್ನನ್ನು ಹೋಗೆಂದು ಹೇಳಲು ನನಗೂ ಅಷ್ಟು ಸ್ವಾತಂತ್ರ್ಯವುಂಟೆಂದು ಹೇಳಿದಳು, ಕೇಳಿ ದಿವಾನನು ಅಪಮಾನದ ಭಯದಿಂದ ಹೆಚ್ಚು ಮಾತನಾಡಲಿಲ್ಲ. ಹೀರೆಯು ತನ್ನ ಜೋರಿನಿಂದಲೇ ಇದ್ದುಕೊಂಡಿದ್ದಳು. ಸೂರ್ಯಮುಖಿಯನ್ನು ಹೊರ್ತು ಹೀರೆಯನ್ನು ಆಳುವುದು ಯಾರಕೈಯಿಂದಲೂ ಸಾಗದು.

ಒಂದು ದಿನ ಹೀರೆಯು ಅಂತಃಪುರದ ಹತ್ತರವಿದ್ದ ಪುಷ್ಪೋದ್ಯಾನದಲ್ಲಿರುವ ಲತಾಮಂಟಪದಲ್ಲಿ ಒಬ್ಬಳೇ ಮಲಗಿದ್ದಳು. ಯಜಮಾನ ಯಜಮಾನಿಯರಿಬ್ಬರೂ ಮನೆಯನ್ನು ಬಿಟ್ಟು ಹೋದ ಮೊದಲ್ಗೊಂಡು, ಲತಾಮಂಟಪಕ್ಕೆ ಹೀರೆಯೇ ಅಧಿಕಾರಿಯಾಗಿದ್ದಳು. ಆಗ ಸಾಯಂಕಾಲವು ಮೀರಿತ್ತು. ಆಕಾಶದಲ್ಲಿ ಪೂರ್ಣಚಂದ್ರನು ಪ್ರಕಾಶಿಸುತಲಿದ್ದನು. ಉದ್ಯಾನವಲ್ಲಿ ಕಾಂತಿಗೊಂಡ ಮರದೆಲೆಗಳಲ್ಲಿ ಆ ಕಿರಣಮಾಲೆಯು ಪ್ರತಿಫಲಿತವಾಗುತಲಿತ್ತು. ಲತೆಯೆಲೆಗಳ ಕಂಡಿಗಳಲ್ಲಿ ಆ ಚಂದ್ರಕಿರಣವು ತೂರಿಬಂದು ನೆಲಕ್ಕೆ ಹರಡಿದ್ದ ಬಿಳೇಶಿಲೆಯ ಮೇಲೆ ಬಿದ್ದಿತ್ತು. ಮತ್ತು ಅದು ಸಮೀ

ಪದಲ್ಲಿದ್ದ ಪುಷ್ಕರಿಣಿಯು ಪ್ರದೋಷಕಾಲದ ತಂಗಾಳಿಯಿಂದ ತಣ್ಣಗೊಂಡ ಸ್ವಚ್ಛವಾದ ನೀರಿನ ಮೇಲೆ ನಾಟ್ಯವಾಡುತಲಿತ್ತು. ಉದ್ಯಾನದ ಪುಷ್ಪಗಳ ಗಂಧದಿಂದ ಆಕಾಶವು ಉನ್ಮಾದಕರವಾಗಿತ್ತು. ಪ್ರಕೃತಿಯು ಯಾವ ಪದಾರ್ಥವೂ ಹಾಗಿರಲಿಲ್ಲ. ಈ ಸಮಯದಲ್ಲಿ ಹೀರೆಯು ಹಠಾತ್ತಾಗಿ ಲತಾಮಂಟಪದಲ್ಲಿ ಒಂದು ಪುರುಷಮೂರ್ತಿಯನ್ನು ನೋಡಿದಳು. ನೋಡಲಾಗಿ ದೇವೇಂದ್ರನಾಗಿದ್ದನು. ಇಂದು ದೇವೇಂದ್ರನು ಬೇರೆ ವೇಷವನ್ನು ತಾಳಿರಲಿಲ್ಲ. ಸ್ವಂತವೇಷದಿಂದಲೇ ಬಂದಿದ್ದನು.

ಹೀರೆಯು ವಿಸ್ಮಿತಳಾಗಿ, ನಿಮ್ಮದು ಬಹಳ ದುಃಸಾಹಸವಾದ ಕೆಲಸ; ಯಾರಾದರೂ ನೋಡಿದರೆ ತಾವು ಪೆಟ್ಟುತಿನ್ನುವಿರಿ ಎಂದಳು.

ದೇವೇಂದ್ರನು, ಹೀರೆಯು ಎಲ್ಲಿ ಇರುವಳೋ ಅಲ್ಲಿ ನನಗೆ ಭಯವೇನೆಂದು ಹೇಳಿ, ಅವಳ ಪಾರ್ಶ್ವದಲ್ಲಿ ಬಂದು ಕುಳಿತುಕೊಂಡನು.

ಹೀರೆಯು ಚರಿತಾರ್ಥಳಾದಳು. ಸ್ವಲ್ಪ ಹೊತ್ತಿನಮೇಲೆ, ಏತಕ್ಕೆ ಇಲ್ಲಿಗೆ ಬಂದುದು ? ಯಾರನ್ನು ನೋಡಬೇಕೆಂದು ಬಂದಿರೋ ಅವಳನ್ನು ನೋಡಲಾರಿರಿ ಎಂದಳು.

ದೇವೇಂದ್ರನು ನೋಡಿದೆ, ನಿನಗೋಸ್ಕರವೇ ಬಂದೆನೆಂದನು. ಹೀರೆಯು ಈ ಕಪಟವಾದ ಮೋಸಗೊಳಿಸುವ ಚಾಟು ಮಾತುಗಳಿಂದ ಮೋಸಹೋಗದೆ ನಕ್ಕು, ನನ್ನ ಅದೃಷ್ಟವು ಕುದರಿದ ಹಾಗೆ ಕಾಣುವುದಿಲ್ಲ ; ಅದು ಹೇಗಾದರೂ ಆಗಲಿ, ನನ್ನ ಭಾಗ್ಯವು ಹಿಂದಿರುಗಿದ್ದರೆ, ತಮ್ಮನ್ನು ನಿಷ್ಕಂಟಕವಾಗಿ ಕಣ್ಣುತುಂಬ ನೋಡಿ ಮನಸ್ಸು ತೃಪ್ತಿಮಾಡಿಕೊಳ್ಳುವೆನು. ಬಂದು ಏಕಾಂತವಾದ ಸ್ಥಳಕ್ಕೆ ಹೋಗೋಣ ; ಇಲ್ಲಿ ಬಹಳ ಜನರು ಬರುತ್ತಾರೆಂದು ಹೇಳಿದಳು.

ದೇವೇಂದ್ರ—ಎಲ್ಲಿಗೆ ಹೋಗೋಣ ?

ಹೀರಾ—ಭಯವಿಲ್ಲದ ಸ್ಥಳಕ್ಕೆ_ತಮ್ಮ ನಿಕುಂಜವನಕ್ಕೆ ಹೋಗೋಣ

ಹೀರಾ— ನಿಮಗೋಸ್ಕರವಾಗಿ ಭಯಪಡಬೇಕಾದ ಆವಶ್ಯಕವಿಲ್ಲದಿದ್ದರೂ ನನಗೋಸ್ಕರ ಭಯಪಡಬೇಕು. ನಿಮ್ಮ ಪಾರ್ಶ್ವದಲ್ಲಿ ನನ್ನನ್ನು ಯಾರಾದರೂ ನೋಡಿದರೆ ನನ್ನ ಗತಿಯೇನಾಗಬೇಕು ?

ದೇವೇಂದ್ರನು ಸಂಕುಚಿತನಾಗಿ, ಹಾಗಾದರೆ ನಡೆ-ನಿಮ್ಮ ಮನೆಯ ಹೊಸ ಯಜಮಾನಿಯ ಸಂಗಡ ಬಂದುಸಲ ಮಾತನಾಡಿ ಹೋಗಕೂಡದೆ ?

ಹೀರೆಯು ಇದನ್ನು ಕೇಳಿ ದೇವೇಂದ್ರನಮೇಲೆ ಈರ್ಷಾನಲದಿಂದ ಜ್ವಲಿಸುತಲಿದ್ದ ಕಟಾಕ್ಷವನ್ನು ಬೀರಿದಳು. ದೇವೇಂದ್ರನು ಅದನ್ನು ಆ ಮಸಕಾದ ಬೆಳಕಿನಲ್ಲಿ ನೋಡಲಿಲ್ಲ.

ಹೀರಾ—ಅವಳನ್ನು ನೋಡುವುದು ಹೇಗೆ ?

ದೇವೇಂದ್ರನು ವಿನೀತಭಾವದಿಂದ, ನೀನು ದಯಮಾಡಿದರೆ ಎಲ್ಲಾ ಆಗುತ್ತದೆ ಎಂದನು.

ಹೀರಾ—ನೀವು ಇಲ್ಲಿಯೇ ಜಾಗರೂಕರಾಗಿ ಕುಳಿತಿರೋಣಾಗಲಿ; ನಾನು ಅವಳನ್ನು ಕರೆತರುತ್ತೇನೆ.

ಹೀಗೆಂದು ಹೇಳಿ ಹೀರೆಯು ಲತಾಮಂಟಪದಿಂದ ಹೊರಗೆ ಹೋದಳು. ಸ್ವಲ್ಪದೂರ ಹೋಗಿ ಬಂದು ಮರದ ಮರೆಯಲ್ಲಿ ನಿಂತುಕೊಂಡಿದ್ದಳು. ಅಲ್ಲಿ ಅವಳ ಕಂಠವು ಅದಮಿದಹಾಗಾಗಿ ಕಣ್ಣುಗಳಿಂದ ದರವಿಗಳಿತವಾಗಿ ನೀರು ಹರಿದುಹೋಯಿತು. ಅನಂತರ ಅಲ್ಲಿಂದ ಹೊರಟು ಮನೆಯೊಳಗೆ ಹೋದಳು. ಆದರೆ ಕುಂದನಂದಿನಿಯ ಹತ್ತರ ಹೋಗಲಿಲ್ಲ. ಬಾಗಲಿಗೆ ಹೋಗಿ ಪಹರೆಯವರನ್ನು ಕುರಿತು, ನೀವು ಶೀಘ್ರವಾಗಿ ಬನ್ನಿ, ಹೂವಿನತೋಟದಲ್ಲಿ ಕಳ್ಳನು ಬಂದಿದ್ದಾನೆಂದು ಹೇಳಿದಳು.

ಆಗ ತಿವಾರಿ, ಪಾಂಡೆ, ದೇವ್ರೋ, ಚೋವ್ರೊ ಮುಂತಾದ ದ್ವಾರಪಾಲಕರು ಬಿದರುದೊಣ್ಣೆಗಳನ್ನು ತೆಗದುಕೊಂಡು ಅಂತಃಪುರದೊಳಗಿನಿಂದ ಹೂಪಿನತೋಟಕ್ಕೆ ಓಡಿದರು. ದೇವೇಂದ್ರನು ದೂರದಿಂದಲೇ ಅವರನ್ನು

ಕಂಡು ಲತಾಮಂಟಪದಿಂದ ಧುಮುಕಿ ವೇಗವಾಗಿ ಓಡಲಾರಂಭಿಸಿದನು. ದ್ವಾರಪಾಲಕರು ಅವನ ಹಿಂದೆ ಓಡಿದರು. ದೇವೇಂದ್ರನು ಕೈಗೆ ಸಿಕ್ಕಿದ್ದರೂ ಅವನನ್ನು ಅವರು ಹಿಡಿಯಲಿಲ್ಲ. ಆದರೆ ದೇವೇಂದ್ರನು ಪುರಸ್ಕೃತನಾಗದೆ ಹೋಗಲಿಲ್ಲ. ಬಳ್ಳಿ ಬಲಿತಿದ್ದ ಬಿದರುದೊಣ್ಣೆಯ ರುಚಿಯು ಅವನಿಗೆ ಗೊತ್ತಾಯಿತೋ ಇಲ್ಲವೋ ನಮಗೆ ಗೊತ್ತಾಗಲಿಲ್ಲ; ಆದರೆ ಪಹರೆಯವರು, ಸೂಳೇಮಗ, ಲವಡೀಮಗ ಎಂದು ಕೂಗಿ ಮಾತುನಾಡಿಕೊಂಡದ್ದುದು ನಮ್ಮ ಕಿವಿಗೆ ಬಿತ್ತು. ಅದಲ್ಲದೆ ದೇವೇಂದ್ರನ ಆಳುಗಳಲ್ಲೊಬ್ಬನು ಅವನ ಮನೆಯ ಬ್ರಾಂದಿಯನ್ನು ಕುಡಿದು ಮರುದಿನ ತನ್ನ ಉಪಪತ್ನಿಯ ಸಂಗಡ ಮಾತನಾಡುತ್ತಿದ್ದಾಗ, ಈಹೊತ್ತು ನಮ್ಮ ಬಾಬುಗಳಿಗೆ ಎಣ್ಣೆಒತ್ತುತ್ತಿದ್ದಾಗ, ನೋಡಿದರೆ ಅವರ ಬೆನ್ನಿನಮೇಲೆ ರಟ್ಟೆಯ ದಪ್ಪವಾದ ಒಂದು ಕಪ್ಪಾದ ಬಾಸುಂಡೆಯಿದ್ದಿತ್ತೆಂದು ಹೇಳಿದನು.

ದೇವೇಂದ್ರನು ಮನೆಗೆ ಹೋಗಿ, ಎರಡುವಿಷಯವಾಗಿ ಖಂಡಿತಮಾಡಿಕೊಂಡನು. ಒಂದನೇದು, ಹೀರೆಯು ಇರುವವರೆಗೂ ದತ್ತನ ಮನೆಗೆ ಹೋಗುವುದಿಲ್ಲವೆಂತಲೂ, ಎರಡನೇದು, ಹೀರೆಗೆ ಇದಕ್ಕೆ ಪ್ರತಿಯನ್ನು ಮಾಡಬೇಕೆಂತಲೂ ಸ್ಥಿರವಾದ ಸಂಕಲ್ಪವನ್ನು ಮಾಡಿಕೊಂಡನು. ಕೊನೆಗೆ ಅವನು ಹೀರೆಗೆ ಪೂರ್ಣವಾದ ಪ್ರತಿಫಲವನ್ನು ಕೊಟ್ಟನು. ಹೀರೆಯ ಲಘುವಾದ ಪಾಪಕ್ಕೆ ದೊಡ್ಡದಾದ ದಂಡನೆಯಾಯಿತು. ಹೀರೆಯು ಕಡೆಗೆ ಹೊಂದಿದ ದಂಡನೆಯನ್ನು ನೋಡಿ ದೇವೇಂದ್ರನ ಕಲ್ಲಿನಂತಹ ಎದೆಯು ಕೂಡ ಸೀಳಿಹೋಯಿತು. ಅದನ್ನು ಕುರಿತು ವಿಸ್ತಾರವಾಗಿ ವರ್ಣನೆಮಾಡಬೇಕಾದುದಿಲ್ಲ. ಕಡೆಗೆ ಸಂಕ್ಷೇಪವಾಗಿ ಹೇಳುವೆವು.

# ಮುವತ್ತುನಾಲ್ಕನೆಯ ಪರಿಚ್ಛೇದ.

## ಪಥಿಪಾರ್ಶ್ವದಲ್ಲಿ.

ಮಳೆಗಾಲ—ಬಹಳ ದುರ್ದಿನವಾಗಿತ್ತು. ಹಗಲೆಲ್ಲ ಮಳೆ. ಒಂದು ತಡವೆಯೂ ಸೂರ್ಯೋದಯವಾಗಲಿಲ್ಲ. ಆಕಾಶವೆಲ್ಲ ಮೇಘ ಮುಚ್ಚಿಕೊಂಡಿದೆ. ಕಾಶೀಗೆ ಹೋಗುವ ಘಾಟಮಾರ್ಗಕ್ಕೆ ಕರಲು ಮಣ್ಣು ಹೊಸದಾಗಿ ಹಾಕಿತ್ತು. ದಾರಿಯೆಲ್ಲ ಜಾರಿಕೆ. ಮಾರ್ಗದಲ್ಲಿ ಜನರೇ ಇಲ್ಲ—ಮಳೆಯಲ್ಲಿ ನೆನೆದುಕೊಂಡು ಪ್ರಯಾಣ ಮಾಡುವವರು ಯಾರು? ಒಬ್ಬನು ಮಾತ್ರ ಆ ದಾರಿಯಲ್ಲಿ ಹೋಗುತ್ತಿದ್ದನು. ಅವನ ವೇಷ ನೋಡಿದರೆ ಬ್ರಹ್ಮಚಾರಿ—ಕಾವಿಶಾಟಿಯನುಟ್ಟಿದ್ದನು— ಕುತ್ತಿಗೆಯಲ್ಲಿ ರುದ್ರಾಕ್ಷಿಮಾಲೆ— ಹಣೆಯಲ್ಲಿ ಚಂದನರೇಖೆ—ಜಟೆಯ ಆಡಂಬರವೇನೂ ಇರಲಿಲ್ಲ. ಮೋಟುಮೋಟಾದ ಕೂದಲು; ಒಂದೊಂದು ನೆರೆತಿತ್ತು. ಒಂದು ಕೈಯಲ್ಲಿ ಓಲೇಕೊಡೆ—ಮತ್ತೊಂದು ಕೈಯಲ್ಲಿ ಚೊಂಬು—ಬ್ರಹ್ಮಚಾರಿಯು ಮಳೆಯಲ್ಲಿ ತೋಯಿದುಕೊಂಡು ಹೋಗುತಲಿದ್ದನು. ಹಗಲೇ ಕತ್ತಲು; ಮಾರ್ಗದಲ್ಲಿಯೇ ರಾತ್ರಿಯೂ ಆಯಿತು. ಪೃಥಿವಿಯೆಲ್ಲ ಮಸೀಮಯವಾಯಿತು—ಮಾರ್ಗ ಹಳ್ಳ, ಕೊಳ್ಳ, ಯಾವದೂ ಗೊತ್ತಾಗದು. ಆದರೂ ಪಥಿಕನು ಹೋಗುತಲೇ ಇದ್ದನು. ಅವನು ಸಂಸಾರವನ್ನು ಬಿಟ್ಟ ಬ್ರಹ್ಮಚಾರಿ— ಅವನಿಗೆ ಮಳೆಯೇನು? ಬಿಸಿಲೇನು? ಬೆಳಕು, ಕತ್ತಲೆ, ಸುಪಥ, ಕುಪಥ, ಎಲ್ಲಾ ಒಂದೆ.

ರಾತ್ರಿ ಬಹಳ ಹೊತ್ತಾಯಿತು. ಭೂಮಿಯು ಮಸೀಮಯ—ಆಕಾಶದ ಮುಖಕ್ಕೆ ಕೃಷ್ಣಾವಕುಂಠನವನ್ನು ಹಾಕಿದಹಾಗಿತ್ತು. ಮರಗಳ ಶಿರೋಮಾಲೆಯು ಗಾಢತರವಾದ ಅಂಧಕಾರದಲ್ಲಿ ಸ್ಪಷ್ಟವಾಗಿ ಕಾಣಿಸುತ

ಲಿತ್ತು. ಅಲ್ಲಲ್ಲಿ ಕಂಡಿಗಳಲ್ಲಿ ಮಾತ್ರ ಎಲೆಗಳ ರೇಖೆಯುಹಾಗೆ ಕಾಣಿಸುತ ಲಿತ್ತು. ಮಳೆಯುಹನಿಯು ಬೀಳುತ್ತಿತ್ತು– ಒಂದೊಂದು ತಡವೆ ಪಳಪಳ ಮಿಂಚು—ಆ ಬೆಳಕಿನಿಂದ ಕತ್ತಲೆಯು ಮತ್ತಷ್ಟು ಹೆಚ್ಚಾಗುತಲಿತ್ತು. ಅಂಧಕಾರದಲ್ಲಿ ಮಿಂಚಿನ ಪ್ರೊಳಪುನಲ್ಲಿ ಸೃಷ್ಟಿಯೆಲ್ಲಾ ಭಯಂಕರವಾಗಿ ಕಾಣುವಷ್ಟು ಬರೆ ಅಂಧಕಾರದಲ್ಲಿ ಅಷ್ಟು ಭಯಂಕರವಾಗಿ ಕಾಣುವುದಿಲ್ಲ.

ಅಂಧಕಾರದಲ್ಲಿ ಹೋಗುತ್ತ ಬ್ರಹ್ಮಚಾರಿಯು ಅಕಸ್ಮಾತ್ತಾಗಿ ಮಾರ್ಗದ ಮಧ್ಯದಲ್ಲಿ ಅಮ್ಮಾ! ಎಂಬ ಶಬ್ದಸೂಚಕವಾದ ದೊಡ್ಡನಿಟ್ಟುಸಿರನ್ನು ಕೇಳಿದನು. ಶಬ್ದವು ವಿಜಾತಿಯಾಗಿತ್ತು. ಆದರೂ ಮನುಷ್ಯಕಂಠದಿಂದ ಹೊರಟಹಾಗೆ ಬೋಧೆಯಾಯಿತು. ಶಬ್ದವು ಅತಿಮೃದುವಾಗಿ ಅತಿಶಯವಾಗಿ ವ್ಯಥೆಯಿಂದ ಹೊರಟಹಾಗೆ ತೋರಿತು. ಬ್ರಹ್ಮಚಾರಿಯು ಮಾರ್ಗದಲ್ಲಿ ಹಾಗೆಯೇ ನಿಂತುಕೊಂಡನು. ಮಿಂಚುಬರಲೆಂದು ನಿಂತುಕೊಂಡನು. ನಿಮಿಷನಿಮಿಷಕ್ಕೂ ಮಿಂಚುತಲಿತ್ತು. ಆ ಬೆಳಕಿನಲ್ಲಿ ನೋಡಲಾಗಿ ಮಾರ್ಗದ ಪಾರ್ಶ್ವದಲ್ಲಿ ಏನೋ ಬಿದ್ದಿದ್ದಹಾಗೆ ಕಂಡಿತು. ಮನುಷ್ಯನು ಬಿದ್ದಿರಬೇಕೆಂದು ತಿಳಿದನು. ಮತ್ತೊಂದು ತಡವೆ ಮಿಂಚು ಬಂದಮೇಲೆ ಮನುಷ್ಯನೇ ಹೌದೆಂದು ಖಂಡಿತಮಾಡಿಕೊಂಡು, ಯಾರು ಮಾರ್ಗದಲ್ಲಿ ಬಿದ್ದಿರುವವರು? ಎಂದು ಕೇಳಿದನು. ಯಾರೂ ಉತ್ತರವನ್ನು ಕೊಡಲಿಲ್ಲ. ಪುನಃ ಕೂಗಿ ಕೇಳಿದನು. ಏನೋ ಅಸ್ಫುಟವಾದ ಸ್ವರವು ಕಿವಿಗೆಬಿತ್ತು. ಆಗ ಬ್ರಹ್ಮಚಾರಿಯು ಚೊಂಬು ಛತ್ರಿಗಳನ್ನು ನೆಲದಮೇಲೆ ಇಟ್ಟು, ಅತ್ತಕಡೆಹೋಗಿ ಕೈಯಿಂದ ತಡವರಿಸಿ ನೋಡಿದನು. ಸ್ವಲ್ಪದರಲ್ಲಿಯೇ ಒಂದು ಕೋಮಲವಾದ ಮನುಷ್ಯದೇಹವು ಕೈಗೆ ಸ್ಪರ್ಶವಾಯಿತು. ಯಾರಮ್ಮ! ನೀನು? ಎಂದು ತಲೆಯು ತುರುಬಿನಮೇಲೆ ಕೈಯಿಟ್ಟು ನೋಡಿ, ಹಾ, ದುರ್ಗೆ! ಇದಾರೋ ಹೆಂಗಸು ಎಂದು ಹೇಳಿಕೊಂಡನು.

ಆಗ ಬ್ರಹ್ಮಚಾರಿಯು ಉತ್ತರವನ್ನು ನಿರೀಕ್ಷಿಸದೆ ಮುಮೂರ್ಷು

ಅಥವಾ ಚೇತನಶೂನ್ಯಳಾದ ಆ ಹೆಂಗಸನ್ನು ಎತ್ತಿಕೊಂಡನು. ಛತ್ರಿ ಚೊಂಬು ಅಲ್ಲಿಯೇ ಬಿದ್ದಿದ್ದವು. ಬ್ರಹ್ಮಚಾರಿಯು ದೊಡ್ಡಮಾರ್ಗವನ್ನು ಬಿಟ್ಟು ಅಡ್ಡಹಾದಿಯಾಗಿ ಹೊರಟನು. ಅವನಿಗೆ ಆ ಪ್ರದೇಶದಲ್ಲಿ ಎಲ್ಲ ಸ್ಥಳಗಳೂ ಗೊತ್ತು. ಅಷ್ಟು ಬಲಿಷ್ಠನಲ್ಲ. ಆದರೂ ಆ ಸಾಯುತಲಿದ್ದ ಹೆಂಗಸನ್ನು ಒಂದು ಮಗುವಿನಹಾಗೆ ಎತ್ತಿಕೊಂಡು ಆ ಕಷ್ಟವಾದ ಅಡ್ಡಮಾರ್ಗವಾಗಿ ಹೋದನು. ಯಾರು ಪರೋಪಕಾರಿಯೋ ಪರರಪ್ರೇಮದಲ್ಲಿ ಬಲವಂತನಾಗಿದ್ದಾನೋ ಅಂತಹವನು ತನ್ನ ಶಾರೀರಕವಾದ ಬಲದ ಅಭಾವವನ್ನು ತಿಳಿಯುವುದಿಲ್ಲ.

ಬ್ರಹ್ಮಚಾರಿಯು ಊರುಮುಂದೆ ಒಂದು ಪರ್ಣಕುಟೀರದ ಬಾಗಲನಲ್ಲಿ ನಿಂತು, ಮಗು, ಹರೆ, ಬಾಗಲುತೆಗಿ, ಎಂದು ಕೂಗಿದನು. ಒಳಗಿನಿಂದ ಒಬ್ಬ ಹೆಂಗಸು, ಧ್ವನಿಯು ಗೊತ್ತಾಯಿತು; ತಾವು ಯಾವಾಗ ದಯಮಾಡಿಸಿದಿರಿ, ಎಂದು ಕೇಳಿದಳು.

ಬ್ರಹ್ಮಚಾರಿಯು ಈಗ ತಾನೇ ಬಂದೆ, ಬೇಗನೆ ಬಾಗಲು ತೆಗಿ; ಬಹಳ ತೊಂದರೆಯಾಗಿದೆ ಎಂದನು.

ಹರಮಣಿಯು ಬಂದು ಬಾಗಲು ತೆಗೆದಳು. ಬ್ರಹ್ಮಚಾರಿಯು ದೀಪವನ್ನು ಹಚ್ಚೆಂದು ಅವಳಿಗೆ ಹೇಳಿ ಮೆಲ್ಲಮೆಲ್ಲಗೆ ತಾನು ಎತ್ತಿಕೊಂಡು ಬಂದಿದ್ದ ಹೆಂಗಸನ್ನು ಮನೆಯೊಳಗೆ ನೆಲದಮೇಲೆ ಮಲಗಿಸಿದನು. ಹರಮಣಿಯು ದೀಪವನ್ನು ಹಚ್ಚಿ ಆ ಸಾಯುತಲಿದ್ದ ಹೆಂಗಸಿನ ಹತ್ತಿರತಂದು ಅವರಿಬ್ಬರೂ ಅವಳನ್ನು ಚನ್ನಾಗಿ ನೋಡಿದರು.

ನೋಡಲಾಗಿ ಹೆಂಗಸು ವಯಸ್ಸು ಹೋದವಳಹಾಗಿರಲಿಲ್ಲ. ಆದರೆ ಅವಳ ಆಗಿನ ಅವಸ್ಥೆಯಲ್ಲಿ ಅವಳ ವಯಸ್ಸು ಇಷ್ಟೆಂದು ಹೇಳಲಾಗದು. ಶರೀರವು ಅತ್ಯಂತ ಶೀರ್ಣವಾಗಿತ್ತು. ಸಾಂಘಾತಿಕರೋಗಲಕ್ಷಣಗಳು ಕಂಡವು. ಕಾಲಾನುಕಾಲದಲ್ಲಿ ಸೌಂದರ್ಯವುಳ್ಳುವಳಾಗಿದ್ದರೂ ಇರಬಹುದು;

ಆದರೆ ಈಗ ಸೌಂದರ್ಯದ ಗುರತುಕೂಡ ಇಲ್ಲ. ಒದ್ದೆಬಟ್ಟೆ; ಅತ್ಯಂತಮಲಿನವಾದುದು, ಚಿಂದಿಚಿಂದಿಯಾಗಿತ್ತು. ತಲೆಯ ಕೂದಲು ಜಡೆಕಟ್ಟಿಹೋಗಿದೆ. ಬಾಚಣಿಗೆಯನ್ನೇ ಕಂಡಿಲ್ಲ. ಕಣ್ಣುಗಳು ಗುಂಡಿಗೆ ಇಳಿದುಹೋಗಿವೆ. ಕಣ್ಣುಮುಚ್ಚಿತ್ತು. ಉಸುರುಆಡುತಲಿತ್ತು. ಆದರೆ ಪ್ರಜ್ಞೆಯಿಲ್ಲ. ಮೃತ್ಯುವು ಸನ್ನಿಹಿತವಾಗಿದ್ದಹಾಗಿತ್ತು.

ಹರಮಣಿಯು, ಇವಳೆಲ್ಲಿ ಸಿಕ್ಕಿದಳೆಂದು ಕೇಳಿದಳು.

ಬ್ರಹ್ಮಚಾರಿಯು ಎಲ್ಲ ಸಂಗತಿಯನ್ನು ವಿಸ್ತಾರವಾಗಿ ಹೇಳಿ, ಇವಳಿಗೆ ಮರಣವು ಒದಗಿದೆ ಎಂದು ತೋರುತ್ತದೆ; ಆದರೆ ಸ್ವಲ್ಪ ಶಾಕವನ್ನು ಕೊಟ್ಟರೆ ಬದುಕಿದರೂ ಬದುಕಿಕೊಳ್ಳಬಹುದು, ನಾನು ಹೇಳಿದ ಹಾಗೆ ಮಾಡೆಂದು ಹೇಳಿದನು.

ಆಗ ಹರಮಣಿಯು ಬ್ರಹ್ಮಚಾರಿಯು ಹೇಳಿದಹಾಗೆ ಅವಳ ಒದ್ದೇಬಟ್ಟೆಯನ್ನು ತೆಗದು ತನ್ನ ಸ್ವಂತ ಒಂದು ಸೀರೆಯನ್ನುಡಿಸಿ ತಲೆಯನ್ನೊರಿಸಿ, ಬೆಂಕಿಯನ್ನು ಮಾಡಿ ಅವಳಿಗೆ ಶಾಕವನ್ನು ಕೊಟ್ಟಳು. ಬ್ರಹ್ಮಚಾರಿಯು, ಇವಳಿಗೆ ಅನ್ನಸಂಕಟವಿರುವಹಾಗೆ ಕಾಣುತ್ತದೆ; ಹಾಲು ಇದ್ದರೆ ಸ್ವಲ್ಪ ಹಾಲನ್ನು ಕೊಡೆಂದನು.

ಹರಮಣಿಯು ಹಾಲನ್ನು ಕಾಸಿ ಸ್ವಲ್ಪ ಕುಡಿಸಿದಳು. ಹೊಟ್ಟೆಗೆ ಹಾಲು ಬಿಳೋಣ, ಅವಳು ಕಣ್ಣುತೆರೆದಳು.

ಹರಮಣಿ–ಅಮ್ಮ! ನೀನೆಲ್ಲಿಂದ ಬಂದೆಯೆ?

ರೋಗಿ–ನಾನೆಲ್ಲಿದ್ದೇನೆ?

ಬ್ರಹ್ಮಚಾರಿ–ನೀನು ಮಾರ್ಗದಲ್ಲಿ ಸಾಯುವುದಕ್ಕೆ ಬಿದ್ದಿದ್ದೆ. ನಾನು ಕರೆತಂದೆ. ನೀನು ಎಲ್ಲಿಗೆ ಹೋಗಬೇಕು?

ರೋಗಿ–ಬಹಳದೂರ.

ಹರಮಣಿ–ನಿನ್ನ ಕೈಯಲ್ಲಿ ಬಳೆಯಿದೆ; ನೀನು ಮುತ್ತೈದೆ? ರೋಗಿ

ಯು ಹುಬ್ಬುಗಂಟುಹಾಕಿಕೊಂಡಳು. ಹರಮಣಿಯು ಅಪ್ರತಿಭಳಾದಳು.

ಬ್ರಹ್ಮಚಾರಿಯು, ಅಮ್ಮ! ನಿನ್ನನ್ನು ಏನೆಂದು ಕರೆಯಬೇಕು? ನಿನ್ನ ಹೆಸರೇನು? ಎಂದನು.

ಆ ಅನಾಥಿನಿಯು ಸ್ವಲ್ಪ ಹಿಂದುಮುಂದು ನೋಡಿ, ನನ್ನ ಹೆಸರು ಸೂರ್ಯಮುಖಿಯೆಂದಳು.

---

## ಮುವ್ವತ್ತೈದನೆಯ ಪರಿಚ್ಛೇದ

### ಆ ಶಾ ಪ ಥ ದ ಲ್ಲಿ .

ಸೂರ್ಯಮುಖಿಯು ಉಳಿಯುವ ಆಶೆಯಿರಲಿಲ್ಲ. ಬ್ರಹ್ಮಚಾರಿಯು ಅವಳ ರೋಗವನ್ನು ಅರಿಯಲಾರದೆ ಮರುದಿನ ವೈದ್ಯಶಾಸ್ತ್ರದಲ್ಲಿ ದೊಡ್ಡ ಪಂಡಿತನಾಗಿ ಗ್ರಾಮದಲ್ಲಿ ಬಹಳ ಪ್ರಖ್ಯಾತಿಗೊಂಡಿದ್ದ ವೈದ್ಯನನ್ನು ಕರೆಸಿ ತೋರಿಸಿದನು. ಅವನು ನೋಡಿ ಇವಳಿಗೆ ಉಬ್ಬಸರೋಗ, ಅದರಮೇಲೆ ಜ್ವರವೂ ಬಂದಿದೆ; ರೋಗವೇನೋ ಪ್ರಬಲವಾದುದು, ಬದುಕಿದರೂ ಬದುಕಿಕೊಳ್ಳಬಹುದೆಂದು ಹೇಳಿದನು.

ಈ ಮಾತುಗಳು ಸೂರ್ಯಮುಖಿಯ ಕಿವಿಗೆ ಬೀಳದೆ ನಡೆದವು. ವೈದ್ಯ ರಾಮಕೃಷ್ಣರಾಯನು ಔಷಧವನ್ನು ಹೇಳಿದನು. ರೋಗಿ ಅನಾಥಳೆಂದು ತಿಳಿದು ಪಾರಿತೋಷಕದ ಮಾತು ಎತ್ತಲಿಲ್ಲ. ರಾಮಕೃಷ್ಣರಾಯನು ಅರ್ಥಪಿಶಾಚಿಯಾಗಿರಲಿಲ್ಲ. ಔಷಧವನ್ನು ಕೊಟ್ಟುಬಿಟ್ಟು ವೈದ್ಯನು ಹೊರಟು ಹೋದನು. ಬ್ರಹ್ಮಚಾರಿಯು ಹರಮಣಿಯನ್ನು ಬೇರೆಕೆಲಸಕ್ಕೆ ಕಳುಹಿಸಿಬಿಟ್ಟನು. ಅಲ್ಲಿಂದ ಬಂದು ಸೂರ್ಯಮುಖಿಯ ಸಂಗಡ ಮಾತನಾಡಲು ಅವಳ ಹತ್ತಿರ ಬಂದು ಕೂತನು.

ಸೂರ್ಯಮುಖಿ—ತಾವು ನನಗೋಸ್ಕರ ಇಷ್ಟು ಕಷ್ಟಪಡಬೇಕೇಕೆ? ನನಗೋಸ್ಕರ ಶ್ರಮತೆಗೆದುಕೊಳ್ಳುವುದು ಪ್ರಯೋಜನವಿಲ್ಲ.

ಬ್ರಹ್ಮಚಾರಿ—ನನಗೇನು ಶ್ರಮ? ಇದೇ ನನ್ನ ಕೆಲಸವಾಗಿದೆ. ನನಗೆ ಯಾರೂ ಇಲ್ಲ. ನಾನು ಬ್ರಹ್ಮಚಾರಿ. ಪರೋಪಕಾರವನ್ನು ಮಾಡುವುದು ನನ್ನ ಧರ್ಮವಾಗಿದೆ. ಈ ಹೊತ್ತು ನಿನ್ನ ಕೆಲಸವು ಸಿಕ್ಕದಿದ್ದರೆ ನಿನ್ನಹಾಗೆ ಮತ್ತಾರಾದರೂ ಸಿಕ್ಕಿ ಅವರ ಕೆಲಸದಲ್ಲಿರುತಲಿದ್ದೆನು.

ಸೂರ್ಯಮುಖಿ—ಹಾಗಾದರೆ ನನ್ನನ್ನು ಇಲ್ಲಿ ಬಿಟ್ಟುಬಿಟ್ಟು ಮತ್ತಾರಿಗಾದರೂ ಉಪಕಾರವನ್ನು ಮಾಡಲು ಹೋಗೋಣಾಗಲಿ, ಇತರರಿಗೆ ಉಪಕಾರ ಮಾಡಿದರೆ ಸಾರ್ಥಕವಾಗುವುದು. ನನಗೆ ಮಾಡುವುದು ವ್ಯರ್ಥ.

ಬ್ರಹ್ಮಚಾರಿ—ಏತಕ್ಕೆ?

ಸೂರ್ಯಮುಖಿ—ನಾನು ಬದುಕಿಕೊಂಡರೆ ನನಗೇನೂ ಉಪಕಾರವಾಗುವುದಿಲ್ಲ. ಮರಣವೇ ನನಗೆ ಮಂಗಳಕರವಾಗಿರುವುದು. ನಾನು ನೆನ್ನೆ ರಾತ್ರಿ ಬಿದ್ದಲ್ಲಿ ಸಾಯುವೆನೆಂದು ಬಹಳ ಆಶೆಯಿತ್ತು-ತಾವು ಏತಕ್ಕೆ ನನ್ನನ್ನು ಬದುಕಿಸಿಕೊಳ್ಳೋಣಾಯಿತು?

ಬ್ರಹ್ಮಚಾರಿ—ನಿನಗೆ ಇಷ್ಟು ದುಃಖವೇತಕ್ಕೋ ನನಗೆ ಗೊತ್ತಿಲ್ಲ ಆದರೆ ಎಷ್ಟು ದುಃಖವಿದ್ದರೂ ಆತ್ಮಹತ್ಯೆ ಮಾಡಿಕೊಳ್ಳುವುದು ಮಹಾಪಾಪ. ಯಾವಾಗಲೂ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಡ. ಆತ್ಮಹತ್ಯವು ಪರಹತ್ಯೆಯ ಹಾಗೆ ಪಾಪಕರವಾದುದು.

ಸೂರ್ಯಮುಖಿ—ನಾನು ಆತ್ಮಹತ್ಯೆಯ ಪ್ರಯತ್ನವನ್ನು ಮಾಡಲಿಲ್ಲ. ನನ್ನ ಮೃತ್ಯುವು ತಾನಾಗಿಯೇ ಬದಗಿತ್ತು. ಆದಕಾರಣ ನಾನು ಸಾಯುವೆನೆಂದು ಭರವಸೆಯುಳ್ಳವಳಾಗಿದ್ದೆನು. ಆದರೆ ಮರಣದಲ್ಲಿಯೂ ನನಗೆ ಆನಂದವಿಲ್ಲ.

ಮರಣದಲ್ಲಿಯೂ ಆನಂದವಿಲ್ಲವೆಂದು ಹೇಳಿದಾಗ ಸೂರ್ಯಮುಖಿಯು ಕಂಠವು ರುದ್ಧವಾಗಿ ಕಣ್ಣುಗಳಿಂದ ನೀರುಬಿತ್ತು.

ಬ್ರಹ್ಮಚಾರಿ—ಸಾಯಬೇಕೆಂದು ಹೇಳುವಾಗೆಲ್ಲ ನಿನ್ನ ಕಣ್ಣುಗಳಿಂದ ನೀರು ಸುರಿಸುತ್ತಿ; ಆದರೂ ಸಾವನ್ನೇ ಕೋರುತ್ತಿ. ತಾಯಿ! ನಾನು ನಿನ್ನ ಮಗನ ಹಾಗೆ. ನನ್ನಲ್ಲಿ ಪುತ್ರವಾತ್ಸಲ್ಯವಿಟ್ಟು ನಿನ್ನ ಮನಸ್ಸಿನಲ್ಲಿರುವುದನ್ನು ಹೇಳು. ನಿನ್ನ ದುಃಖನಿವಾರಣಕ್ಕೆ ಉಪಾಯವಿದ್ದರೆ ಅದನ್ನು ಮಾಡುವೆನು. ಇದನ್ನು ಕೇಳುವುದಕ್ಕೋಸ್ಕರವೇ ನಾನು ಹರಮಣಿಯನ್ನು ಹೊರಕ್ಕೆ ಕಳುಹಿಸಿಬಿಟ್ಟೆನು. ಈಗ ಇಲ್ಲಿ ಯಾರೂ ಇಲ್ಲ. ನಿನ್ನ ಮಾತುಕಥೆಯನ್ನು ನೋಡಿದರೆ ನೀನು ದೊಡ್ಡಮನೆತನದವಳೆಂದು ತೋರುತ್ತದೆ. ನಿನಗೇನೋ ಉತ್ಕಟವಾದ ಮನಸ್ಸಿನ ವ್ಯಥೆಯು ಇರುವ ಹಾಗೆ ಕಾಣುತ್ತದೆ. ನನ್ನ ಸಂಗಡ ಅದು ಹೇಳತಕ್ಕದಲ್ಲವೆ? ನನ್ನನ್ನು ನಿನ್ನ ಮಗನೆಂದು ತಿಳಿದು ಹೇಳು.

ಸೂರ್ಯಮುಖಿ—(ಕಣ್ಣೀರುತುಂಬಿದವಳಾಗಿ) ಈಗ ಸಾಯುವುದರಲ್ಲಿದ್ದೇನೆ. ಈಗ ಲಜ್ಜೆಪಡಲೇತಕ್ಕೆ? ನನ್ನ ಮನಸ್ಸಿನ ದುಃಖವೇನೂ ಅಂತಹದುದಲ್ಲ. ಸಾಯುವಾಗ ನನ್ನ ಸ್ವಾಮಿಯ ಮುಖವನ್ನು ನೋಡದೆ ಹೋಗುತ್ತೇನೆಂಬ ಸಂಕಟವೇ ಹೆಚ್ಚಾಗಿದೆ. ಮರಣದಲ್ಲಿಯೇ ನನಗೆ ಸುಖ. ಆದರೆ ಅವರನ್ನು ನೋಡದೆ ಸಾಯುವದಾದರೆ ಮರಣದಲ್ಲಿ ನನಗೆ ದುಃಖವುಂಟಾಗುತ್ತದೆ. ಈ ವೇಳೆಯಲ್ಲಿ ಅವರನ್ನು ಒಂದುತಡವೆ ನೋಡಬಲ್ಲೆನಾದರೆ ನನಗೆ ಮರಣವೇ ಸುಖ.

ಬ್ರಹ್ಮಚಾರಿ—(ಕಣ್ಣೊರಿಸಿಕೊಂಡು)—ನಿನ್ನ ಸ್ವಾಮಿ ಯಿರುವುದು ಎಲ್ಲಿ? ಈಗ ನಿನ್ನನ್ನು ಅವನ ಬಳಿಗೆ ಕರೆದುಕೊಂಡು ಹೋಗುವುದಕ್ಕಾಗದು. ಅವನು ಈಗ ಸಮಾಚಾರವನ್ನು ತಿಳಿದುಬರುವನಾದರೆ ಅವನಿಗೆ ಕಾಗದವನ್ನು ಬರೆದು ಸಮಾಚಾರವನ್ನು ಕೊಡುವೆನು.

ಸೂರ್ಯಮುಖಿಯ ರೋಗದಿಂದ ಕ್ಲಿಷ್ಟವಾದ ಮುಖದಲ್ಲಿ ಹರ್ಷವು ವಿಕಾಸವಾಯಿತು. ಪುನಃ ಭಗ್ನೋತ್ಸಾಹಳಾಗಿ, ಅವರು ಬಂದರೂ ಬರ ಬಹುದು. ಆದರೆ ಬರುವರೋ ಇಲ್ಲವೋ ನನಗೆ ಗೊತ್ತಿಲ್ಲ. ನಾನು ಅವ ರಲ್ಲಿ ಗುರುತರವಾದ ಅಪರಾಧವನ್ನು ಮಾಡಿದ್ದೇನೆ. ಆದರೂ ಅವರು ನನ್ನ ವಿಚಾರದಲ್ಲಿ ದಯಾಮಯರಾಗಿದ್ದಾರೆ. ಕ್ಷಮಿಸಿದರೂ ಕ್ಷಮಿಸಬಹುದು. ಆದ ರೆ ಅವರು ಬಹಳ ದೂರದಲ್ಲಿದ್ದಾರೆ. ನಾನು ಅಷ್ಟುದಿನ ಬದುಕಿರುವೆನೆ? ಎಂದಳು.

ಬ್ರಹ್ಮಚಾರಿ—ಅವರು ಇರುವುದು ಎಷ್ಟುದೂರ?

ಸೂರ್ಯಮುಖಿ—ಹರಿಪುರಜಿಲ್ಲೆ.

ಬ್ರಹ್ಮಚಾರಿ—ಬದುಕಿರುವೆ.

ಹೀಗೆಂದು ಹೇಳಿ ಬ್ರಹ್ಮಚಾರಿಯು ಕಾಗದ, ದೌತಿ, ಲೇಖಣಿಯನ್ನು ತಂದು ಸೂರ್ಯಮುಖಿಯು ಹೇಳಿದಪ್ರಕಾರ ಕಾಗದವನ್ನು ಬರೆದನು.

ಕಾಗದ:—ನಾನು ತಮ್ಮಲ್ಲಿ ಅಪರಿಚಿತನು. ನಾನು ಬ್ರಾಹ್ಮಣ— ಬ್ರಹ್ಮಚರ್ಯಾಶ್ರಮದಲ್ಲಿದ್ದೇನೆ. ತಾವು ಯಾರೋ ನನಗೆ ತಿಳಿಯದು. ಶ್ರೀಮತೀಸೂರ್ಯಮುಖಿಯು ತಮ್ಮ ಭಾರ್ಯೆಯೆಂದು ಮಾತ್ರ ತಿಳಿದಿದ್ದೇನೆ. ಆಕೆಯು ಈ ಮಧುಪುರಗ್ರಾಮದಲ್ಲಿ ಸಂಕಟಕರವಾದ ರೋಗಗ್ರಸ್ತಳಾಗಿ ಹರಮಣಿ ವೈಷ್ಣವಿಯ ಮನೆಯಲ್ಲಿದ್ದಾಳೆ. ಅವಳ ಚಿಕಿತ್ಸೆಯು ನಡೆಯುತ ಲಿದೆ.—ಆದರೆ ಉಳಿಯುವ ಹಾಗೆ ತೋರುವುದಿಲ್ಲ— ಈ ಸಮಾಚಾರವನ್ನು ತಿಳಿಸಲು ತಮಗೆ ಈ ಕಾಗದವನ್ನು ಬರೆದಿದ್ದೇನೆ. ಅವಳು ಮರಣಕಾಲ ದಲ್ಲಿ ಬಂದುಸಲ ತಮ್ಮ ಸಂದರ್ಶನವನ್ನು ಮಾಡಿ ಪ್ರಾಣತ್ಯಾಗವನ್ನು ಮಾಡ ಬೇಕೆಂದು ಇಷ್ಟವುಳ್ಳವಳಾಗಿದ್ದಾಳೆ. ತಾವು ಅವಳ ಅಪರಾಧವನ್ನು ಕ್ಷಮಿಸಬಹುದಾಗಿದ್ದರೆ ಈ ಸ್ಥಳಕ್ಕೆ ಬರಬಹುದು. ನಾನು ಸೂರ್ಯಮುಖಿ ಯನ್ನು ನನ್ನ ತಾಯಿಯಂತೆ ಸಂಬೋಧನೆಮಾಡುತ್ತೇನೆ. ಅವಳ ಪುತ್ರನ

ಹಾಗೆ ಅವಳ ಅಪ್ಪಣೆಯಪ್ರಕಾರ ಈ ಕಾಗದವನ್ನು ಬರೆದಿದ್ದೇನೆ. ಅವಳಿಗೆ ಸ್ವಂತವಾಗಿ ಬರೆಯಲು ಶಕ್ತಿಯಿಲ್ಲ.

ತಮಗೆ ಬರುವ ಅಭಿಪ್ರಾಯವಿದ್ದರೆ ರಾಣೀಗಂಜಮಾರ್ಗವಾಗಿ ಬರಬೇಕು. ರಾಣೀಗಂಜನಲ್ಲಿ ವಿಚಾರಿಸಿ ಶ್ರೀಮನ್ ಮಾಧವಚಂದ್ರಗೋಸ್ವಾಮಿಗಳನ್ನು ನೋಡಿದರೆ ಮಧುಪುರಕ್ಕೆ ದಾರಿಯನ್ನು ಹುಡುಕುಬೇಕಾಗುವುದಿಲ್ಲ.

ಬರುವದಾದರೆ ಜಾಗ್ರತೆಯಾಗಿ ಬರಬೇಕು. ಸಾವಕಾಶವಾದರೆ ಅಭೀಷ್ಟಸಿದ್ಧಿಯಾಗದು—ಇತಿ.

ಆಶೀರ್ವಾದ ಶ್ರೀಶಿವಪ್ರಸಾದಶರ್ಮಣಃ.

ಕಾಗದವನ್ನು ಬರೆದು, ಮೇಲ್ವಿಳಾಸ ಏನೆಂದು ಬರೆಯಬೇಕೆಂದು ಕೇಳಿದನು. ಸೂರ್ಯಮುಖಿಯು ಹರಮಣಿಯು ಬರುತ್ತಲೇ ಹೇಳುತ್ತೇನೆಂದಳು.

ಹರಮಣಿಯು ಬಂದಮೇಲೆ, ನಾಗೇಂದ್ರನಾಥನಿಗೆ ಎಂದು ಮೇಲ್ವಿಳಾಸ ಬರೆದು ಬ್ರಹ್ಮಚಾರಿಯು ಕಾಗದವನ್ನು ಹತ್ತಿರದಲ್ಲಿದ್ದ ಪೋಷ್ಟಾಫೀಸಿಗೆ ಕೊಟ್ಟನು.

ಬ್ರಹ್ಮಚಾರಿಯು ಕಾಗದವನ್ನು ಅಂಚೆಗೆ ಕೊಡಲು ಹೋದಮೇಲೆ ಸೂರ್ಯಮುಖಿಯು ಕಣ್ಣೀರು ತುಂಬಿದವಳಾಗಿ, ಕೈಮುಗಿದುಕೊಂಡು ಊರ್ಧ್ವಮುಖಳಾಗಿ ಜಗದೀಶ್ವರನನ್ನು ಕುರಿತು, ಮನೋವಾಕ್ಕಾಯಕರ್ಮಗಳಿಂದ ಹೆ, ಪರಮೇಶ್ವರ! ನೀನು ಇರುವುದು ನಿಜವಾಗಿದ್ದರೆ, ನಾನು ಚಿರಕಾಲದಿಂದ ನನ್ನ ಸ್ವಾಮಿಯ ಚರಣವನ್ನು ಹೊರ್ತು ಬೇರೆ ಅವಲಂಬನವಿಲ್ಲದೆ ಪತಿಭಕ್ತಿಯುಳ್ಳವಳಾಗಿದ್ದರೆ, ಈ ಕಾಗದವು ಸಫಲವಾಗಲಿ; ಇಹದಲ್ಲಿ ಪುಣ್ಯವೆಂಬುದು ಇದ್ದರೆ ಆ ಪುಣ್ಯದ ಫಲಸ್ವರೂಪವಾಗಿ ನಾನು ಸ್ವರ್ಗವನ್ನು ಅಪೇಕ್ಷಿಸುವುದಿಲ್ಲ; ಮರಣಕಾಲದಲ್ಲಿ ಸ್ವಾಮಿಯಮುಖವನ್ನು ನೋಡಿ

ಸಾಯಬೇಕೆಂದು ಮಾತ್ರ ಆಶೆಯುಳ್ಳವಳಾಗಿದ್ದೇನೆ; ನನಗೆ ಮತ್ತೇನೂ ಬೇಡವೆಂದು ಪ್ರಾರ್ಥಿಸಿದಳು.

ಆದರೆ ಕಾಗದವು ನಾಗೇಂದ್ರನಿಗೆ ತಲಪಲಿಲ್ಲ. ಕಾಗದವು ಗೋವಿಂದ ಪುರಕ್ಕೆ ತಲ್ಪುವುದಕ್ಕೆ ಮುಂಚಿತವಾಗಿಯೇ ನಾಗೇಂದ್ರನು ದೇಶತಿರುಗುವು ದಕ್ಕೆ ಹೊರಟುಹೋಗಿದ್ದನು. ಅಂಚೆಜವಾನನು ಕಾಗದವನ್ನು ದಿವಾನನ ಕೈಯಲ್ಲಿ ಕೊಟ್ಟುಬಿಟ್ಟನು.

ನಾಗೇಂದ್ರನು ದಿವಾನನಿಗೆ, ನಾನು ಒಂದು ಸ್ಥಳಸೇರುತ್ತಲೇ ಅಲ್ಲಿಂದ ಕಾಗದ ಬರೆಯುವೆನು, ಅದುವರೆಗೆ ನನ್ನ ಹೆಸರಿನ ಕಾಗದವನ್ನು ತೆಗೆದು ಇಟ್ಟುಕೊಂಡಿದ್ದು ನನ್ನ ಕಾಗದ ಬರುತ್ತಲೇ ಅದರಂತೆ ನನ್ನ ಹೆಸರಿನ ಕಾ ಗದಗಳನ್ನು ಕಳುಹಿಸಬೇಕೆಂದು ಹೇಳಿಹೋಗಿದ್ದನು. ಇದಕ್ಕೆ ಮೊದಲು ಪಾಟ್ಣಾನಗರದಿಂದ ಹಡಗಿನಮೇಲೆ ಏರಿ ಕಾಶೀಯಾತ್ರೆ ಹೊರಡುತ್ತೇನೆಂದು ಬರೆದಿದ್ದನು. ಕಾಶೀಕ್ಷೇತ್ರವನ್ನು ತಲ್ಪಿ ಕಾಗದಬರುವ ನಿರೀಕ್ಷಣೆಯಿಂದ ದಿವಾನನು ಬ್ರಹ್ಮಚಾರಿಯ ಕಾಗದವನ್ನು ಪೆಟ್ಟಿಗೆಯಲ್ಲಿಟ್ಟುಕೊಂಡಿದ್ದನು.

ಯಥಾಕಾಲದಲ್ಲಿ ನಾಗೇಂದ್ರನು ಕಾಶೀಧಾಮವನ್ನು ಸೇರಿ ದಿವಾನನಿಗೆ ಸಮಾಚಾರವನ್ನು ಕೊಟ್ಟನು. ಆಗ ದಿವಾನನು ಬೇರೆಕಾಗದಗಳ ಜತೇಲಿ ಬ್ರಹ್ಮಚಾರಿಯ ಕಾಗದವನ್ನು ಕಳುಹಿಸಿದನು. ನಾಗೇಂದ್ರನು ಕಾಗದವ ನ್ನೋದಿ ಅಭಿಪ್ರಾಯವನ್ನು ತಿಳಿದವನಾಗಿ ಕೈಯಿಂದ ತಲೆಯನ್ನು ಹಿಡಿದು ಕೊಂಡು ಕಾತರನಾಗಿ, ಜಗದೀಶ್ವರ! ಇನ್ನೊಂದು ಮುಹೂರ್ತದವಟ್ಟಿಗೆ ನನಗೆ ಚೈತನ್ಯವು ಇರಲೆಂದು ಬೇಡಿದನು. ಪ್ರಾರ್ಥನೆಯು ಜಗದೀಶ್ವರ ನಿಗೆ ತಲ್ಪಿತು. ಒಂದು ಮುಹೂರ್ತದವರೆಗೆ ನಾಗೇಂದ್ರನಿಗೆ ಚೈತನ್ಯವಿತ್ತು. ಕಾರ್ಯಾಧ್ಯಕ್ಷನನ್ನು ಕರೆದು, ಈ ರಾತ್ರಿಯಲ್ಲಿಯೇ ನಾನು ರಾಣೀಗಂಜಿಗೆ ಹೊರಡುವೆನು; ಎಷ್ಟು ವೆಚ್ಚವಾದರೂ ಅದರ ಏರ್ಪಾಡುಮಾಡಬೇಕೆಂದು ಹೇಳಿದನು.

ಕಾರ್ಯಾಧ್ಯಕ್ಷನು ಅದರ ಏರ್ಪಾಡುಮಾಡುವುದಕ್ಕೆ ಹೊರಟುಹೋದನು. ನಾಗೇಂದ್ರನು ನೆಲದಮೇಲೆ ಬಿದ್ದು ಅಚೇತನನಾದನು.

ಆರಾತ್ರಿಯೇ ನಾಗೇಂದ್ರನು ಕಾಶೀಯನ್ನು ಹಿಂದೆಬಿಟ್ಟನು. ಭುವನಸುಂದರವಾದ ವಾರಾಣಸಿನಗರಿ! ಯಾವಸುಖಿಪುರುಷನುತಾನೇ ಈಶಾರದರಾತ್ರಿಯಲ್ಲಿ ತೃಪ್ತಲೋಚನನಾಗಿ ನಿನ್ನನ್ನು ಹಿಂದೆಬಿಟ್ಟು ಬರುವುದಕ್ಕೆ ಇಷ್ಟಪಡುವನು? ರಾತ್ರಿ, ಚಂದ್ರನಿಲ್ಲ. ಆಕಾಶದಲ್ಲಿ ಸಹಸ್ರಸಹಸ್ರ ನಕ್ಷತ್ರಗಳು ಜ್ವಲಿಸುತಲಿವೆ. ಗಂಗೆಯ ಹೃದಯದಲ್ಲಿ ದೋಣಿಯಮೇಲೆ ನಿಂತು ಯಾವದಿಕ್ಕಿನಲ್ಲಿ ನೋಡಿದರೂ ಆ ದಿಕ್ಕಿನಲ್ಲಿ ನಕ್ಷತ್ರ! ಅನಂತವಾದ ತೇಜಸ್ಸಿನಿಂದ ಅನಂತಕಾಲದಿಂದ ಜ್ವಲಿಸುತಲಿದೆ. ಅವಿರತವಾಗಿ ಜ್ವಲಿಸುತ್ತದೆ. ವಿರಾಮವೇ ಇಲ್ಲ. ಭೂತಲದಲ್ಲಾದರೋ, ಎರಡನೆಯ ಆಕಾಶ! ನೀಲಾಂಬರದಹಾಗೆ ಸ್ಥಿರನೀಲವಾದ ನದೀಹೃದಯ; ತೀರದಲ್ಲಿಯೂ ಸೋಪಾನಗಳಲ್ಲಿಯೂ ಅನಂತವಾದ ಪರ್ವತದ ಶ್ರೇಣಿಯಹಾಗಿರುವ ಉಪ್ಪರಿಗೆಗಳಲ್ಲಿಯೂ ಸಹಸ್ರ ಸಹಸ್ರ ದೀಪಗಳು ಪ್ರಜ್ವಲಿಸುತಲಿವೆ. ಪ್ರಾಸಾದದಮೇಲೆ ಪ್ರಾಸಾದ, ಆದಾದಮೇಲೆ ಮತ್ತೂ ಪ್ರಾಸಾದ, ಹೀಗೆ ದೀಪಸಮೂಹದಿಂದ ಶೋಭಿಸುವ ಅನಂತವಾದ ಪ್ರಾಸಾದಶ್ರೇಣಿ. ಮತ್ತು ಆ ಸ್ವಚ್ಛವಾದ ನೀಲವಾದ ನೀರಿನಲ್ಲಿ ಪ್ರತಿಬಿಂಬಿತವಾದ ಆ ಆಕಾಶ, ಆ ನಗರ-ಎಲ್ಲವೂ ಜ್ಯೋತಿರ್ಬಿಂದುಮಯವಾಗಿದೆ. ನೋಡಿ ನಾಗೇಂದ್ರನು ಕಣ್ಣುಮುಚ್ಚಿಕೊಂಡನು. ಪೃಥಿವಿಯ ಸೌಂದರ್ಯವನ್ನು ನೋಡಿ ಅವನು ಇಂದು ಸಹಿಸಲಾರನು. ಶಿವಪ್ರಸಾದ ಬ್ರಹ್ಮಚಾರಿಯು ಕಾಗದ ಬಹಳ ಸಾವಕಾಶವಾಗಿ ತನಗೆ ಬಂತೆಂದು ತಿಳಿದನು. ಈಗ ಸೂರ್ಯಮುಖಿಯು ಎಲ್ಲಿರುವಳು?

## ಮೂವತ್ತಾರನೆಯ ಪರಿಚ್ಛೇದ.

### ಹೀರೆಯ ವಿಷವೃಕ್ಷವು ಮುಕುಳಿತವಾಯಿತು.

ಯಾವದಿನ ದ್ವಾರಪಾಲಕರು ಬಿದರು ದೊಣ್ಣೆಗಳನ್ನು ತೆಗೆದುಕೊಂಡು ಹೋಗಿ ದೇವೇಂದ್ರನನ್ನು ಉದ್ಯಾನದಿಂದ ಓಡಿಸಿದರೋ ಆದಿನ ಹೀರೆಯು ಮನಸ್ಸಿನಲ್ಲಿ ನಗುತ್ತಿದ್ದಳು. ಆದರೆ ಅದಾದಮೇಲೆ ಅದಕ್ಕೋಸ್ಕರ ಬಹಳ ಪಶ್ಚಾತ್ತಾಪಪಟ್ಟಳು. ಅವಳು ಮನಸ್ಸಿನಲ್ಲಿ, ಅವನನ್ನು ಅಪಮಾನಪಡಿಸಿದ್ದುದು ಸರಿಯಲ್ಲ. ಅವನು ನನ್ನಮೇಲೆ ಎಷ್ಟು ಕೋಪಗೊಂಡಿದ್ದಾನೋ ? ನಾನರಿಯೆ. ಅವನು ತನ್ನ ಮನಸ್ಸಿನಲ್ಲಿ ನನಗೆ ಸ್ಥಳಕೊಟ್ಟಿಲ್ಲವೆಂಬದು ಗೊತ್ತಾಯಿತು. ನನ್ನ ಭರವಸೆಯೆಲ್ಲಾ ದೂರವಾಯಿತೆಂದಂದುಕೊಂಡಳು.

ದೇವೇಂದ್ರನೂ ಸಹ ಹೀರೆಗೆ ದಂಡವಿಧಾನಮಾಡಬೇಕೆಂಬ ಅವನ ದುರ್ಬುದ್ಧಿಯಿಂದ ಹುಟ್ಟಿದ ಕೆಟ್ಟ ಅಭಿಲಾಷೆಯನ್ನು ಕೈಗೊಳ್ಳುವುದಕ್ಕೆ ಪ್ರವೃತ್ತನಾದನು. ಮಾಲತಿ ಗಂಗಾಜಲಳನ್ನು ಕಳುಹಿಸಿ ಅವಳನ್ನು ಕರೆಸಿದನು. ಹೀರೆಯು ಬಂದೆರಡುದಿನ ಅನುಮಾನಪಡುತಲಿದ್ದು ಅನಂತರ ಹೋದಳು. ದೇವೇಂದ್ರನು ಸ್ವಲ್ಪವೂ ಕೋಪವನ್ನು ತೋರ್ಪಡಿಸಲಿಲ್ಲ. ಹಿಂದಿನ ಸಮಾಚಾರವನ್ನು ಪ್ರಸ್ತಾಪಿಸಲು ಅವಕಾಶಕೊಡಲಿಲ್ಲ. ಅದನ್ನೆಲ್ಲ ಬಿಟ್ಟು ಅವಳ ಸಂಗಡ ಕಿವಿಗೆ ಇಂಪಾದ ಮಾತನಾಡುವುದಕ್ಕಾರಂಭಿಸಿದನು. ಜಾಡನ ಹುಳುವು ನೊಣಗಳಿಗೋಸ್ಕರ ಹೇಗೆ ಬಲೆಯನ್ನು ಹರಡುವುದೋ, ದೇವೇಂದ್ರನು ಹಾಗೆ ಹೀರೇಗೋಸ್ಕರ ಬಲೆಯನ್ನು ಹರಡಲಾರಂಭಿಸಿದನು. ಹೀರೆಯು ಲುಬ್ಧಳಾಗಿ ನೊಣದಹಾಗೆ ಆ ಬಲೆಯಲ್ಲಿ ಬಿದ್ದಳು. ಅವಳು ದೇವೇಂದ್ರನ ಮಧುರಾಲಾಪದಿಂದ ಮುಗ್ಧಳಾಗಿ ಅವನ ಕಪಟಾಚರಣೆ

ಯಿಂದ ಮೋಸಹೋದಳು. ಇದೇ ಪ್ರಣಯವೆಂತಲೂ ದೇವೇಂದ್ರನೇ ಪ್ರಣಯಮಾಡುವ ನಾಯಿಕನೆಂತಲೂ ಮನಸ್ಸಿನಲ್ಲಿ ತಿಳಿದಳು. ಹೀರೆ ಚತುರಳು. ಆದರೆ ಅವಳ ಬುದ್ಧಿಯು ಫಲೋಪದಾಯಿಯಾಗಲಿಲ್ಲ. ಪ್ರಾಚೀನರಾದ ಕವಿಗಳು ಯಾವಶಕ್ತಿಯನ್ನು ಜಿತೇಂದ್ರಿಯನಾದ ಮೃತ್ಯುಂಜಯನ ತಪಸ್ಸನ್ನು ಭಂಗಮಾಡುವಷ್ಟು ಬಲವಾದುದನ್ನಾಗಿ ಮಾಡಿ ಕೀರ್ತಿಗೊಳಿಸಿದ್ದಾರೋ, ಆ ಶಕ್ತಿಯ ಪ್ರಭಾವದಿಂದ ಹೀರೆಯ ಬುದ್ಧಿಯು ಲೋಪವಾಗಿ ಹೋಯಿತು.

ದೇವೇಂದ್ರನು ಬೇರೇ ಮಾತುಗಳನ್ನು ಬಿಟ್ಟು ಕೈಯಲ್ಲಿ ತಂಬೂರಿಯನ್ನು ತೆಗೆದುಕೊಂಡು ಸುರಾಪಾನದಿಂದ ಸಮುತ್ಸಾಹಿತನಾಗಿ ಸಂಗೀತವನ್ನು ಆರಂಭಮಾಡಿದನು. ದೈವಕಂಠವಲ್ಲಿ ಕೃತವಿದ್ಯನಾದ ದೇವೇಂದ್ರನು ಹಾಡಿದ ಸುಧಾಮಯವಾದ ಸಂಗೀತವನ್ನು ಕೇಳಿದಮಾತ್ರದಿಂದಲೇ ಹೀರೆಯು ಬಂದೇತಡವಿಗೆ ವಿಮೋಹಿತಳಾಗಿಬಿಟ್ಟಳು. ಆಗವಳ ಹೃದಯವು ಚಂಚಲವಾಗಿ ಮನಸ್ಸು ದೇವೇಂದ್ರನ ಪ್ರೇಮದಿಂದ ದ್ರವೀಭೂತವಾಗಿ ಹೋಯಿತು. ಆಗವಳ ಕಣ್ಣುಗಳಲ್ಲಿ ದೇವೇಂದ್ರನೇ ಸರ್ವಸಂಸಾರಸುಖಾಧಾರನೆಂತಲೂ ಸರ್ವಾರ್ಥಸಾರನೆಂತಲೂ ರಮಣಿಗಳಿಗೆ ಸರ್ವಾದರಣೀಯನೆಂತಲೂ ಗೋಚರವಾದನು. ಹೀರೆಯ ಕಣ್ಣುಗಳಿಂದ ಪ್ರೇಮದಿಂದುಕ್ಕಿದ ಅಶ್ರುಧಾರೆಯು ಸುರಿಯಿತು.

ದೇವೇಂದ್ರನು ತಂಬೂರಿಯನ್ನು ಕೆಳಗೆ ಇಟ್ಟು ತನ್ನ ಅಂಗವಸ್ತ್ರವ ಶರಗಿನಿಂದ ಅವಳ ಕಣ್ಣೀರನ್ನೊರಸಿದನು. ಹೀರೆಯ ಶರೀರವು ಪುಳಕಕಂಟಕಿತವಾಯಿತು. ಆಗ ದೇವೇಂದ್ರನು ಸುರಾಪಾನದಿಂದ ಉದ್ದೀಪ್ತನಾಗಿ ಹಾಸ್ಯಪರಿಹಾಸ್ಯದಿಂದ ಸರಸವಾದ ಸಂಭಾಷಣೆಗೆ ಪ್ರಾರಂಭಿಸಿದನು. ಬಾದೊಂದುಸಲ ನಿಜವಾದ ಪ್ರಣಯವುಳ್ಳವನಂತೆ ಸ್ನೇಹದಿಂದೊಡಗೂಡಿದ ಅಸ್ಪಷ್ಟವಾದ ಅಲಂಕಾರವುಳ್ಳ ವಚನಗಳನ್ನು ಹೇಳುವನು.

ಆದರಿಂದ ಜ್ಞಾನಹೀನಳಾದ, ಸಂಸ್ಕಾರವಾಗದ ವಾಕ್ಚಾತುರ್ಯವುಳ್ಳ ಹೀರೆಯು ಮನಸ್ಸಿನಲ್ಲಿ ಇದೇ ಸ್ವರ್ಗಸುಖವೆಂದಂದುಕೊಂಡಳು. ಅವಳು ಇಂತಹ ಸ್ವರ್ಗಸುಖವೆಂಬ ಮಾತನ್ನೇ ಕೇಳಿರಲಿಲ್ಲ. ಹೀರೆಯು ವಿಮಲಚಿತ್ತಳಾಗಿದ್ದು ಸತ್ಸಂಗದಿಂದ ಶುದ್ಧಿಮಾಡಲ್ಪಟ್ಟವಳಾಗಿದ್ದರೆ ಇದೇ ನರಕವೆಂದಂದುಕೊಳ್ಳುತ್ತಿದ್ದಳು. ಆಮೇಲೆ ಪ್ರೇಮದಮಾತು ಬಂತು—ಯಾವದಕ್ಕೆ ಪ್ರೇಮವೆಂದು ಹೇಳುತ್ತಾರೆಂಬದು ದೇವೇಂದ್ರನು ಅರಿತವನಾಗಿರಲಿಲ್ಲ. ಬಂದುಪಕ್ಷಕ್ಕೆ ಹೀರೆಯೇ ಅದನ್ನು ಬಲ್ಲವಳಾಗಿದ್ದಳೆಂದು ಹೇಳಬಹುದು. ಆದರೆ ದೇವೇಂದ್ರನು ಪ್ರಾಚೀನಕವಿಗಳು ಆ ವಿಷಯದಲ್ಲಿ ಚರ್ವಿತಚರ್ವಣವಾಗಿ ಹೇಳಿರುವುದನ್ನು ಕೇಳಿದ್ದನು. ಅವನ ಬಾಯಿಯಿಂದ ಪ್ರೇಮದ ಅನಿರ್ವಚನೀಯವಾದ ಮಹಿಮೆಯನ್ನು ಕೇಳಿ ಹೀರೆಯು ದೇವೇಂದ್ರನು ಅಮಾನುಷಚಿತ್ತಸಂಪನ್ನನೆಂದು ತಿಳಿದುಕೊಂಡು, ಅಪಾದಕಬರೀಯೂ ಪ್ರೇಮರಸಾರ್ದ್ರಳಾದಳು. ಆಗ ದೇವೇಂದ್ರನು ಪ್ರಥಮವಸಂತದಲ್ಲಿ ಬರುವ ಭ್ರಮರದ ಝುಂಕಾರದಹಾಗೆ ಸುಸ್ವರದಿಂದ ಸಂಗೀತವನ್ನೆತ್ತಿದನು. ಹೀರೆಯೂ ದುರ್ದಮನೀಯವಾದ ಪ್ರಣಯದ ಸ್ಫೂರ್ತಿಯುಂಟಾಗಿ ಅವನ ಸ್ವರದೊಂದಿಗೆ ತನ್ನ ಸ್ತ್ರೀಸುಲಭವಾದ ಕಲಕಂಠವನ್ನು ಜತೆಗೂಡಿಸಿ ಹಾಡಲಾರಂಭಿಸಿದಳು. ದೇವೇಂದ್ರನು ಹಾಡುವುದಕ್ಕೆ ಅವಳನ್ನು ಪ್ರೇರೇಪಿಸಿದನು. ಆಗ ಹೀರೆಯು ಪ್ರೇಮಾರ್ದ್ರಚಿತ್ತದಿಂದ ಸುರೆಯರಾಗದಿಂದ ರಂಜಿತವಾದ ಕಮಲದಂತಿಹ ನೇತ್ರಗಳನ್ನು ವಿಸ್ಫಾರಿತವಾಗಿ ಮಾಡಿ ಚಿತ್ರಿತವಾದಹಾಗಿದ್ದ ಭ್ರೂಯುಗಳದ ವಿಲಾಸವುಳ್ಳ ಮುಖಮಂಡಲವನ್ನು ಪ್ರಫುಲ್ಲವಾಗಿ ಮಾಡಿ ಪ್ರಸ್ಫುಟವಾದ ಸ್ವರದಿಂದ ಸಂಗೀತವನ್ನು ಆರಂಭಿಸಿದಳು. ಚಿತ್ತಸ್ಫೂರ್ತಿಯಿಂದ ಅವಳ ಕಂಠದಲ್ಲಿ ಉಚ್ಚವಾದ ಸ್ವರವು ಎದ್ದಿತು. ಹೀರೆಯು ಹಾಡಿದ ಹಾಡು ಪ್ರೇಮರಸಪೂರ್ಣವಾಗಿತ್ತು. ಪ್ರೇಮದಭಿಕ್ಷಾಪರಿಪೂರ್ಣವಾಗಿತ್ತು.

ಆಗ ಆ ಪಾಪಮಂಟಪದಲ್ಲಿ ಕುಳಿತುಕೊಂಡು ಪಾಪಾಂತಃಕರಣವುಳ್ಳ ಅವರಿಬ್ಬರೂ ಪಾಪಾಭಿಲಾಷೆಗೆ ವಶೀಭೂತರಾಗಿ ಚಿರಪಾಪರೂಪವಾದ ಚಿರಪ್ರೇಮವನ್ನು ಪರಸ್ಪರ ವಿನಿಮಯಮಾಡಿಕೊಂಡರು. ಚಿತ್ತವನ್ನು ಸಂಯಮ ಮಾಡುವುದನ್ನು ಹೀರೆಯು ತಿಳಿದವಳಾಗಿದ್ದಳು. ಆದರೆ ಅದರಲ್ಲಿ ಆಗವಳ ಪ್ರವೃತ್ತಿಯು ಹುಟ್ಟಲಿಲ್ಲವಾಗಿ ಪತಂಗದ ಹಾಗೆ ಅಗ್ನಿಮುಖದಲ್ಲಿ ಪ್ರವೇಶಮಾಡಿದಳು. ಮೊದಲು ದೇವೇಂದ್ರನು ಪ್ರಣಯವಿಲ್ಲದವನೆಂದು ತಿಳಿದು ಚಿತ್ತವನ್ನು ದಮನಮಾಡಲು ಪ್ರವೃತ್ತಳಾಗಿದ್ದಳು. ಅದೂ ಸ್ವಲ್ಪ ದೂರದಮಟ್ಟಿಗೆ ಪ್ರವೃತ್ತಳಾಗಿದ್ದಳು. ಎಷ್ಟುದೂರದವರೆಗೆ ದಮನಮಾಡಿದ್ದಳೋ ಅದುವರೆಗೆ ಕೃತಕಾರ್ಯಳಾಗಿದ್ದಳು. ಹೇಗೆಂದರೆ, ಮೊದಲು ದೇವೇಂದ್ರನು ಅಂಕಾಗತನಾಗಿ ಬಂದಿದ್ದರೂ, ಅಂದರೆ, ತೊಡೆಸೋಗುವ ಹಾಗೆ ಬಂದಿದ್ದರೂ, ನಗುತನಗುತ ಅವನಿಂದ ಪ್ರೇಮವನ್ನು ಸ್ವೀಕಾರ ಮಾಡಿದ್ದರೂ, ಆಡಾಡುತ್ತ ಅವನನ್ನು ಹಿಂದಿರುಗಿಸಿ ಬಿಟ್ಟಳು ; ಮತ್ತು ಅನ್ಯರ ಮನೆಯಲ್ಲಿ ಚಾಕರಿಯನ್ನು ಮಾಡುತ್ತ ಚಿತ್ತವನ್ನು ದಮನಮಾಡಿಟ್ಟುಕೊಂಡಿದ್ದಳು. ಆದರೆ ದೇವೇಂದ್ರನು ಈಗ ಪ್ರಣಯಶಾಲಿಯಾಗಿದ್ದಾನೆಂದು ತಿಳಿದುಕೊಂಡವಳಾಗಿ ಅವಳು ಚಿತ್ತವನ್ನು ದಮನಮಾಡುವುದರಲ್ಲಿ ಪ್ರವೃತ್ತಳಾಗಲಿಲ್ಲ. ಈ ಪ್ರವೃತ್ತಿಯಿಲ್ಲದ ಕಾರಣದಿಂದ ವಿಷವೃಕ್ಷದಲ್ಲಿ ಅವಳಿಗೆ ಭೋಗ್ಯವಾದ ಫಲವು ಫಲಿಸಿತು.

ಜನರು ಇಹಲೋಕದಲ್ಲಿ ಪಾಪಕ್ಕೆ ದಂಡನೆಯಾಗುವುದು ಕಣ್ಣಿಗೆ ಗೋಚರವಿಲ್ಲವೆಂದು ಹೇಳುತ್ತಾರೆ. ಇದು ನಿಜವೋ ಅಲ್ಲವೋ, ಅದು ಹಾಗಿರಲಿ; ಚಿತ್ತವನ್ನು ದಮನಮಾಡುವುದರಲ್ಲಿ ಪ್ರವೃತ್ತಿಯಿಲ್ಲದವನು ಇಹಲೋಕದಲ್ಲಿಯೇ ವಿಷವೃಕ್ಷದ ಫಲವನ್ನು ತಿನ್ನದೆ ಇರಲಾರನೆಂದು ನೀವು ತಿಳಿಯುವಿರಿ.

## ಮೂವತ್ತೇಳನೆಯ ಪರಿಚ್ಛೇದ.

### ಸೂರ್ಯಮುಖಿಯ ಸಮಾಚಾರ.

---

ಮಳೆಹೋಯಿತು. ಶರತ್ಕಾಲವು ಬಂತು. ಪೈರುಗಳೆಲ್ಲ ಪಕ್ವವಾದವು. ಪುಷ್ಕರಿಣಿಗಳ ಪದ್ಮಗಳು ಪೂರೈಸುತ್ತ ಬಂದವು. ಪ್ರಾತಃಕಾಲದಲ್ಲಿ ಮರದೆಲೆಗಳಿಂದ ಮಂಜಿನ ನೀರು ಹನಿ ಹನಿಯಾಗಿ ಬೀಳುತಲಿತ್ತು. ಸಂಧ್ಯಾಕಾಲದಲ್ಲಿ ಹೊಲಗಳೆಲ್ಲ ಹೊಗೆ ಕವಿತುಕೊಂಡಹಾಗೆ ಇದ್ದವು. ಇಂತಹ ಕಾಲದಲ್ಲಿ ಕಾರ್ತಿಕಮಾಸದ ಒಂದುದಿನ ಪ್ರಾತಃಕಾಲದಲ್ಲಿ ಮಧುಪುರದ ರಸ್ತೆಯಲ್ಲಿ ಒಂದು ಪಾಲ್ಕಿಯು ಬಂತು. ಹಳ್ಳಿಊರಲ್ಲಿ ಪಾಲ್ಕಿಯನ್ನು ನೋಡಿ ಊರು ಹುಡುಗರೆಲ್ಲ ಆಡುವುದನ್ನು ಬಿಟ್ಟು ಪಾಲ್ಕಿಯ ಎರಡು ಪಾರ್ಶ್ವದಲ್ಲಿಯೂ ಬಂದು ಸಾಲಿಟ್ಟು ನಿಂತುಕೊಂಡವು. ಊರು ಹೆಂಗಸರು ದೊಡ್ಡವರು ಚಿಕ್ಕವರು ಯುವತಿಯರು ಮುದಕಿಯರು ಎಲ್ಲರೂ ಕಂಕುಳಲ್ಲಿ ಕೊಡವಿದ್ದಹಾಗೆ ನಿಂತು ನೋಡುತಲಿದ್ದರು.–ಕಂಕುಳಕೊಡ ಕಂಕುಳಲ್ಲಿ–ಬೆರಗಾಗಿ ನಿಂತು ಪಾಲ್ಕಿಯನ್ನು ನೋಡುತಲಿದ್ದರು. ಯುವತಿಯರು ಮುಖ ಪರದೆಯನ್ನು ಓರೆ ಮಾಡಿಕೊಂಡು ನೋಡುತ್ತಿದ್ದರು. ಪೈರು ಕುಯುತ್ತಿದ್ದ ರೈತರು ಕೈಲಿ ಕುಡುಗೋಲು ಇಟ್ಟುಕೊಂಡು, ತಲೆಗೆ ಬಟ್ಟೆ ಕಟ್ಟಿದ್ದು, ಬಾಯಿಬಿಟ್ಟುಕೊಂಡು ಪಾಲ್ಕಿಯನ್ನು ನೋಡುತಲಿದ್ದರು. ಗ್ರಾಮದ ಬುದ್ಧಿವಂತರು ಕಮಿಟಿ ಕೂಡಿ ಕೂತುಕೊಂಡರು. ಪಾಲ್ಕಿಯ ಬಾಗಲಿನಿಂದ ಮೋಜಾಹಾಕಿದ್ದ ಒಂದುಕಾಲು ಹೊರಕ್ಕೆ ಕಾಣಿಸುತಲಿತ್ತು. ಎಲ್ಲರೂ ಸಾಹೇಬ ಬಂದಿದ್ದಾನೆಂದು ಸಿದ್ಧಾಂತ ಮಾಡಿದರು.–ಹುಡುಗರೆಲ್ಲ ಅಮ್ಮನವರು ಬಂದಿದ್ದಾರೆಂದು ತಿಳಿದುಕೊಂಡರು.

ಪಾಲ್ಕಿಯಿಂದ ನಾಗೇಂದ್ರನು ಹೊರಟನು. ಅವನಿಗೆ ಆರೇಳು ಜನರು ಸಲಾಂಮಾಡಿದರು–ಏತಕ್ಕೆಂದರೆ, ಅವನು ಪೆಂಟಲೂರ್ ಎಂಬ ಬಿಗಿಯಾಗಿದ್ದ

ಷರಾಯಿ ಹಾಕಿದ್ದನು, ತಲೆಯಮೇಲೆ ಟೋಪಿಯಿತ್ತು ! ಕೆಲವರು ದರೋಗ ಬಂದಿದ್ದಾನೆಂತಲೂ ಕೆಲವರು ಜಮಾದಾರು ಬಂದಿದ್ದಾರೆಂತಲೂ ಯೋಚಿಸಿ ಕೊಂಡರು.

ನಾಗೇಂದ್ರನು ನೋಡುತ್ತಿದ್ದವರಲ್ಲಿ ಮುದುಕನೊಬ್ಬನನ್ನು ಕುರಿತು, ಶಿವಪ್ರಸಾದ ಬ್ರಹ್ಮಚಾರಿಯ ವಿಚಾರವಾಗಿ ಕೇಳಿದನು. ಮುದುಕನು ಇದನ್ನು ಕೇಳಿ ಏನೋ ಖೂನಿಯೊಂದು ನಡೆದಿರಬೇಕೆಂದು ಖಂಡಿತವಾಗಿ ತಿಳಿದುಕೊಂಡು ನಿಜವಾದುದು ಹೇಳುವುದು ಸರಿಯಲ್ಲವೆಂದು ಭಾವಿಸಿ, ಬುದ್ಧಿ ! ನಾನು ಮುದುಕ, ನನಗೆ ಅಷ್ಟು ಗೊತ್ತಿಲ್ಲಿರುವುದೆಂದು ಹೇಳಿದನು. ನಾಗೇಂದ್ರನು ಸಂಪನ್ನರಾದವರು ಯಾರನ್ನಾದರೂ ಕೇಳದ ಹೊರತು ಕಾರ್ಯ ಸಿದ್ಧಿಯು ಸಂಭವವಿಲ್ಲವೆಂದು ತಿಳಿದವನಾಗಿ ಗ್ರಾಮದಲ್ಲಿ ದೊಡ್ಡ ಗೃಹಸ್ಥನ ಮನೆಗೆ ಹೋದನು. ಆ ಮನೇ ಯಜಮಾನ ರಾಮಕೃಷ್ಣರಾಯ ಕವಿರಾಜ ನಾಗಿದ್ದನು. ವೈದ್ಯ ರಾಮಕೃಷ್ಣನು ಒಬ್ಬ ಬಾಬು ಬಂದನೆಂದು ನೋಡಿ, ಒಂದು ಕುರ್ಚಿಯನ್ನು ತಂದನು. ಅದರಮೇಲೆ ನಾಗೇಂದ್ರನು ಕೂತು ಕೊಂಡು, ಬ್ರಹ್ಮಚಾರಿಯ ವಿಚಾರವಾಗಿ ವಿಚಾರಮಾಡಿದನು. ರಾಮ ಕೃಷ್ಣನು, ಬ್ರಹ್ಮಚಾರಿಯು ಈಗ ಇಲ್ಲವೆಂದನು. ನಾಗೇಂದ್ರನು ಬಹಳ ವ್ಯಾಕುಲವುಳ್ಳವನಾಗಿ, ಅವನು ಎಲ್ಲಿ ಹೋದನೆಂದು ಕೇಳಿದನು.

ಉತ್ತರ—ಅದು ಹೇಳುವುದಕ್ಕೆ ಆಗುವುದಿಲ್ಲ. ಎಲ್ಲಿ ಹೋದನೋ ಅದು ನನಗೆ ತಿಳಿಯದು. ಅದಲ್ಲದೆ ಅವನು ಒಂದು ಸ್ಥಳದಲ್ಲಿರತಕ್ಕವನಲ್ಲ ; ಯಾವಾಗಲೂ ಊರೂರು ತಿರುಗತಕ್ಕವನು.

ನಾಗೇಂದ್ರ—ಯಾವಾಗ ಬರುವನು ? ಅದು ಯಾರಾದರೂ ತಿಳಿದಿದ್ದಾರೆಯೆ ?

ರಾಮಕೃಷ್ಣ—ಅವನಲ್ಲಿ ನನಗೇನೋ ಕೆಲಸವಿದೆ. ನಾನೂ ವಿಚಾರಿಸುತ ಲಿದ್ದೆ. ಯಾವಾಗ ಬರುವನೋ, ಯಾರೂ ಹೇಳರು. ಯಾರಿಗೂ ಗೊತ್ತಿಲ್ಲ.

ನಾಗೇಂದ್ರನು ಬಹಳ ವಿಷಣ್ಣನಾಗಿ ಪುನಃ, ಇಲ್ಲಿಂದ ಹೊರಟು ಹೋಗಿ ಎಷ್ಟು ದಿನವಾಯಿತು ? ಎಂದು ಕೇಳಿದನು.

ರಾಮಕೃಷ್ಣ—ಅವನು ಶ್ರಾವಣಮಾಸದಲ್ಲಿ ಇಲ್ಲಿಗೆ ಬಂದವನು ಭಾದ್ರಪದ ಮಾಸದಲ್ಲಿ ಹೊರಟುಹೋದ.

ನಾಗೇಂದ್ರ—ಬಳಿಕ್ಕೇದು—ಈ ಗ್ರಾಮದಲ್ಲಿ ಹರಮಣಿ ವೈಷ್ಣವಿಯ ಮನೆ ಎಲ್ಲಿದೆ? ಯಾರಾದರೂ ತೋರಿಸಬಲ್ಲರೆ ?

ರಾಮಕೃಷ್ಣ—ಹರಮಣಿಯುಮನೆಯು ನೀವು ಬಂದ ದಾರಿಯಲ್ಲಿಯೇ ಇತ್ತು. ಈಗ ಆ ಮನೆಯಿಲ್ಲ. ಆಮನೆಗೆ ಬೆಂಕಿಬಿದ್ದು ಸುಟ್ಟುಹೋಯಿತು.

ನಾಗೇಂದ್ರನು ತಲೆಯನ್ನು ಕೈಯಿಂದ ಭದ್ರವಾಗಿ ಹಿಡಿದುಕೊಂಡು ಕುಗ್ಗಿದ ಸ್ವರದಿಂದ, ಹರಮಣಿಯು ಎಲ್ಲಿ ? ಎಂದನು.

ರಾಮಕೃಷ್ಣ—ಅದನ್ನೂ ಯಾರೂ ಹೇಳಲಾರರು. ಮನೆಗೆ ಬೆಂಕಿ ಬಿದ್ದ ರಾತ್ರಿಯೇ ಎಲ್ಲಿಯೋ ಹೊರಟುಹೋದಳು. ಕೆಲವರು ಹೇಳುವುದರಲ್ಲಿ, ಅವಳು ತಾನೇ ಮನೆಗೆ ಬೆಂಕಿಹಾಕಿಕೊಂಡು ಓಡಿಹೋದಳೆಂದು ಹೇಳುತ್ತಾರೆ.

ನಾಗೇಂದ್ರನು ಭಗ್ನಸ್ವರವುಳ್ಳವನಾಗಿ, ಆವಳ ಮನೆಯಲ್ಲಿ ಯಾರಾದರೂ ಹೆಂಗಸರು ಇದ್ದರೆ? ಎಂದು ಕೇಳಿದನು.

ರಾಮಕೃಷ್ಣ—ಇಲ್ಲ ; ಶ್ರಾವಣಮಾಸದಲ್ಲಿ ಮಾತ್ರ ಯಾವದೋ ದೇಶದ ಹೆಂಗಸೊಬ್ಬಳು ಕಾಯಿಲೆಯಾಗಿ ಬಂದಿದ್ದಳು. ಅವಳನ್ನು ಆ ಬ್ರಹ್ಮಚಾರಿಯು ಎಲ್ಲಿಂದಲೋ ಕರೆತಂದು ಆ ಮನೆಯಲ್ಲಿಟ್ಟಿದ್ದನು. ಅವಳ ಹೆಸರು ಸೂರ್ಯಮುಖಿಯೆಂದು ಕೇಳಿದ್ದೆ. ಹೆಂಗಸು ಉಬ್ಬುಸರೋಗದಿಂದ ಪೀಡಿತಳಾಗಿದ್ದಳು—ನಾನೇ ಔಷಧಕೊಟ್ಟೆ—ಮುಕ್ಕಾಲುಪಾಲು ಆರೋಗ್ಯವಾಗಿ ಬಂದಿತ್ತು. ಆಗ—

ನಾಗೇಂದ್ರನು ಕೆಮ್ಮುತ್ತ, ಬಳಿಕ್ಕೇದು, ಆಗ ?-ಎಂದನು.

ರಾಮಕೃಷ್ಣ—ಆಗ ಹರವೈಷ್ಣವಿಯ ಮನೆ ಸುಟ್ಟಾಗ ಅವಳೂ ಸುಟ್ಟುಹೋದಳು.

ನಾಗೇಂದ್ರನಾಥದತ್ತನು ಕುರ್ಚಿಯಿಂದ ಕೆಳಗೆ ಬಿದ್ದನು. ತಲೆಗೆ ಬಹಳ ಪೆಟ್ಟು ತಗಲಿತು. ಆ ಪೆಟ್ಟನಿಂದ ಮೂರ್ಛಿತನಾದನು. ವೈದ್ಯ ರಾಮಕೃಷ್ಣರಾಯನು ಅವನ ಚಿಕಿತ್ಸೆಯಲ್ಲಿದ್ದನು.

ಬದುಕಿರಲು ಯಾರಿಗೆ ಇಷ್ಟ? ಈ ಸಂಸಾರವು ವಿಷಮಯವಾದುದು. ವಿಷವೃಕ್ಷವು ಎಲ್ಲರ ಮನೆಯ ಅಂಗಳದಲ್ಲಿಯೂ ಇದೆ. ಯಾರು ಪ್ರೀತಿಸು ವರು? ಅಂತಹವರು ತಮ್ಮ ಹೃತ್ಪಿಂಡವನ್ನು ಕುಯಿದು ಸುಡಲಿ! ವಿಧಾ ತನೆ! ಈ ಸಂಸಾರದಲ್ಲಿ ಸುಖಿಯಾದವರನ್ನು ಯಾರನ್ನೂ ಸೃಷ್ಟಿಸಲಿಲ್ಲವೆ? ನೀನು ಇಚ್ಛಾಮಯ; ಇಚ್ಛೆಬಂದರೆ ಸುಖಿಯಾದ ಸಂಸಾರಿಗಳನ್ನು ಸೃಷ್ಟಿಸಬಲ್ಲೆ. ಸಂಸಾರದಲ್ಲಿ ಇಷ್ಟು ದುಃಖವೇತಕ್ಕೆ?

## ಮುವ್ವತ್ತೆಂಟನೆಯ ಪರಿಚ್ಛೇದ.

### ಇಷ್ಟುದಿನಕ್ಕೆ ಎಲ್ಲಾ ಪೂರೈಸಿತು.

ಇಷ್ಟುದಿನಕ್ಕೆ ಎಲ್ಲಾ ಪೂರೈಸಿತು. ಸಂಧ್ಯಾಕಾಲದಲ್ಲಿ ನಾಗೇಂದ್ರ ದತ್ತನು ಮಧುಪುರದಿಂದ ಹೊರಡಲು ಪಾಲ್ಕಿಯಲ್ಲಿ ಕುಳಿತುಕೊಂಡಾಗ ಮನ ಸ್ಸಿನಲ್ಲಿ ಇಂದು ನನಗೆ ಎಲ್ಲಾ ಪೂರೈಸಿತು ಎಂದು ಹೇಳಿಕೊಂಡನು.

ಏನು ಪೂರೈಸಿದ್ದುದು? ಸುಖವೆ? ಅದೇನೊ, ಸೂರ್ಯಮುಖಿಯು ಎಂದು ಮನೆಯನ್ನು ಬಿಟ್ಟು ಹೊರಟುಹೋದಳೋ ಅಂದೇ ಪೂರೈಸಿತ್ತು. ಹಾಗಾದರೆ ಈಗ ಪೂರೈಸಿದ್ದುದು ಯಾವದು? ಆಶೆ—ಎಷ್ಟುದಿನ ಮನುಷ್ಯನಿಗೆ ಆಶೆಯಿದಿಯೋ ಅದುವರೆಗೆ ಯಾವದೂ ಪೂರೈಸುವುದಿಲ್ಲ. ಆಶೆಯು ಪೂರೈ ಸಿದರೆ ಎಲ್ಲಾ ಪೂರೈಸಿತು.

ನಾಗೇಂದ್ರನಿಗೆ ಈಹೊತ್ತು ಆಶೆಪೂರೈಸಿತು. ಆದುದರಿಂದ ಅವನು ಗೋವಿಂದಪುರಕ್ಕೆ ಹಿಂದಿರುಗಿದನು. ಗೋವಿಂದಪುರದಲ್ಲಿ ಮನೆಯಲ್ಲಿ ವಾಸ ಮಾಡುವುದಕ್ಕೆ ಇಷ್ಟ ಪಡಲಿಲ್ಲ. ಗೃಹಧರ್ಮಗಳನ್ನೆಲ್ಲಾ ತ್ಯಜಿಸಿ ಬಿಡುವುದಕ್ಕೆ ಹೋದನು. ಅಷ್ಟುಮಾಡಬೇಕಾದರೆ ಬಹಳಕಷ್ಟ ಅನೇಕವಾದ ವ್ಯವಸ್ಥೆಗಳಾಗಬೇಕು. ಆಸ್ತಿಯನ್ನೆಲ್ಲ ಹಂಚಬೇಕು. ಜಮೀನುದಾರಿ, ಕುಟುಂಬದ ಮನೆ ಮತ್ತು ಇತರ ಅನೇಕ ಸ್ವಾರ್ಜಿತವಾದ ಸ್ಥಾವರ ಆಸ್ತಿಗಳು, ಇವುಗಳನೆಲ್ಲ ತಂಗಿಯ ಮಗನಾದ ಸತೀಶಚಂದ್ರನಿಗೆ ದಾನಪತ್ರದ ಮೂಲಕ ದಾನ ಮಾಡಿಬಿಡಬೇಕು.—ಇದಕ್ಕೆಲ್ಲ ಲಾಯರ ಮನೆಗೆ ಹೋಗದೆ ಆಗತಕ್ಕದ್ದಲ್ಲ. ಚರಸ್ವತ್ತುಗಳೆನ್ನೆಲ್ಲ ಕಮಲಮಣಿಗೆ ದಾನ ಮಾಡಬೇಕು. ಅದನ್ನೆಲ್ಲ ಬಟ್ಟುಮಾಡಿ ಕಲಕತ್ತೆಯಲ್ಲಿ ಅವಳ ಮನೆಗೆ ಸಾಗಿಸಬೇಕು. ಕೆಲವುಕಾಗದ ಪತ್ರಗಳನ್ನು ಮಾತ್ರ ತಾನು ಸ್ವಂತಕ್ಕೆ ಇಟ್ಟುಕೊಳ್ಳಬೇಕು. ತಾನು ಬದುಕಿರುವ ವರೆಗೆ ಅದರಲ್ಲಿಯೇ ವೆಚ್ಚ ಮಾಡಿಕೊಂಡು ಜೀವನ ನಿರ್ವಾಹ ಮಾಡಿಕೊಳ್ಳಬೇಕು. ಕುಂದನಂದಿನಿಯನ್ನು ಕಮಲಮಣಿಯ ಹತ್ತಿರ ಕಳುಹಿಸಿಕೊಡಬೇಕು. ಆಸ್ತಿಯ ವ್ಯವಸ್ಥೆ ಲೆಕ್ಕ ಪತ್ರ ಮುಂತಾದ ವುಗಳನ್ನೆಲ್ಲ ಶ್ರೀಶಚಂದ್ರನಿಗೆ ತಿಳವಳಿಕೆ ಮಾಡಿಕೊಡಬೇಕು. ಸೂರ್ಯಮುಖಿಯು ಮಲಗಿಕೊಳ್ಳುತ್ತಿದ್ದ ಮಂಚದ ಮೇಲೆ ಮಲಗಿ ಕೊಂಡು ಬಂದುಸಲ ಅಳುಬೇಕು. ಸೂರ್ಯಮುಖಿಯ ಆಭರಣ ಗಳನ್ನೆಲ್ಲ ತೆಗೆದುಕೊಳ್ಳಬೇಕು. ಅವುಗಳನ್ನು ಕಮಲಮಣಿಗೆ ಕೊಡತಕ್ಕದ್ದಲ್ಲ—ಸ್ವಂತದಲ್ಲಿಯೇ ಇಟ್ಟುಕೊಳ್ಳಬೇಕು. ಎಲ್ಲಿಗೆಹೊದರೂ ಸಂಗಡಲೇ ತೆಗೆದುಕೊಂಡು ಹೋಗಬೇಕು. ಕಡೆಗೆ ಕಾಲಬಂದಾಗ ಆ ಒಡವೆಗಳನ್ನು ನೋಡುತ್ತ ಸಾಯಬೇಕು. ಈ ಅವಶ್ಯಕವಾದ ಕೆಲಸಗಳನ್ನೆಲ್ಲ ಮಾಡಿಕೊಂಡು ನಾಗೇಂದ್ರನು ಗೃಹವನ್ನು ತ್ಯಾಗಮಾಡಿ ದೇಶ ದೇಶ ಅಲೆಯಲು ಹೊರಟು ಹೋಗಬೇಕು. ಇನ್ನು ಬದುಕಿರುವಷ್ಟು ದಿನಗಳು

ಭೂಮಿಯಲ್ಲಿ ಎಲ್ಲಾದರೂ ಬಂದು ಮೂಲೆಯಲ್ಲಿ ಬೌತುಕೊಂಡು ಯಾರಿಗೂ ಮುಖವನ್ನು ತೋರಿಸದೆ ಕಾಲಹರಣ ಮಾಡಬೇಕು.

ನಾಗೇಂದ್ರನು ಪಾಲ್ಕಿಯಲ್ಲಿ ಹೀಗೆಲ್ಲ ಭಾವಿಸಿಕೊಂಡು ಪ್ರಯಾಣ ಮಾಡುತಲಿದ್ದನು. ಪಾಲ್ಕಿಯುಬಾಗಲು ತೆರದಿತ್ತು. ರಾತ್ರಿ, ಕಾರ್ತಿಕಮಾಸದ ಬೆಳದಿಂಗಳು. ಆಕಾಶದಲ್ಲಿ ನಕ್ಷತ್ರಗಳು. ಮಾರ್ಗದ ಪಾರ್ಶ್ವದಲ್ಲಿದ್ದ ಟೆಲಿಗ್ರಾಫಿನ ತಂತಿಯು ಗಾಳಿಯಿಂದ "ಝುಂ" ಧ್ವನಿಮಾಡುತ್ತದೆ. ಆ ರಾತ್ರಿಯಲ್ಲಿ ನಾಗೇಂದ್ರನ ಕಣ್ಣಿಗೆ ಬಂದು ನಕ್ಷತ್ರವಾದರೂ ಸುಂದರವಾಗಿ ಕಾಣಿಸಲಿಲ್ಲ. ಬೆಳದಿಂಗಳು ಅತ್ಯಂತವಾಗಿ ಕರ್ಕಶವಾಗಿ ಬೋಧೆಯಾಯಿತು. ಕಂಡ ಪದಾರ್ಥವೆಲ್ಲ ಕಣ್ಣಿಗೆ ಶೂಲವಾಗಿತ್ತು. ಪೃಥಿವಿಯು ಅತ್ಯಂತ ನೃಶಂಸವಾಗಿತ್ತು. ಸೌಖ್ಯದ ದಿನಗಳಲ್ಲಿ ಶೋಭಾಕಾಂತಿಯನ್ನು ಧಾರಣೆಮಾಡಿ ಮನೋಹರಮಾಡಿದುದೆಲ್ಲ ಇಂದು ಕಾಂತಿಯನ್ನು ಪಸರಿಸದಿರಲು ಕಾರಣವೇನು? ಉದ್ದಉದ್ದವಾಗಿ ಬೆಳದಿದ್ದ ಗರಿಕೆಹುಲ್ಲು ಚಂದ್ರಕಿರಣದಲ್ಲಿ ಪ್ರತಿಬಿಂಬಿತವಾಗಿ ಮನಸ್ಸನ್ನು ಮೋಹಗೊಳಿಸತಕ್ಕದ್ದು ಈ ದಿನ ಉಜ್ವಲವಾಗಿತ್ತೆ? ಇಲ್ಲ. ಈ ಹೊತ್ತೂ ಆಕಾಶವು ಹಾಗೆಯೇ ನೀಲವಾಗಿದೆ, ಮೇಘವು ಹಾಗೆಯೇ ಬಿಳಪಾಗಿದೆ, ನಕ್ಷತ್ರವು ಹಾಗೆಯೇ ಉಜ್ವಲವಾಗಿದೆ, ವಾಯುವು ಹಾಗೆಯೇ ಕ್ರೀಡಾಶೀಲವಾಗಿದೆ! ಪಶುಗಳು ಹಾಗೆಯೇ ವಿಚರಣಮಾಡುತ್ತವೆ, ಮನುಷ್ಯನು ಹಾಗೆಯೇ ಹಾಸ್ಯಪರಿಹಾಸ್ಯದಲ್ಲಿ ಆಸಕ್ತನಾಗಿದ್ದಾನೆ, ಪೃಥಿವಿಯು ಹಾಗೆಯೇ ಅನಂತಗಾಮಿಯಾಗಿದೆ, ಸಂಸಾರದ ಪ್ರವಾಹವು ಹಾಗೆಯೇ ಅಪ್ರತಿಹತವಾಗಿದೆ! ಆದರೂ ಪೃಥಿವಿಯು ದಯಾಶೂನ್ಯತೆಯನ್ನು ನೋಡಿ ಸಹಿಸಲಾಗದು. ಭೂಮಿಯು ಬಾಯಿಬಿಟ್ಟು ನಾಗೇಂದ್ರನನ್ನು ಪಾಲ್ಕಿಯ ಸಮೇತವಾಗಿ ಏತಕ್ಕೆ ನುಂಗಿಬಿಡುವುದಿಲ್ಲ?

ನಾಗೇಂದ್ರನು ನೋಡಲಾಗಿ ಎಲ್ಲಾ ತನ್ನ ಸ್ವಂತದೋಷವಾಗಿ ಕಂಡಿತು–ಅವನಿಗೆಇನ್ನೂ ಮುವ್ವತ್ತುಮೂರು ವರುಷಮಾತ್ರ. ಇಷ್ಟರಲ್ಲಿ

ಯೇ ಅವನಿಗೆ ಎಲ್ಲಾ ಪೂರೈಸಿತು. ಜಗದೀಶ್ವರನು ಅವನಿಗೆ ಕೊಟ್ಟಿರುವು ದರಲ್ಲಿ ಯಾವದೂ ಪೂರೈಸುವಹಾಗಿಲ್ಲ. ಯಾವ್ಯಾವದರಿಂದ ಮನುಷ್ಯನು ಸುಖಿಯಾಗಬಹುದೋ ಅವನ್ನೆಲ್ಲ ಜಗದೀಶ್ವರನು ಅವನಿಗೆ ಕೊಟ್ಟಿರುವಷ್ಟು ಮತ್ತಾರಿಗೂ ಕೊಟ್ಟಿಲ್ಲ. ಧನ, ಐಶ್ವರ್ಯ, ಸಂಪತ್ತು, ಮಾನ, ಇವೆಲ್ಲ ಭೂಮಿಷ್ಠವಾಗಿ ಅಸಾಧಾರಣವಾದ ಪರಿಮಾಣದಲ್ಲಿ ಹೊಂದಿದ್ದಾನೆ. ಬುದ್ಧಿ ಯಿಲ್ಲದಿದ್ದರೆ ಇವುಗಳಿಂದ ಸುಖವುಂಟಾಗಲಾರದು. ಬುದ್ಧಿವಿಷಯದಲ್ಲಿಯೂ ದೇವರು ಅವನಿಗೆ ಕಾರ್ಪಣ್ಯಮಾಡಿಲ್ಲ. ತಾಯಿತಂದೆಗಳು ಅವನಿಗೆ ವಿದ್ಯೆ ಹೇಳಿಸುವುದರಲ್ಲಿ ಕಡಮೆಮಾಡಲಿಲ್ಲ. ಅವನ ಹಾಗೆ ಸುಶಿಕ್ಷಿತನಾದವನು ಯಾರೂ ಇಲ್ಲ. ರೂಪ, ಬಲ, ಸ್ವಾಸ್ಥ್ಯ, ಪ್ರಣಯಶೀಲತೆ, ಇವುಗಳನ್ನು ಪ್ರಕೃತಿದೇವಿಯು ಅವನಿಗೆ ಎರಡು ಕೈಯಿಂದಲೂ ಕೊಟ್ಟಿದ್ದಾಳೆ. ಇದ ಕ್ಕೆಲ್ಲಾದಕ್ಕಿಂತಲೂ ಹೆಚ್ಚಾದುದು, ಧನದಿಂದಲೂ ದುರ್ಲಭವಾದುದು, ಈ ಸಂಸಾರದಲ್ಲಿ ಬೆಲೆಯಿಲ್ಲದ ಸರ್ವೋತ್ಕೃಷ್ಟವಾದ ಪದಾರ್ಥ. ಅದು ಯಾವ ದು? ಪ್ರಣಯಶಾಲಿನಿಯಾದ ಸಾಧ್ವಿಯಾದ ಭಾರ್ಯೆ—ಇದು ಕೂಡ ಪೂರ್ವ ಪುಣ್ಯಶೇಷದಿಂದ ಅವನಿಗೆ ದೊರತಿತ್ತು. ಸುಖಸಾಮಗ್ರಿಗಳು ಇಷ್ಟು ಬಟ್ಟಾಗಿ ಭೂಮಿಯಮೇಲೆ ಯಾರಿಗೆ ದೊರತಿತ್ತು? ಈಹೊತ್ತು ಭೂಮಿಯ ಮೇಲೆ ಅವನಿಗಿಂತಲೂ ಹೆಚ್ಚು ಅಸುಖಿಗಳು ಯಾರಿದ್ದರು? ಅವನ ಸರ್ವಸ್ವ ವನ್ನೂ ಕೊಟ್ಟು, ಅವನ ಧನ, ಸಂಪತ್ತು, ಮಾನ, ರೂಪ, ಯೌವನ, ವಿದ್ಯೆ, ಬುದ್ಧಿ ಇವೆಲ್ಲ ಕೊಟ್ಟು ತನ್ನ ಆಗಿನ ಅವಸ್ಥೆಗೆ ಬದಲಾಗಿ ತನ್ನ ಬೋಯಿಗಳಲ್ಲಿ ಒಬ್ಬನ ಅವಸ್ಥೆಯನ್ನು ಪರಿವರ್ತನ ಮಾಡಿಕೊಳ್ಳಬಹು ದಾಗಿದ್ದರೆ ಅದು ಸ್ವರ್ಗಸುಖವೆಂದು ತಿಳಿದುಕೊಳ್ಳುತ್ತಿದ್ದನು. ಪಾಲ್ಕಿಯ ಬೋಯಿಯ ಅವಸ್ಥೆಯು ಎಷ್ಟೋವಾಸಿ. ಜೈಲಿನಲ್ಲಿರುವ ಮನುಷ್ಯನನ್ನು ಖೂನಿಮಾಡಿದ ಪಾಪಿಷ್ಠನಾದವನು ಕೂಡ ತನಗಿಂತಲೂ ಎಷ್ಟೋ ಸುಖಿಯ ಲ್ಲವೆ? ಅವನು ತನಗಿಂತಲೂ ಪವಿತ್ರನಲ್ಲವೆ? ಎಂದು ಭಾವಿಸಿಕೊಂಡನು.

ಅದೇ ಯೋಚನೆಯ ಪ್ರವಾಹದಲ್ಲಿ, ಪುನಃ, ನರಹತ್ಯೆಮಾಡಿ ಜೈಲಿನಲ್ಲಿರುವ ಕೈದಿಯು ಇತರ ಯಾರೋ ಒಬ್ಬನನ್ನು ಕೊಂದನು; ನಾನಾದರೋ ಸೂರ್ಯ ಮುಖಿಯನ್ನು ವಧೆಮಾಡಿದವನು. ನಾನು ಇಂದ್ರಿಯವನ್ನು ದಮನಮಾಡಿ ದ್ದರೆ ಸೂರ್ಯಮುಖಿಯು ವಿದೇಶಕ್ಕೆ ಹೋಗಿ ಕುಟೀರದೊಂದಿಗೆ ಸುಟ್ಟು ಹೋಗುತಲಿದ್ದಳೆ? ನಾನು ಸೂರ್ಯಮುಖಿಯ ವಧಕಾರಿ—ನನಗಿಂತಲೂ ಯಾವ ಪಿತೃಘ್ನ, ಮಾತೃಘ್ನ, ಪುತ್ರಘ್ನ ತಾನೇ ಹೆಚ್ಚು ಪಾಪಿಯಾದಾನು? ಸೂರ್ಯಮುಖಿಯು ಕೇವಲ ಒಬ್ಬ ಹೆಂಡತಿಮಾತ್ರವಾಗಿದ್ದಳೆ? ಸೂರ್ಯ ಮುಖಿಯು ನನಗೆ ಸರ್ವಸ್ವಳಾಗಿದ್ದಳು. ಸಂಬಂಧದಲ್ಲಿ ಹೆಂಡತಿ, ಸೌಹಾ ರ್ದ್ಯದಲ್ಲಿ ಭ್ರಾತ, ಪ್ರಯತ್ನದಲ್ಲಿ ಭಗಿನಿ, ಆಪ್ಯಾಯಮಾಡುವುದರಲ್ಲಿ ಕುಟುಂ ಬಿನಿ, ಸ್ನೇಹದಲ್ಲಿ ತಾಯಿ, ಭಕ್ತಿಯಲ್ಲಿ ಮಗಳು, ಪ್ರಮೋದದಲ್ಲಿ ಬಂಧು, ಪರಾಮರ್ಶೆಯಲ್ಲಿ ಶಿಕ್ಷಕ, ಉಪಚರಿಸುವುದರಲ್ಲಿ ದಾಸಿ, ಇಷ್ಟಾಗಿದ್ದಳು. ನನ್ನ ಸೂರ್ಯಮುಖಿ—ಯಾರಿಗೆ ಹೀಗಿತ್ತು? ಸಂಸಾರದಲ್ಲಿ ಸಹಾಯಕಳು, ಗೃಹದಲ್ಲಿ ಲಕ್ಷ್ಮಿ, ಹೃದಯದಲ್ಲಿ ಧರ್ಮ, ಕಂಠದಲ್ಲಿ ಅಲಂಕಾರ! ನನ್ನ ಕಣ್ಣಿನ ತಾರಾ, ಹೃದಯದ ರಕ್ತ, ದೇಹದ ಜೀವನ, ಜೀವನಕ್ಕೆ ಸರ್ವ ಸ್ವಳು! ನನ್ನ ಪ್ರಮೋದದಲ್ಲಿ ಹರ್ಷ, ವಿಷಾದದಲ್ಲಿ ಶಾಂತಿ, ಚಿಂತೆಯಲ್ಲಿ ಬುದ್ಧಿ, ಕಾರ್ಯದಲ್ಲಿ ಉತ್ಸಾಹಕಳು! ಪ್ರಪಂಚದಲ್ಲಿ ಇಂತಹವಳು ಮತ್ತಾ ರು ಉಂಟು? ನನ್ನ ಕಣ್ಣಿಗೆ ಬೆಳಕು, ಶ್ರವಣಕ್ಕೆ ಸಂಗೀತ, ನಿಶ್ವಾಸಕ್ಕೆ ವಾಯು, ಸ್ಪರ್ಶಕ್ಕೆ ಜಗತ್ತಾಗಿದ್ದಳು. ನನ್ನ ವರ್ತಮಾನಕಾಲದ ಸುಖ ಸ್ವರೂಪಳಾಗಿಯೂ ಅತೀತಕಾಲದ ಸ್ಮೃತಿಸ್ವರೂಪಳಾಗಿಯೂ, ಭವಿಷ್ಯ ತ್ಕಾಲದ ಆಶಾಸ್ವರೂಪಳಾಗಿಯೂ, ಪರಲೋಕಕ್ಕೆ ಪುಣ್ಯಸ್ವರೂಪಳಾಗಿಯೂ ಇದ್ದಳು. ನಾನು ಶೂಕರ, ರತ್ನವನ್ನು ತಿಳಿದುಕೊಳ್ಳಬಲ್ಲೆನೆ? ಎಂದು ಮುಂತಾಗಿ ಮನಸ್ಸು ಪ್ರವಹಿಸುತಲಿತ್ತು.

ಹಠಾತ್ತಾಗಿ, ಅವನ ಸ್ಮರಣೆಯಲ್ಲಿ, ತಾನು ಸುಖಿಯಾಗಿ ಪಾಲ್ಕಿಯಲ್ಲಿ

ಹೋಗುತ್ತೇನೆಂತಲೂ ಸೂರ್ಯಮುಖಿಯು ಕಾಲಿನಿಂದ ನಡೆಯುತ್ತ ಕಷ್ಟ ಪಡುತ್ತಿದ್ದಳೆಂತಲೂ, ಹೊಳೆಯಿತು. ಆಗವನು ಪಾಲ್ಕಿಯಿಂದಿಳಿದು ಕಾಲಿಂದ ನಡೆದನು. ಬೋಯಿಗಳು ಬರೆಪಾಲ್ಕಿಯನ್ನು ಹಿಂದೆ ತೆಗೆದುಕೊಂಡು ಬಂದರು. ಬೆಳಗ್ಗೆ, ತಲ್ಪಿದ ಸ್ಥಳದಲ್ಲಿ ಪಾಲ್ಕಿಯ ಬೋಯಿಗಳಿಗೆ ಅಪ್ಪಣೆಯನ್ನು ಕೊಟ್ಟುಕಳುಹಿಸಿಬಿಟ್ಟನು. ಊರಿಗೆ ಉಳಿದಿದ್ದ ದಾರಿಯನೆಲ್ಲ ಕಾಲಿಂದಲೇ ನಡೆದುಕೊಂಡು ಹೋದನು.

ಆಗ ಮನಸ್ಸಿನಲ್ಲಿ ನನ್ನ ಈ ಜೀವನವು ಸೂರ್ಯಮುಖಿಯನ್ನು ವಧೆ ಮಾಡಿದ ಪ್ರಾಯಶ್ಚಿತ್ತಕ್ಕಾಗಿಯೇ ಇರುವುದು. ಪ್ರಾಯಶ್ಚಿತ್ತವು ಯಾವುದು? ಸೂರ್ಯಮುಖಿಯು ಗೃಹವನ್ನು ತ್ಯಾಗಮಾಡಿ ಸಕಲವಾದ ಸುಖಗಳಿಂದ ವಂಚಿತಳಾಗಿ ಹೊರಟುಹೋದಳು. ನಾನೂ ಆ ಸಕಲ ಸುಖಗಳನ್ನೂ ತ್ಯಜಿಸುವೆನು. ಐಶ್ವರ್ಯ, ಸಂಪತ್ತು, ದಾಸ, ದಾಸಿ, ಬಂಧುಬಾಂಧವರು, ಯಾವ ಸಂಬಂಧವೂ ಇರಕೂಡದು. ಸೂರ್ಯಮುಖಿಯು ಮನೆಯನ್ನು ಬಿಟ್ಟು ಹೋದಾರಭ್ಯ ಯಾವ್ಯಾವ ಕಷ್ಟಗಳನ್ನು ಅನುಭವಿಸಿದಳೋ ನಾನೂ ಆ ಕಷ್ಟಗಳನ್ನೆಲ್ಲ ಅನುಭವಿಸುವೆನು. ನಾನು ಪುನಃ ಗೋವಿಂದಪುರದಿಂದ ಹೊರಡುವದಿನದ ಮೊದಲ್ಗೊಂಡು ಕಾಲುನಡೆಯಲ್ಲಿ ಪ್ರಯಾಣವನ್ನು ಮಾಡುವೆನು, ಕದಾನ್ನವನ್ನು ಭುಂಜಿಸುವೆನು, ಮರದಬುಡದಲ್ಲಿ ಅಥವಾ ಪರ್ಣಕುಟೀರದಲ್ಲಿ ಮಲಗುವೆನು. ನಾನು ಸ್ವಂತಕ್ಕಾಗಿ ಇಟ್ಟುಕೊಳ್ಳುವ ಹಣದಲ್ಲಿ ಪ್ರಾಣಧಾರಣೆಗೆ ಎಷ್ಟು ಬೇಕೋ ಅಷ್ಟುಮಟ್ಟಿಗೆ ವೆಚ್ಚಮಾಡಿ ಮಿಕ್ಕದ್ದನ್ನ ಸಹಾಯಹೀನರಾದ ಹೆಂಗಸರ ಸೇವಾರ್ಥವಾಗಿ ದಾನಮಾಡುವೆನು. ಸತೀಶನಿಗೆ ದಾನವಾಗಿ ಕೊಡುವ ಹಣದಲ್ಲಿ ಅರ್ಧಾಂಶವನ್ನು ನನ್ನ ಯಾವಜ್ಜೀವವೂ ನಿರ್ಗತಿಕರಾದ ಹೆಂಗಸರ ಸಹಾಯಾರ್ಥವಾಗಿ ವ್ಯಯ ಮಾಡಬೇಕೆಂದು ದಾನಪತ್ರದಲ್ಲಿ ಬರೆಯುವೆನು. ಪ್ರಾಯಶ್ಚಿತ್ತ! ಪಾಪಕ್ಕೆ ಪ್ರಾಯಶ್ಚಿತ್ತಮಾಡುವುದುಂಟು. ದುಃಖಕ್ಕೆ ಪ್ರಾಯಶ್ಚಿತ್ತವುಂಟೆ? ಇಲ್ಲ. ದುಃ

ಖಕ್ಕೆ ಪ್ರಾಯಶ್ಚಿತ್ತವು ಮರಣವೊಂದೇ. ಸತ್ತರೆಮಾತ್ರ ದುಃಖಹೋಗು ವುದು. ಆ ಪ್ರಾಯಶ್ಚಿತ್ತವನ್ನು ಏತಕ್ಕೆ ಮಾಡಿಕೊಳ್ಳಕೂಡದು ? ಎಂದಂ ದುಕೊಂಡು, ಕೈಗಳಿಂದ ಕಣ್ಣುಗಳನ್ನು ಮುಚ್ಚಿಕೊಂಡು ಜಗದೀಶ್ವರನ ನಾಮಸ್ಮರಣೆಯನ್ನು ಮಾಡಿ ನಾಗೇಂದ್ರನಾಥನು ಮರಣದ ಆಶೆಯನ್ನು ನಿವಾರಣೆಮಾಡಿದನು.

---

## ಮುವ್ವತ್ತೊಂಭತ್ತನೆಯ ಪರಿಚ್ಛೇದ.

### ಎಲ್ಲಾ ಪೂರೈಸಿತು-ಯಾತನೆ ಪೂರೈಸಲಿಲ್ಲ.

ರಾತ್ರಿ ಎಂಟು ಘಂಟೆಯಲ್ಲಿ ಶ್ರೀಶಚಂದ್ರನು ಒಬ್ಬನೇ ಬೈಠಕಖಾನೆ ಯಲ್ಲಿ ಕುಳಿತಿದ್ದನು. ಈ ಸಮಯದಲ್ಲಿ ನಾಗೇಂದ್ರನು ಕಾಲುನಡಗೆಯಲ್ಲಿ ಅಲ್ಲಿಗೆ ಬಂದನು. ತಾನೇ ಕೈಯಲ್ಲಿ ತೆಗೆದುಕೊಂಡು ಬಂದಿದ್ದ ರೈಲ್ ಚೀಲ ವನ್ನು ದೂರದಲ್ಲಿಟ್ಟನು. ಚೀಲವನ್ನು ಇಟ್ಟು ಬಂದು ಕುರ್ಚಿಯಮೇಲೆ ಕುಳಿತುಕೊಂಡನು.

ಶ್ರೀಶಚಂದ್ರನು ಅವನ ಕ್ಲಿಷ್ಟವಾದ ಕಂಗೆಟ್ಟ ಮುಖವನ್ನು ನೋಡಿ ಭಯಪಟ್ಟು ಆವನಿಗೆ ಏನು ಕೇಳುವುದಕ್ಕೂ ತೋಚದೆ ಹೋಯಿತು. ಕಾಶೀಯಿಂದ ನಾಗೇಂದ್ರನು ಬ್ರಹ್ಮಚಾರಿಯ ಕಾಗದ ಬಂತೆಂತಲೂ ಮಧು ಪುರಕ್ಕೆ ಪ್ರಯಾಣಮಾಡುತ್ತೇನೆಂತಲೂ ಕಾಗದ ಬರೆದಿದ್ದನು. ಶ್ರೀಶಚಂದ್ರ ನಿಗೆ ಅಷ್ಟುಮಟ್ಟಿಗೆ ಗೊತ್ತಾಗಿತ್ತು. ಈಗ ನಾಗೇಂದ್ರನು ತಾನಾಗಿಯೇ ಯಾವ ಮಾತೂ ಆಡದೆ ಸುಮ್ಮನಿದ್ದುದನ್ನು ಕಂಡು ಶ್ರೀಶಚಂದ್ರನು

ನಾಗೇಂದ್ರನ ಹತ್ತರ ಹೋಗಿ ಕೂತುಕೊಂಡು ಅವನ ಕೈಯನ್ನು ಹಿಡಿದುಕೊಂಡು, ನಾಗೇಂದ್ರ! ನೀನು ಸುಮ್ಮನಿರುವುದು ನೋಡಿ ನನಗೆ ಬಹಳ ವ್ಯಥೆಯಾಗುತ್ತದೆ; ನೀನು ಮಧುಪುರಕ್ಕೆ ಹೋಗಲಿಲ್ಲವೆ? ಎಂದು ಕೇಳಿದನು.

ನಾಗೇಂದ್ರನು, ಹೋಗಿದ್ದೆ, ಎಂದು ಮಾತ್ರ ಹೇಳಿದನು. ಶ್ರೀಶಚಂದ್ರನು ಭಯಪಟ್ಟು, ಬ್ರಹ್ಮಚಾರಿಯನ್ನು ನೋಡಲಿಲ್ಲವೆ? ಎಂದನು.

ನಾಗೇಂದ್ರ—ಇಲ್ಲ.

ಶ್ರೀಶ—ಸೂರ್ಯಮುಖಿಯ ಸಮಾಚಾರವೇನಾದರೂ ಗೊತ್ತಾಯಿತೆ? ಅವಳೆಲ್ಲಿ?

ನಾಗೇಂದ್ರನು ಬೆರಳನ್ನು ಮೇಲಕ್ಕೆ ತೋರಿಸುತ್ತ, ಸ್ವರ್ಗದಲ್ಲಿ, ಎಂದನು.

ಶ್ರೀಶಚಂದ್ರನು ಸುಮ್ಮನಾದನು. ನಾಗೇಂದ್ರನೂ ಸುಮ್ಮನಿದ್ದು ಮುಖತಗ್ಗಿದವನಾಗಿದ್ದನು. ಸ್ವಲ್ಪ ಹೊತ್ತಿನ ಮೇಲೆ ಮುಖವನ್ನು ಮೇಲಕ್ಕೆತ್ತಿ, ನೀನು ಸ್ವರ್ಗವೆಂದರೆ ನಂಬುವುದಿಲ್ಲ—ಸ್ವರ್ಗವಿರುವುದು ಉಂಟೆಂದು ನಾನು ನಂಬುತ್ತೇನೆಂದನು.

ಮೊದಲು ನಾಗೇಂದ್ರನೂ ಸ್ವರ್ಗವನ್ನು ನಂಬಿರಲಿಲ್ಲವೆಂತಲೂ ಈಗ ನಂಬುತ್ತಾನೆಂತಲೂ, ಈಗ ನಂಬುವ ಸ್ವರ್ಗವು ಪ್ರೇಮ ಮತ್ತು ವಿಶ್ವಾಸದ ಸೃಷ್ಟಿಯಾಗಿರಬೇಕೆಂತಲೂ ಶ್ರೀಶನು ತಿಳಿದುಕೊಂಡನು. ಸೂರ್ಯಮುಖಿಯು ಎಲ್ಲಿಯೂ ಇಲ್ಲವೆಂಬ ಮಾತು ಸಹಿಸಲಾಗದು; ಸೂರ್ಯಮುಖಿಯು ಸ್ವರ್ಗದಲ್ಲಿದ್ದಾಳೆಂಬ ಮಾತು ಮನಸ್ಸಿಗೆ ಎಷ್ಟೋ ಸುಖವನ್ನುಂಟುಮಾಡುವುದಾಗಿತ್ತು.

ಇಬ್ಬರೂ ಮಾತನಾಡದೆ ಕುಳಿತಿದ್ದರು. ಶ್ರೀಶಚಂದ್ರನು ಇದು ಸಮಾಧಾನದ ಮಾತನಾಡುವ ಸಮಯವಲ್ಲವೆಂದು ತಿಳಿದುಕೊಂಡನು. ಆ

ಸಮಯದಲ್ಲಿ ಅನ್ಯರ ಸಮಾಚಾರವು ವಿಷಮಯವಾಗಿರುವದಲ್ಲದೆ, ಅನ್ಯರ ಸಂಸರ್ಗವೂ ವಿಷಮಯವಾಗಿರುವುದು— ಇದನ್ನು ತಿಳಿದವನಾಗಿ ಶ್ರೀಶಚಂದ್ರನು ನಾಗೇಂದ್ರನಿಗೋಸ್ಕರ ಹಾಸಿಗೆ ಮುಂತಾದ್ದು ಸಿದ್ಧಪಡಿಸಲು ಎದ್ದುಹೋದನು. ಊಟದ ಮಾತು ಎತ್ತುವುದಕ್ಕೆ ಅವನಿಗೆ ಧೈರ್ಯವುಂಟಾಗಲಿಲ್ಲ. ಅದರ ಭಾರವನ್ನು ಕಮಲಮಣಿಗೆ ವಹಿಸಬೇಕೆಂದು ಎದ್ದು ಹೊರಟು ಹೋದನು.

ಕಮಲೆಯು ಸೂರ್ಯಮುಖಿಯು ಇಲ್ಲವೆಂದು ಕೇಳಿದಳು. ಆಗವಳು ಯಾವ ಭಾರವನ್ನೂ ವಹಿಸಿಕೊಳ್ಳಲಿಲ್ಲ. ಸತೀಶನನ್ನು ಒಬ್ಬನನ್ನೆ ಬಿಟ್ಟು ಬಿಟ್ಟು ಆ ರಾತ್ರಿ ಅವಳು ಅದೃಶ್ಯವಾಗಿದ್ದಳು.

ಕಮಲಮಣಿಯು ಧೂಳಿಯಲ್ಲಿ ಹೊರಳಾಡುತ್ತ ಕೆದರಿದ ಕುಂತಲವುಳ್ಳವಳಾಗಿ ಅಳುತ್ತಿದ್ದಳು. ಆಗ ದಾಸಿಯು ಸತೀಶನನ್ನು ಕರೆದುಕೊಂಡು ಹೋಗಿ ಅವಳಲ್ಲಿ ಬಿಟ್ಟು ಹೊರಟುಹೋದಳು. ಸತೀಶನು ತಾಯಿಯು ಧೂಳಿಧೂಸರಳಾಗಿ ರೋದನ ಪರಾಯಣಳಾಗಿದ್ದುದನ್ನು ಕಂಡು ಪ್ರಥಮದಲ್ಲಿ ಸುಮ್ಮನೆ ಹತ್ತಿರ ಕುಳಿತಿದ್ದನು. ಅನಂತರ ಕುಸುಮವನ್ನು ನಿಂದಿಸುವ ಅವನ ಬೆರಳುಗಳಿಂದ ಅವಳ ಮುಖವನ್ನು ಎತ್ತಿ ನೋಡಲು ಪ್ರಯತ್ನಪಟ್ಟನು. ಕಮಲಮಣಿಯು ಮುಖವನ್ನೆತ್ತಿದಳು. ಆದರೆ ಮಾತನಾಡಲಿಲ್ಲ. ಸತೀಶನು ತಾಯಿಯ ಪ್ರಸನ್ನತೆಗೋಸ್ಕರ ಅವಳ ಮುಖಚುಂಬನವನ್ನು ಮಾಡಿದನು. ಕಮಲಮಣಿಯು ಅವನ ಮೈಯನ್ನು ಕೈಯಿಂದ ಸವರಿ ಆದರ ಮಾಡಿದಳು; ಆದರೆ ಮುದ್ದಿಟ್ಟುಕೊಳ್ಳಲಿಲ್ಲ; ಮಾತೂ ಆಡಲಿಲ್ಲ. ಆಗ ಸತೀಶನು ತಾಯಿಯ ಕುತ್ತಿಗೆಗೆ ಕೈಹಾಕಿ ಅವಳ ತೊಡೆಯಮೇಲೆ ಮಲಗಿಕೊಂಡು ಅತ್ತನು. ವಿಧಾತನಾದ ಪರಮೇಶ್ವರನನ್ನು ಹೊರ್ತು ಮತ್ತಾರು ಆ ಮಗುವಿನ ಹೃದಯವನ್ನು ಪ್ರವೇಶಮಾಡಿ ಆ ರೋದನದ ಕಾರಣವನ್ನು ತಿಳಿಯಬಲ್ಲರು?

ಶ್ರೀಶಚಂದ್ರನು ತನ್ನ ಸ್ವಂತ ಬುದ್ಧಿಯ ಮೇಲೆ ನಿರ್ಭರ ಮಾಡಿಕೊಂಡು ಸ್ವಲ್ಪ ಫಲಾಹಾರಕ್ಕೆ ತೆಗೆದುಕೊಂಡು ಹೋಗಿ ನಾಗೇಂದ್ರನ ಮುಂದೆ ಇಟ್ಟನು.

ನಾಗೇಂದ್ರ--ಅದರ ಅವಶ್ಯಕವಿಲ್ಲ—ಆದರೆ ನೀನು ಕೂತುಕೋ—ನಿನ್ನ ಸಂಗಡ ಮಾತನಾಡುವುದು ಬಹಳವಿದೆ. ಅದನ್ನು ಹೇಳಿ ಹೋಗೋಣವೆಂದು ಇಲ್ಲಿಗೆ ಬಂದೆನು.

ಆಗ ನಾಗೇಂದ್ರನು ವೈದ್ಯ ರಾಮಕೃಷ್ಣರಾಯನಿಂದ ಕೇಳಿದುದುನೆಲ್ಲ ಶ್ರೀಶಚಂದ್ರನಿಗೆ ವಿವರವಾಗಿ ಹೇಳಿದನು. ಅನಂತರ ಮುಂದೆ ನಡೆಯಬೇಕಾದುದುನೆಲ್ಲ ತಾನು ಯೋಚಿಸಿಕೊಂಡಿದ್ದ ಹಾಗೆ ಹೇಳಿದನು.

ಶ್ರೀಶಚಂದ್ರ—ನೀನು ಮಾರ್ಗದಲ್ಲಿ ಬ್ರಹ್ಮಚಾರಿಯನ್ನು ನೋಡದಿರುವುದು ಬಹಳಆಶ್ಚರ್ಯವಾಗಿದೆ. ಏತಕ್ಕೆಂದರೆ, ನೆನ್ನೆಯೇ ಅವನು ಈ ಕಲಕತ್ತೆಯಿಂದ ಮಧುಪುರಕ್ಕೆ ನಿನ್ನನ್ನು ಹುಡುಕಿಕೊಂಡು ಹೋದನು.

ನಾಗೇಂದ್ರ—ಅದು ಹೇಗೆ? ನಿನಗೆ ಹೇಗೆ ಬ್ರಹ್ಮಚಾರಿಯ ಸಂದರ್ಶನವಾಯಿತು ?

ಶ್ರೀಶ—ಅವನು ಬಹಳ ದೊಡ್ಡ ಮಹಾತ್ಮನಾದ ಮನುಷ್ಯನು. ನಿನಗೆ ಬರೆದ ಕಾಗದಕ್ಕೆ ಉತ್ತರವು ಬಾರದುದರಿಂದ ತಾನೇ ಸ್ವಂತವಾಗಿ ನಿನ್ನನ್ನು ಹುಡುಕಿಕೊಂಡು ಗೋವಿಂದಪುರಕ್ಕೆ ಬಂದನು. ಗೋವಿಂದಪುರದಲ್ಲಿ ನೀನು ಇರಲಿಲ್ಲ. ಆದರೆ ಅವನ ಕಾಗದವು ನಿನಗೆ ಕಾಶೀಯಲ್ಲಿದ್ದಾಗ ತಲ್ಪಿತೆಂದು ತಿಳಿದು ಯಾರಿಗೂ ಏನೂ ಹೇಳದೆ ಆವನು ಪುರುಷೋತ್ತಮಕ್ಕೆ ಹೊರಟುಹೋದನು. ಅಲ್ಲಿಂದ ಹಿಂದಿರುಗಿ ಬಂದು ನಿನ್ನನ್ನು ಹುಡುಕುತ್ತ ಪುನಃ ಗೋವಿಂದಪುರಕ್ಕೆ ಹೋಗಿದ್ದನು. ಅಲ್ಲಿ ನಿನ್ನ ವರ್ತಮಾನವು ಸಿಕ್ಕದೆ ನನ್ನ ಹತ್ತರಕ್ಕೆ ಬಂದನು ; ನಾನು ಅವನಿಗೆ ಎಲ್ಲವನ್ನೂ ತಿಳಿಸಿ ನಿನ್ನ ಕಾಗದವನ್ನೂ ತೋರಿಸಿದೆನು. ಅವನು ನೆನ್ನೆಯದಿನ ನಿನ್ನನ್ನು ಮಧುಪುರದಲ್ಲಿ

ನೋಡುವ ಭರವಸೆಯಿಂದ ಇಲ್ಲಿಂದ ಹೊರಟುಹೋದನು. ನೆನ್ನೆರಾತ್ರಿ ನಿನ್ನನ್ನು ರಾಣಿಗಂಜನಲ್ಲಿ ನೋಡುವ ಸಂಭವವಿತ್ತು.

ನಾಗೇಂದ್ರ—ನಾನು ನೆನ್ನೆ ರಾಣಿಗಂಜನಲ್ಲಿ ಉಳಿಯಲಿಲ್ಲ. ಸೂರ್ಯ ಮುಖಿಯ ವಿಚಾರವನ್ನೇನಾದರೂ ಹೇಳಿದನೆ ?

ಶ್ರೀಶ—ಅದನ್ನೆಲ್ಲ ಬೆಳಗ್ಗೆ ಹೇಳುತ್ತೇನೆ.

ನಾಗೇಂದ್ರ—ಹೇಳಿದರೆ ನನಗೆ ಮನಸ್ಸಿನ ವ್ಯಥೆಯು ಹೆಚ್ಚುತ್ತೆಂದು ತಿಳಿದಿದ್ದೀಯೆ—ಈ ವ್ಯಥೆ ಇನ್ನು ವೃದ್ಧಿಯಾಗುವುದಿಲ್ಲ ; ಹೇಳು.

ಆಗ ಶ್ರೀಶಚಂದ್ರನು ಬ್ರಹ್ಮಚಾರಿಯಿಂದ ಕೇಳಿದ್ದ ಹಾಗೆ ಸೂರ್ಯ ಮುಖಿಯು ಅವನು ಮಾರ್ಗದಲ್ಲಿ ಬಿದ್ದಿದ್ದವಳನ್ನು ಕಂಡದ್ದು, ಅವಳಿಗೆ ಆಲಸ್ಯವಾಗಿದ್ದುದು, ಅವಳಿಗೆ ಔಷದ ಕೊಡಿಸಿದ್ದುದು, ಅವಳು ಮುಕ್ಕಾಲು ವಾಶಿ ಆರೋಗ್ಯವಾದುದು, ಇವನ್ನೆಲ್ಲ ಹೇಳಿದನು—ಸೂರ್ಯಮುಖಿಯು ಎಷ್ಟು ದುಃಖಿತಳಾಗಿದ್ದಳೆಂದು ಕೇಳಿದ್ದನೋ ಅದನ್ನು ಮಾತ್ರ ಹೇಳಲಿಲ್ಲ.

ಕೇಳಿ ನಾಗೇಂದ್ರನು ಎದ್ದು ಮನೆಯಿಂದ ಹೊರಗೆ ಹೋದನು. ಶ್ರೀಶನೂ ಹಿಂದೆ ಹೊರಟನು. ನಾಗೇಂದ್ರನು ಬರಬೇಡವೆಂದು ನಿಷೇಧಿಸಿದನು. ನಾಗೇಂದ್ರನು ಅಲ್ಲಲ್ಲಿ ಹುಚ್ಚನ ಹಾಗೆ ಎರಡು ಜಾಮದವರೆಗೂ ತಿರುಗಾಡಿದನು. ಜನಗಳ ಗುಂಪಿನಲ್ಲಿ ಆತ್ಮವಿಸ್ಮೃತಿಯುಂಟಾಗಲೆಂದು ಆಶೆ_ಆದರೆ ಆಗ ಜನರ ಸಂಪದಿ ಕಡಮೆಯಾಗಿತ್ತು. ಇನ್ನು ವಿಸ್ಮೃತಿಯಾಗುವುದು ಹೇಗೆ ? ಆಗ ಪುನಃ ಶ್ರೀಶಚಂದ್ರನ ಮನೆಯೊಳಗೆ ಹೋದನು. ಶ್ರೀಶಚಂದ್ರನು ಪುನಃ ಹತ್ತರ ಕುಳಿತುಕೊಂಡನು. ನಾಗೇಂದ್ರನು, ಇನ್ನೂ ಹೇಳುವುದಿರಬೇಕು ; ಅವಳು ಎಲ್ಲಿಗೆ ಹೋಗಿದ್ದಳು, ಏನುಮಾಡಿದಳು, ಅದನ್ನೆಲ್ಲ ಬ್ರಹ್ಮಚಾರಿಯು ಅವಳಿಂದ ತಿಳಿದಿದ್ದು ನಿನ್ನ ಸಂಗಡ ಹೇಳಿರ ಬೇಕೆಂದನು.

ಶ್ರೀಶ—ಈ ಹೊತ್ತು ಆ ಮಾತುಗಳಿಂದ ಪ್ರಯೋಜನವಿಲ್ಲ. ಬಹಳ ಶ್ರಮಪಟ್ಟಿರುತ್ತಿ. ಸ್ವಲ್ಪ ವಿಶ್ರಾಮವನ್ನು ತೆಗೆದುಕೊ. ನಾಗೇಂದ್ರನು ಹುಬ್ಬು ಗಂಟುಹಾಕಿಕೊಂಡು ಪರುಷವಾದ ಧ್ವನಿಯಿಂದ, ಹೇಳು, ಎಂದನು.

ಶ್ರೀಶಚಂದ್ರನು ನಾಗೇಂದ್ರನ ಮುಖವನ್ನು ನೋಡಲಾಗಿ ಅವನು ಹುಚ್ಚನಹಾಗಾಗಿದ್ದನು. ಮಿಂಚು ಗರ್ಭಿತವಾದ ಮೇಘದ ಹಾಗೆ ಅವನ ಮುಖವು ಕಪ್ಪಾಗಿ ಹೋಗಿತ್ತು. ಭಯಪಟ್ಟು ಶ್ರೀಶಚಂದ್ರನು ಹೇಳುತ್ತೇನೆಂದನು. ನಾಗೇಂದ್ರನ ಮುಖವು ಪ್ರಸನ್ನವಾಯಿತು. ಶ್ರೀಶಚಂದ್ರನು ಸಂಕ್ಷೇಪವಾಗಿ, ಸೂರ್ಯಮುಖಿಯು ಕಾಲುಹಾದಿ ಮಾರ್ಗವಾಗಿ ಸ್ವಲ್ಪಸ್ವಲ್ಪ ದೂರ ನಡೆದುಕೊಳ್ಳುತ್ತ ಇತ್ತಕಡೆಗೆ ಬರುತಲಿದ್ದಳೆಂದು ಹೇಳಿದನು.

ನಾಗೇಂದ್ರ—ನಿತ್ಯವೂ ಎಷ್ಟುದೂರ?

ಶ್ರೀಶ—ಒಂದು ಒಂದೂವರೆ ಹರಿದಾರಿ.

ನಾಗೇಂದ್ರ—ಅವಳು ಮನೆಯಿಂದ ಹೊರಟಾಗ ಕೈಲಿ ಒಂದುಕಾಸೂ ತೆಗೆದುಕೊಂಡು ಹೋಗಲಿಲ್ಲ—ಕಾಲಕ್ಷೇಪ ಹೇಗೆ?

ಶ್ರೀಶ—ಒಂದೊಂದು ದಿನ ಉಪವಾಸ—ಒಂದೊಂದು ದಿನ ಭಿಕ್ಷೆ—ನೀನೇನು ಹುಚ್ಚನಾಗಿದ್ದೀ!!

ಹೀಗೆಂದು ಹೇಳಿ ನಾಗೇಂದ್ರನಿಗೆ ಒಂದು ಪೆಟ್ಟು ಕೊಟ್ಟನು—ಏತಕ್ಕೆಂದರೆ, ನಾಗೇಂದ್ರನು ಕೈಯಿಂದ ಗುತ್ತಿಗೆಯನ್ನು ಹಿಚಿಕಿಕೊಳ್ಳುತ್ತಿದ್ದನು. ಒಂದು ಪೆಟ್ಟನ್ನು ಕೊಟ್ಟು, ನೀನು ಸತ್ತರೆ ಸೂರ್ಯಮುಖಿಯು ಸಿಕ್ಕುವಳೆ? ಎಂದು ಹೇಳಿ ನಾಗೇಂದ್ರನ ಕೈಯನ್ನು ತೆಗೆದು ಭದ್ರವಾಗಿ ಹಿಡಿದುಕೊಂಡನು. ನಾಗೇಂದ್ರನು, ಹೇಳು, ಎಂದನು.

ಶ್ರೀಶಚಂದ್ರನು ನೀನು ಸ್ಥಿರಮನಸ್ಕನಾಗಿ ಕೇಳದಿದ್ದರೆ ನಾನು ಹೇಳುವುದಿಲ್ಲವೆಂದನು.

ಆದರೆ ಶ್ರೀಶಚಂದ್ರನ ಮಾತು ಅವನ ಕಿವಿಗೆ ಬೀಳಲಿಲ್ಲ. ಅವನಿಗೆ ಚೈತನ್ಯವಿರಲಿಲ್ಲ. ನಾಗೇಂದ್ರನು ಕಣ್ಣು ಮುಚ್ಚಿಕೊಂಡು ಸ್ವರ್ಗಾರೂಢಳಾದ ಸೂರ್ಯಮುಖಿಯ ರೂಪವನ್ನು ಧ್ಯಾನಮಾಡುತ್ತ, ಅವಳು ರತ್ನಖಚಿತವಾದ ಸಿಂಹಾಸನದಲ್ಲಿ ರಾಣಿಯಾಗಿ ಕುಳಿತಿರುವ ಹಾಗೂ, ನಾಲ್ಕು ದಿಕ್ಕುಗಳಿಂದಲೂ ಶೀತಳವಾದ ಸುಗಂಧಮಯವಾದ ತಂಗಾಳಿಯಿಂದ ಅವಳ ಅಳಕದಾಮವು ಅಲುಗಾಡುತಲಿರುವ ಹಾಗೂ, ನಾಲ್ಕು ದಿಕ್ಕಿನಲ್ಲಿಯೂ ಪುಷ್ಪನಿರ್ಮಿತವಾದ ಹಕ್ಕಿಗಳು ಹಾರಾಡುತ್ತ ವೀಣಾಧ್ವನಿಯಿಂದ ಗಾನಮಾಡುತ್ತಿರುವ ಹಾಗೂ, ಅವಳ ಪದತಲದಲ್ಲಿ ನೂರಾರು ಪದ್ಮಗಳು ವಿಕಸಿತವಾದ ಹಾಗೂ, ಅವಳ ಸಿಂಹಾಸನದ ಚಂದ್ರಾತಪದಲ್ಲಿ ನೂರಾರು ಚಂದ್ರರು ಪ್ರಜ್ವಲಿಸುತಲಿದ್ದ ಹಾಗೂ, ನಾಲ್ಕು ಕಡೆಯಲ್ಲಿಯೂ ನಕ್ಷತ್ರಗಳು ಮಾಲಾಕಾರವಾಗಿ ಪ್ರಕಾಶಿಸುತಲಿರುವ ಹಾಗೂ, ತಾನು ಒಂದು ಅಂಧಕಾರಪೂರ್ಣವಾದ ಸ್ಥಳದಲ್ಲಿ ಬಿದ್ದಿರುವ ಹಾಗೂ, ತನ್ನ ಅಂಗಾಂಗಗಳಲ್ಲಿ ಯಾತನೆಪಡುತಲಿದ್ದ ಹಾಗೂ, ಅಸುರರು ತನ್ನನ್ನು ಬೆತ್ತಗಳಿಂದ ಹೊಡೆಯುತಲಿದ್ದ ಹಾಗೂ, ಅದನ್ನು ಸೂರ್ಯಮುಖಿಯು ನಿಷೇಧಿಸುತಲಿದ್ದ ಹಾಗೂ ಕಂಡನು.

ಶ್ರೀಶಚಂದ್ರನು ಬಹಳ ಪ್ರಯತ್ನಪಟ್ಟು ಅವನಿಗೆ ಚೇತನವುಂಟಾಗುವ ಹಾಗೆ ಮಾಡಿದನು. ಎಚ್ಚರಿಕೆಯುಂಟಾಗಿ ನಾಗೇಂದ್ರನು ಉಚ್ಚವಾದ ಸ್ವರದಿಂದ, ಸೂರ್ಯಮುಖಿ! ಪ್ರಾಣಾಧಿಕೆ! ನೀನೆಲ್ಲಿ? ಎಂದು ಕೂಗಿದನು. ಈ ಚೀತ್ಕಾರವನ್ನು ಕೇಳಿ ಶ್ರೀಶಚಂದ್ರನು ಸ್ತಂಭಿತನಾಗಿ ಭಯಪಟ್ಟು ಸುಮ್ಮನಿದ್ದನು. ಕ್ರಮನಾಗಿ ನಾಗೇಂದ್ರನು ಸ್ವಾಭಾವಿಕವಾದ ಸ್ಥಿತಿಗೆ ಬಂದನು. ಪುನಃ, ಹೇಳೆಂದನು.

ಶ್ರೀಶಚಂದ್ರನು ಭೀತನಾಗಿ ಮತ್ತೇನು ಹೇಳಲೆಂದನು.

ನಾಗೇಂದ್ರ—ಹೇಳು, ಇಲ್ಲದಿದ್ದರೆ ನಾನು ಇಲ್ಲಿಯೇ ಪ್ರಾಣತ್ಯಾಗವನ್ನು ಮಾಡಿಕೊಳ್ಳುವೆನು.

ಶ್ರೀಶನು ಭಯಪಟ್ಟು ಹೇಳತೊಡಗಿದನು ; ಏನೆಂದರೆ :—ಸೂರ್ಯ ಮುಖಿಯು ಹೆಚ್ಚು ದಿನ ಈ ಕಷ್ಟಪಡಲಿಲ್ಲ. ಒಬ್ಬ ಧನಾಢ್ಯನಾದ ಬ್ರಾಹ್ಮಣನು ಸಪರಿವಾರವಾಗಿ ಕಾಶೀಗೆ ಹೋಗುತಲಿದ್ದನು. ಅವನು ಕಲಿಕತ್ತೆ ವರೆಗೂ ದೋಣಿಯಲ್ಲಿ ಬರುತ್ತಿದ್ದನು. ಒಂದುದಿನ ನದಿಯತೀರದಲ್ಲಿ ಸೂರ್ಯ ಮುಖಿಯು ಮರದ ಬುಡದಲ್ಲಿ ಮಲಗಿದ್ದಳು ; ಆ ಬ್ರಾಹ್ಮಣನು ಅಲ್ಲಿಯೇ ಅಡಿಗೆಮಾಡಿ ಊಟಕ್ಕೆ ಇಳಿದನು. ಆ ಬ್ರಾಹ್ಮಣನ ಹೆಂಡತಿಯು ಸಂಗಡ ಸೂರ್ಯಮುಖಿಯು ಮಾತನಾಡುತ್ತಿರಲಾಗಿ ಅವಳ ಅವಸ್ಥೆಯನ್ನು ನೋಡಿ ಅವಳ ರೀತಿಯಿಂದ ಪ್ರೀತಳಾಗಿ ಬ್ರಾಹ್ಮಣನ ಹೆಂಡತಿಯು ಸೂರ್ಯಮುಖಿಯನ್ನು ದೋಣಿಯಲ್ಲಿ ಕರೆದುಕೊಂಡು ಹೋದಳು. ಸೂರ್ಯಮುಖಿಯು ತಾನೂ ಕಾಶೀಗೆ ಹೋಗುವುದಾಗಿ ಹೇಳಿದಳಂತೆ.

ನಾಗೇಂದ್ರ—ಆ ಬ್ರಾಹ್ಮಣನ ಹೆಸರೇನು ? ಅವನ ಊರು ಯಾವದು?

ನಾಗೇಂದ್ರನು ಮನಸ್ಸಿನಲ್ಲಿ ಏನೋ ಪ್ರತಿಜ್ಞೆಯನ್ನು ಮಾಡಿಕೊಂಡು ಆ ಪ್ರಶ್ನೆಯನ್ನು ಮಾಡಿದನು. ಪುನಃ ಅದರಮೇಲೆ ಏನಾಯಿತೆಂದನು.

ಶ್ರೀಶ—ಬ್ರಾಹ್ಮಣನ ಪರಿವಾರದವರೊಂದಿಗೆ ಸೂರ್ಯಮುಖಿಯು ಬರ್ಹಿ ಎಂಬ ಸ್ಥಳದವರೆಗೆ ಬಂದಳು. ಕಲಿಕತ್ತೆವರೆಗೆ ದೋಣಿಯಲ್ಲಿಯೂ ಕಲಿಕತ್ತೆಯಿಂದ ರಾಣೀಗಂಜವರೆಗೆ ರೆಯಿಲಿನಲ್ಲಿಯೂ ರಾಣೀಗಂಜನಿಂದ ಎತ್ತಿನ ಬಂಡಿಯಲ್ಲಿಯೂ ಹೋದಳು. ಅದುವರೆಗೆ ನಡೆಯುವ ಶ್ರಮವಿಲ್ಲ.

ನಾಗೇಂದ್ರ—ಅದರಮೇಲೆ ಬ್ರಾಹ್ಮಣನು ಅವಳನ್ನು ಕಳುಹಿಸಿಬಿಟ್ಟನೆ ?

ಶ್ರೀಶ—ಇಲ್ಲ. ಸೂರ್ಯಮುಖಿಯೇ ಅಪ್ಪಣೆಯನ್ನು ತೆಗೆದುಕೊಂಡಳು. ಅವಳು ಕಾಶೀಗೆ ಹೋಗಲಿಲ್ಲ. ಎಷ್ಟುದಿನ ನಿನ್ನನ್ನು ನೋಡದೆ ಇರುವಳು ? ನಿನ್ನನ್ನು ನೋಡುವುದಕ್ಕೆ ಬರ್ಹಿಯಿಂದ ಕಾಲುಹಾದಿಯಲ್ಲಿ ಹಿಂದಿರುಗಿದಳು.

ಈ ಮಾತು ಹೇಳುತ್ತಿದ್ದ ಹಾಗೆ ಶ್ರೀಶಚಂದ್ರನ ಕಣ್ಣಿನಲ್ಲಿ ನೀರು ತುಂಬಿತು. ಅವನು ನಾಗೇಂದ್ರನನ್ನೇ ನೋಡುತಲಿದ್ದನು. ಶ್ರೀಶಚಂದ್ರನ ಕಣ್ಣೀರು ನಾಗೇಂದ್ರನಿಗೆ ಬಹಳ ಉಪಕಾರವನ್ನು ಮಾಡಿತು. ಅವನು ಶ್ರೀಶಚಂದ್ರನ ಕುತ್ತಿಗೆಯನ್ನು ಕಟ್ಟಿಕೊಂಡು ಅವನ ಭುಜದಮೇಲೆ ತಲೆಯನ್ನಿಟ್ಟುಕೊಂಡು ಅತ್ತನು. ಶ್ರೀಶಚಂದ್ರನ ಮನೆಗೆ ಬಂದಾರಭ್ಯ ನಾಗೇಂದ್ರನು ಅತ್ತಿರಲಿಲ್ಲ ಅವನ ಶೋಕವು ರೋದನವನ್ನು ಮೀರಿತ್ತು. ಆಗ ಆ ರುದ್ಧವಾಗಿದ್ದ ಶೋಕದ ಪ್ರವಾಹವು ವೇಗವಾಗಿ ಹರಿಯಿತು. ನಾಗೇಂದ್ರನು ಶ್ರೀಶಚಂದ್ರನ ಭುಜದಮೇಲೆ ಮುಖವನ್ನಿರಿಸಿಕೊಂಡು ಮಕ್ಕಳ ಹಾಗೆ ಅತ್ತನು. ಇದರಿಂದ ಯಾತನೆಯು ಬಹಳಮಟ್ಟಿಗೆ ಉಪಶಮನವಾಯಿತು. ಯಾವ ಶೋಕಕ್ಕೆ ರೋದನವಿರುವದಿಲ್ಲವೋ ಅದು ಯಮನ ದೂತನಾಗಿರುತ್ತದೆ.

ನಾಗೇಂದ್ರನು ಸ್ವಲ್ಪ ಶಾಂತನಾದಮೇಲೆ ಶ್ರೀಶಚಂದ್ರನು, ಈ ಮಾತುಗಳಿಂದ ಇಂದು ಏನೂ ಪ್ರಯೋಜನವಿಲ್ಲವೆಂದನು.

ನಾಗೇಂದ್ರನು ಇನ್ನೇನು ಹೇಳತಕ್ಕದ್ದು ಉಳಿಯಿತು ? ಮುಂದೆ ನಡೆದುದೆಲ್ಲ ಕಂಡಹಾಗೆಯೆ ಆಯಿತು. ಬರ್ಹಿಯಿಂದ ಮಧುಪುರಕ್ಕೆ ಒಬ್ಬಳೇ ನಡೆದುಕೊಂಡು ಬರುತ್ತಿದ್ದಳು. ದಾರಿನಡೆನು ಆ ಕಷ್ಟದಿಂದಲೂ ಆಹಾರವಿಲ್ಲದೆ ಮಳೆಯಲ್ಲಿ ನಿರಾಶ್ರಯಳಾಗಿ ಮನಸ್ಸಿನ ಕ್ಲೇಶದಿಂದಲೂ ರೋಗಗ್ರಸ್ತಳಾಗಿ ಸಾಯುವುದಕ್ಕೋಸ್ಕರ ಮಾರ್ಗದಲ್ಲಿ ಬಿದ್ದಿದ್ದಳು ಎಂದು ಹೇಳಿದನು.

ಶ್ರೀಶಚಂದ್ರನು ಮಾತನಾಡಲಿಲ್ಲ. ಕಡೆಗೆ, ನಾಗೇಂದ್ರ! ವೃಥಾ ಏತಕ್ಕೆ ಅದನ್ನೆಲ್ಲ ಚಿಂತಿಸುತ್ತಿ ? ನಿನ್ನ ದೋಷವು ಏನೂ ಇಲ್ಲ. ನೀನು ಅವಳ ಇಷ್ಟಕ್ಕೆ ವಿರೋಧವಾಗಿ ಯಾವ ಕೆಲಸವನ್ನೂ ಮಾಡಲಿಲ್ಲ. ಯಾವದು ನಮ್ಮ ಸ್ವಂತದೋಷದಿಂದ ಉಂಟಾಗಲಿಲ್ಲವೋ, ಬುದ್ಧಿವಂತರು ಅದಕ್ಕೋಸ್ಕರ ಅನುತಾಪಪಡುವುದಿಲ್ಲವೆಂದನು.

ನಾಗೇಂದ್ರನಾಥನು ಅದಕ್ಕೊಪ್ಪಲಿಲ್ಲ. ಅವನು ಎಲ್ಲಾ ತನ್ನ ದೋಷವೆಂತಲೇ ತಿಳಿದುಕೊಂಡನು. ಆವನು ವಿಷವೃಕ್ಷದ ಬೀಜವನ್ನು ಹೃದಯದಿಂದ ತೆಗೆದುಹಾಕಲಿಲ್ಲವೇತಕ್ಕೆ ?

## ನಾಲ್ವತ್ತನೆಯ ಪರಿಚ್ಛೇದ.

### ಹೀರೆಯ ವಿಷವೃಕ್ಷದ ಫಲ.

ಹೀರೆಯು ಮಹಾರತ್ನವನ್ನು ಒಂದು ಕವಡೆಯನ್ನು ತೆಗೆದುಕೊಂಡು ವಿಕ್ರಯಿಸಿಬಿಟ್ಟಳು. ಧರ್ಮವು ಚಿರಕಾಲ ಕಷ್ಟದಿಂದ ರಕ್ಷಿತವಾಗುತ್ತದೆ; ಆದರೆ ಒಂದು ದಿನದ ಅಜಾಗ್ರತೆಗೋಸ್ಕರ ನಷ್ಟವಾಗಿ ಹೋಗಿಬಿಡುತ್ತದೆ. ಹೀರೆಗೆ ಹಾಗೆಯೇ ಆಯಿತು. ಯಾವಧನದ ಆಶೆಗೆ ಹೀರೆಯು ಈ ಮಹಾರತ್ನವನ್ನು ವಿಕ್ರಯಿಸಿದಳೋ ಆ ಧನವೆಂಬುದು ಒಂದು ಕುರುಡುಕವಡೆಯಾಗಿತ್ತು. ಏತಕ್ಕೆಂದರೆ, ದೇವೇಂದ್ರನ ಪ್ರೇಮವು ಗೋಡುಸೇರಿದ ಪ್ರವಾಹದ ನೀರಿನ ಹಾಗೆ ಕ್ಷಣಿಕವಾದುದಾಗಿ ನೀರು ಹರಿದುಹೋದಮೇಲೆ ಉಳಿಯುವ ಗೋಡು ಅಥವಾ ಕೆಸರಿನಂತೆ ಪರಿಣಮಿಸಿತು. ಮೂರುದಿನದಲ್ಲಿ ಪ್ರೇಮಪ್ರವಾಹದ ನೀರು ಬಸಿದುಹೋಗಿ ಹೀರೆಯನ್ನು ಕೆಸರಿನಲ್ಲಿ ಕೂಳ್ಳರಿಸಿ ಬಿಟ್ಟಿತು. ಕೃಪಣನು ಅಥವಾ ಯಶಸ್ಸನ್ನು ಅಪೇಕ್ಷಿಸುವ ವ್ಯಕ್ತಿಯು ಬಹುಕಾಲದಿಂದ ಹೊಟ್ಟೆಕಟ್ಟಿ ಕೂಡಿಹಾಕಿದ ಅರ್ಥವನ್ನೆಲ್ಲ ಮಗನ ಮದುವೆ ಅಥವಾ ಇತರ ಉತ್ಸವಕ್ಕಾಗಿ ಒಂದುದಿನದ ಸುಖಕ್ಕೋಸ್ಕರ ಖರ್ಚುಮಾಡಿ ಹೋಗಲಾಡಿಸಿಕೊಳ್ಳುವ ಹಾಗೆ ಹೀರೆಯು ಪ್ರಯತ್ನಪುರಸ್ಸರವಾಗಿ ಧರ್ಮವನ್ನು ಕಾಪಾಡಿಕೊಂಡಿದ್ದು ಒಂದು ದಿನದ ಸುಖಕ್ಕೋಸ್ಕರ ಅದನ್ನು ಹೋಗಲಾಡಿಸಿಕೊಂಡು, ಗಳಿಸಿದ ಹಣವನ್ನೆಲ್ಲ ಕಳೆದುಕೊಂಡ ಲೋಭಿಯು

ಹಾಗೆ ಚಿರಕಾಲ ವ್ಯಥೆಗೆ ಗುರಿಯಾಗಿ ನಿಂತಳು. ಆಡುವ ಹುಡುಗರಿಂದ ಕಡಿದು ಬಿಸಾಕಲ್ಪಟ್ಟ ಅಪಕ್ವವಾದ ಮಾವಿನಕಾಯಿನ ಹಾಗೆ ಹೀರೆಯು ದೇವೇಂದ್ರನಿಂದ ಪರಿತ್ಯಕ್ತಳಾಗಿ ದಾರುಣವಾದ ವ್ಯಥೆಯನ್ನು ಅನುಭವಿಸಿದಳು—ಪರಿತ್ಯಕ್ತಳಾದುದು ಮಾತ್ರವೇ ಅಲ್ಲ—ಅವಳು ದೇವೇಂದ್ರನಿಂದ ಅವಮಾನಿತಳಾಗಿ ಪಟ್ಟಸಂಕಟವನ್ನು ಹೆಂಗಸರಲ್ಲಿ ಒಬ್ಬ ಅಥವಾಧಮಹೆಂಗಸು ಕೂಡ ಸಹಿಸಲಾರಳು.

ದೇವೇಂದ್ರನು ಹೀರೆಯನ್ನು ತ್ಯಜಿಸಿದ ದಿನ, ಅವಳು ಅವನ ಕಾಲುಗಳನ್ನು ಹಿಡಿದುಕೊಂಡು, ಈ ದಾಸಿಯಾದ ನನ್ನನ್ನು ಪರಿತ್ಯಾಗಮಾಡಬೇಡಿ ಎಂದು ಬೇಡಿಕೊಂಡು ಕುಳಿತಿದ್ದಳು. ಆಗ ದೇವೇಂದ್ರನು, ನಾನು ಕೇವಲ ಕುಂದನಂದಿನಿಯನ್ನು ಪಡೆಯುವ ಆಶೆಯಿಂದ ನಿನ್ನನ್ನು ಇದುವರೆಗೆ ಗೌರವಿಸುತಲಿದ್ದೆನು. ಕುಂದಳನ್ನು ನನಗೆ ಭೇಟಿಮಾಡಿಸಿದರೆ ಆಗ ನಿನ್ನ ಸಂಗಡ ಮಾತನಾಡುವೆನು. ಇಲ್ಲದಿದ್ದರೆ ಇಷ್ಟಕ್ಕೆ ಸರಿಯಾಯಿತು. ನೀನು ಎಷ್ಟು ಗರ್ವಿತಳಾಗಿದ್ದಿಯೋ ಅದಕ್ಕೆ ತಕ್ಕ ಪ್ರತಿಫಲವನ್ನು ಕೊಟ್ಟಿದ್ದೇನೆ; ನೀನು ಈ ಕಳಂಕದ ಹೊರೆಯನ್ನು ಹೊತ್ತುಕೊಂಡು ಮನೆಗೆ ಹೋಗೆಂದು ಹೇಳಿಬಿಟ್ಟನು.

ಹೀರೆಗೆ ಕ್ರೋಧದಿಂದ ಕತ್ತಲೆಯು ಕವಿತುಕೊಂಡಿತು. ಅವಳ ತಲೆಯು ತಿರುಗುವುದು ನಿಂತಮೇಲೆ ದೇವೇಂದ್ರನ ಇದುರಿಗೆ ನಿಂತು ಹುಬ್ಬುಗಂಟುಹಾಕಿಕೊಂಡು ಕಿಡಿಕೆಂಡವಾದ ಕಣ್ಣುಗಳಿಂದ ಶತಮುಖದಿಂದ ಅವನನ್ನು ತಿರಸ್ಕಾರಮಾಡಿದಳು. ಮುಗ್ಧಳಾದ ಪಾಪಿಷ್ಠಳಾದ ಹೆಂಗಸು ಹೇಗೆ ತಿರಸ್ಕಾರಮಾಡಲು ಬಲ್ಲಳೋ ಹಾಗೆ ತಿರಸ್ಕಾರಮಾಡಿದಳು. ಅದರಿಂದ ದೇವೇಂದ್ರನಿಗೆ ತಾಳ್ಮೆಯು ಹೋಗಿ, ಅವನು ಹೀರೆಯನ್ನು ಕಾಲಿನಿಂದ ಒದ್ದು ಪ್ರಮೋದೋದ್ಯಾನದಿಂದ ಹೊರಡಿಸಿಬಿಟ್ಟನು. ಹೀರೆ ಪಾಪಿಷ್ಠೆ—ದೇವೇಂದ್ರನು ಪಾಪಿಷ್ಠ ಮತ್ತು ಪಶು-ಹೀಗೆ ಇಬ್ಬರ ಪರಸ್ಪರ ಪ್ರೇಮದ ಪತ್ರಿ

ಶ್ರುತಿಯು ಸುಲಭವಾಗಿ ಪರಿಣಮಿಸಿತು.

ಹೀರೆಯು ಪದಾಹತಳಾಗಿ ಮನೆಗೆ ಹೋಗಲಿಲ್ಲ. ಗೋವಿಂದಪುರದಲ್ಲಿ ಒಬ್ಬ ಚಂಡಾಲನು ವೈದ್ಯಮಾಡುತಲಿದ್ದನು. ಚಂಡಾಲರಿಗೆ ಔಷಧವನ್ನು ಕೊಡುತಲಿದ್ದನು. ಅವನಿಗೆ ಯಾವದೂ ಗೊತ್ತಿಲ್ಲ. ಕೇವಲ ವಿಷದಗುಳಿಗೆಗಳನ್ನು ಕೊಟ್ಟು ರೋಗಿಗಳನ್ನು ಕೊಂದುಹಾಕುತಲಿದ್ದನು. ಅವನಲ್ಲಿ ಅನೇಕ ಪಾಷಾಣಾದಿವಿಷಗಳಿರುವುದು ಹೀರೆಗೆ ಗೊತ್ತು. ಆ ರಾತ್ರಿಯೆ ಅವಳು ಆ ಚಂಡಾಲನ ಹತ್ತಿರಹೋಗಿ ಅವನಿಗೆ ಎಷ್ಟೋ ಭರವಸೆಯನ್ನು ಹೇಳಿ ಮನೆಯಲ್ಲಿ ಇಲಿಗಳನ್ನು ಕೊಲ್ಲುವುದಕ್ಕೋಸ್ಕರವೆಂದು ಐವತ್ತು ರೂಪಾಯಿಕೊಟ್ಟು ಒಂದು ಭರಣಿ ವಿಷವನ್ನು ಕೊಂಡುಕೊಂಡುಬಂದಳು.

ವಿಷವನ್ನು ತೆಗೆದುಕೊಂಡು ಮನೆಗೆಹೋಗಿ ವಿಷದಭರಣಿಯನ್ನು ಕೈಲಿಟ್ಟುಕೊಂಡು ಅತ್ತಳು. ಕಡೆಗೆ ಕಣ್ಣೊರಿಸಿಕೊಂಡು ಮನಸ್ಸಿನಲ್ಲಿ, ನಾನು ಯಾವ ತಪ್ಪುಮಾಡಿದುದಕ್ಕೆ ವಿಷವನ್ನು ತಿಂದು ಸಾಯಲಿ ? ನನ್ನನ್ನು ಯಾರು ಒದ್ದನೋ ಅವನನ್ನು ಕೊಂದುಹಾಕದೆ ನಾನು ಏತಕ್ಕೆ ಸಾಯಲಿ ? ನಾನು ಸಾಯುವುದಿಲ್ಲ. ನನಗೆ ಈ ದೆಶೆಯನ್ನು ಯಾವನು ಉಂಟುಮಾಡಿದನೋ ಅವನು ಇದನ್ನು ತಿನ್ನಲಿ, ಅವನು ತಿನ್ನದಿದ್ದರೆ ಅವನ ಪ್ರೇಯಸಿಯಾದ ಕುಂದನಂದಿನಿಯು ತಿನ್ನುವಳು. ಇವರಿಬ್ಬರಲ್ಲಿ ಒಬ್ಬರು ಸಾಯದೆ ನಾನು ಸಾಯುವುದಿಲ್ಲ. ಆಮೇಲೆ ಸಾಯುತ್ತೇನೆ ಎಂದಂದುಕೊಂಡಳು.

---

## ನಾಲ್ವತ್ತೊಂದನೆಯ ಪರಿಚ್ಛೇದ

### ಹೀರೆಯ ಅಜ್ಜಿ.

ಹೀರಾಮಾಲಿನಿಯಜ್ಜಿಮುದುಕಿ। ಆ ಹೀರಾಮಾಲಿನಿಯಜ್ಜಿಮುದುಕಿ।
ಕರದಿಪಿಡಿದಹಳುಗೊಬ್ಬರಮತ್ತೆಪರಕಿ। ಗೊಬ್ಬರಮತ್ತೆಪರಕಿ।

ನೋಡಿನುಡಿಹಲ್ಲುಕಡಿಯುವಳು | ಅಜ್ಜಿ | ನುಡಿನುಡಿಹಲ್ಲುಕಡಿಯುವಳು|
ಗೂಡೆಹಲಸಿನತೊಳೆ ತಾನೊರ್ವಳೆತಿನ್ನುವಳು| ಆಹ | ತಾನೆ ತಿನ್ನುವಳು|
ಉದರದ ತ್ರಿವಳಿಗಳೆಲ್ಲಾ | ಅವಳುದರದತ್ರಿವಳಿಗಳೆಲ್ಲಾ |
ಮುದ್ದುಮುಖದಮೇಲ್ ಚಂದಾಗಿ ಕಾಣುವದೆಲ್ಲಾ | ಭಲ| ಕಾಣುವದೆಲ್ಲಾ ||
ಕುಚದಬಿಣ್ಪುದರಕೆಬಂತು | ಅಜ್ಜಿ | ಕುಚದ ಬಿಣ್ಪುದರಕೆ ಬಂತು |
ಕಚದ ಕಪ್ಪೆಲ್ಲಾ ನಯನದಿನಿಂತೂ | ಅವಳನಯನದಿನಿಂತೂ ||

---

ಹೀರೆಯ ಅಜ್ಜಿಯು ಕೈಲಿ ಕೋಲುಹಿಡಿದುಕೊಂಡು ಗುಡುಗುಡು ಹೋಗುತ್ತಾಳೆ. ಹಿಂದುಗಡೆಯಲ್ಲಿ ಹುಡುಗರು ಗುಂಪುಗುಂಪಾಗಿ ಮೇಲಿನ ಅಪೂರ್ವವಾದ ಕವಿತ್ವವನ್ನು ಹೇಳಿಕೊಳ್ಳುತ್ತ ಕೈಲಿ ತಾಳಹಾಕುತ್ತ ಕುಣಿದಾಡುತ್ತ ಹೋಗುತ್ತಾರೆ.

ಮೇಲಿನ ಕವಿತ್ವದಲ್ಲಿ ವಿಶೇಷ ನಿಂದನೆಯೇನಾದರೂ ಇದಿಯೋ ಇಲ್ಲವೋ ನಮಗೆ ಸಂದೇಹವಾಗಿದೆ—ಆದರೆ ಹೀರೆಯ ಅಜ್ಜಿಯು ಬಹಳ ಕೋಪದಿಂದ ರೇಗುತ್ತಿದ್ದಳು. ಆ ಹುಡುಗರನ್ನು ಯಮನ ಸದನಕ್ಕೆ ಹೋಗಲು ಅನುಜ್ಞೆಯನ್ನು ಕೊಡುತ್ತಿದ್ದಳು, ಮತ್ತು ಅವರ ಪಿತೃಪುರುಷರ ಆಹಾರದ ವಿಷಯದಲ್ಲಿ ನ್ಯಾಯವಲ್ಲದ ವ್ಯವಸ್ಥೆಯನ್ನು ಮಾಡುವಳು. ಈ ಪ್ರಕಾರ ನಿತ್ಯವೂ ನಡೆಯುತಲಿತ್ತು.

ಹೀರೆಯ ಅಜ್ಜಿಯು ನಾಗೇಂದ್ರನ ಮುಂದಿನ ಮಹಲಿನ ಬಾಗಲಿಗೆ ಹೋಗಿ ನಿಂತುಕೊಂಡು ಈ ಹುಡುಗರ ಹಾವಳಿಯಿಂದ ತಪ್ಪಿಸಿಕೊಳ್ಳುತ್ತಿದ್ದಳು. ಹುಡುಗರು ರಾಮಚರದೇವ ರಾಮಸಿಂಹ ಮುಂತಾದ ಪಹರೆ ಶಿಪಾಯಿಗಳನ್ನು ಕಂಡು ಯುದ್ಧದಿಂದ ಓಡಿಹೋಗುವರು. ಓಡಿಹೋಗುತ್ತ ಹುಡುಗರು ಪದಗಳನ್ನು ಹೇಳುತ್ತ ಹೋಗುತ್ತಿದ್ದರು :—

ವರರಾಮಚರದೇವಶೂರ || ಭೂಪ || ವರರಾಮಚರದೇವ ಶೂರ |

ಪರಿಮಿತವಿಲ್ಲದ ನಿದ್ರೆಲಿಧೀರ = ಪಹವಾ = ಪರಿಮಿತವಿಲ್ಲದನಿದ್ರೆಲಿಶೂರ।
ಚೋರರು ಬಂದರೆ ಬೇಗ । ಅವ । ಚೋರರು ಬಂದರೆ ಬೇಗ
ಶೂರ ಕಣ್ಣಿಗೆ ಕಾಣುಹದಿಲ್ಲತಿ ಚದುರ ॥
ಸೋಟಾವ ಹೆಗಲೊಳಾನಿಸುತ । ನಿರುತ । ಸೋಟಾವಹೆಗಲೊಳಾನಿಸುತ
ದಿಟ್ಟರಾಮಸಿಂಹ । ತಾ । ನಿರುವನು ಸತತ ॥ ತಾನಿರುವನುಸತತ ।
ಕೆಟ್ಟಕಳ್ಳರನ್ನು ತಾ ನೋಡೆ । ತಾನು । ಕೆಟ್ಟಕಳ್ಳರನ್ನು ನೋಡೆ ।
ಘಟ್ಟಗ ನೋಡುವ । ನಿನ್ನೆಂತಾದ್ದೋ ಓಟಾ । ಇನ್ನೆಂತಾದ್ದೋಓಟಾ ॥
ಅಂದದಿ ಚಂದವನೋಡಿ ಜನರೆಲ್ಲ-

ದ್ವಾರಪಾಲಕರು ಅಮರ ಅಥವಾ ಇತರ ನಿಘಂಟುಗಳಲ್ಲಿ ಇಲ್ಲದ ನಾನಾವಿಧವಾದ ಶಬ್ದಗಳನ್ನು ಹೇ? ಕೂಗುಮಾಡುತ್ತಲೇ ಹುಡುಗರು ಓಡಿಹೋಗುವರು.

ಹಿರಿಯ ಅಜ್ಜಿಯು ಕೋಲೂರಿಕೊಂಡು ಟಪ ಟಪ ಶಬ್ದಮಾಡುತ್ತ ನಾಗೇಂದ್ರನ ಮನೆಯಲ್ಲಿದ್ದ ಡಾಕ್ಟರನ ಮನೆಗೆ ಹೋದಳು. ಡಾಕ್ಟರನ್ನು ನೋಡಿ ಗುರ್ತಿಸಿ, ಅಪ್ಪಾ! ದಾಗ್ದ್ರೆ ಎಲ್ಲಪ್ಪಾ? ಎಂದು ಕೇಳಿದಳು. ಡಾಕ್ಟರು, ನಾನೇ ದಾಗ್ದ್ರೆ ಎಂದನು. ಮುದುಕಿಯು, ಅಪ್ಪಾ! ಕಣ್ಣು ಕಾಣುವುದಿಲ್ಲ. ಅರವತ್ತು ಎಪ್ಪತ್ತು ವರುಷವಾಯಿತು, ಬಂದೆರಡುವರುಷ ಕಡಮೆ ಇರಬಹುದು. ನವಾಬ ಹುಟ್ಟ ಸುಲತಾನ ಶ್ರೀರಂಗಪಟ್ಟಣ ವನ್ನು ಸೂರೆ ಕೊಟ್ಟಾಗ ಮುಟ್ಟು ನಿಂತು ಮುವ್ವತ್ತು ವರುಷವಾಗಿತ್ತು. ನನ್ನ ಹೊಟ್ಟೆಯ ಸಂಕಟ ಏನೆಂದು ಹೇಳಲಿ? ಒಬ್ಬ ಮಗನಿದ್ದ, ಅವನನ್ನು ಗುಂಡಿಗೆಹಾಕಿದೆ; ಒಬ್ಬ ಮುಮ್ಮಗಳಿದ್ದಳು, ಅವಳನ್ನೂ — ಎಂದು ಹೇಳಿ, ಅಯ್ಯೋ! ಅಪ್ಪಾ! ಎಂದು ಗಟ್ಟಿಯಾಗಿ ಅಳುವುದಕ್ಕೆ ತೊಡಗಿದಳು.

ಡಾಕ್ಟರನು, ನಿನಗೆ ಏನಾಯಿತೆಂದನು.

ಮುದುಕಿಯು ಅದಕ್ಕೆ ಉತ್ತರವನ್ನು ಕೊಡದೆ ತನ್ನ ಸ್ವಂತ ಹಿಂದಿನ

ಕಥೆಯನ್ನು ಹೇಳುತ್ತ ಬಹಳ ಅತ್ತು ಗೋಳಾಡಿ ಅದನ್ನು ಪೂರೈಸಿದಳು. ಡಾಕ್ಟರನು ಈಗ ನಿನಗೆ ಬೇಕಾದುದು ಏನು? ನಿನಗೇನಾಗಿದೆ? ಎಂದು ಕೇಳಿದನು.

ಮುದುಕಿಯು ಪುನಃ ತನ್ನ ಪೂರ್ವದ ಕಥೆಗೆ ಆರಂಭಿಸಿದಳು. ಆದರೆ ಡಾಕ್ಟರನು ಬಹಳ ವಿರಕ್ತನಾಗಲಾಗಿ ಅದನ್ನು ಬಿಟ್ಟು ಹೀರೆ ಮತ್ತು ಅವಳ ತಾಯಿತಂದೆಗಳು ಅವಳ ಗಂಡನ ಜೀವನ ಚರಿತ್ರೆಯನ್ನು ಹೇಳತೊಡಗಿದಳು. ಡಾಕ್ಟರನು ಬಹಳ ಕಷ್ಟಪಟ್ಟು ಅದರ ಮರ್ಮಾರ್ಥವನ್ನು ತಿಳಿದುಕೊಂಡನು. ಏತಕ್ಕೆಂದರೆ, ಅವಳು ಹೇಳಿದ್ದುದರಲ್ಲಿ ಹೆಚ್ಚು ಸ್ವಂತ ಕಥೆ ಮತ್ತು ರೋದನವೇ ವಿಶೇಷವಾಗಿತ್ತು.

ಡಾಕ್ಟರನು ಮರ್ಮಾರ್ಥವನ್ನು ತಿಳಿದುಕೊಂಡದ್ದೇನೆಂದರೆ:—ಹೀರೆಗೆ ಒಂದು ಔಷಧಬೇಕು. ವಾತಸಂಬಂಧವಾದ ರೋಗ. ಹೀರೆಯು ತಾಯಿಯ ಗರ್ಭದಲ್ಲಿದ್ದಾಗ ಅವಳ ತಾಯಿಗೆ ಹುಚ್ಚು ಹಿಡಿದಿತ್ತು; ಹಾಗೆಯೇ ಹುಚ್ಚಾಗಿದ್ದು ಸ್ವಲ್ಪಕಾಲದಮೇಲೆ ಮೃತಳಾದಳು; ಹೀರೆಯು ಬಾಲ್ಯದಿಂದಲೂ ಬಹಳ ಬುದ್ಧಿಮತಿಯಾಗಿದ್ದಳು; ಅವಳಿಗೆ ಯಾವಾಗಲೂ ತಾಯಿಯ ರೋಗದ ಲಕ್ಷಣಗಳಿರಲಿಲ್ಲ; ಆದರೆ ಈಗ ಎರಡು ಮೂರು ದಿನಗಳಿಂದ ಮುದುಕಿಗೆ ಅದರ ಸಂದೇಹವುಂಟಾಗಿದೆ; ಹೀರೆಯು ಈಗ ಒಂದೊಂದುಸಲ ನಗುವುದು; ಒಂದುಸಲ ಅಳುವುದು; ಒಂದುಸಲ ಮನೆಯ ಬಾಗಲಲ್ಲಿ ಕುಣಿದಾಡುವುದು; ಒಂದುಸಲ ಕೂಗುವುದು; ಒಂದುಸಲ ಮೂರ್ಛೆಬೀಳುವುದು; ಹೀಗೆಲ್ಲಾ ಮಾಡುತ್ತಾಳೆ. ಇದಕ್ಕೆ ಮುದುಕಿಯು ಔಷಧವನ್ನು ಕೇಳುತ್ತಾಳೆಂದು ಡಾಕ್ಟರನು ತಿಳಿದುಕೊಂಡನು.

ಡಾಕ್ಟರನು ಹಾಗೆಯೇ ಯೋಚಿಸಿ ನಿನ್ನ ಮುಮ್ಮಗಳಿಗೆ "ಹಿಷ್ಟೀರಿಯಾ" (Hysteria) ಆಗಿದೆ ಎಂದನು.

ಮುದುಕಿಯು, ಅಪ್ಪಾ! ಇಷ್ಟಿರಸಕ್ಕೆ ಔಷಧವಿಲ್ಲವೆ? ಎಂದು ಕೇಳಿದಳು.

ಡಾಕ್ಟರು—ಔಷಧವಿಲ್ಲದೆ ಏನು? ಅವಳನ್ನು ಶಾಕವಾಗಿಡಬೇಕು ಮತ್ತು ಈ ಕೇಷ್ಟರ್ ಆಯಿಲನ್ನು (Castor oil ಹರಳೆಣ್ಣೆ) ತಗೆದುಕೊಂಡು ಹೋಗಿ ನಾಳೆ ಬೆಳಗ್ಗೆ ಕೊಡು. ಅನಂತರ ಬೇರೆ ಔಷಧವನ್ನು ಕೊಡುವೆನೆಂದನು.

ಮುದುಕಿಯು ಕೇಷ್ಟರ್ ಆಯಿಲ್ ಸೀಸೆಯನ್ನು ಹಿಡಿದುಕೊಂಡು ಕೋಲೂರಿಕೊಂಡು ಹೊರಟಳು. ದಾರಿಯಲ್ಲಿ ಒಬ್ಬ ನೆರೆಮನೆ ಹೆಂಗಸನ್ನು ನೋಡಿದಳು. ಅವಳು, ಏನಜ್ಜಿ! ಕೈಲೇನು? ಎಂದಳು.

ಹೀರೆಯ ಅಜ್ಜಿ—ಹೀರೆಗೆ ಇಷ್ಟರಸವಾಗಿದೆ; ಅದಕ್ಕೋಸ್ಕರ ಡಾಕ್ಟರನ ಹತ್ತಿರಕ್ಕೆ ಹೋಗಿದ್ದೆ; ಅವನು ಈ ಕಷ್ಟರಸವನ್ನು ಕೊಟ್ಟಿದ್ದಾನೆ. ಕಷ್ಟರಸದಿಂದ ಇಷ್ಟರಸವು ನಾಸಿಯಾಗುವುದುಂಟೆ?

ನೆರೆಯುವಳು—ಬಹಳ ಯೋಚಿಸಿ—ಅದರೂ ಆಗಬಹುದು; ಕಷ್ಟಪಡದಿರುವುದು ಎಲ್ಲರಿಗೂ ಇಷ್ಟವೆ; ದೇವರ ದಯದಿಂದ ಇಷ್ಟರಸವು ನಾಸಿಯಾಗಬಹುದು. ಒಳ್ಳೇದು, ಅಜ್ಜಿ! ನಿನ್ನ ಮೊಮ್ಮಗಳಿಗೆ ಇಷ್ಟು ಹೆಚ್ಚು ರಸವು ಎಲ್ಲಿಂದ ಬಂತು? ಎಂದಳು. ಹೀರೆಯ ಅಜ್ಜಿಯು ಬಹಳ ಯೋಚಿಸಿ ವಯಸ್ಸಿನ ದೋಷವಿರಬಹುದೆಂದಳು.

ನೆರಮನೆಯುವಳು ಸ್ವಲ್ಪ ಎಮ್ಮೆಕರುವಿನ ಗಂಜಲವನ್ನು ಕೊಟ್ಟು ನೋಡು; ಅದರಿಂದ ದೊಡ್ಡದೊಡ್ಡ ರಸವೆಲ್ಲ ಜೀರ್ಣಿಸಿ ಹೋಗುತ್ತೆಂದು ಹೇಳುತ್ತಾರೆಂದಳು.

ಮುದುಕಿಯು ಮನೆಗೆ ಹೋಗಿ ಡಾಕ್ಟರನು ಶಾಕವಾಗಿಡಬೇಕೆಂದು ಹೇಳಿದ ಮಾತನ್ನು ಜ್ಞಾಪಿಸಿಕೊಂಡು ಒಂದು ಹೆಂಚಿನಲ್ಲಿ ಬೆಂಕಿಯನ್ನು ತಂದು ಹೀರೆಯ ಮುಂದೆ ಇಟ್ಟಳು. ಹೀರೆಯು ನೀನು ಹಾಳಾದೆ, ಬೆಂಕಿ ಏತಕ್ಕೆ? ಎಂದಳು.

ಮುದುಕಿ—ಡಾಕ್ಟರನು ನಿನ್ನನ್ನು ಬಿಸಿಮಾಡಬೇಕೆಂದು ಹೇಳಿದ್ದಾನೆ

## ನಾಲ್ವತ್ತೆರಡನೆಯ ಪರಿಚ್ಛೇದ.

### ಅಂಧಕಾರಪುರೀ—ಅಂಧಕಾರಜೀವನ—

ಗೋವಿಂದಪುರದಲ್ಲಿ ದತ್ತನ ದೊಡ್ಡ ಉಪ್ಪರಿಗೆ ಮನೆ, ಆರು ಮಹಲುಗಳ ಮನೆ—ನಾಗೇಂದ್ರ, ಸೂರ್ಯಮುಖಿ ಇಬ್ಬರೂ ಇಲ್ಲದೆ ಎಲ್ಲಾ ಅಂಧಕಾರವಾಗಿದೆ. ಕಚ್ಚೇರಿಮಹಲಿನಲ್ಲಿ ನೌಕರರು ಕುಳಿತುಕೊಳ್ಳುತ್ತಾರೆ. ಅಂತಃಪುರದಲ್ಲಿ ಕುಂದನಂದಿನಿಯೊಬ್ಬಳೇ ನಿತ್ಯವೂ ಪ್ರತಿಪಾಲಿತರಾದ ಸಂಸಾರಕ್ಕೆ ಸೇರಿದ ಜನರೊಂದಿಗೆ ವಾಸಮಾಡುತ್ತಾಳೆ. ಚಂದ್ರನಿಲ್ಲದ ಆಕಾಶ, ಮೂಲೆಮೂಲೆಯಲ್ಲಿ ಜಾಡನಪರೆ. ಮನೆಮನೆಯಲ್ಲಿಯೂ ಧೂಳಿನರಾಶಿ. ಗೋಡೆಮೇಲೆ ಹಕ್ಕಿಗಳ ವಾಸ. ತೋಟದಲ್ಲಿ ಒಣಗಿದ ಎಲೆಯ ರಾಶಿ. ಪುಷ್ಕರಿಣಿಯಲ್ಲಿ ಪಾಚಿ. ಅಲ್ಲಲ್ಲಿ ನರಿಗಳ ಬಿಲ. ಹೂವಿನ ತೋಟದಲ್ಲಿ ಕಾಡು. ಭಾಂಡಾರಗೃಹದಲ್ಲಿ ಇಲಿ. ಕಣಜಗಳಲ್ಲಿ ಹೆಗ್ಗಣ, ಎಲ್ಲಾ ಮುಗ್ಗುಹಿಡಿದಿದೆ. ಚೇಳು, ಜರ್ಲೆ ಮುಂತಾದ್ದು ತುಂಬಿವೆ. ಸೂರ್ಯಮುಖಿಯು ಸಾಕಿದ್ದ ಹಕ್ಕಿಗಳನ್ನು ಬೆಕ್ಕು ತಿಂದುಹಾಕಿಬಿಟ್ಟಿದೆ. ಅಲ್ಲಲ್ಲಿ ಹಕ್ಕಿಗಳ ಪಿಕ್ಕೆ; ನವಿಲುಗಳು ಹೋಗಿಬಿಟ್ಟವು. ದನಕರಗಳೆಲ್ಲಾ ಮೂಳೆಬಿಟ್ಟುಕೊಂಡವು. ಹಾಲುಕೊಡುವುದಿಲ್ಲ. ನಾಗೇಂದ್ರನ ನಾಯಿಗಳಿಗೆಲ್ಲ ಸ್ಫೂರ್ತಿಯುಹೋಯಿತು, ಆಟವಿಲ್ಲ, ಕೂಗು ಇಲ್ಲ. ಕಟ್ಟಿದಕಡೆ ಬಿದ್ದವೆ. ಕೆಲವು ಸತ್ತುಹೋದವು. ಕೆಲವು ಓಡಿಹೋದವು. ಕುದುರೆಗಳಿಗೆಲ್ಲಾ ನಾನಾರೋಗ. ಅಥವಾ ನೀರೋಗವೇ ರೋಗವಾಗಿದೆ. ಲಾಯದಲ್ಲಿ ಗಾಸಿರಾಶಿ ಕುದುರೆಯುಳಿದ್ದ ಒಣಗಿದ ಹುಲ್ಲು, ಗೊಬ್ಬರ ತುಂಬಿದೆ. ಆಳುಗಳು ಅಲ್ಲಿ ಇಲ್ಲವೇ ಇಲ್ಲ. ಉಪ್ಪರಿಗೆಯಮೇಲೆ ಒಂದೊಂದುಕಡೆ ಕೈಪಿಡಿಗೋಡೆ ಬಿದ್ದುಹೋಗಿದೆ, ಒಂದೊಂದು ಕಡೆ ಗಿಡಗಳು ಬೆಳೆದವೆ, ಕಬ್ಬಿಣದ ಕಟಕಟೆ ಸರಿದುಹೋಗಿದೆ, ಬುಕ್ಕಿನ ಬೀರೂಗಳಲ್ಲಿ ನುಶೀಹುಳ ಸೇರಿಕೊಂಡಿದೆ. ಮನೆಯಲ್ಲಿ ಲಕ್ಷ್ಮಿಯಿಲ್ಲ. ಮೂದೇವಿಕವಿತುಕೊಂಡಿದೆ.

ಉದ್ಯಾನದಲ್ಲಿ ತೋಟಗಾರನು ಇಲ್ಲ. ಹುಲ್ಲು ಬೆಳದುಹೋಗಿದೆ; ಗೃಹ ಮಧ್ಯದಲ್ಲಿ ಕುಂದನಂದಿನಿಯು ವಾಸಮಾಡುವ ಹಾಗೆ ಅಲ್ಲಲ್ಲಿ ಒಂದೊಂದು ಗುಲಾಬಿ ಅಥವಾ ಸ್ಥಳಪದ್ಮ ಬಿಡುತ್ತದೆ. ಕುಂದನಂದಿನಿಯನ್ನು ಗೃಹಿಣಿಯೆಂದು ಯಾರಾದರೂ ಭಾವಿಸಿ ಕರದರೆ, ಅವಳು ತನ್ನನ್ನು ಹಾಸ್ಯಮಾಡುತ್ತಾರೆಂದು ತಿಳಯುವುಳು. ದಿವಾನನು ಏನಾದರೂ ಅವಳಿಗೆ ತಿಳಿಸಿದರೆ ಅವಳ ಎದೆಯು ಬಡಿದುಕೊಳ್ಳುವುದು ವಾಸ್ತವಿಕವಾಗಿ ದಿವಾನನಿಗೆ ಅವಳು ಬಹಳ ಭಯಪಡುತ್ತಿದ್ದಳು. ಇದಕ್ಕೆ ಒಂದು ಕಾರಣವೂ ಇತ್ತು. ನಾಗೇಂದ್ರನು ಕುಂದಳಿಗೆ ಕಾಗದವನ್ನು ಬರೆಯುತ್ತಿರಲಿಲ್ಲ. ಅವನು ದಿವಾನನಿಗೆ ಬರೆಯುವ ಕಾಗದವನ್ನು ಕೇಳಿ ತೆಗೆದುಕೊಂಡು ಓದುವಳು. ಓದಿ ಹಿಂದಿರುಗಿ ಕೊಡುತ್ತಿರಲಿಲ್ಲ. ಅವಳಿಗೆ ಆ ಕಾಗದಗಳನ್ನು ಓದುವುದು ಸಂಧ್ಯಾಗಾಯತ್ರಿಜಪವಾಗಿತ್ತು. ಯಾವಾಗಲೂ ಕಾಗದಗಳನ್ನು ಹಿಂದಕ್ಕೆ ತೆಗದುಕೊಂಡು ಬಿಡುವುನೋ ಎಂಬ ಭಯವನ್ನು ಹಚ್ಚಿಕೊಂಡಿದ್ದಳು. ಈ ಭಯದಿಂದ ದಿವಾನನ ಹೆಸರನ್ನು ಹೇಳದರೆ ಅವಳ ಮುಖವು ಕಂದಿಹೋಗುವುದು. ದಿವಾನನು ಇದನ್ನು ಹೀರೆಗೆ ತಿಳಿಸಿದ್ದನು. ಅವನು ಕಾಗದಗಳನ್ನು ವಾಪಸು ಕೇಳುತ್ತಿರಲಿಲ್ಲ. ತಾನೇ ಆ ಕಾಗದಗಳಿಗೆ ನಕಲು ಇಟ್ಟುಕೊಂಡು ಕಾಗದಗಳನ್ನು ಕುಂದನಂದಿನಿಗೆ ಕಳುಹಿಸುವುನು.

ವಾಸ್ತವಿಕವಾಗಿ ಸೂರ್ಯಮುಖಿಯು ನಾನಾಯಾತನೆಪಡುತ್ತಿದ್ದಳು. ಕುಂದಳು ಯಾತನೆ ಪಡುತ್ತಿರಲಿಲ್ಲವೆ? ಸೂರ್ಯಮುಖಿಯು ಸ್ವಾಮಿಯನ್ನು ಪ್ರೀತಿಸುತಲಿದ್ದಳು. ಕುಂದಳು ಪ್ರೀತಿಸುತಲಿರಲಿಲ್ಲವೆ? ಆ ಚಿಕ್ಕದಾದ ಹೃದಯದಲ್ಲಿ ಅಪರಿಮಿತವಾದ ಪ್ರೇಮ–ಪ್ರಕಾಶಪಡಿಸುವುದಕ್ಕೆ ಶಕ್ತಿಯಿಲ್ಲದೆ ಅದು ನಿರುದ್ಧವಾದ ವಾಯುವಿನ ಹಾಗೆ ಅವಳ ಹೃದಯವನ್ನು ಸರ್ವದಾ ಆಘಾತಮಾಡುತಲಿತ್ತು. ವಿವಾಹಕ್ಕೆ ಮುಂಚಿನಿಂದ ಬಾಲ್ಯಕಾಲದಿಂದಲೂ ಅವಳು ನಾಗೇಂದ್ರನನ್ನು ಪ್ರೀತಿಸುತಲಿದ್ದಳು. ಯಾರಿಗೂ ಹೇಳಲಿಲ್ಲ.

ಅದು ಯಾರಿಗೂ ತಿಳಿಯದು. ನಾಗೇಂದ್ರನನ್ನು ಹೊಂದಲು ಆಶೆಯೂ ಪಡಲಿಲ್ಲ; ಪ್ರಯತ್ನವನ್ನೂ ಮಾಡಲಿಲ್ಲ. ತನ್ನ ನಿರಾಶೆಯನ್ನು ತಾನೇ ಸಹಿಸಿಕೊಳ್ಳುತ್ತಿದ್ದಳು. ಅವಳ ಕೈಗೆ ಆಕಾಶದಚಂದ್ರನು ಸಿಕ್ಕಿದನು. ಈಗ ಆ ಚಂದ್ರನೆಲ್ಲಿ? ಯಾವತಪ್ಪಿಗೆ ನಾಗೇಂದ್ರನು ತನ್ನನ್ನು ಕಾಲಿನಿಂದ ತಳ್ಳಬಿಟ್ಟನು? ಎಂದು ಕುಂದಳು ರಾತ್ರಿ ಹಗಲೂ ಯೋಚಿಸುತ್ತ ಕೊರಗುತ್ತ ಅಳುತ್ತಿದ್ದಳು. ಕುಂದಳು ಅವನನ್ನು ಏತಕ್ಕೆ ನೋಡಲಿಲ್ಲ? ನಾಗೇಂದ್ರನು ಕುಂದಳೇ ಈ ವಿಪತ್ತಿಗೆಲ್ಲಾ ಕಾರಣಳೆಂದು ಯೋಚಿಸಿರಬಹುದು. ಎಲ್ಲರೂ ಕುಂದಳೇ ಈ ಅನರ್ಥಕ್ಕೆ ಕಾರಣಳೆಂದು ಯೋಚಿಸುತ್ತಾರೆ. ಆದರೆ ಕುಂದಳು, ಈ ಅನರ್ಥವುಂಟಾಗಲು ನಾನೇನು ತಪ್ಪುಮಾಡಿದೆ ಎಂದು ಹೇಳಕೊಳ್ಳುವಳು.

ಕೆಟ್ಟವೇಳೆಯಲ್ಲಿ ನಾಗೇಂದ್ರನು ಕುಂದಳನ್ನು ವಿವಾಹಮಾಡಿಕೊಂಡನು. ಉಪವಾಸವೆಂಬ ವೃಕ್ಷದಕೆಳಗೆ ಕೂತಿರುವವರು ಸಾಯುವಹಾಗೆ ಈ ವಿವಾಹದ ಛಾಯೆಯು ಯಾರಾರಿಗೆ ಸ್ಪರ್ಶವಾಗುತ್ತದೋ ಅವರೆಲ್ಲರೂ ಸಾಯಬೇಕು.

ಕುಂದಳು ಪುನಃ, ನನ್ನಿಂದಲೇ ಸೂರ್ಯಮುಖಿಗೆ ಇಂತಹ ದೆಶೆಬಂತೆಂತಲೂ, ಅವಳು ರಕ್ಷಕಳಾಗಿದ್ದು ನನ್ನನ್ನು ತನ್ನ ತಂಗಿಯಹಾಗೆ ನೋಡುತ್ತಿದ್ದಳೆಂತಲೂ, ಅಂತಹವಳನ್ನು ಬಿಕ್ಷುಕಳನ್ನಾಗಿ ಮಾಡಿದ ನನ್ನಂತಹ ಅಭಾಗಿನಿಯಿನ್ನುಂಟೆ? ನಾನೇತಕ್ಕೆ ಸಾಯಬಾರದಾಗಿತ್ತು? ಈಗಲೂ ಏತಕ್ಕೆ ಸಾಯಕೂಡದು? ಎಂತಲೂ ಯೋಚಿಸಿ, ಪುನಃ, ನಾನು ಸಾಯುವುದಿಲ್ಲ; ಅವಳು ಬರಲಿ, ಅವಳನ್ನು ಇನ್ನೊಂದುಸಲ ನೋಡುವೆನು; ಅವಳು ಬರುವಳೆ? ಎಂದಂದುಕೊಂಡಳು ಕುಂದಳಿಗೆ ಸೂರ್ಯಮುಖಿಯು ಸತ್ತ ಸಮಾಚಾರವು ತಿಳಿಯದು. ಅವಳು ಪುನಃ, ಸುಮ್ಮನೆ ಸಾಯಕೂಡದು;

ಸೂರ್ಯಮುಖಿಯು ಹಿಂದಿರುಗಿಬಂದರೆ ಆಮೇಲೆ ಅವಳ ಸುಖಕ್ಕೆ ಕಂಟಕ ಳಾಗದಿರುವಹಾಗೆ ನಾನು ಸಾಯುವೆನೆಂದು ಕೊಂಡಳು.

---



## ನಾಲ್ವತ್ತುಮೂರನೆಯ ಪರಿಚ್ಛೇದ

### ಪ್ರತ್ಯಾಗಮನ.

ಕಲಿಕತ್ತೆಯಲ್ಲಿ ಅಗತ್ಯವಾಗಿ ಮಾಡಬೇಕಾದ ಕಾರ್ಯಗಳು ಮುಗಿದವು. ದಾನಪತ್ರವು ಬರೆದಾಯಿತು. ಅದರಲ್ಲಿ ಬ್ರಹ್ಮಚಾರಿಗೂ ಹೆಸರು ತಿಳಿಯದ ಬ್ರಾಹ್ಮಣನಿಗೂ ವಿಶೇಷ ಪುರಸ್ಕಾರವನ್ನು ಕೊಡಲು ಏರ್ಪಾಡು ಮಾಡಲ್ಪಟ್ಟಿತು. ಅದು ಹರಿಪುರದ ಜಿಲ್ಲೆಯಲ್ಲಿ ರಿಜಿಸ್ಟರಾಗತಕ್ಕದ್ದಾದುದರಿಂದ ನಾಗೇಂದ್ರನು ದಾನಪತ್ರವನ್ನು ಸಂಗಡ ತೆಗೆದುಕೊಂಡು ಗೋವಿಂದಪುರಕ್ಕೆ ಹೊರಟನು. ಶ್ರೀಶಚಂದ್ರನಿಗೆ ಸರಿಯಾದ ದೋಣಿ ಅಥವಾ ಬಂಡಿಯಲ್ಲಿ ಬರಬೇಕೆಂದು ಹೇಳಿ ಹೊರಟುಹೋದನು. ಶ್ರೀಶಚಂದ್ರನು ದಾನಪತ್ರವನ್ನು ಬರೆಯುವುದುಸರಿಯಲ್ಲವೆಂತಲೂ, ಕಾಲುನಡೆಗೆಯಲ್ಲಿ ಪ್ರಯಾಣಮಾಡುವುದು ಉಚಿತವಲ್ಲವೆಂತಲೂ ಹೇಳಿ ಅದನ್ನು ತಪ್ಪಿಸಲು ಬಹಳ ಪ್ರಯತ್ನಪಟ್ಟನು. ಆದರೆ ಅವನ ಪ್ರಯತ್ನವು ವಿಫಲವಾಯಿತು. ಆದುದರಿಂದ ಅವನು ನದೀಮಾರ್ಗವಾಗಿ ಹೊರಟನು. ಮಂತ್ರಿಯನ್ನು ಬಿಟ್ಟಿರಲು ಕಮಲಮಣಿಗೆ ಸಾಗದು. ಅವಳೂ ಏನೂ ಕೇಳದೆ ಸತೀಶನನ್ನು ಕರೆದುಕೊಂಡು ಶ್ರೀಶಚಂದ್ರನ ದೋಣಿಯಲ್ಲಿ ಹತ್ತಿ ಕೂತುಕೊಂಡಳು.

ಕಮಲಮಣಿಯು ಮೊದಲು ಗೋವಿಂದಪುರಕ್ಕೆ ಬಂದುದನ್ನು ನೋಡಿ ಕುಂದನಂದಿನಿಯು ಪುನಃ ಆಕಾಶದಲ್ಲಿ ಒಂದು ನಕ್ಷತ್ರವು ಹುಟ್ಟಿತೆಂದು ಭಾವಿಸಿಕೊಂಡಳು. ಸೂರ್ಯಮುಖಿಯು ಹೊರಟುಹೋದ ದಿನ ಮೊದಲ್ಗೊಂಡು ಕಮಲಮಣಿಗೆ ಕುಂದಳಮೇಲೆ ದುರ್ಜಯವಾದ ಕ್ರೋಧ;

ಮುಖವನ್ನು ನೋಡುತ್ತಿರಲಿಲ್ಲ; ಆದರೆ ಈಸಲ ಬಂದು ಕುಂದನಂದಿನಿಯು ಬಾಡಿಹೋದ ಮುಖವನ್ನು ನೋಡಿ ಅವಳ ಕೋಪವು ದೂರವಾಯಿತು. ಅವಳಿಗೆ ದುಃಖವುಂಟಾಯಿತು. ಅವಳು ಕುಂದನಂದಿನಿಗೆ ಸಂತೋಷಪಡಿಸಿ ಪ್ರಫುಲ್ಲಳನ್ನಾಗಿ ಮಾಡಲು ಪ್ರಯತ್ನಪಟ್ಟಳು. ನಾಗೇಂದ್ರನು ಬರುವನೆಂಬ ಸಮಾಚಾರವನ್ನು ಕೇಳಿ ಕುಂದಳ ಮುಖದಲ್ಲಿ ನಗುವು ಕಂಡಿತು. ಸೂರ್ಯಮುಖಿಯು ಸತ್ತ ಸಮಾಚಾರವು ಗೊತ್ತಾಯಿತು. ಕೇಳಿ ಕುಂದನಂದಿನಿಯು ಬಹಳ ಅತ್ತಳು. ಇದನ್ನು ಕೇಳಿ ಈ ಗ್ರಂಥವನ್ನು ಓದುವ ಸುಂದರಿಯರು ಮನಸ್ಸಿನಲ್ಲಿ ನಗುತ್ತ, ಹಾವು ಸತ್ತರೆ ಹದ್ದು ಅತ್ತಿತೆಂದು ಹೇಳುವರು. ಆದರೆ ಕುಂದಳು ಕೇವಲ ಬುದ್ಧಿಯಿಲ್ಲದವಳು. ಸವತಿ ಸತ್ತರೆ ನಗಬೇಕೆಂದು ಆ ದಪ್ಪವಾದ ಬುದ್ಧಿಯುಳ್ಳ ಕುಂದಳಿಗೆ ತಿಳಿಯದು. ಮೂಗುಹುಡುಗಿ, ಸವತಿಗೋಸ್ಕರ ಅತ್ತಳು. ನೀವು, ಯಜಮಾನಿಗಳಿರಾ! ಹಾವುಸತ್ತಿತು, ಹದ್ದು ಅಳುತ್ತದೆಯೆಂದು ಹೇಳುತ್ತೀರಿ. ನಿಮ್ಮ ಸವತಿ ಸತ್ತು ನೀವು ನಕ್ಕರೆ ಕೇಳಿ ನಾವು ಬಹಳ ಸಂತೋಷಪಡುವೆವು.

ಕಮಲಮಣಿಯು ಕುಂದಳನ್ನು ಸಮಾಧಾನಮಾಡಿದಳು. ಅವಳು ಶಾಂತಳಾಗಿದ್ದಳು. ಮೊದಲುಮೊದಲು ಕಮಲಳು ಬಹಳ ಅತ್ತಳು. ಅವರ ಮೇಲೆ, ಮನಸ್ಸಿನಲ್ಲಿ, ಅತ್ತು ಏನಾದೀತು? ನಾನು ಅತ್ತರೆ ಶ್ರೀಶಚಂದ್ರನು ಅಸುಖಿಯಾಗುವನು; ನಾನು ಅತ್ತರೆ ಸತೀಶನು ಅಳುವನು, ಅತ್ತರೆ ಸೂರ್ಯಮುಖಿಯು ಬೇರೆ ಹಿಂದಿರುಗಿ ಬರುವುದಿಲ್ಲ; ಆದರೆ ನಾನು ಸರಿಯಾಗಿದ್ದರೆ ಸತೀಶನು ಆಡುತ್ತಿರುವನು. ನಾನು ಸೂರ್ಯಮುಖಿಯನ್ನು ಮರೆಯುವುದಕ್ಕೆ ಆಗುವುದಿಲ್ಲವೆಂದು ಮುಂತಾಗಿ ಭಾವಿಸಿಕೊಂಡು ಶಾಂತಳಾಗಿದ್ದಳು.

ಕಮಲಮಣಿಯು ಗಂಡನಿಗೆ, ಈ ವೈಕುಂಠದ ಲಕ್ಷ್ಮಿಯು ವೈಕುಂಠವನ್ನು ಬಿಟ್ಟು ಹೋದಳು, ಆದಕಾರಣ ಅಣ್ಣ ಬಂದರೆ ವಟಸತ್ರದಮೇಲೆ ಮಲಗುವ ಹಾಗಾಗಿದೆ ಎಂದಳು.

ಶ್ರೀಶ—ನಡೆ, ನಾವು ಎಲ್ಲಾ ಪರಿಷ್ಕಾರಮಾಡೋಣ.

ಶ್ರೀಶಚಂದ್ರನು ತೋಟಗಾರ ಮಜೂರಿಯವರನ್ನು ಆಯಾ ಸ್ಥಳಕ್ಕೆ ನೇಮಿಸಿದನು. ಇತ್ತಕಡೆ ಕಮಲಮಣಿಯ ದೌರಾತ್ಮ್ಯದಿಂದ ಇಲಿ ಹೆಗ್ಗಣ ಹಕ್ಕಿ ಮುಂತಾದವುಗಳು ತಮ್ಮತಮ್ಮ ಸ್ಥಳಗಳನ್ನು ಬಿಟ್ಟು ಹೊರಟು ಹೋದವು. ಪರಿಚಾರಕರೆಲ್ಲ ಕೈಲಿ ಪರಕೆ ಹಿಡಿದು ದಿಗ್ವಿಜಯಕ್ಕೆ ಎಲ್ಲಾ ಕಡೆಗೂ ಹೊರಟರು. ಸ್ವಲ್ಪದರಲ್ಲಿಯೇ ಮನೆಯೆಲ್ಲಾ ಪರಿಷ್ಕಾರವಾಗಿ ನಗುಮುಖವನ್ನು ತಾಳಿತು.

ಕಡೆಗೆ ನಾಗೇಂದ್ರನು ಬಂದುಸೇರಿದನು. ಆಗ ಸಂಧ್ಯಾಕಾಲ. ನದಿಯು ಮೊದಲು ಪ್ರವಾಹದಲ್ಲಿ ವೇಗವತಿಯಾಗಿ ಪ್ರವಾಹವು ತಗ್ಗಿದಮೇಲೆ ಹೇಗೆ ಗಭೀರವಾದ ಜಲವು ಶಾಂತಭಾವವನ್ನು ತಾಳುವುದೋ, ಹಾಗೆ ನಾಗೇಂದ್ರನ ಸಂಪೂರ್ಣವಾದ ಶೋಕಪ್ರವಾಹವು ಈಗ ಗಭೀರವಾದ ಶಾಂತಭಾವವನ್ನು ತಾಳಿತು. ಆದರೆ ದುಃಖವೆನೋ ಕಡಮೆಯಾಗಿರಲಿಲ್ಲ! ತಾಳ್ಮೆಯು ಬಂದಿತ್ತು. ಅವನು ಸ್ಥಿರಭಾವದಿಂದ ಪೌರಜನರ ಸಂಗಡ ಮಾತನಾಡಿದನು. ಎಲ್ಲರನ್ನು ಕರೆದು ಕ್ಷೇಮಲಾಭವನ್ನು ವಿಚಾರಿಸಿದನು, ಯಾರಸಂಗಡಲೂ ಸೂರ್ಯಮುಖಿಯ ಸಮಾಚಾರವನ್ನು ಕುರಿತು ಮಾತನಾಡಲಿಲ್ಲ. ಅವನ ಹಾವಭಾವವನ್ನು ನೋಡಿ ಎಲ್ಲರೂ ಅವನ ದುಃಖದಲ್ಲಿ ದುಃಖಿತರಾದರು. ಹಳೇ ನವಕರರು ಬಂದು ಅವನಿಗೆ ನಮಸ್ಕಾರಮಾಡಿ ಹೋಗಿ ಅತ್ತರು. ನಾಗೇಂದ್ರನು ಒಬ್ಬ ವ್ಯಕ್ತಿಗೆ ಮಾತ್ರ ಮನಸ್ಸು ಸಂಕಟಪಡಿಸಿದನು ಚಿರದುಃಖಿನಿಯಾದ ಕುಂದನಂದಿನಿಯನ್ನು ಹೋಗಿ ನೋಡಲಿಲ್ಲ.

## ನಾಲ್ವತ್ತುನಾಲ್ಕನೆಯ ಪರಿಚ್ಛೇದ.

### ಸ್ತಿಮಿತವಾದ ಪ್ರದೀಪದಲ್ಲಿ.

ನಾಗೇಂದ್ರನಾಥನ ಅಪ್ಪಣೆಯಪ್ರಕಾರ ಪರಿಚಾರಕರು ಸೂರ್ಯಮುಖಿಯ ಶಯ್ಯಾಗೃಹವನ್ನು ಶೃಂಗರಿಸಿ ಅವಳ ಹಾಸಿಗೆಯನ್ನು ಸರಿಮಾಡಿ ಸಿದ್ಧಪಡಿಸಿದರು. ಕೇಳಿ ಕಮಲಮಣಿಯು ತಲೆಯಲ್ಲಾಡಿಸಿದಳು.

ಅರ್ಧರಾತ್ರಿಯಲ್ಲಿ ಮನೆಯಜನರೆಲ್ಲರೂ ಮಲಗಿದಮೇಲೆ ನಾಗೇಂದ್ರನು ಸೂರ್ಯಮುಖಿಯ ಶಯ್ಯಾಗೃಹಕ್ಕೆ ಶಯನಮಾಡಲು ಹೋದನು. ಶಯನಮಾಡಲಾರದೆ ಹೋದನು. ರೋದನಮಾಡುತಲಿದ್ದನು. ಸೂರ್ಯಮುಖಿಯ ಶಯ್ಯಾಗೃಹವು ಅತಿಪ್ರಶಸ್ತವಾಗಿಯೂ ಮನೋಹರವಾಗಿಯೂ ಇತ್ತು. ಅದು ನಾಗೇಂದ್ರನ ಎಲ್ಲಾ ಸುಖಗಳಗೂ ಮಂದಿರವಾಗಿತ್ತು. ಆದಕಾರಣ ಅದನ್ನು ಬಹಳ ವ್ಯಯಮಾಡಿ ಕಟ್ಟಿಸಿದ್ದನು. ಕೊಠಡಿಯು ಪ್ರಶಸ್ತವಾಗಿ ಎತ್ತರವಾಗಿತ್ತು. ನೆಲವು ನಾನಾವರ್ಣ ಶಿಲೆಗಳಿಂದ ರಚಿತವಾಗಿತ್ತು. ಗೋಡೆಗಳಲ್ಲಿ ನೀಲ, ಪಿಂಗಳಲೋಹಿತ ಲತೆಗಳು, ಪಲ್ಲವಫಲಪುಷ್ಪಾದಿಗಳು ಚಿತ್ರಿತವಾಗಿದ್ದವು. ಅವುಗಳಮೇಲೆ ನಾನಾವಿಧವಾದ ಚಿಕ್ಕ ಚಿಕ್ಕ ಪಕ್ಷಿಗಳು ಕೂತು ಫಲವನ್ನು ತಿನ್ನುವಹಾಗೆ ಬರೆದಿತ್ತು. ಒಂದು ಪಾರ್ಶ್ವದಲ್ಲಿ ಬಹುಮೌಲ್ಯವುಳ್ಳ ಆನೆಯದಂತದಿಂದ ರಚಿತವಾದ ನಕಾಸೆಕೆಲಸದಿಂದಲಂಕೃತವಾದ ಮಂಚ, ಮತ್ತೊಂದುಕಡೆಯಲ್ಲಿ ವಿಚಿತ್ರವಾದ ವಸ್ತ್ರಗಳಿಂದಲಂಕೃತವಾದ ಕುರ್ಚಿ ಸೋಫಾ ಮುಂತಾದ ಆಸನಗಳು, ದೊಡ್ಡ ದೊಡ್ಡ ಕನ್ನಡಿಗಳು ಇತ್ಯಾದಿ ಸಾಮಾನುಗಳನೇಕವಿದ್ದವು. ಕೆಲವು ಚಿತ್ರಪಟಗಳು ಗೋಡೆಗಳಿಗೆ ತೂಗುಹಾಕಿದ್ದವು. ವಿಲಾಯಿತಿ ಚಿತ್ರಗಳಲ್ಲ. ಸೂರ್ಯಮುಖಿ ಮತ್ತು ನಾಗೇಂದ್ರ ಸಹ ಯೋಚಿಸಿ ಅವರ ಇಷ್ಟಪ್ರಕಾರ ಒಬ್ಬ ದೇಶ್ಯ ಚಿತ್ರಕಾರನಿಂದ ಬರೆಸಿದ್ದು. ಆ ಚಿತ್ರಕಾರನು

ಒಬ್ಬ ಪ್ರಸಿದ್ಧನಾದ ಇಂಗ್ಲಿಷ್ ಚಿತ್ರಕಾರನ ಶಿಷ್ಯನಾಗಿದ್ದನು. ಬಹಳ ಚೆನ್ನಾಗಿ ಚಿತ್ರಗಳನ್ನು ಬರೆದಿದ್ದನು. ನಾಗೇಂದ್ರನು ಆ ಚಿತ್ರಗಳನ್ನು ಬಹುಮೂಲ್ಯವಾದ ಚೌಕಟ್ಟುಗಳಲ್ಲಿ ಹಾಕಿಸಿದ್ದನು. ಒಂದು ಚಿತ್ರವು ಕುಮಾರಸಂಭವದ ಒಂದು ವರ್ಣನೆಯಾಗಿತ್ತು. ಮಹಾದೇವನು ಪರ್ವತ ಶಿಖರದಲ್ಲಿ ಒಂದು ವೇದಿಯಮೇಲೆ ಕೂತು ತಪಸ್ಸುಮಾಡುತ್ತಾನೆ. ಲತಾ ಗೃಹದ್ವಾರದಲ್ಲಿ ನಂದಿಯು ಎಡಕಂಕುಳಲ್ಲಿ ಭಂಗಾರದ ಬೆತ್ತವುಳ್ಳವನಾಗಿ ಕಾನನದ ಶಬ್ದವನ್ನು ಬೆರಳಿನಿಂದ ನಿವಾರಣಮಾಡುತ್ತಾನೆ. ಕಾನನವು ಸ್ಥಿರವಾಗಿ, ಭ್ರಮರಗಳು ಎಲೆಗಳ ಮಧ್ಯದಲ್ಲಿ ಬಾತುಕೊಂಡಿವೆ. ಮೃಗ ಗಳು ಮಲಗಿಕೊಂಡಿವೆ. ಅಕಾಲದಲ್ಲಿ ಹರನ ಧ್ಯಾನವನ್ನು ಭಂಗಮಾಡು ವುದಕ್ಕೋಸ್ಕರ ಮದನನು ಅಧಿಷ್ಠಾನನಾಗಿದ್ದಾನೆ; ಸಂಗಡಲೇ ವಸಂತದ ಉದಯ. ಇದಿರಿಗೆ ವಸಂತದ ಪುಷ್ಪಾಭರಣಮಯಿಯಾದ ಪಾರ್ವತೀದೇ ವಿಯು ಮಹಾದೇವನಿಗೆ ಪ್ರಣಾಮವನ್ನು ಮಾಡುವುದಕ್ಕೆ ಬಂದಿದ್ದಾಳೆ. ಉಮಾ ಶಂಭುವಿನ ಇದುರಿಗೆ ಪ್ರಣಾಮವನ್ನು ಮಾಡುವುದಕ್ಕೆ ನತಳಾದಾಗ ಒಂದು ಜಾನುವು ಭೂಮಿಸ್ಪೃಷ್ಟವಾಗಿ ಮತ್ತೊಂದು ಜಾನುವು ಭೂಮಿ ಯನ್ನು ಸ್ಪರ್ಶಮಾಡುತ್ತದೆ. ಸ್ಕಂಧಸಹಿತವಾಗಿ ಮಸ್ತಕವು ಬಗ್ಗಿದೆ. ಆಸ್ಥಿತಿಯು ಚಿತ್ರಿತವಾಗಿದೆ. ಮಸ್ತಕವು ಬಗ್ಗಿದಕಾರಣ ಅಳಕಬಂಧದಿಂದ ಒಂದೆರಡು ಕರ್ಣವಿಳಂಬಿಯಾದ ಕುರುವಕ ಕುಸುಮವು ಜರಿದುಬೀಳು ತ್ತದೆ. ವಕ್ಷದಿಂದ ವಸನವು ಸ್ವಲ್ಪ ಓರೆಯಾಗಿ ಸರಿದಿದೆ. ದೂರದಿಂದ ಮನ್ಮಥನು ಈ ಸಮಯದಲ್ಲಿ ವಸಂತದ ಪ್ರಫುಲ್ಲವಾದ ವನಮಧ್ಯದಲ್ಲಿ ಅರ್ಧ ಶರೀರವನ್ನು ಮರೆಮಾಡಿಕೊಂಡು ಒಂದು ಮೊಳಕಾಲನ್ನು ಭೂಮಿಯ ಮೇಲೆ ಊರಿ ಮನೋಹರವಾದ ಧನುಸ್ಸನ್ನು ಚಕ್ರಾಕಾರಮಾಡಿ ಆ ಪುಷ್ಪ ಧನುಸ್ಸಿನಲ್ಲಿ ಪುಷ್ಪಶರವನ್ನು ಕೂಡಿಸುತ್ತಾನೆ. ಮತ್ತೊಂದು ಚಿತ್ರದಲ್ಲಿ ಶ್ರೀರಾಮಚಂದ್ರನು ಜಾನಕೀದೇವಿಯನ್ನು ಲಂಕೆಯಿಂದ ಹಿಂದಿರುಗಿ ಕರೆತ

ರುತ್ತಾನೆ; ಇಬ್ಬರೂ ಬಂದು ರತ್ನಮಂಡಿತವಾದ ವಿಮಾನದಲ್ಲಿ ಕೂತು ಆಕಾಶಮಾರ್ಗದಲ್ಲಿ ಬರುತ್ತಾರೆ. ಶ್ರೀರಾಮಚಂದ್ರನು ಜಾನಕಿಯ ಸ್ಕಂಧದ ಮೇಲೆ ಒಂದು ಕೈಯಿಟ್ಟುಕೊಂಡು ಮತ್ತೊಂದುಕೈಯ ಬೆರಳಿನಿಂದ ಕೆಳಗೆ ಪೃಥ್ವಿಯ ಅಲಂಕಾರಗಳನ್ನು ತೋರಿಸುತ್ತಾನೆ. ವಿಮಾನದ ನಾಲ್ಕುಕಡೆಗಳಲ್ಲಿಯೂ ನಾನಾವರ್ಣಗಳ ಮೇಘಗಳು—ನೀಲ, ಲೋಹಿತ, ಶ್ವೇತವರ್ಣವುಳ್ಳವುಗಳು. ಧೂಮತರಂಗಗಳನ್ನು ಹಾರಿಸುತ್ತ ತಿರುಗಾಡುತ್ತವೆ. ಕೆಳಗೆ ವಿಶಾಲವಾದ ನೀಲವಾದ ಸಮುದ್ರದಲ್ಲಿ ತರಂಗಗಳು ಭಂಗವಾಗಿ, ಸೂರ್ಯಕಿರಣದಿಂದ ತರಂಗಗಳೆಲ್ಲ ವಜ್ರಗಳ ರಾಶಿಯಹಾಗೆ ಕಣ್ಗೊಳಿಸುತ್ತವೆ. ಒಂದು ತೀರದಲ್ಲಿ ದೂರದಲ್ಲಿ ಸೌಧಗಳನ್ನು ಕಿರೀಟವಾಗಿವುಳ್ಳ ಲಂಕಾಪಟ್ಟಣ—ಅದರ ಪ್ರಾಸಾದಾವಳಿಯ ಸ್ವರ್ಣಮಂಡಿತವಾದ ಗೋಪುರಗಳೆಲ್ಲ ಸೂರ್ಯಕಿರಣಗಳಲ್ಲಿ ಜ್ವಲಿಸುತಲಿವೆ. ಸಮುದ್ರದ ಮತ್ತೊಂದುಪಾರ್ಶ್ವದಲ್ಲಿ ಶ್ಯಾಮಲ ಶೋಭಾಮಯವಾದ ತಮಾಲತಾಳೀವನಗಳುಳ್ಳ ನೀಲವಾದ ಸಮುದ್ರದಕರೆ. ಮಧ್ಯದಲ್ಲಿ ಹಂಸಪಕ್ಷಿಗಳ ಶ್ರೇಣಿಗಳು—ಇನ್ನೊಂದು ಚಿತ್ರಪಟದಲ್ಲಿ ಅರ್ಜುನನು ಸುಭದ್ರೆಯನ್ನು ಹರಣಮಾಡಿಕೊಂಡು ರಥದಲ್ಲಿ ಕುಳ್ಳಿರಿಸಿಕೊಂಡಿದ್ದಾನೆ. ರಥವು ಆಕಾಶಮಾರ್ಗವಾಗಿಮೇಘಮಧ್ಯದಲ್ಲಿ ಮಾರ್ಗವನ್ನು ಮಾಡಿಕೊಂಡು ಹೋಗುತ್ತದೆ. ಹಿಂದುಗಡೆಯಲ್ಲಿ ಅಗಣಿತವಾದ ಯಾದವಸೈನ್ಯವು ಓಡುತ್ತದೆ. ದೂರದಲ್ಲಿ ಅವರ ಪತಾಕಶ್ರೇಣಿ, ಮತ್ತು ಧೂಳಿನಿಂದ ಹುಟ್ಟಿದ ಮೇಘವು ಕಾಣುತ್ತದೆ. ಸುಭದ್ರೆಯು ಸ್ವಯಂ ಸಾರಥಿಯಾಗಿ ರಥವನ್ನು ನಡೆಸುತಲಿರುತ್ತಾಳೆ. ಅಶ್ವಗಳು ಮುಖಾಮುಖಿಯಿಂದ ಪದಕ್ಷೇಪಮಾಡುತ್ತ ಮೇಘಗಳನ್ನೆಲ್ಲ ಪುಡಿಪುಡಿಮಾಡುತ್ತವೆ. ಸುಭದ್ರೆಯು ತನ್ನ ಸಾರಥ್ಯದ ನೈಪುಣ್ಯದಿಂದ ತಾನೇ ಪ್ರೀತಳಾಗಿ ಮುಖವನ್ನು ತಿರುಗಿಸಿಕೊಂಡು ಅರ್ಜುನನನ್ನು ಓರೆನೋಟದಿಂದ ನೋಡುತ್ತಾಳೆ. ಕುಂದಸದೃಶವಾದ ದಂತಗಳಿಂದ ಅಧರ

ವನ್ನು ದಂಶನಮಾಡುತ್ತ ಮುಗುಳುನಗು ನಗುತ್ತಾಳೆ, ರಥದ ವೇಗದಿಂದ ಹುಟ್ಟಿದ ಗಾಳಿಯಿಂದ ಅವಳ ಅಲಕಾವಳಿಯು ಹಾರುತ್ತದೆ. ಒಂದೆರಡು ಕೇಶಗುಚ್ಛವು ಬೆವರಿನಿಂದ ಜಡಿತವಾಗಿ ಕಪೋಲದಲ್ಲಿ ಚಕ್ರಾಕಾರವಾಗಿ ಅಂಟಿಕೊಂಡಿದೆ. ಮತ್ತೊಂದು ಚಿತ್ರಪಟದಲ್ಲಿ ಸಾಗರಿಕಾವೇಷವುಳ್ಳ ರತ್ನಾವಳಿಯು ಪರಿಷ್ಕಾರವಾದ ನಕ್ಷತ್ರದ ಬೆಳಕಿನಲ್ಲಿ ತಮಾಲವೃಕ್ಷಕ್ಕೆ ಹಬ್ಬಿದ್ದ ಲತೆಯಿಂದ ಉರುಲು ಹಾಕಿಕೊಂಡು ಪ್ರಾಣತ್ಯಾಗವನ್ನು ಮಾಡಿಕೊಳ್ಳುವುದಕ್ಕೆ ಹೋಗುತ್ತಾಳೆ. ಆ ವೃಕ್ಷದ ಕೊಂಬೆಯಿಂದ ತೂಗಾಡುತ್ತಿದ್ದ ಉಜ್ವಲವಾದ ಪುಷ್ಪಮಯವಾದ ಲತೆಯ ಕೊನೆಯನ್ನು ರತ್ನಾವಳಿಯು ಒಂದು ಕೈಯಿಂದ ತೆಗೆದುಕೊಂಡು ಕುತ್ತಿಗೆಗೆ ಕಟ್ಟಿಕೊಳ್ಳುತ್ತಾಳೆ; ಮತ್ತೊಂದು ಕೈಯಿಂದ ಕಣ್ಣೀರನ್ನೊರಿಸಿಕೊಳ್ಳುತ್ತಾಳೆ. ಲತೆಯ ಪುಷ್ಪಗಳು ಅವಳ ಕೇಶದಾಮದಮೇಲೆ ಬಿದ್ದು ಅಪೂರ್ವವಾದ ಶೋಭೆಯನ್ನುಂಟುಮಾಡುತ್ತಿವೆ ಮತ್ತೊಂದು ಚಿತ್ರಪಟದಲ್ಲಿ ಶಕುಂತಳೆಯು ದುಷ್ಯಂತನನ್ನು ನೋಡುವುದ ಕ್ಕೋಸ್ಕರ ಕಾಲಿನಿಂದ ಕಾಲ್ಪನಿಕವಾದ ಕುಶಾಂಕುರವನ್ನು ತೆಗೆಯುತ್ತಾಳೆ. ಅನಸೂಯೆ ಪ್ರಿಯಂವದೆ ಇಬ್ಬರೂ ನಗುತ್ತಾರೆ. ಶಕುಂತಳೆಯು ಕ್ರೋಧದಿಂದಲೂ ಲಜ್ಜೆಯಿಂದಲೂ ಮುಖವನ್ನೆತ್ತುವುದಿಲ್ಲ; ದುಷ್ಯಂತನನ್ನು ನೋಡಲೂ ಇಷ್ಟಪಡುವುದಿಲ್ಲ. ಹೊರಟು ಹೋಗುವುದೂ ಇಲ್ಲ. ಮತ್ತೊಂದು ಚಿತ್ರಪಟದಲ್ಲಿ ರಣಸಜ್ಜಿತನಾಗಿ ಸಿಹ್ಮದಮರಿಯುಹಾಗೆ ಇರುವ ಪ್ರತಾಪಶಾಲಿಯಾದ ಕುಮಾರ ಅಭಿಮನ್ಯುವು ಯುದ್ಧಕ್ಕೋಸ್ಕರ ಹೋಗಲು ಉತ್ತರೆಯ ಹತ್ತರ ಬಂದು ಅವಳ ಅನುಮತಿಯನ್ನು ಕೇಳುತ್ತಾನೆ. ಉತ್ತರೆಯು ಯುದ್ಧಕ್ಕೆ ಹೋಗುವುದಕ್ಕೆ ಬಿಡುವುದಿಲ್ಲವೆಂದು ಚಿಕ್ಕಮನೆಯ ಬಾಗಿಲನ್ನು ಹಾಕಿಕೊಂಡು ಅದಕ್ಕೆ ಅಡ್ಡವಾಗಿ ನಿಂತಿದ್ದಾಳೆ. ಅಭಿಮನ್ಯುವು ಅವಳ ಭಯವನ್ನು ನೋಡಿ ನಗುತ್ತಾನೆಯಲ್ಲದೆ ಆಡುವವನಹಾಗೆ ಯುದ್ಧದಲ್ಲಿ ವ್ಯೂಹವನ್ನು ಭೇದಿಸುವುದು ಹೇಗೋ ಅದನ್ನು ನೆಲದಮೇಲೆ

ಕತ್ತಿಯು ಕೋನೇಭಾಗದಿಂದ ಅಂಕಿತವಾಗಿ ತೋರಿಸುತ್ತಾನೆ. ಉತ್ತರೆಯು ಅದು ಯಾವುದನ್ನೂ ನೋಡುವುದಿಲ್ಲ. ಎರಡು ಕೈಗಳಿಂದಲೂ ಕಣ್ಣು ಮುಚ್ಚಿಕೊಂಡು ಅಳುತ್ತಾಳೆ. ಇನ್ನೊಂದು ಚಿತ್ರಪಟದಲ್ಲಿ ಸತ್ಯಭಾಮೆಯು ಮಾಡುವ ತುಲಾವ್ರತವು ಚಿತ್ರಿತವಾಗಿದೆ. ವಿಸ್ತಾರವಾದ ಶಿಲೆ ಹರಡಿರುವ ಪ್ರಾಂಗಣ. ಅದರ ಪಕ್ಕದಲ್ಲಿ ಎತ್ತರವಾದ ಉಪ್ಪರಿಗೆಯಿಂದ ಪರಿಶೋಭಿತವಾದ ರಾಜಪುರಿಯು ಬಂಗಾರದ ಗೋಪುರ ಸಮೇತವಾಗಿ ಪ್ರಕಾಶಿಸುತ್ತದೆ. ಪ್ರಾಂಗಣ ಮಧ್ಯದಲ್ಲಿ ಒಂದು ಬೆಳ್ಳಿಯಿಂದ ಮಾಡಲ್ಪಟ್ಟ ದೊಡ್ಡದಾದ ಚಿಂತಾಲು ಇಡಲ್ಪಟ್ಟಿದೆ. ತ್ರಾಸಿನ ಒಂದುಕಡೆಯಲ್ಲಿ ಭಾರಬಿಟ್ಟು ಮಿಂಚಿನಿಂದ ದೀಪ್ತವಾದ ಖಂಡ ಮೇಘದಹಾಗೆ ನಾನಾಲಂಕಾರಭೂಷಿತನಾದ ಪ್ರೌಢವಯಸ್ಕನಾದ ದ್ವಾರಕಾಧಿಪತಿ ಶ್ರೀಕೃಷ್ಣನು ಕುಳಿತಿದ್ದಾನೆ. ಅತ್ತಕಡೆ ತ್ರಾಸಿನ ತಟ್ಟೆಯು ನೆಲದಲ್ಲಿ ಕೂತಿದೆ. ಮತ್ತೊಂದುಕಡೆ ತಟ್ಟೆಯಲ್ಲಿ ನಾನಾರತ್ನಗಳ ಸಮೇತವಾಗಿ ಸುವರ್ಣರಾಶಿಯು ಸ್ತೂಪಾಕಾರವಾಗಿ ಏರಿಸಲ್ಪಟ್ಟಿದೆ, ಆದರೂ ತ್ರಾಸು ಏಳುವುದಿಲ್ಲ. ತ್ರಾಸಿನಪಾರ್ಶ್ವದಲ್ಲಿ ಸತ್ಯಭಾಮೆ; ಸತ್ಯಭಾಮೆಯು ಪ್ರೌಢವಯಸ್ಕಳು, ಸುಂದರಿ, ಉನ್ನತದೇಹ, ಪುಷ್ಟವಾದ ಕಾಂತಿವಿಶಿಷ್ಟಳು, ನಾನಾಭರಣಭೂಷಿತೆ, ಪಂಕಜಲೋಚನೆ; ಆದರೆ ತುಲಾಯಂತ್ರದ ಅವಸ್ಥೆಯನ್ನು ನೋಡಿ ಅವಳ ಮುಖಪದ್ಮವು ಬಾಡಿದೆ. ತನ್ನ ಆಭರಣಗಳನ್ನೆಲ್ಲಾ ತೆಗೆದು ತ್ರಾಸಿನಲ್ಲಿ ಹಾಕುತ್ತಾಳೆ. ಕೈಯ ಚಂಪಕಸಮನಾದ ಬೆರಳುಗಳಿಂದ ಕರ್ಣವಿಳಂಬಿಯಾದ ರತ್ನಭೂಷಣವನ್ನು ತೆಗೆಯುತ್ತಾಳೆ; ಲಜ್ಜೆಯಿಂದ ಕಪೋಲದಲ್ಲಿ ಬಿಂದುಬಿಂದುವಾಗಿ ಬೆವರು; ದುಃಖದಿಂದ ಕಣ್ಣಿನಲ್ಲಿ ನೀರು, ಕ್ರೋಧದಿಂದ ನಾಸಿಕಾರಂಧ್ರಗಳು ವಿಸ್ಫಾರಿತವಾಗಿವೆ. ಅಧರವನ್ನು ದಂಶನಮಾಡುತ್ತಾಳೆ, ಈ ಅವಸ್ಥೆಯು ಕಾಣುವಹಾಗೆ ಚಿತ್ರಕಾರನು ಚಿತ್ರಿಸಿದ್ದಾನೆ. ಹಿಂದೆ ನಿಂತುಕೊಂಡು ಸ್ವರ್ಣದಪ್ರತಿಮೆಯಹಾಗೆ ರುಕ್ಮಿಣಿಯು ನೋಡುತ್ತಾಳೆ, ಅವಳ ಮುಖವು ವ್ಯಸನದಿಂದಿರುವ

ಹಾಗೆ ಕಾಣುತ್ತದೆ. ಅವಳೂ ತನ್ನ ಅಲಂಕಾರಗಳನ್ನು ತೆಗೆದು ಸತ್ಯಭಾಮೆಗೆ ಕೊಡುತ್ತಾಳೆ. ಆದರೆ ಅವಳ ಕಣ್ಣು ಶ್ರೀಕೃಷ್ಣನಮೇಲೆ—ತನ್ನ ಳ ಸ್ವಾಮಿಯಮೇಲೆ ಅಪಾಂಗದೃಷ್ಟಿಯನ್ನು ಬೀರುತ್ತಾಳೆ. ಅವಳ ಅಧರದ ಪ್ರಾಂತದಲ್ಲಿ ಮುಗುಳು ನಗೆವು ತೋರುತ್ತದೆ. ಶ್ರೀಕೃಷ್ಣನು ಆ ಮುಗುಳುನಗೆಯಲ್ಲಿ ಸಪತ್ನಿಯ ಆನಂದವನ್ನು ಸಂಪೂರ್ಣವಾಗಿ ಕಂಡನು. ಶ್ರೀಕೃಷ್ಣನ ಮುಖವು ಏನೂ ತಿಳಿಯದವನಹಾಗೆ ಸ್ಥಿರವಾಗಿಯೂ ಗಂಭೀರವಾಗಿಯೂ ಇತ್ತು. ಆದರೆ ಅವನು ಓರೆಕಣ್ಣಿನಿಂದ ರುಕ್ಮಿಣಿಯನ್ನು ನೋಡಿದ ಕಟಾಕ್ಷದಲ್ಲಿ ಸ್ವಲ್ಪ ನಗುವಿತ್ತು. ಮಧ್ಯದಲ್ಲಿ ಶುಭ್ರವಸ್ತ್ರಧಾರಿಯೂ ಶುಭ್ರಕಾಂತಿಯುಳ್ಳ ದೇವರ್ಷಿ ನಾರದ; ಅವನು ಆನಂದಿತನಾದಹಾಗೆ ಎಲ್ಲ ನೋಡುತ್ತಾನೆ. ಗಾಳಿಯಿಂದ ಅವನ ಉತ್ತರೀಯವೂ ಶ್ಮಶ್ರುವೂ ಸಹ ಹಾರುತ್ತಲಿವೆ. ನಾಲ್ಕು ದಿಕ್ಕುಗಳಲ್ಲಿಯು ಬಹುಸಂಖ್ಯಾಕ ಪೌರವರ್ಗದವರು ನಾನಾಪ್ರಕಾರದ ವೇಶಭೂಷಣಗಳನ್ನು ಧಾರಣೆಮಾಡಿಕೊಂಡು ಪ್ರಕಾಶಿಸುತ್ತಾರೆ. ಬಹುಸಂಖ್ಯಾಕರಾದ ಬ್ರಾಹ್ಮಣರು ನೆರದಿದ್ದಾರೆ. ಪುರರಕ್ಷಕರ ನೌಕರರು ಗದ್ದಲವನ್ನು ಅಡಗಿಸುತ್ತಾರೆ. ಈ ಚಿತ್ರಪಟದ ಕೆಳಗಡೆ ಸೂರ್ಯಮುಖಿಯು ಸ್ವಹಸ್ತಾಕ್ಷರದಿಂದ "ಎಂತಹ ಕರ್ಮವೋ ಅಂತಹ ಫಲ. ಸ್ವಾಮಿಯಸಂಗಡ ಬೆಳ್ಳಿ ಭಂಗಾರದ ತೂಕವೇ?" ಎಂದು ಬರೆದಿದ್ದಳು.

ನಾಗೇಂದ್ರನು ಶಯ್ಯಾಗೃಹಕ್ಕೆ ಹೋದಾಗ ಎರಡನೆಯ ಯಾಮವು ಮೀರಿತ್ತು. ಆರಾತ್ರಿ ಅತಿ ಭಯಂಕರವಾಗಿತ್ತು. ಸಾಯಂಕಾಲದಿಂದಲೂ ಸ್ವಲ್ಪಸ್ವಲ್ಪ ಮಳೆಯಾಗುತಲಿತ್ತು; ಗಾಳಿಯು ಹೆಚ್ಚಾಗುತ್ತ ಬರುತ್ತಲಿತ್ತು. ಈಗಲೂ ಮಳೆಬರುತಲೇ ಇತ್ತು; ಗಾಳಿಯು ಪ್ರಚಂಡವಾದ ವೇಗವನ್ನು ಹೊಂದುತಲಿತ್ತು. ಬಾಗಲುಗಳೆಲ್ಲ ತೆರೆದಿದ್ದುದು ತೆರೆದಹಾಗೆಯೇ ಇತ್ತು; ಕದಗಳು ಗಾಳಿಯಿಂದ ಬಡಿದಾಡಿ ಸಿಡಿಲಿನ ಹಾಗೆ ಶಬ್ದವಾಗುವುದು. ಗವಾ

ಕ್ಷದ ಕವಗಳೆಲ್ಲ ಶಬ್ದವಾಗುತಲಿದ್ದವು. ನಾಗೇಂದ್ರನು ಶಯ್ಯಾಗೃಹಕ್ಕೆ ಹೋಗಿ ಬಾಗಿಲನ್ನು ಹಾಕಿಕೊಂಡನು. ಆಗ ಗಾಳಿಯು ಶಬ್ದವು ಕಡಮೆಯಾಯಿತು. ಮಂಚದ ಮತ್ತೊಂದು ಕಡೆಯಲ್ಲಿದ್ದ ಬಾಗಿಲು ತೆರೆದಿತ್ತು. ಆ ಬಾಗಿಲಿನಿಂದ ಗಾಳಿಯು ಬರುತ್ತಿರಲಿಲ್ಲ. ಅದು ಹಾಗೆಯೇ ಇತ್ತು.

ನಾಗೇಂದ್ರನು ಶಯ್ಯಾಗೃಹಕ್ಕೆ ಹೋಗಿ ನಿಟ್ಟುಸಿರು ಬಿಟ್ಟು ಬಂದು ಸೋಫಾದಮೇಲೆ ಕುಳಿತುಕೊಂಡನು. ಅದರಮೇಲೆ ಕೂತು ಎಷ್ಟುಕಿತ್ತನೋ ಅದನ್ನು ಯಾರೂ ಅರಿಯರು. ಎಷ್ಟೋಸಲ ಸೂರ್ಯಮುಖಿಯೂ ಅವನೂ ಆ ಸೋಫಾದಮೇಲೆ ಇದಿರುಬದುರಿಗೆ ಕೂತುಕೊಂಡು ಸುಖದ ಮಾತುನಾಡುತಲಿದ್ದರು.

ನಾಗೇಂದ್ರನು ಆ ಅಚೇತನವಾದ ಆಸನವನ್ನು ಎಷ್ಟೋ ತಡವೆ ಚುಂಬನಾಲಿಂಗನ ಮಾಡಿಕೊಂಡನು. ಮತ್ತು ಸೂರ್ಯಮುಖಿಯು ವಿಶ್ವಾಸವಾಗಿ ನೋಡುತಲಿದ್ದ ಪ್ರಿಯವಾದ ಚಿತ್ರಗಳನ್ನು ನೋಡುತಲಿದ್ದನು. ದೀಪವು ಉಜ್ವಲವಾಗಿ ಉರಿಯುತಲಿತ್ತು. ಆ ದೀಪದ ಚಂಚಲವಾದ ಕಾಂತಿಯಿಂದ ಚಿತ್ರಗಳೆಲ್ಲವೂ ಸಜೀವನಾಗಿರುವಹಾಗೆ ಕಾಣಿಸುತಲಿದ್ದವು. ಪ್ರತಿಯೊಂದು ಚಿತ್ರದಲ್ಲಿಯೂ ನಾಗೇಂದ್ರನು ಸೂರ್ಯಮುಖಿಯನ್ನು ನೋಡುತಲಿದ್ದನು. ಒಂದುದಿನ ಚಿತ್ರದಲ್ಲಿ ಉಮಾದೇವಿಯು ಪುಷ್ಪಾಲಂಕಾರಳಾಗಿದ್ದದ್ದು ನೋಡಿ ಸೂರ್ಯಮುಖಿಯು ತಾನೂ ಹಾಗೆ ಪುಷ್ಪಗಳನ್ನು ಮುಡಿಯಬೇಕೆಂದು ಆಶೆಪಟ್ಟಳು. ನಾಗೇಂದ್ರನು ಸ್ವಂತವಾಗಿ ಹೋಗಿ ಉದ್ಯಾನದಿಂದ ಹೂವು ತಂದು ಅವಳಿಗೆ ಮುಡಿಸಿದ್ದನು. ಅದಕ್ಕೆ ಸೂರ್ಯಮುಖಿಯು ಆನಂದಿತಳಾಗಿ ಸುಖಿಯಾದಷ್ಟು ರತ್ನಾಭರಣಗಳಿಂದಲಂಕೃತಳಾದ ರತ್ನಮಯಿಯಾದ ರಮಣಿಯೂ ಅಷ್ಟು ಸುಖಿಯಾಗಳು. ಇದು ಜ್ಞಾಪಕಕ್ಕೆ ಬಂತು. ಮತ್ತೊಂದು ದಿನ ಸುಭದ್ರೆಯ ಸಾರಥ್ಯವನ್ನು ನೋಡಿ ಸೂರ್ಯ

ಮುಖಿಯು ನಾಗೇಂದ್ರನ ಫೀಟನ್‌ಗಾಡಿಯನ್ನು ಹೊಡೆಯಬೇಕೆಂದು ಆಶೆ ಪಟ್ಟಳು. ಪತ್ನೀವತ್ಸಲನಾದ ನಾಗೇಂದ್ರನು ಒಂದು ಸಣ್ಣ ಗಾಡಿಗೆ ಎರಡು ಉತ್ತಮಜಾತಿ ಬರ್ಮ್ಮಾದೇಶದ ಚಿಕ್ಕಚಿಕ್ಕ ಟಾಕಣಗಳನ್ನು ಹಾಕಿ ಇಬ್ಬರೂ ಬಂಡಿಯಲ್ಲಿ ಕೂತು ಅಂತಃಪುರದ ಉದ್ಯಾನದಲ್ಲಿ ಓಡಿಸಿದನು. ಸೂರ್ಯ ಮುಖಿಯು ಲಗಾಮನ್ನು ಹಿಡಿದಿದ್ದವಳು ಸುಭದ್ರೆಯಹಾಗೆ ತಾನೂ ಹಿಂದಿ ರುಗಿ ನಾಗೇಂದ್ರನನ್ನು ಓರೆಗಣ್ಣಿನಿಂದ ನೋಡುತ್ತ ಹಲ್ಲುಗಳಿಂದ ಅಧರ ದಂಶನಮಾಡಿಕೊಂಡು ನಗುತ್ತಿದ್ದಳು. ಈ ಅವಕಾಶದಲ್ಲಿ ಕುದುರೆಗಳು ಗಾಡಿ ಯನ್ನು ತೆಗೆದುಕೊಂಡು ಹೊರಕ್ಕೆ ಸದರಮಹಲಿನ ಮಾರ್ಗವನ್ನು ಹಿಡಿದವು. ಆಗ ಸೂರ್ಯಮುಖಿಯು ಲಜ್ಜೆಯಿಂದ ಸತ್ತವಳಹಾಗಾಗಿ ಮುಖಪರದೆಯ ನ್ನು ಎಳೆದುಕೊಂಡಳು. ಅವಳಾತುರ್ದಶೆಯನ್ನು ನೋಡಿ ನಾಗೇಂದ್ರನು ತಾನೇ ಕುದುರೆ ಲಗಾಮನ್ನು ತೆಗೆದುಕೊಂಡು ಬಂಡಿಯನ್ನು ಒಳಕ್ಕೆ ತೆಗೆ ದುಕೊಂಡು ಹೋದನು. ಬಂಡಿಯಿಂದ ಇಬ್ಬರೂ ಇಳಿದು ಎಷ್ಟು ನಕ್ಕರೋ ಹೇಳುವುದಕ್ಕಾಗುವುದಿಲ್ಲ. ಇದು ಅವನ ಜ್ಞಾಪಕಕ್ಕೆ ಬಂದು ಬಹಳ ಅತ್ತನು. ಇನ್ನು ಹೆಚ್ಚು ಸಹಿಸಲಾರದೆ ಎದ್ದು ಹಾಗೆಯೇ ಅಲ್ಲಿ ತಿರುಗಾಡಿ ದನು. ಯಾವ ಕಡೆ ನೋಡಿದರೂ ಅಲ್ಲಿ ಸೂರ್ಯಮುಖಿಯ ಜ್ಞಾಪಕ ಬರುವುದಕ್ಕೆ ಕುರುಹುಗಳಿರುವುವು. ಗೋಡೆಯಮೇಲೆ ಬರೆದಿದ್ದ ಲತೆಯ ನ್ನು ನೋಡಿ ಸೂರ್ಯಮುಖಿಯೂ ಅದರಹಾಗೆ ಒಂದು ಲತೆಯನ್ನು ಚಿತ್ರಿ ಸಿದ್ದಳು. ಅದು ಹಾಗೆಯೇ ಇತ್ತು. ಒಂದುದಿನ ಸೂರ್ಯಮುಖಿಯು ತನ್ನ ಸ್ವಾಮಿಯಮೇಲೆ ಕುಂಕುಮವನ್ನು ಎರಚಿದ್ದಳು. ಅದು ಅವನಿಗೆ ತಗಲದೆ ಗೋಡೆಯಮೇಲೆ ಬಿತ್ತು. ಅದು ಹಾಗೆಯೇ ಗೋಡೆಯಲ್ಲಿ ಗುರು ತಾಗಿತ್ತು. ಶಯ್ಯಾಗೃಹವು ಕಟ್ಟಿ ಸಿದ್ಧವಾದಮೇಲೆ ಸೂರ್ಯಮುಖಿಯು ತನ್ನ ಸ್ವಹಸ್ತದಿಂದ ದೊಡ್ಡದೊಡ್ಡ ಅಕ್ಷರದಲ್ಲಿ ಗೋಡೆಯಮೇಲೆ ಬರೆದಿ ದ್ದಳು :—ಏನೆಂದರೆ :—

"೧೯೧೦ ಸಂವತ್ಸರದಲ್ಲಿ
ಇಷ್ಟದೇವತಾ
ಸ್ವಾಮಿಯು ಸ್ಥಾಪನೆಗೋಸ್ಕರ
ಈ ಮಂದಿರವು
ಅವರ ದಾಸಿಯಾದ ಸೂರ್ಯಮುಖಿಯಿಂದ
ಪ್ರತಿಷ್ಠಿತವಾಯಿತು"–

ನಾಗೇಂದ್ರನು ಇದನ್ನು ಓದಿದನು. ಅವನು ಎಷ್ಟುಸಲ ಇದನ್ನು ಓದಿದನೋ–ಓದೋದಿ ಮನಸ್ಸು ತೃಪ್ತಿಯಾಗಲಿಲ್ಲ–ಕಣ್ಣೀರಿನಿಂದ ದೃಷ್ಟಿಯು ಪುನಃಪುನಃ ಲೋಪವಾಗುವುದು–ಕಣ್ಣೀರು ಬರಸಿಬರಸಿಕೊಂಡು ಓದಿದನು. ಓದೋದುತ್ತಿರುವಹಾಗೆ ದೀಪದಬೆಳಕು ಕಡಮೆಯಾಗುತ್ತಬಂತು. ಆ ಸಮಯದಲ್ಲಿ ಎಣ್ಣೆಯಿಲ್ಲದೆ ದೀಪವು ಮುಕ್ತಾಲುವಾಸಿ ಹೋಗುತ್ತಬಂತು. ಸ್ವಲ್ಪಮಾತ್ರ ಮಿಂಚಿನಹೊಳದಹಾಗೆ ಮಿನುಗುತಲಿತ್ತು. ಆ ಅಂಧಕಾರದ ಹಾಗಿದ್ದ ಬೆಳಕಿನಲ್ಲಿ ಒಂದು ಅದ್ಭುತವು ಅವನ ಕಣ್ಣಿಗೆ ಗೋಚರವಾಯಿತು. ಚಂಡಮಾರುತದ ಶಬ್ದದಿಂದ ಅವನು ಚಮಕಿತನಾಗಿ ಮಂಚದ ಪಾರ್ಶ್ವದಲ್ಲಿ ತೆರೆದಿದ್ದ ಬಾಗಿಲಿನಕಡೆಗೆ ಅವನ ದೃಷ್ಟಿಯು ಬಿತ್ತು. ಆ ತೆರೆದಿದ್ದ ಬಾಗಿಲನಲ್ಲಿ ಆ ಮಸಕುಮಸಕು ಬೆಳಕಿನಲ್ಲಿ ಒಂದು ಛಾಯೆ ಸ್ವರೂಪವನ್ನು ನೋಡಿದನು. ಛಾಯೆಯು ಸ್ತ್ರೀರೂಪವಾಗಿ ಕಂಡಿತು; ಪುನಃ ನೋಡಿದನು. ನೋಡಿ ಅವನ ಮೈಯೆಲ್ಲ ಕಂಟಕಿತವಾಗಿ ಕೈಕಾಲು ಕಂಪಿತವಾದವು: ಆ ಛಾಯೆಯು ಸೂರ್ಯಮುಖಿಯ ಅವಯವವುಳ್ಳದ್ದಾಗಿ ಕಂಡಿತು. ನಾಗೇಂದ್ರನು ಅದು ಸೂರ್ಯಮುಖಿಯ ಛಾಯೆಯಂತಲೇ ಗುರ್ತಿಸಿದನು. ಆಗ ಅವನು ಮಂಚದಮೇಲಿನಿಂದ ಬಿದ್ದು, ಪುನಃ ಎದ್ದು ಛಾಯೆಯಿದ್ದಲ್ಲಿಗೆ ಓಡಿದನು. ಛಾಯೆಯು ಅದೃಶ್ಯವಾಯಿತು. ಆ ಸಮಯದಲ್ಲಿ ದೀಪವು ಆಳಿಸಿಹೋಯಿತು. ಆಗ ನಾಗೇಂದ್ರನು ಗಟ್ಟಿಯಾಗಿ ಚೀತ್ಕಾರಮಾಡುತ್ತ ನೆಲದಮೇಲೆ ಬಿದ್ದು ಮೂರ್ಛಿತನಾದನು.

## ನಾಲ್ವತ್ತೈದನೆಯ ಪರಿಚ್ಛೇದ

ನಾಗೇಂದ್ರನಿಗೆ ಮೂರ್ಛೆಯು ತಿಳಿದಾಗಲೂ ಶಯ್ಯಾಗೃಹವು ನಿಬಿಡವಾದ ಅಂಧಕಾರವಾಗಿತ್ತು. ಕ್ರಮಕ್ರಮವಾಗಿ ಸಂಜ್ಞೆಯು ಸಂಚಿತವಾಯಿತು. ಮೂರ್ಛೆಯಾದುದು ಜ್ಞಾಪಕಕ್ಕೆ ಬಂದಾಗೆಲ್ಲ ಅವನಿಗೆ ಆಶ್ಚರ್ಯದಮೇಲೆ ಆಶ್ಚರ್ಯವುಂಟಾಯಿತು. ಅವನು ಮೂರ್ಛಿತನಾಗಿ ನೆಲದ ಮೇಲೆ ಬಿದ್ದಿದ್ದನು. ಅಂತಹವನಿಗೆ ತಲೆದಿಂಬು ಹೇಗೆ ಬಂತು? ಇದು ಯಾವ ಹತ್ತಿಯದಿಂಬು? ಎಂಬ ಸಂಶಯವು ಹುಟ್ಟಿತು. ಮುಟ್ಟಿನೋಡಿದನು—ಅದು ದಿಂಬಾಗಿರಲಿಲ್ಲ. ಯಾರೋ ಮನುಷ್ಯರ ತೊಡೆಯಾಗಿತ್ತು. ಕೋಮಲವಾಗಿದ್ದುದರಿಂದ ಹೆಂಗಸಿನ ತೊಡೆಯಾಗಿ ಬೋಧೆಯಾಯಿತು. ಇವನ ಮೂರ್ಛಿತಾವಸ್ಥೆಯಲ್ಲಿ ಯಾರು ಬಂದು ತಲೆಯನ್ನು ಎತ್ತಿ ತೊಡೆಯ ಮೇಲೆ ಇಟ್ಟುಕೊಂಡಿದ್ದವರು? ಕುಂದನಂದಿನಿಯಿರಬಹುದು. ಸಂದೇಹ ನಿವಾರಣಕ್ಕೋಸ್ಕರ ನೀನು ಯಾರೆಂದು ಕೇಳಿದನು. ತಲೆಯನ್ನು ತೊಡೆಯ ಮೇಲೆ ಇಟ್ಟುಕೊಂಡಿದ್ದವಳು ಉತ್ತರವನ್ನು ಕೊಡಲಿಲ್ಲ. ಆದರೆ ಅವನ ಮೇಲೆ ಬಂದೆರಡುತೊಟ್ಟು ಬಿಸಿಯಾದ ನೀರುಬಿತ್ತು. ನಾಗೇಂದ್ರನು ಯಾರೇ ಆಗಲಿ ಅವಳು ಅಳುತ್ತಾಳೆಂದು ತಿಳಿದನು. ಉತ್ತರವು ಬಾರದ್ದರಿಂದ ನಾಗೇಂದ್ರನು ಅವಳ ಅಂಗಸ್ಪರ್ಶವನ್ನು ಮಾಡಿದನು. ಆಗ ನಾಗೇಂದ್ರನಿಗೆ ಅಕಸ್ಮಾತ್ತಾಗಿ ಬುದ್ಧಿಭ್ರಂಶವಾಯಿತು. ಅವನ ಶರೀರವು ರೋಮಾಂಚಿತವಾಯಿತು. ಅವನು ನಿಶ್ಚಲವಾಗಿ ಜಡಪ್ರಾಯವಾಗಿ ಸ್ವಲ್ಪಹೊತ್ತು ಬಿದ್ದಿದ್ದನು. ಅನಂತರ ಮೆಲ್ಲಮೆಲ್ಲಗೆ ಅವಳ ತೊಡೆಯಮೇಲಿಂದ ತಲೆಯನ್ನು ಎತ್ತಿ ಎದ್ದು ಕೂತನು.

ಆಗ ಮಳೆಯೂ ಗಾಳಿಯೂ ಕಡಿಮೆಯಾಗಿತ್ತು. ಆಕಾಶದಲ್ಲಿ ಮೇಘವಿರಲಿಲ್ಲ. ಪೂರ್ವದಿಕ್ಕಿನಲ್ಲಿ ಪ್ರಭಾತೋದಯವಾಗುತಲಿತ್ತು. ಹೊರಗೆ ಬೆಳ

ಕಾಗಿತ್ತು. ಬೆಳಕು ಬಾಗಿಲ ಕಂಡಿಗಳಿಂದ ಒಳಕ್ಕೆ ಬರುತಲಿತ್ತು. ನಾಗೇಂದ್ರನು ಎಚ್ಚರಗೊಂಡು ನೋಡಲಾಗಿ ರಮಣಿಯು ಎದ್ದಳು ಎದ್ದು ಬಾಗಿಲ ಕಡೆಗೆ ಹೋದಳು. ನಾಗೇಂದ್ರನು ನೋಡಲಾಗಿ ಆವಳು ಕುಂದನಂದಿನಿಯಾಗಿರಲಿಲ್ಲ. ಆಗ ಮುಖ, ಕತ್ತಲೆಯಾಗಿತ್ತಾದಕಾರಣ, ಗುರ್ತಿಸಲು ಆಗಲಿಲ್ಲ. ಆದರೆ ಆ ನಡೆ ಸ್ವಲ್ಪಸ್ವಲ್ಪ ಅನುಭವವಾಯಿತು. ಹಾಗೆಯೇ ನೋಡಿದನು. ನೋಡುತ್ತಿದ್ದಹಾಗೆ ಆ ಸ್ತ್ರೀಮೂರ್ತಿಯ ಕಾಲಿನಮೇಲೆ ಬಿದ್ದನು. ಬಿದ್ದು ಕಾತರಸ್ವರವುಳ್ಳವನಾಗಿ, ಕಣ್ಣೀರು ತುಂಬಿದವನಾಗಿ, ನೀನು ದೇವತೆಯಾದರೂ ಮಾನವಿಯಾದರೂ, ನಿನ್ನ ಪಾದಗಳಮೇಲೆ ಬಿದ್ದಿದ್ದೇನೆ. ನನ್ನ ಸಂಗಡ ಮಾತನಾಡು, ಇಲ್ಲದಿದ್ದರೆ ನಾನು ಪ್ರಾಣತ್ಯಾಗವನ್ನು ಮಾಡುವೆನೆಂದನು.

ರಮಣಿಯು ಏನು ಹೇಳಿದಳೋ ಅದನ್ನು ನಾಗೇಂದ್ರನು ತಿಳಿದುಕೊಳ್ಳಲಿಲ್ಲ ಆ ಮಾತುಗಳು ಕಿವಿಗೆ ಬಿತ್ತೋ ಇಲ್ಲವೋ, ಆ ಕೂಡಲೇ ನಾಗೇಂದ್ರನು ಬಾಣದಹಾಗೆ ಎದ್ದುನಿಂತನು. ನಿಂತಿದ್ದ ಹೆಂಗಸನ್ನು ತಬ್ಬಿಕೊಳ್ಳುವುದಕ್ಕೆ ಹೋದನು ಆದರೆ ಮನಸ್ಸು ಶರೀರ ಎರಡೂ ಮೋಹದಿಂದ ಆಚ್ಛನ್ನವಾಗಿ ವೃಕ್ಷಚ್ಯುತವಾದ ಬಳ್ಳಿಯಹಾಗೆ ಆ ಮೋಹಿನಿಯ ಪಾದದೆಶದಲ್ಲಿ ಬಿದ್ದನು ಪುನಃ ಮಾತನಾಡಲಿಲ್ಲ.

ರಮಣಿಯು ಪುನಃ ತಲೆಯನ್ನೆತ್ತಿ ತೊಡೆಯಮೇಲೆ ಇಟ್ಟುಕೊಂಡಳು. ನಾಗೇಂದ್ರನು ಆ ಮೋಹನಿದ್ರೆಯಿಂದ ಎಚ್ಚರವಾದಾಗ ದಿನೋದಯವಾಯಿತು. ಶಯ್ಯಾಗೃಹದ ಪಾರ್ಶ್ವದಲ್ಲಿದ್ದ ಉದ್ಯಾನದಲ್ಲಿ ಮರಮರದಲ್ಲಿಯೂ ಹಕ್ಕಿಗಳ ಕಲಕಲವಾಗುತ್ತಿತ್ತು. ಮೇಲಿನ ಗವಾಕ್ಷದಿಂದ ಸೂರ್ಯಕಿರಣವು ಗೃಹದಲ್ಲಿ ಪ್ರವೇಶವಾಡಿತು. ಆಗಲೂ ತಾನು ಹೆಂಗಸಿನ ತೊಡೆಯಮೇಲೆ ತಲೆಯನ್ನಿಟ್ಟುಕೊಂಡಿರುವ ಹಾಗೆ ಅನುಭವವಾಡಿದನು. ಕಣ್ಣು ಬಿಡದೆ, ಕುಂದ! ನೀನು ಯಾವಾಗ ಬಂದೆ? ನಾನು ರಾತ್ರಿಯೆಲ್ಲಾ ಸೂರ್ಯ

ಮುಖಿಯ ಸ್ವಪ್ನ ಕಂಡೆನು. ಸ್ವಪ್ನದಲ್ಲಿ ಸೂರ್ಯಮುಖಿಯ ತೊಡೆಯ ಮೇಲೆ ತಲೆಯನ್ನಿಟ್ಟುಕೊಂಡಿದ್ದೆ, ನೀನು ಸೂರ್ಯಮುಖಿಯಾಗಿದ್ದರೆ ಎಷ್ಟು ಸುಖವಾಗುತಲಿತ್ತೋ! ಎಂದನು.

ನೀವು ಆ ಹಾಳುಮೋರೆಯವಳ ಮುಖವನ್ನು ನೋಡಿ ಅಷ್ಟು ಸಂತೋಷಪಡುವಿರಾದರೆ, ಆಹಾಳು ಮೋರೆಯವಳೇ ನಾನೆಂದಳು.

ನಾಗೇಂದ್ರನು ದೃಷ್ಟಿಸಿ ನೋಡಿದನು. ಚಮಕಿತನಾಗಿ ಎದ್ದುಕೂತನು. ಪುನಃ ನೋಡಿದನು. ತಲೆಯನ್ನು ಹಿಡಿದುಕೊಂಡು ಕೂತನು. ಪುನಃ ಕಣ್ಣೊರಸಿಕೊಂಡು ನೋಡಿದನು. ಪುನಃ ತಲೆಯನ್ನು ತಗ್ಗಿಸಿಕೊಂಡು ತನಗೆ ತಾನೇ, ನಾನೇನು ಹುಚ್ಚನಾದೆನೆ-ಇಲ್ಲ, ಸೂರ್ಯಮುಖಿಯು ಬದುಕಿದ್ದಾಳೆಯೆ? ನಾನೇ ಹುಚ್ಚ ಎಂದು ಹೇಳಿಕೊಂಡು ಧರಾಶಾಯಿಯಾಗಿ ಬಾಹುಗಳಿಂದ ಕಣ್ಣುಮುಚ್ಚಿಕೊಂಡು ಪುನಃ ಅಳುವುದಕ್ಕೆ ತೊಡಗಿದನು.

ಈಗ ರಮಣಿಯು ಅವನ ಚರಣಗಳನ್ನು ಹಿಡಿದುಕೊಂಡಳು. ಅವನ ಕಾಲಿನಮೇಲೆ ತಲೆಯನ್ನಿಟ್ಟುಕೊಂಡು ಆ ಚರಣವನ್ನು ತನ್ನ ಅಶ್ರುಜಲದಿಂದ ಅಭಿಷೇಕಮಾಡಿದಳು. ಅಭಿಷೇಕಮಾಡಿ ಏಳು! ಏಳು! ನನ್ನ ಜೀವನ ಸರ್ವಸ್ವ; ನೆಲವನ್ನು ಬಿಟ್ಟು ಎದ್ದುಕೂಡು. ನಾನು ಅನುಭವಿಸಿದ ದುಃಖಗಳೆಲ್ಲ ಇಂದು ಕೊನೆಗಂಡು ಹೋಯಿತು. ಏಳು! ನಾನು ಸಾಯಲಿಲ್ಲ. ಪುನಃ ನಿನ್ನ ಪಾದಸೇವೆಯನ್ನು ಮಾಡಲು ಬಂದಿದ್ದೇನೆಂದಳು.

ಇನ್ನು ಭ್ರಮೆಯುಂಟೆ? ಆಗ ನಾಗೇಂದ್ರನು ಎದ್ದು ಸೂರ್ಯಮುಖಿಯನ್ನು ಗಾಢಾಲಿಂಗನೆಮಾಡಿಕೊಂಡನು. ಅವಳ ಎದೆಯಮೇಲೆ ತಲೆಯನ್ನಿಟ್ಟುಕೊಂಡು ಮಾತಿಲ್ಲದೆ ಅವಿಶ್ರಾಂತವಾಗಿ ರೋದನಮಾಡತೊಡಗಿದನು. ಆಗ ಇಬ್ಬರೂ ಎಷ್ಟೋ ಅತ್ತರು. ಯಾರೂ ಮಾತನಾಡಲಿಲ್ಲ. ಎಷ್ಟೋ ಅತ್ತರು. ರೋದನದಲ್ಲಿ ಸುಖವುಂಟೆ?

## ನಾಲ್ವತ್ತೊಂದನೆಯ ಪರಿಚ್ಛೇದ

### ಪೂರ್ವ ವೃತ್ತಾಂತ.

ಯಥಾಸಮಯದಲ್ಲಿ ಸೂರ್ಯಮುಖಿಯು ನಾಗೇಂದ್ರನ ಕುತೂಹಲವನ್ನು ನಿವಾರಣೆಮಾಡಿದಳು. ಅವಳ ವೃತ್ತಾಂತವನ್ನೆಲ್ಲ ಹೇಳತೊಡಗಿದಳು—ಏನೆಂದರೆ—ನಾನು ಸಾಯಲಿಲ್ಲ—ವೈದ್ಯನು ಹೇಳಿದ್ದು ಸುಳ್ಳು. ಅವನಿಗೆ ತಿಳಿಯದು. ನಾನು ಅವನ ಚಿಕಿತ್ಸೆಯಿಂದ ಆರೋಗ್ಯಳಾಗಿ, ನಿಮ್ಮನ್ನ ನೋಡಲು ಗೋವಿಂದಪುರಕ್ಕೆ ಬರಲು ಬಹಳ ಆತುರಳಾದೆನು. ಬ್ರಹ್ಮಚಾರಿಗೆ ಬಹಳ ಹೇಳಿಕೊಂಡೆನು. ಕಡೆಗೆ ಅವನು ಗೋವಿಂದಪುರಕ್ಕೆ ಸಂಗಡ ಬರಲು ಒಪ್ಪಿಕೊಂಡನು. ಒಂದುದಿನ ಸಾಯಂಕಾಲವಾದಮೇಲೆ ಆಹಾರಾದಿಗಳನ್ನು ಮಾಡಿಕೊಂಡು ಅವನ ಜತೆಯಲ್ಲಿ ಗೋವಿಂದಪುರಕ್ಕೆ ಹೊರಟೆನು. ಇಲ್ಲಿಗೆ ಬಂದು ಕೇಳಲಾಗಿ ನೀವು ಇರಲಿಲ್ಲ. ಬ್ರಹ್ಮಚಾರಿಯು ಈ ಊರಿಂದ ಮೂರು ಹರಿದಾರಿ ದೂರದಲ್ಲಿರುವ ಒಬ್ಬ ಬ್ರಾಹ್ಮಣನ ಮನೇಲಿ ನನ್ನನ್ನು ಅವನ ಮಗಳ ಜತೆಮಾಡಿಟ್ಟು ನಿಮ್ಮನ್ನ ನೋಡಲು ಹೋದನು. ಅವನು ಮೊದಲು ಕಲಿಕತ್ತೆಯಲ್ಲಿ ಶ್ರೀಶಚಂದ್ರನನ್ನು ನೋಡಿ, ಅವನಿಂದ ನೀವು ಮಧುಪುರಕ್ಕೆ ಹೋಗಿರುವುದಾಗಿ ತಿಳಿದು, ಅಲ್ಲಿಗೆ ಹೋದನು. ಅಲ್ಲಿ ನಾವು ಹರಮಣಿಯ ಮನೆಯನ್ನು ಬಿಟ್ಟದಿನವೇ ಅವಳ ಮನೆಯು ಸುಟ್ಟುಹೋಯಿತೆಂದೂ ಹರಮಣಿಯು ಮನೆಯೊಂದಿಗೆ ಸುಟ್ಟುಹೋದಳೆಂದೂ, ಬೆಳಿಗ್ಗೆ ಮನೆಯಲ್ಲಿದ್ದ ಇಬ್ಬರ ಹೆಂಗಸರಲ್ಲಿ ಒಬ್ಬಳು ಓಡಿಹೋದಳೆಂದೂ ಮತ್ತೊಬ್ಬಳು ಸುಟ್ಟುಹೋದಳೆಂದೂ, ಕಾಯಿಲೆ ಇಲ್ಲದವಳು ಓಡಿ ಹೋದಳೆಂದೂ, ಕಾಯಿಲೆಯಲ್ಲಿದ್ದವಳು ಸುಟ್ಟುಹೋದಹಾಗೂ ಹರಮಣಿಯೇ ಓಡಿಹೋದವಳೆಂದೂ ನಾನೇ ಸತ್ತವಳೆಂತಲೂ ಸಿದ್ಧಾಂತ ಮಾಡಿಕೊಂಡರು. ಮೊದಲು ಅನುಮಾನವಾಗಿದ್ದದ್ದು ಜನವಾರ್ತೆಯಿಂದ

ಕ್ರಮೇಣ ಖಂಡಿತವಾಯಿತು. ರಾಮಕೃಷ್ಣನು ಅದನ್ನು ಕೇಳಿದ್ದವನು ನಿಮಗೆ ಅದನ್ನೇ ಹೇಳಿದನು. ಬ್ರಹ್ಮಚಾರಿಯು ಇದನ್ನೆಲ್ಲಾ ತಿಳಿದುಕೊಂಡು ನೀವು ನನ್ನ ಮರಣಸಮಾಚಾರವನ್ನು ಕೇಳಿ ಈಕಡೆಗೆ ಹೊರಟುಬಂದಿರೆಂದು ಕೇಳಿ ಬಹಳ ವ್ಯಸ್ತನಾಗಿ ನಿಮ್ಮನ್ನು ಹುಡುಕುವುದರಲ್ಲಿದ್ದನು. ಅವನು ಮೊನ್ನೆ ಪ್ರತಾಪಪುರಕ್ಕೆ ಸೇರಿದನು. ನೀವು ಬಂದೆರಡು ದಿನದಲ್ಲಿ ಊರಿಗೆ ಬರುವುದಾಗಿ ನಾನೂ ವರ್ತಮಾನಕೇಳಿದೆ. ನಾನು ಆ ಆಶೆಯಿಂದ ನೆನ್ನೆ ಇಲ್ಲಿಗೆ ಬಂದಿದ್ದೆನು. ಈಗ ಮೂರು ಹರಿದಾರಿ ನಡೆಯಬಲ್ಲೆ. ನಡೆಯುವುದು ಅಭ್ಯಾಸವಾಯಿತು. ನೆನ್ನೆ ನೀವು ಬರಲಿಲ್ಲವೆಂದು ತಿಳಿದು ಹೊರಟುಹೋದೆ. ನೆನ್ನೆ ಬ್ರಹ್ಮಚಾರಿಯನ್ನು ನೋಡಿದಮೇಲೆ ಗೋವಿಂದಪುರಕ್ಕೆ ಪುನಃ ಬಂದೆನು. ನಾನು ಇಲ್ಲಿಗೆ ಬಂದಾಗ ಬಂದು ಯಾಮವಾಗಿತ್ತು. ನೋಡಲಾಗಿ ಆಗಲೂ ಗವಾಕ್ಷಗಳ ಬಾಗಿಲು ತೆರೆದಿತ್ತು. ಮನೆಯೊಳಗೆ ಬಂದೆನು. ನನ್ನನ್ನು ಯಾರೂ ನೋಡಲಿಲ್ಲ ಮೆಟ್ಟಿಲುಗಳ ಕೆಳಗೆ ಬಾತುಕೊಂಡಿದ್ದೆನು. ನೀವು ಮಲಗುವುದಕ್ಕೆ ಅವಶ್ಯವಾಗಿ ಬರುವಿರೆಂದು ತಿಳಿದುಕೊಂಡೆನು. ಕಡೆಗೆ ಮೇಲಕ್ಕೆ ಹತ್ತಿಬಂದು ನೋಡಲಾಗಿ ಈ ಬಾಗಿಲು ತೆರೆದಿತ್ತು. ಬಾಗಿಲಲ್ಲಿ ಇಣಿಕಿನೋಡಲಾಗಿ ನೀವು ತಲೆಯಮೇಲೆ ಕೈಯಿಟ್ಟುಕೊಂಡು ಕುಳಿತಿದ್ದಿರಿ. ನಿಮ್ಮ ಹತ್ತಿರ ಬಂದು ಬೀಳಬೇಕೆಂದು ಆಶೆಯಾಯಿತು, ಆದರೆ ಭಯವಾಯಿತು. ತಮ್ಮಲ್ಲಿ ನಾನು ಅಪರಾಧಿಯಾಗಿದ್ದೆನು; ನೀವು ಕ್ಷಮಿಸದೆಹೋದರೆ ಮಾಡತಕ್ಕದ್ದೇನೆಂದು ಭಯವಾಯಿತು. ನಿಮ್ಮನ್ನು ನೋಡಿ ಅದರಿಂದಲೇ ತೃಪ್ತಳಾಗುತಲಿದ್ದೆ. ಬಾಗಿಲಿಗೆ ಅಡ್ಡವಾಗಿನಿಂತು ನೋಡುತಲಿದ್ದೆ; ಆಗಲೇ ಬಂದು ನೋಡೋಣವೆಂದು ಯೋಚಿಸಿದೆನು. ನೋಡುವುದಕ್ಕೆ ಬರುತಲಿದ್ದೆ—ಆದರೆ ನನ್ನನ್ನು ನೋಡಿದಕೂಡಲೇ ಅಚೇತನರಾದಿರಿ. ಆಗ ಬಂದು ತೊಡೆಯಮೇಲೆ ಎತ್ತಿಕೊಂಡು ಕೂತೆನು. ಇಂತಹ ಸುಖವು ನನ್ನ ಹಣೆಯಲ್ಲಿ ಬರೆದಿತ್ತೆಂದು ತಿಳಿದಿರಲಿಲ್ಲ. ಆದರೆ ಛಿ! ನೀವು

ನನ್ನನ್ನು ಪ್ರೀತಿಸುವುದಿಲ್ಲ. ನನ್ನಮೇಲೆ ಕೈಹಾಕಿದರೂ ನಿನಗೆ ಗೊತ್ತಾಗಲಿಲ್ಲ—ನನಗೆ ನಿನ್ನ ಗಾಳಿಯು ಸೋಕುತ್ತಲೇ ಗೊತ್ತಾಯಿತು, ಎಂದಳು.

---

## ನಾಲ್ವತ್ತೇಳನೆಯ ಪರಿಚ್ಛೇದ

### ಸರಳಾ ಮತ್ತು ಸರ್ಪೀ.

ಶಯ್ಯಾಗೃಹದಲ್ಲಿ ಸುಖಸಾಗರದಲ್ಲಿ ಮುಳುಗೇಳುತ್ತ ನಾಗೇಂದ್ರನೂ ಸೂರ್ಯಮುಖಿಯೂ ಈ ಪ್ರಾಣವನ್ನು ಸ್ನಿಗ್ಧಮಾಡುವ ಮಾತುಗಳನ್ನಾಡುತ್ತಿರುವಾಗ ಆ ಮನೆಯ ಮತ್ತೊಂದ ಕಡೆಯಲ್ಲಿ ಪ್ರಾಣಸಂಹಾರಕವಾದ ಮಾತುಕಥೆಗಳು ನಡೆಯುತಲಿದ್ದವು. ಆದರೆ ಅದಕ್ಕೆ ಮೊದಲು ಆ ರಾತ್ರಿಯಲ್ಲಿ ನಡೆದುದೆಲ್ಲ ಹೇಳುವುದು ಆವಶ್ಯಕವಾಗಿದೆ.

ಮನೆಗೆ ಬಂದು ನಾಗೇಂದ್ರನು ಕುಂದನಂದಿನಿಯನ್ನು ನೋಡಲಿಲ್ಲ. ಕುಂದಳು ತನ್ನ ಶಯನಾಗಾರದಲ್ಲಿ ತಲೆದಿಂಬಿನಮೇಲೆ ಮುಖವನ್ನಿಟ್ಟುಕೊಂಡು ರಾತ್ರಿಯೆಲ್ಲಾ ರೋದನಮಾಡಿದಳು. ಯಾರಾದರೂ ಬಾಲ್ಯದಲ್ಲಿಯೇ ಅಕಪಟವಾಗಿ ಯಾರಿಗಾದರೂ ಆತ್ಮಸಮರ್ಪಣೆಮಾಡಿಕೊಂಡು ಎಲ್ಲಿ ತಮ್ಮ ಅಮೂಲ್ಯವಾದ ಹೃದಯವನ್ನು ಒಪ್ಪಿಸಿರುತ್ತ, ಅದಕ್ಕೆ ಪ್ರತಿಯಾಗಿ ತಾತ್ಸಾರವನ್ನು ಹೊಂದಿರುತ್ತಾರೋ ಅಂತಹವರೇ ಆ ರೋದನದ ಮರ್ಮಚ್ಛೇದಕತೆಯನ್ನು ಅನುಭವಮಾಡುವರು. ಆಗ ಕುಂದನಂದಿನಿಯು, ನಾನೇತಕ್ಕೆ ಸ್ವಾಮಿಯ ದರ್ಶನಕ್ಕಾಗಿ ಪ್ರಾಣವನ್ನು ಇಟ್ಟುಕೊಂಡೆನೆಂದು ಪರಿತಾಪಪಡುತಲಿದ್ದಳು. ಈಗ ಯಾವ ಸುಖಕ್ಕಾಗಿ ಪ್ರಾಣವನ್ನು ಇಟ್ಟುಕೊಂಡಿರಲಿ? ಎಂತಲೂ ಯೋಚಿಸುತ್ತಿದ್ದಳು.

ರಾತ್ರಿಯೆಲ್ಲಾ ಜಾಗರಣೆಯೂ ರೋದನವೂ ಮಾಡಿ ಪ್ರಭಾತಕಾಲ

ದಲ್ಲಿ ಕುಂದಳಿಗೆ ನಿದ್ರೆಯು ಬಂತು. ನಿದ್ರೆಯಲ್ಲಿ ಎರಡನೆಯಸಲ ಒಂದು ಭಯಂಕರವಾದ ಕನಸುಕಂಡಳು.

ಕನಸಿನಲ್ಲಿ ನಾಲ್ಕುವರುಷಕ್ಕೆ ಮೊದಲು ತಂದೆಯ ಮನೆಯಲ್ಲಿ ತಂಧೆಯು ಮೃತ್ಯುಶಯ್ಯೆಯ ಪಾರ್ಶ್ವದಲ್ಲಿ ಮಲಗಿರುವ ಸಮಯದಲ್ಲಿ ತನ್ನ ತಾಯಿಯು ಯಾವ ಜ್ಯೋತಿರ್ಮಯವಾದ ಮೂರ್ತಿಯನ್ನು ಧಾರಣೆಮಾಡಿಕೊಂಡು ಸ್ವಪ್ನದಲ್ಲಿ ಬಂದಿದ್ದಳೋ ಈಗಲೂ ಆ ಜ್ಯೋತಿರ್ಮಯಿಯೊಂದು ಶಾಂತಭಾವವನ್ನು ತಾಳಿದ ಮೂರ್ತಿಯು ಕುಂದಳ ತಲೆಯ ಮೇಲ್ಭಾಗದಲ್ಲಿ ಬಂದು ನಿಂತಿತು. ಈಸಲ ಅವಳು ಶುದ್ಧವಾದ ಚಂದ್ರಮಧ್ಯದಲ್ಲಿರಲಿಲ್ಲ. ಬಹು ನಿಬಿಡವಾದ ವರ್ಷೋನ್ಮುಖವಾದ ನೀಲವಾದ ಮೇಘಮಧ್ಯದಲ್ಲಿ ಬಂದಹಾಗಿತ್ತು. ಅವಳ ಸುತ್ತಲೂ ಅಂಧಕಾರಮಯವಾಗಿ ಕಪ್ಪಾದನೀರಿನ ಅಲೆಗಳು ಹೊರಟಹಾಗಿತ್ತು. ಆ ಅಂಧಕಾರದ ಮಧ್ಯದಲ್ಲಿ ಒಂದು ಮನುಷ್ಯಮೂರ್ತಿಯು ಸ್ವಲ್ಪಸ್ವಲ್ಪ ನಗುತಲಿತ್ತು. ಇದರ ಮಧ್ಯದಲ್ಲಿ ಮಿಂಚು ಕ್ಷಣಕ್ಷಣಕ್ಕೂ ಮಿನುಗುತ್ತದೆ. ಕುಂದಳು ಭಯದಿಂದ ನೋಡಲಾಗಿ ಆ ಹಾಸನಿರತವಾದ ಮುಖಮಂಡಲವು ಹೀರೆಯ ಮುಖಾನುರೂಪವಾಗಿತ್ತು. ತಾಯಿಯ ಕರುಣಾಮಯವಾದ ಕಾಂತಿಯು ಈಗ ಗಂಭೀರವಾಗಿತ್ತು. ತಾಯಿಯು, ಕುಂದ! ಆಗ ನನ್ನ ಮಾತು ಕೇಳಲಿಲ್ಲ, ನನ್ನ ಸಂಗಡ ಬರಲಿಲ್ಲ—ಈಗ ವ್ಯಸನಪಡಬೇಕಾಯಿತಲ್ಲವೆ? ಎಂದಳು. 12362

ಕುಂದಳು ಅತ್ತಳು,

ಆಗ ತಾಯಿಯು, ಮೊದಲು ಪುನಃ ಬರುವೆನೆಂದು ಹೇಳಿದ್ದೆ; ಆದಕಾರಣ ಈಗ ಬಂದೆನು. ಈಗ ಸಂಸಾರಸುಖದಲ್ಲಿ ಪರಿತೃಪ್ತಳಾಗಿದ್ದರೆ ನನ್ನ ಜತೇಲಿ ಹೊರಡೆಂದಳು,

ಆಗ ಕುಂದಳು ಅಳುತ್ತ, ಅಮ್ಮ! ನನ್ನನ್ನು ಸಂಗಡಕರೆದುಕೊಂಡು ಹೋಗು. ನಾನು ಇನ್ನು ಇಲ್ಲಿರಲಾರೆನೆಂದಳು.

ಇದನ್ನು ಕೇಳಿ ತಾಯಿಯು ಪ್ರಸನ್ನಳಾಗಿ, ಹಾಗಾದರೆ ನಡೆ ಎಂದು ಹೇಳಿ ಆ ಜ್ಯೋತಿರ್ಮಯಿಯಾದ ಮೂರ್ತಿಯು ಅಂತರ್ಹಿತವಾಯಿತು. ಈ ಸ್ವಪ್ನವಾದಮೇಲೆ ಕುಂದಳಿಗೆ ಎಚ್ಚರವಾಯಿತು. ಅವಳು ಸ್ವಪ್ನವನ್ನು ಜ್ಞಾಪಿಸಿಕೊಂಡು ದೇವರನ್ನು ಕುರಿತು ನನ್ನ ಸ್ವಪ್ನವು ಸಫಲವಾಗಲೆಂದು ಪ್ರಾರ್ಥಿಸಿದಳು.

ಪ್ರಾತಃಕಾಲದಲ್ಲಿ ಹೀರೆಯು ಕುಂದಳ ಶುಶ್ರೂಷೆಗೋಸ್ಕರ ಅವಳ ಚಿಕ್ಕಮನೆಗೆ ಹೋದಳು. ನೋಡಲಾಗಿ ಕುಂದಳು ಅಳುತ್ತಿದ್ದಳು.

ಕಮಲಮಣಿಯು ಬಂದಾರಭ್ಯ ಹೀರೆಯು ಕುಂದಳಿಗೆ ವಿಧೇಯಳಾಗಿದ್ದಳು. ನಾಗೇಂದ್ರನು ಬರುತ್ತಾನೆಂಬ ವರ್ತಮಾನವು ಈ ವಿಧೇಯತೆಗೆ ಕಾರಣ. ಪೂರ್ವದ ಪರುಷವಾದ ನಡತೆಗೆ ಪ್ರಾಯಶ್ಚಿತ್ತರೂಪವಾಗಿ ಮೊದಲಿಗಿಂತಲೂ ಕುಂದಳನ್ನು ಹೆಚ್ಚು ಪ್ರೀತಿಯಿಂದ ನೋಡುತ್ತ ಅವಳಪ್ಪಣೆಯನ್ನು ನೆರವೇರಿಸುತ್ತಿದ್ದಳು. ಬೇರೆ ಜನರಾಗಿದ್ದರೆ ಈ ಕಾಪಟ್ಯವನ್ನು ಸುಲಭವಾಗಿ ತಿಳಿಯುತ್ತಿದ್ದರು. ಆದರೆ ಕುಂದಳು ಅಸಾಧಾರಣವಾದ ಸರಳಮನಸ್ಕಳು, ಮತ್ತು ಸ್ವಲ್ಪದರಲ್ಲಿ ಸಂತುಷ್ಟಳಾಗುವಳು. ಆದಕಾರಣ ಕುಂದಳು ಹೀರೆಯ ಈ ಹೊಸದಾದ ವಿಶ್ವಾಸದಲ್ಲಿ ಪ್ರೀತಳಾಗಿ ಸಂದೇಹವುಳ್ಳವಳಾಗಲಿಲ್ಲ.

ಹೀರೆ—ಅಮ್ಮ, ಠಾಕುರಾಣಿ! ಅಳುವುದೇತಕ್ಕೆ ?

ಕುಂದಳು ಮಾತನಾಡಲಿಲ್ಲ. ಹೀರೆಯು ಮುಖವನ್ನೆ ನೋಡುತಲಿದ್ದಳು. ಕಣ್ಣೊರಸಿಕೊಂಡಿದ್ದಳು, ಆದರೂ ಊದಿತ್ತು. ತಲೆದಿಂಬೆಲ್ಲ ತೋಯಿದು ಹೋಗಿತ್ತು. ಹೀರೆಯು, ಇದೇನು, ರಾತ್ರಿಯೆಲ್ಲಾ ಅಳುತ್ತಿದ್ದಹಾಗೆ ಕಾಣುತ್ತದೆ. ಏತಕ್ಕೆ, ಬಾಬುಯವರು ಏನಾದರೂ ಹೇಳಿದರೇನು ? ಎಂದು ಕೇಳಿದಳು.

ಕುಂದ—ಏನೂ ಇಲ್ಲ.

ಇಷ್ಟು ಕೇಳಿ ಇನ್ನೂ ಹೆಚ್ಚಾಗಿ ರೋದನಕ್ಕೆ ತೊಡಗಿದಳು. ಹೀರೆಯು ಏನೋ ವಿಶೇಷವ್ಯಾಪಾರವು ನಡೆದಿದೆ ಎಂದು ತಿಳಿದಳು. ಕುಂದಳ ಕ್ಲೇಶವನ್ನು ನೋಡಿ ಅವಳ ಹೃದಯವು ಆನಂದದಲ್ಲಿ ಮುಣುಗಿತು. ಮುಖವನ್ನು ಮ್ಲಾನವಾಗಿ ಮಾಡಿಕೊಂಡು, ಬಾಬುಯವರು ಮನೆಗೆ ಬಂದಮೇಲೆ ನಿನ್ನ ಸಂಗಡ ಏನು ಹೇಳಿದರು? ನಾನು ದಾಸಿ, ನನ್ನ ಸಂಗಡ ಹೇಳಬೇಕು ಎಂದಳು.

ಕುಂದ—ಏನು ಮಾತೂ ಹೇಳಲಿಲ್ಲ.

ಹೀರೆ—ಅದೇನು? ತಾಯಿ! ಇಷ್ಟುದಿನದಮೇಲೆ ಬಂದು ಏನೂ ಮಾತನಾಡಲಿಲ್ಲವೆ?

ಕುಂದ—ನನ್ನನ್ನು ನೋಡಲೇ ಇಲ್ಲ.

ಹೀಗೆ ಹೇಳುತ್ತಿದ್ದಹಾಗೆ ಕುಂದಳ ರೋದನವು ನಿಲ್ಲಲಾರದೆಹೋಯಿತು.

ಹೀರೆಯು ಮನಸ್ಸಿನಲ್ಲಿ ಬಹಳ ಸಂತುಷ್ಟಳಾಗಿ, ನಕ್ಕು, ಛಿ! ಅಮ್ಮ! ಇದಕ್ಕೆ ಅಳಬೇಕೆ? ಎಷ್ಟೋಜನ ಇದಕ್ಕಿಂತಲೂ ಹೆಚ್ಚು ದುಃಖಿಗಳಾಗಿದ್ದಾರೆ. ನೋಡುವುದು ಸಾವಕಾಶವಾದುದಕ್ಕೆ ಅಳಬೇಕೆ? ಎಂದಳು.

ಹೆಚ್ಚುದುಃಖವು ಯಾವದೋ ಅದನ್ನು ಕುಂದಳು ತಿಳಿಯಲಾರದವಳಾಗಿದ್ದಳು. ಹೀರೆಯು, ನನ್ನ ಹಾಗೆ ನೀನು ಸಹಿಸಬೇಕಾಗಿದ್ದರೆ ಇಷ್ಟು ದಿನಕ್ಕೆ ಆತ್ಮಹತ್ಯೆಮಾಡಿಕೊಳ್ಳುತ್ತಿದ್ದೆ ಎಂದಳು.

"ಆತ್ಮಹತ್ಯ" ಎಂಬ ಈ ಅಮಂಗಳ ಸೂಚಕವಾದ ಮಾತು ಕುಂದಳ ಕಿವಿಯಲ್ಲಿ ದಾರುಣವಾಗಿ ಕೇಳಿಸಿತು. ಅದನ್ನು ಕೇಳಿ ನಡುಗಿದಳು. ರಾತ್ರಿಯಲ್ಲಿ ಅನೇಕತಡವೆ ಅವಳು ಆತ್ಮಹತ್ಯದ ಮಾತು ಯೋಚಿಸುತಲಿದ್ದಳು. ಹೀರೆಯ ಬಾಯಿಯಲ್ಲಿ ಆ ಮಾತು ಹೊರಟುದನ್ನು ಕೇಳಿ ಸ್ಥಿರೀಕೃತವಾದ ಹಾಗೆ ಬೋಧೆಯಾಯಿತು.

ಹೀರೆ, ನನ್ನ ದುಃಖವನ್ನು ಹೇಳುತ್ತೇನೆ, ಕೇಳು. ನಾನು ಒಬ್ಬ

ನನ್ನು ನನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತಲಿದ್ದೆ. ಅವನು ನನ್ನ ಸ್ವಾಮಿಯಾಗಿರಲಿಲ್ಲ. ನಾನು ಮಾಡಿದ ಪಾಪವನ್ನು ಯಜಮಾನಿಯಾದ ನಿನ್ನಲ್ಲಿ ಏತಕ್ಕೆ ಮರೆಮಾಡಲಿ? ಮರೆಮಾಡಿ ಏನಾದೀತು? ಒಪ್ಪಿಕೊಳ್ಳು ವುದೇ ಒಳ್ಳೇದು

ಈ ಲಜ್ಜಾಹೀನವಾದ ಮಾತು ಕುಂದಳ ಕಿವಿಗೆ ಬಿಳಲಿಲ್ಲ. ಅವಳ ಕಿವಿಯಲ್ಲಿ ಆ ಆತ್ಮಹತ್ಯದ ಮಾತು ಶಬ್ದಮಾಡುತಲಿತ್ತು. ಯಾವದೋ ಭೂತವೊಂದು ಅವಳ ಕಿವಿಯಲ್ಲಿ, ನೀನು ಆತ್ಮಹತ್ಯೆಮಾಡಿಕೊಳ್ಳಬಲ್ಲೆ; ಈ ಯಾತನೆ ಸಹಿಸುವುದು ಒಳ್ಳೇದೋ ಸಾಯುವುದು ಒಳ್ಳೇದೋ ಎಂದು ಶಬ್ದಮಾಡುತಲಿತ್ತು.

ಹೀರೆ—ಅವನು ನನ್ನ ಸ್ವಾಮಿಯಲ್ಲ ಆದರೆ ನಾನು ಅವನನ್ನು ಲಕ್ಷಸ್ವಾಮಿಗಿಂತಲೂ ಹೆಚ್ಚು ಪ್ರೀತಿಸುತಲಿದ್ದೆ. ಅವನು ನನ್ನನ್ನು ಪ್ರೀತಿ ಸುತಲಿರಲಿಲ್ಲ. ಅದೂ ನನಗೆ ಗೊತ್ತು. ನನಗಿಂತಲೂ ಶತಗುಣ ನಿರ್ಗುಣ ಳಾದ ಪಾಪಿಷ್ಠಳನ್ನು ಪ್ರೀತಿಸುತ್ತಿದ್ದನು. ಹೀಗೆಂದು ಹೇಳುತ್ತ ಹೀರೆಯು ತಗ್ಗಿದ ಮುಖಿಯಾದ ಕುಂದಳನ್ನು ಕ್ರೋಧದಿಂದ ನೋಡಿ ಪುನಃ ಹೇಳ ತೊಡಗಿದಳು. ನಾನು ಇದನ್ನು ತಿಳಿದು ಅವನನ್ನು ನೋಡುವುದಕ್ಕೆ ಹೋ ಗಲಿಲ್ಲ. ಆದರೆ ಒಂದುದಿನ ನಮ್ಮಿಬ್ಬರಿಗೂ ಒಂದು ದುರ್ಬುದ್ಧಿ ಹುಟ್ಟಿತು. ಎಂದು ಹೀಗೆ ಆರಂಭಮಾಡಿ ವಿವರವಾಗಿ ಜನರ ಹೆಸರು ಹೇಳದೆ, ತನಗೂ ದೇವೇಂದ್ರನಿಗೂ ನಡೆದ ಸಂಗತಿಗಳನೆಲ್ಲ ಹೇಳಿದಳು. ಅವನು ತನ್ನನ್ನು ಕಾಲಿನಿಂದ ಒದ್ದುದನ್ನೂ ಹೇಳಿ, ನಾನೇನು ಮಾಡಬೇಕು, ಹೇಳು ನೋ ಡೋಣವೆಂದಳು.

ಕುಂದಳು ಏನು ಮಾಡಿದೆ ಎಂದು ಕೇಳಿದಳು. ಹೀರೆಯು ತಲೆ ಕೈ ಅಲ್ಲಾಡಿಸುತ, ನಾನು ಆ ಕೂಡಲೇ ಚಂಡಾಲರ ವೈದ್ಯನ ಹತ್ತರಹೋಗಿ ವಿಷವನ್ನು ಕ್ರಯಮಾಡಿ ತೆಗೆದುಕೊಂಡು ಬಂದೆ, ಆದರೆ ಇತರರಿಗೋಸ್ಕರ

ನಾನೇತಕ್ಕೆ ಸಾಯಿಲೆಂದು ಯೋಚಿಸಿ ವಿಷವನ್ನು ಡಬ್ಬಿಯಲ್ಲಿ ಹಾಕಿ, ಡಬ್ಬಿಯನ್ನು ಪೆಟ್ಟಿಗೆಯಲ್ಲಿಟ್ಟುಕೊಂಡೆನು ಎಂದಳು.

ಹೀಗೆ ಹೇಳಿ ಹೀರೆಯು ಬೇರೆಕೊಠಡಿಗೆ ಹೋಗಿ ತನ್ನ ಪೆಟ್ಟಿಗೆಯನ್ನು ತಂದಳು. ಅವಳು ಆ ಪೆಟ್ಟಿಗೆಯನ್ನು, ಪುರಸ್ಕಾರವಾಗಿ ಬಂದ ಸಾಮಾನುಗಳನ್ನು ಇತರ ಅಪಹರಣವಾದವುಗಳನ್ನು ಬಿಡಲು ನಾಗೇಂದ್ರನ ಮನೆಯಲ್ಲಿಯೇ ಇಡುತ್ತಿದ್ದಳು.

ಹೀರೆಯು ಅದರಲ್ಲಿ ವಿಷದ ಡಬ್ಬಿಯನ್ನಿಟ್ಟಿದ್ದಳು. ಪೆಟ್ಟಿಗೆ ತೆಗೆದು ವಿಷದ ಡಬ್ಬಿಯನ್ನು ತೆಗೆದು ಕುಂದಳಿಗೆ ತೋರಿಸಿದಳು. ಕುಂದಳು ಮಾಂಸಲೋಲುಪವಾದ ಬೆಕ್ಕಿನಹಾಗೆಹೀರೆಯನ್ನು ನೋಡಲಾರಂಭಿಸಿದಳು.ಹೀರೆಯು ಮರೆತವಳಹಾಗೆ ಪೆಟ್ಟಿಗೆಗೆ ಬೀಗವನ್ನು ಹಾಕದೆ ಕುಂದಳಿಗೆ ಉಪದೇಶಮಾಡುತ್ತಿದ್ದಳು. ಈ ಸಮಯದಲ್ಲಿ ಇದ್ದಕ್ಕಿದ್ದಹಾಗೆ ಪ್ರಾತಃಕಾಲದಲ್ಲಿ ಬಾಗಿಲನಲ್ಲಿ ಮಂಗಳಸೂಚಕವಾದ ವಾದ್ಯಗಳಾದವು. ಆಶ್ಚರ್ಯಪಟ್ಟು ಹೀರೆಯು ನೋಡಲು ಓಡಿಹೋದಳು. ಮಂದಭಾಗಿನಿ ಕುಂದನಂದಿನಿಯು ಆ ಅವಕಾಶದಲ್ಲಿ ಆ ಪೆಟ್ಟಿಗೆಯಿಂದ ವಿಷದ ಡಬ್ಬಿಯನ್ನು ಕಳವುಮಾಡಿ ತೆಗೆದು ಇಟ್ಟುಕೊಂಡಳು.

---

## ನಾಲ್ವತ್ತೆಂಟನೆಯ ಪರಿಚ್ಛೇದ.

### ಕುಂದಳಕಾರ್ಯತತ್ಪರತೆ.

ಹೀರೆಯು ಬಂದು ನೋಡಲಾಗಿ ಮಂಗಳವಾದ್ಯಕ್ಕೆ ಕಾರಣವು ಗೊತ್ತಾಗಲಿಲ್ಲ. ಬಂದು ದೊಡ್ಡ ಚಿಕ್ಕಮನೆಯಲ್ಲಿ ಮನೆಯಲ್ಲಿದ್ದ ಹೆಂಗಸರೆಲ್ಲರೂ

ಗುಂಪಾಗಿ ಕೂಡಿಕೊಂಡು ಮಹಾಕೋಲಾಹಲಮಾಡುತಲಿದ್ದರು. ಒಬ್ಬ ಹೆಂಗಸನ್ನು ಸುತ್ತಿಕೊಂಡಿದ್ದರು. ಹೀರೆಗೆ ಅವಳ ತಲೆಯು ಕೂದಲು ಮಟ್ಟಿಗೆ ಕಾಣಿಸುತಲಿತ್ತು. ಕೌಸಲ್ಯಾದಿ ಪರಿಚಾರಕರು ಸುಗಂಧವಾದ ಎಣ್ಣೆಯನ್ನು ಹಾಕಿ ಬಾಚುತಲಿದ್ದರು. ಅಲ್ಲಿದ್ದವರಲ್ಲಿ ಕೆಲವರು ನಗುತಲಿದ್ದರು, ಕೆಲವರು ಮಾತುನಾಡುತಲಿದ್ದರು, ಕೆಲವರು ಹರಸುತಲಿದ್ದರು, ಹುಡುಗರೆಲ್ಲ ಕುಣಿಯುತ್ತ ಹಾಡುತ್ತ ಗದ್ದಲವನ್ನು ಮಾಡುತಲಿದ್ದರು. ಕಮಲಮಣಿ ಶಂಖವನ್ನು ಊದುತಲಿದ್ದಳು. ಅಂಸಿನವನ್ನು ಕೊಡುತ್ತಿದ್ದಳು. ಅಳುತಳುತ ನಗುತ್ತಿದ್ದಳು.

ನೋಡಿ ಹೀರೆಗೆ ಆಶ್ಚರ್ಯವುಂಟಾಯಿತು, ಅವಳು ಮೆಟ್ಟಿಂಗಾಲನಿಂದ ನಿಂತು ಗುಂಪಿನಜನರು ನಿಂತಿದ್ದವರ ತಲೆಯಮೇಲೆ ಕುತ್ತಿಗೆ ಎತ್ತಿಕೊಂಡು ಇಣಿಕಿನೋಡಿದಳು. ನೋಡಿ ಆಶ್ಚರ್ಯದಿಂದ ವಿಹ್ವಲಳಾದಳು. ನೋಡಲಾಗಿ ಸೂರ್ಯಮುಖಿಯು ಕುಳಿತುಕೊಂಡು ಅಮೃತಮಯವಾಗಿ ಸ್ನೇಹಭಾವದಿಂದ ನಗುತ್ತಾಳೆ. ಕೌಸಲ್ಯೆಮುಂತಾದವರು ಅವಳ ಬಾಚದೆ ಇದ್ದ ಕೂದಲಿಗೆ ಕುಸುಮಗಂಧ ಯುಕ್ತವಾದ ಎಣ್ಣೆಯನ್ನು ಹಚ್ಚುತ್ತಿದ್ದರು. ಕೆಲವರು ಮೈಯನ್ನು ಉಜ್ಜುತ್ತಿದ್ದರು. ಹೀಗೆ ಉಪಚರಿಸಿಸುತಲಿದ್ದರು.

ಸೂರ್ಯಮುಖಿಯು ಸತ್ತುಹೋಗಿದ್ದುದರಿಂದ, ಅವಳು ಮನೆಯಲ್ಲಿ ಕೂತು ನಗುತ್ತ ಮಾತುನಾಡುತಲಿದ್ದುದನ್ನು ನೋಡಿದರೂ ಹೀರೆಗೆ ನಂಬಿಗೆ ಹುಟ್ಟಲಿಲ್ಲ. ಅವಳು ಮೆಲ್ಲಗೆ ಮತ್ತೊಬ್ಬಳನ್ನು ಅದು ಯಾರೆ? ಎಂದು ಕೇಳಿದಳು.

ಅವಳು ಕೇಳಿದ್ದು ಕೌಸಲ್ಯೆಯ ಕಿವಿಗೆ ಬಿತ್ತು. ಅವಳು, ಕಾಣಲಿಲ್ಲವೆ? ಮನೆಗೆ ಲಕ್ಷ್ಮಿ, ನಿನಗೆ ಯಮ, ಎಂದಳು. ಇದುವರೆಗೆ ಕೌಸಲ್ಯೆಯು ಹೀರೆಗೆ ಅಂಜುತಲಿದ್ದವಳು ಈಗ ಅವಳ ಕಾಲಬಂದು ತಲೆಯೆತ್ತಿಕೊಂಡು ಕಣ್ಣುತಿರುಗಿಸುತ್ತಿದ್ದಳು.

ತಲೆಬಾಚಿ ಹೆರಳುಹಾಕಿ ಆಯಿತು. ಉಡುಗೆತೊಡಗೆ ಪೂರೈಸಿತು. ಎಲ್ಲರನ್ನೂ ಮಾತಾಡಿಸಿ ಆಯಿತು. ಆಮೇಲೆ ಸೂರ್ಯಮುಖಿಯು ಕಮಲಳ ಕಿವಿಯಲ್ಲಿ, ಕುಂದಳನ್ನು ನೋಡಿ ಬರೋಣ, ಅವಳೇನೂ ತಪ್ಪುಮಾಡಲಿಲ್ಲ. ನನಗೆ ಅವಳಮೇಲೆ ಕೋಪವಿಲ್ಲ. ಈಗ ಅವಳು ನನಗೆ ತಂಗಿಯಾಗಬೇಕು ಎಂದಳು.



ಸೂರ್ಯಮುಖಿ ಕಮಲೆ ಇಬ್ಬರೇ ಕುಂದಳನ್ನು ನೋಡಲುಹೋದರು.

ಅವರು ಹೋಗಿ ಬಹಳ ಹೊತ್ತಾಯಿತು. ಕಡೆಗೆ ಕಮಲಮಣಿಯು ಭಯದಿಂದ ಕ್ಲಿಷ್ಟವದನಳಾಗಿ ಕುಂದಳ ಚಿಕ್ಕಮನೆಯಿಂದ ಹೊರಗೆಬಂದಳು. ಅತಿವ್ಯಸ್ತಳಾಗಿ ನಾಗೇಂದ್ರನನ್ನು ಕರೆಯುವುದಕ್ಕೆ ಪರಿಚಾರಿಕೆಯನ್ನು ಕಳುಹಿಸಿದಳು. ನಾಗೇಂದ್ರನು ಬರುತ್ತಲೇ ಪರಿಚಾರಿಕೆಯೊಬ್ಬಳು ಯಜಮಾನಿ ಕರೆಯುತ್ತಾಳೆಂದು ಕುಂದಳ ಚಿಕ್ಕಮನೆಯನ್ನು ತೋರಿಸಿದ ಪ್ರಕಾರ ಅಲ್ಲಿಗೆ ಹೋದನು. ಬಾಗಲಲ್ಲಿ ಸೂರ್ಯಮುಖಿಯನ್ನು ನೋಡಿದನು. ಸೂರ್ಯಮುಖಿಯು ಅಳುತ್ತಿದ್ದಳು. ಅವನು ಏನಾಯಿತೆಂದು ಕೇಳಿದನು.

ಸೂರ್ಯಮುಖಿಯು, ಸರ್ವನಾಶವಾಯಿತು! ಇದುವರೆಗೂ ನನ್ನ ಅದೃಷ್ಟದಲ್ಲಿ ಒಂದುದಿನವೂ ಸುಖವಿಲ್ಲವೆಂದು ತಿಳಿದಿದ್ದೆನು. ಹಾಗೆ ಸುಖವು ಬರೆದಿದ್ದರೆ ಈಸಲ ಸುಖಿಯಾದೆನೆಂದು ತಿಳಿದಕೂಡಲೆ ಏತಕ್ಕೆ ಹೀಗಾಗುತಲಿತ್ತು? ಎಂದಳು.

ನಾಗೇಂದ್ರನು ಭಯಪಟ್ಟು, ಏನಾಯಿತು? ಹೇಳೆಂದನು.

ಸೂರ್ಯಮುಖಿಯು ಪುನಃ ಅಳುತ್ತ, ಕುಂದಳನ್ನು ಚಿಕ್ಕವಯಸ್ಸಿನಿಂದ ದೊಡ್ಡವಳನ್ನಾಗಿ ಮಾಡಿದೆ; ಈಗ ಅವಳು ನನಗೆ ತಂಗಿಯಾದಳು. ತಂಗಿಯಹಾಗೆ ಅವಳನ್ನು ಆದರಿಸಬೇಕೆಂಬ ಆಶೆಯಿತ್ತು. ನನ್ನ ಆಶೆಯು ಸುಟ್ಟು ಬೂದಿಯಾಗಿಹೋಯಿತು. ಕುಂದಳು ವಿಷಪಾನಮಾಡಿ ಬಿಟ್ಟಳು ಎಂದಳು.

ನಾಗೇಂದ್ರ—ಅದು ಎಲ್ಲೀದು ?

ಸೂರ್ಯಮುಖಿ—ನೀವು ಅವಳ ಹತ್ತಿರ ಇರಿ. ನಾನು ಡಾಕ್ಟರನ್ನು ಕರೆಯಿಸುತ್ತೇನೆ.

ಹೀಗೆಂದು ಹೇಳಿ ಹೋದಳು. ನಾಗೇಂದ್ರನೊಬ್ಬನೇ ಕುಂದನಂದಿನಿಯ ಹತ್ತಿರ ಇದ್ದನು.

ನಾಗೇಂದ್ರನು ನೋಡಲಾಗಿ ಕುಂದನಂದಿನಿಯ ಮುಖವು ಕಪ್ಪತಿರುಗಿತ್ತು, ಕಣ್ಣುಗಳು ನಿಸ್ತೇಜವಾದವು. ಶರೀರವು ಅವಸನ್ನವಾಗಿ ವಿಕಲವಾಗುತ್ತ ಬರುತಲಿತ್ತು.



## ನಾಲ್ವತ್ತೊಂಬತ್ತನೆಯ ಪರಿಚ್ಛೇದ

### ಇಷ್ಟುದಿನದಮೇಲೆ ಬಾಯಿ ಬಿಟ್ಟಳೆ?.

ಕುಂದಳು ಕೆಳಗೆ ಕೂತುಕೊಂಡು ಮಂಚದ ಕಾಲಿನಮೇಲೆ ತಲೆಯನ್ನಿಟ್ಟುಕೊಂಡಿದ್ದಳು. ನಾಗೇಂದ್ರನು ಹತ್ತಿರ ಬಂದುದ್ದು ಕಂಡು ಕಣ್ಣುಗಳಿಂದ ನೀರು ಉಕ್ಕಿ ಹರಿಯಿತು. ನಾಗೇಂದ್ರನು ಹತ್ತಿರ ಬಂದು ನಿಲ್ಲುತಲೇ ಕುಂದಳು ಛಿನ್ನವಾದ ಬಳ್ಳಿಯಹಾಗೆ ಆವನ ಕಾಲುಗಳಮೇಲೆ ತಲೆಹಾಕಿಕೊಂಡು ಬಿದ್ದಳು. ನಾಗೇಂದ್ರನು ಗದ್ಗದಸ್ವರದಿಂದ, ಇದೇನು, ಕುಂದ! ನೀನು ಯಾವತಪ್ಪಿಗೋಸ್ಕರ ನನ್ನನ್ನುಬಿಟ್ಟು ಹೋಗುತ್ತಿ ಎಂದನು.

ಕುಂದಳು ಯಾವಾಗಲೂ ಸ್ವಾಮಿಯ ಮಾತಿಗೆ ಉತ್ತರವನ್ನು ಕೊಡುತ್ತಿರಲಿಲ್ಲ. ಈಹೊತ್ತು ಅಂತಿಮಕಾಲದಲ್ಲಿ ಬಾಯಿ ಬಿಟ್ಟು ಸ್ವಾಮಿಯ ಸಂಗಡ ಮಾತನಾಡಿದಳು. ನೀವು ಯಾವತಪ್ಪಿಗೋಸ್ಕರ ನನ್ನನ್ನು ತ್ಯಾಗಮಾಡಿದಿರಿ ? ಎಂದಳು.

ನಾಗೇಂದ್ರನು ನಿರುತ್ತರನಾಗಿ ಮುಖ ತಗ್ಗಿಸಿಕೊಂಡು ಕುಂದಳ ಹತ್ತಿರ ಕೂತುಕೊಂಡನು. ಕುಂದಳು, ನೆನ್ನೆ ನೀವು ಹೀಗೆ ಬಂದು ಬಿಡುಸಲ ಕಂದ! ಎಂದು ಹೇಳಿ, ಬಂದುಸಲ ನನ್ನ ಹತ್ತಿರ ಕುಳಿತಿದ್ದರೆ ನಾನು ಸಾಯುತ್ತಿರಲಿಲ್ಲ. ನಾನು ನಿಮ್ಮನ್ನು ಪಡೆದು ಸ್ವಲ್ಪದಿನಗಳು ಮಾತ್ರ ಆದವು—ನಿಮ್ಮನ್ನು ಕಣ್ಣುತುಂಬ ನೋಡಬೇಕೆಂಬ ಆಶೆಯೂ ಕೂಡ ತೃಪ್ತಿಯಾಗಿಲ್ಲ. ನಾನು ಸಾಯುತ್ತಿರಲಿಲ್ಲವೆಂದಳು.

ಈ ಪ್ರೀತಿಪೂರ್ಣವಾದ ಶಲ್ಯಸಮನಾದಾ ಮಾತನ್ನು ಕೇಳಿ ನಾಗೇಂದ್ರನು ಮೊಳಕಾಲಿನಮೇಲೆ ತಲೆಯನ್ನಿಟ್ಟುಕೊಂಡು ಮೌನವಾಗಿ ಕುಳಿತುಕೊಂಡನು.

ಕುಂದಳು ಪುನಃ ಹೇಳತೊಡಗಿದಳು—ಕುಂದಳು ಮುಗ್ಧಳು, ಪುನಃ ಸ್ವಾಮಿಯಸಂಗಡ ಮಾತುನಾಡುವ ದಿನ ಸಿಕ್ಕಲಾರದೆಂದು ಹೇಳಿದಳೇನೆಂದರೆ:—ತಾವು ಮೌನವಾಗಿರುವುದು ಸರಿಯಲ್ಲ; ನಿಮ್ಮ ನಗುಮುಖವನ್ನು ನೋಡುನೋಡುತ್ತ ಸಾಯದಿದ್ದರೆ ನನಗೆ ಮರಣದಲ್ಲಿಯೂ ಸುಖವಿಲ್ಲವೆಂದಳು.

ಸೂರ್ಯಮುಖಿಯು ಇಂತಹ ಮಾತನ್ನೇ ಹೇಳಿದ್ದಳು, ಅಂತ್ಯಕಾಲದಲ್ಲಿ ಎಲ್ಲರೂ ಬಂದೇ.

ನಾಗೇಂದ್ರನು ಆಗ ಮರ್ಮಪೀಡಿತನಾಗಿ ಕಾತರಸ್ವರದಿಂದ, ಏತಕ್ಕೆ ನೀನು ಇಂತಹ ಕೆಲಸವನ್ನು ಮಾಡಿದೆ? ನೀನು ನನ್ನನ್ನು ಬಂದುಸಲ ಕರೆಯಿಸಕೂಡದಾಗಿತ್ತೆ? ಎಂದನು.

ಕುಂದಳು, ಕರಗಿ ಭೂಮಿಗೆ ಬೀಳುವ ಮೇಘದ ಗರ್ಭದಲ್ಲಿಹ ಮಿಂಚಿನಂದದಿ ಮೃದುಮಧುರವಾದ ದಿವ್ಯವಾದ ನಗುವನ್ನು ನಕ್ಕು, ಹಾಗೆ ಯೋಚಿಸಕೂಡದು, ಕೇವಲ ಮನಸ್ಸಿನ ವೇಗದಿಂದ ಹೇಳಿದ ಮಾತು; ತಾವು ಬರುವುದಕ್ಕೆ ಮೊದಲೇ ತಾವು ಬಂದಮೇಲೆ ತಮ್ಮನ್ನು ನೋಡಿ ಸಾಯು

ಬೇಕೆಂತಲೂ, ಅಕ್ಕ ಹಿಂದಿರುಗಿ ಬಂದರೆ ಅವಳಲ್ಲಿ ತಮ್ಮನ್ನು ಇರಿಸಿ ಸಾಯಿಬೇಕೆಂತಲೂ ಸ್ಥಿರವಾದ ಸಂಕಲ್ಪವನ್ನು ಮಾಡಿಕೊಂಡಿದ್ದೆನು—ಪುನಃ ಅವಳ ಸುಖಕ್ಕೆ ಕಂಟಕಳಾಗಿರುವುದಿಲ್ಲವೆಂತಲೂ ಖಂಡಿತ ಮಾಡಿಕೊಂಡಿದ್ದೆನು. ಸಾಯಿಬೇಕೆಂತಲೇ ಮನಸ್ಸು ಮಾಡಿಕೊಂಡಿದ್ದವಳು, ಈಗ ತಮ್ಮನ್ನು ನೋಡಿ ಸಾಯುವುದಕ್ಕೆ ಇಷ್ಟಬರುವುದಿಲ್ಲವೆಂದಳು.

ನಾಗೇಂದ್ರನು ಯಾವ ಉತ್ತರವನ್ನು ಕೊಡಲಾರದವನಾದನು. ಇಂದು ಅವನು ಬಾಲಳಾದ ವಾಕ್ಚಾತುರತೆ ಇಲ್ಲದ ಕುಂದನಂದಿನಿಯ ಹತ್ತಿರ ನಿರುತ್ತರನಾದನು.

ಕುಂದಳು ಒಂದು ಕ್ಷಣಕಾಲ ಸುಮ್ಮನಿದ್ದಳು. ಅವಳಿಗೆ ಮಾತನಾಡುವ ಶಕ್ತಿಯು ಹೋಗುತ್ತಬಂದು, ಮೃತ್ಯುವು ಅವಳನ್ನು ಆವರಿಸಿಕೊಳ್ಳುತ್ತಬಂತು.

ಆಗ ನಾಗೇಂದ್ರನು ಆ ಮೃತ್ಯುವಿನ ಛಾಯಾಂಧಕಾರದಿಂದ ಮ್ಲಾನವಾದ ಮುಖಮಂಡಲದ ಸ್ನೇಹಪ್ರಫುಲ್ಲತೆಯನ್ನು ನೋಡುತಲಿದ್ದನು. ಆಗ ಅವಳ ಅಧಿಕ್ಲಿಷ್ಟವಾದ ಮುಖದಲ್ಲಿ ಕಾಣುತ್ತಲಿರುವ ಮಂದವಾದ ಮಿಂಚನ್ನು ನಿಂದಿಸುವ ನಗುವನ್ನು ನೋಡುತ್ತಲಿದ್ದನು. ಅದು ಅವನ ವಾರ್ಧಿಕ್ಯದವರೆಗೂ ಅವನ ಮನಸ್ಸಿನಲ್ಲಿ ಅಂಕಿತವಾಗಿತ್ತು.

ಕುಂದಳು ಸ್ವಲ್ಪ ವಿಶ್ರಾಮವನ್ನು ತೆಗೆದುಕೊಂಡು ಅಪರಿತೃಪ್ತಿಯಾದವಳ ಹಾಗೆ ಪುನಃ ಕ್ಲಿಷ್ಟವಾದ ನಿಶ್ವಾಸದಿಂದ, ನನಗೆ ಮಾತನಾಡುವ ಆಶೆಯು ನಿವಾರಣವಾಗಲಿಲ್ಲ. ನಾನು ನಿಮ್ಮನ್ನು ದೇವರೆಂದು ತಿಳದಿದ್ದೇನೆ. ಧೈರ್ಯಗೊಂಡು ತಮ್ಮೊಂದಿಗೆ ಮಾತನಾಡಲಿಲ್ಲ. ನನ್ನ ಆಶೆಯು ಪೂರೈಸಲಿಲ್ಲ. ನನ್ನ ಶರೀರವು ಅವಸನ್ನವಾಗುತ್ತ ಬರುತ್ತದೆ, ನನ್ನ ಬಾಯಿ ಬಣಗುತ್ತದೆ, ನಾಲಿಗೆ ಎಳೆಯುತ್ತದೆ; ನನಗೆ ಇನ್ನು ಸಾವಕಾಶವಿಲ್ಲವೆಂದು

ಹೇಳಿ ಮಂಚದ ಅವಲಂಬನೆಯನ್ನು ಬಿಟ್ಟು ನೆಲದಮೇಲೆ ಮಲಗಿಕೊಂಡು ನಾಗೇಂದ್ರನ ಮೈಮೇಲೆ ತಲೆಯನ್ನಿಟ್ಟು ಕಣ್ಣುಮುಚ್ಚಿ ನೀರವವಾದಳು.

ಡಾಕ್ಟರನು ಬಂದನು. ನೋಡಿ ಕೇಳಿ ಔಷಧವನ್ನು ಕೊಡಲಿಲ್ಲ. ಇನ್ನು ಆಶೆಯಿಲ್ಲವೆಂದು ತಿಳಿದು ಬಾಡಿದ ಮುಖದವನಾಗಿ ಹಿಂದಿರುಗಿ ಹೊರಟುಹೋದನು.

ಅನಂತರ ಆಸನ್ನವಾಯಿತೆಂದು ತಿಳಿದು ಕುಂದಳು ಸೂರ್ಯಮುಖಿಯನ್ನೂ ಕಮಲಳನ್ನೂ ಸಹ ನೋಡಬೇಕೆಂದಳು. ಅವರಿಬ್ಬರೂ ಬರುತ್ತಲೇ ಕುಂದಳು ಅವರ ಪಾದ ಧೂಳಿಯನ್ನು ಗ್ರಹಣ ಮಾಡಿದಳು ಅವರು ಗಟ್ಟಿಯಾಗಿ ಅತ್ತರು.

ಆಮೇಲೆ ಕುಂದನಂದಿನಿಯು ಸ್ವಾಮಿಯ ಪಾದಗಳಲ್ಲಿ ಮುಖವನ್ನು ಇಟ್ಟುಕೊಂಡಳು. ಅವಳು ನಿಶ್ಶಬ್ದವಾಗಿದ್ದುದನ್ನು ಕಂಡು ಆವರಿಬ್ಬರೂ ಅಳುವುದಕ್ಕೆ ತೊಡಗಿದರು. ಪುನಃ ಕುಂದಳು ಮಾತನಾಡಲಿಲ್ಲ. ಕ್ರಮಕ್ರಮವಾಗಿ ಚೈತನ್ಯವು ಹೋಗುತ್ತ ಸ್ವಾಮಿಯ ಚರಣದಲ್ಲಿ ಮುಖವನ್ನಿಟ್ಟುಕೊಂಡು ನವೀನವಾದ ಯೌವನದಲ್ಲಿ ಕುಂದನಂದಿನಿಯು ಪ್ರಾಣತ್ಯಾಗವನ್ನು ಮಾಡಿದಳು. ಪರಿಸ್ಫುಟವಿಲ್ಲದ ಕುಂದಕುಸುಮವು ಒಣಗಿಹೋಯಿತು.

ಮೊದಲು ರೋದನವನ್ನು ಅಡಗಿಸಿಕೊಂಡು ಸೂರ್ಯಮುಖಿಯು ಮೃತಳಾಗಿದ್ದ ಸಪತ್ನಿಯನ್ನು ನೋಡುತ್ತ, ಭಾಗ್ಯವತಿ! ನಿನ್ನಂತಹ ಪ್ರಸನ್ನವಾದ ಅದೃಷ್ಟ ನನಗೆ ಉಂಟಾಗಲಿ; ನಾನೂ ಹೀಗೆಯೇ ಸ್ವಾಮಿಯ ಚರಣದಲ್ಲಿ ತಲೆಯನ್ನಿಟ್ಟುಕೊಂಡು ಪ್ರಾಣತ್ಯಾಗವನ್ನು ಮಾಡುವಹಾಗೆ ದೇವರು ದಯಪಾಲಿಸಲಿ, ಎಂದು ಹೇಳಿಕೊಂಡಳು.

ಹೀಗೆ ಹೇಳಿ ಅಳುವುದಕ್ಕೆ ತೊಡಗುತಲಿದ್ದ ಸ್ವಾಮಿಯ ಕೈಯನ್ನು ಹಿಡಿದುಕೊಂಡು ಬೇರೆಕಡೆ ಕರೆದುಕೊಂಡು ಹೋದಳು. ಕಡೆಗೆ ನಾಗೇಂ

ದ್ರನು ಧೈರ್ಯಾವಲಂಬನೆಯನ್ನು ಮಾಡಿಕೊಂಡು ಕುಂದಳನ್ನು ನದೀ ತೀರಕ್ಕೆ ತೆಗೆದುಕೊಂಡು ಹೋಗಿ ಯಥಾವಿಧಿಯಾಗಿ ಸಂಸ್ಕಾರವನ್ನು ಮಾಡಿ ಆ ಅತುಲವಾದ ಸ್ವರ್ಣಪ್ರತಿಮೆಯನ್ನು ವಿಸರ್ಜನೆಮಾಡಿ ಬಂದುಬಿಟ್ಟನು.



## ಐವತ್ತನೆಯ ಪರಿಚ್ಛೇದ.

### ಸಮಾಪ್ತಿ.

ಕುಂದನಂದಿನಿಯ ವಿಯೋಗವಾದಮೇಲೆ ಎಲ್ಲರೂ ಅವಳಿಗೆ ವಿಷವನ್ನು ಯಾರು ತಂದುಕೊಟ್ಟವರೆಂದು ವಿಚಾರಮಾಡಿದರು. ಆಗ ಎಲ್ಲರೂ ಹೀರೆಯೇ ಈ ಕೆಲಸವನ್ನು ಮಾಡಿದವಳೆಂದು ಸಂಶಯಪಟ್ಟರು.

ಆಗ ಹೀರೆಯನ್ನು ಕಾಣದೆ ನಾಗೇಂದ್ರನು ಅವಳನ್ನು ಕರೆಯಿಸಿದನು. ಹೀರೆಯು ಸಿಕ್ಕಲಿಲ್ಲ. ಕುಂದನಂದಿನಿಯ ಮರಣಕಾಲದಿಂದ ಹೀರೆಯುಅದೃಶ್ಯಳಾಗಿದ್ದಳು.

ಅದುಮೊದಲು ಹೀರೆಯನ್ನು ಆ ದೇಶದಲ್ಲಿ ಯಾರೂ ನೋಡಲಿಲ್ಲ. ಗೋವಿಂದಪುರದಲ್ಲಿ ಹೀರೆಯ ಹೆಸರು ಲೋಪವಾಗಿ ಹೋಯಿತು. ಒಂದು ವರುಷದಮೇಲೆ ಅವಳು ದೇವೇಂದ್ರನನ್ನು ಒಂದು ತಡವೆ ನೋಡಿದ್ದಳು.

ಆಗ ದೇವೇಂದ್ರನು ಬೀಜಹಾಕಿ ಬೆಳಸಿದ್ದ ವಿಷವೃಕ್ಷದಲ್ಲಿ ಫಲವು ಫಲಿಸಿತ್ತು. ಅವನು ಬಹಳ ಕೆಟ್ಟರೋಗಗಳಿಂದ ಪೀಡಿತನಾಗಿದ್ದನು. ಆದರಮೇಲೆ ಮದ್ಯಪಾನದಿಂದ ವಿರತನಾಗದೆ ಇದ್ದಕಾರಣ ರೋಗವು ನಿವಾರಣೆಯಾಗದ್ದಾಗಿಬಂತು. ದೇವೇಂದ್ರನು ಮೃತ್ಯುಶಯ್ಯೆಯಲ್ಲಿ ಮಲಗಿದನು.

ಕುಂದನಂದಿನಿಯು ಮರಣಾನಂತರ ಬಂದು ವರುಷದೊಳಗಾಗಿ ದೇವೇಂದ್ರ ನಿಗೂ ಕಡೆಗಾಲಬಂತು. ಸಾಯುವುದಕ್ಕೆ ಎರಡು ಮೂರು ದಿನಗಳಿಗೆ ಮುಂಚೆ ಅವನ ಮನೆಯಲ್ಲಿ ರುಗ್ಣಶಯ್ಯೆಯಲ್ಲಿ ಏಳುವ ಶಕ್ತಿಯಿಲ್ಲದೆ ಮಲ ಗಿದ್ದನು. ಆಗ ಅವನ ಚಿಕ್ಕಮನೆಯ ಬಾಗಲಲ್ಲಿ ಗದ್ದಲವಾಯಿತು. ದೇ ವೇಂದ್ರನು ಯಾರೆಂದನು. ಆಳುಗಳು ಒಬ್ಬ ಹುಚ್ಚಳು ಬಂದು ತಮ್ಮ ನ್ನು ನೋಡಲಪೇಕ್ಷಿಸುತ್ತಾಳೆ; ಏನುಮಾಡಿದರೂ ಹೋಗುವುದಿಲ್ಲವೆಂದರು ದೇವೇಂದ್ರನು ಬರಲೆಂದು ಹೇಳಿದನು.

ಹುಚ್ಚಳು ಮನೆಯೊಳಗೆ ಬಂದಳು. ದೇವೇಂದ್ರನು ನೋಡಲಾಗಿ ಅವಳೊಬ್ಬ ದರಿದ್ರ ಹೆಂಗಸಾಗಿದ್ದಳು. ಆದರೆ ಅವಳು ಹುಚ್ಚಳೆಂಬ ಲಕ್ಷಣಗಳೇನೂ ಕಾಣಿಸಲಿಲ್ಲ. ಆದರೆ ಅತ್ಯಂತ ದೀನಳಾದ ಬಿಕ್ಷುಕಳೆಂದು ಕಂಡಿತು. ಅವಳ ವಯಸ್ಸು ಕಡಮೆಯಾಗಿತ್ತಲ್ಲದೆ ಪೂರ್ವದ ಲಾವಣ್ಯದ ಚಿಹ್ನೆಗಳಿದ್ದವು. ಆದರೆ ಈಗ ಅತ್ಯಂತ ದುರ್ದಶೆ. ಅವಳ ಬಟ್ಟೆ ಮಲಿನ ವಾಗಿ ಚಿಂದಿಯಾಗಿತ್ತು. ಮೊಳಕಾಲು ಮುಚ್ಚುವುದಕ್ಕೂ ಸಾಲದ್ದಾ ಗಿತ್ತು. ಬೆನ್ನು ತಲೆ ಮುಚ್ಚುವಷ್ಟು ಇರಲಿಲ್ಲ. ಅವಳ ಕೇಶವು ಕೆದ ರಿತ್ತು. ಧೂಳಿಯಿಂದ ಜಟೆಯಾಗಿಹೋಗಿತ್ತು. ಮೈಯೆಲ್ಲಾ ಎಣ್ಣೆಕಾ ಣದೆ ತುರಿಕಜ್ಜಿಯಾಗಿ ನೋಡಲಸಹ್ಯವಾಗಿತ್ತು.

ಭಿಕ್ಷುಕಳು ಬಂದು ದೇವೇಂದ್ರನನ್ನು ನೋಡಿದ ತೀವ್ರವಾದ ದೃಷ್ಟಿ ಯಿಂದ ಆಳುಗಳು ಹೇಳಿದಹಾಗೆ ಅವಳು ಹುಚ್ಚಳಾಗಿದ್ದಳು.

ಉನ್ಮಾದಿನಿಯು ಬಹಳಹೊತ್ತು ದೇವೇಂದ್ರನನ್ನು ದೃಷ್ಟಿಸಿ ನೋಡಿ, ನನ್ನ ಗುರುತು ಉಂಟೆ? ಎಂದು ಕೇಳಿ, ನಾನು ಹೀರೆ ಎಂದಳು.

ದೇವೇಂದ್ರನಿಗೆ ಆಗ ಗೊತ್ತಾಯಿತು. ಚಮತ್ಕೃತನಾಗಿ, ನಿನಗೆ ಯಾರು ಈ ದಶೆಯನ್ನುಂಟುಮಾಡಿದರೆಂದನು.

ಹೀರೆಯು ರೋಷದಿಂದ ದೀಪ್ತವಾದ ಕಟಾಕ್ಷದಿಂದ ಅಧರವನ್ನು

ದಂಶನಮಾಡಿ, ಕೈಮುಷ್ಟಿಯಿಂದ ದೇವೇಂದ್ರನನ್ನು ಹೊಡೆಯುವುದಕ್ಕೆ ಬಂದಳು. ಆದರೆ ಹೊಡಯದೆ, ನನ್ನನ್ನು ಈ ದಶೆಗೆ ತಂದವರು ಯಾರೆಂದು ನೀನೇ ಕೇಳುವುದು? ನನಗೆ ಈ ದೆಶೆಯುಂಟುಮಾಡಿದವನು ನೀನು. ಈಗ ನಿನಗೆ ಗುರುತಿಲ್ಲ. ಆದರೆ ಒಂದುದಿನ ನೀನು ನನಗೆ ತೋಷಾಮೋದ ಮಾಡಿದೆ. ಇದೇಮನೆಯಲ್ಲಿ ಇಲ್ಲಿಯೇ ಕುಳಿತುಕೊಂಡು ನೀನು ನನ್ನ ಚರಣಗಳನ್ನು ಹಿಡಿದುಕೊಂಡು—ಹೀಗೆ ಹೇಳಿ ಹೀರೆಯು ಮಂಚದಮೇಲೆ ಕಾಲಿಟ್ಟುಕೊಂಡು ಗಾನಮಾಡಲಾರಂಭಿಸಿದಳು.

ಸ್ಮರಗರಳಖಂಡನಂಮಮಶಿರಸಿಮಂಡನಂ ।
ದೇಹಿಪದಪಲ್ಲವಮುದಾರಂ ॥

ಹೀಗೆ ಮನಸ್ಸಿಗೆ ಬಂದುದೆಲ್ಲ ಹೇಳಿ, ಯಾವದಿನ ನೀನು ನನ್ನನ್ನು ಉತ್ಸೃಷ್ಟಮಾಡಿ ಬಿದ್ದು ಓಡಿಸಿಬಿಟ್ಟೆಯೋ ಆ ದಿನದಿಂದ ನಾನು ಹುಚ್ಚಳಾಗಿದ್ದೇನೆ. ನಾನು ವಿಷವನ್ನು ತಿನ್ನುವುದಕ್ಕೆ ಸಿದ್ಧಳಾಗಿದ್ದೆ. ಆದರೆ ಒಂದು ಆಹ್ಲಾದಕರವಾದ ಯೋಚನೆಯು ಬಂತು. ಆ ವಿಷವನ್ನು ನಾನು ತಿನ್ನದೆ ನಿನಗೆ ಆಗಲಿ ನಿನ್ನ ಕುಂದನಂದಿನಿಗೆಯಾಗಲಿ ಕೊಡಬೇಕೆಂದು ತೋರಿತು. ಆ ಭರವಸೆಯಮೇಲೆ ನನ್ನ ಉನ್ಮಾದ ರೋಗವನ್ನು ಹೇಗೋ ಹಾಗೆ ಮಾಡಿ ಮುಚ್ಚಿಟ್ಟುಕೊಂಡಿದ್ದೆನು. ಹುಚ್ಚು ಬಂದಾಗ ಮನೆಯಲ್ಲಿ ಬಿದ್ದಿರುವೆನು. ಹುಚ್ಚು ಬಿಟ್ಟಾಗ ಕೆಲಸಕ್ಕೆ ಹೋಗುತ್ತಲಿದ್ದೆನು. ಕಡೆಗೆ ನಿನ್ನ ಕುಂದನಂದಿನಿಗೆ ವಿಷವನ್ನು ತಿನ್ನಿಸಿ ಮನಸ್ಸಿನ ದುಃಖವನ್ನು ಹೋಗಲಾಡಿಸಿಕೊಂಡೆನು. ಅವಳ ಮರಣಕಾಲದಿಂದ ನನ್ನ ರೋಗವು ಹೆಚ್ಚಾಯಿತು. ಇನ್ನು ಮುಚ್ಚಿಟ್ಟುಕೊಳ್ಳಲು ಆಗದೆಹೋಯಿತು. ಆದಕಾರಣ ದೇಶ ಬಿಟ್ಟು ಹೋದೆ. ನನಗೆ ಅನ್ನಕ್ಕೆ ಮಾರ್ಗವಿಲ್ಲ. ಹುಚ್ಚಳಿಗೆ ಅನ್ನವನ್ನು ಹಾಕುವವರು ಯಾರು? ಆಗಿನಿಂದ ಭಿಕ್ಷೆ ಮಾಡುತ್ತೇನೆ. ಸರಿಯಾಗಿದ್ದಾಗ ಭಿಕ್ಷೆ ಮಾಡುತ್ತೇನೆ. ಹುಚ್ಚು ಏರಿದಾಗ ಮರದ ಬುಡದಲ್ಲಿ ಬಿದ್ದಿರುತ್ತೇನೆ.

ನಿನಗೆ ಈಗ ಮರಣವು ಸಮೀಪಿಸಿತೆಂದು ಕೇಳಿ ಆಹ್ಲಾದ ಚಿತ್ತಳಾಗಿ ನೋಡುವುದಕ್ಕೆ ಬಂದೆನು. ನಿನಗೆ ನರಕದಲ್ಲಿಯೂ ಸ್ಥಾನ ಸಿಕ್ಕದಿರಲೆಂದು ಆಶೀರ್ವಾದ ಮಾಡುತ್ತೇನೆಂದಳು.

ಇಷ್ಟುಹೇಳಿ ಹುಚ್ಚಿಯು ಉಚ್ಚಸ್ವರದಿಂದ ನಕ್ಕಳು. ದೇವೇಂದ್ರನು ಭೀತಿಗೊಂಡು ಹಾಸಿಗೆಯ ಮತ್ತೊಂದು ಕೊನೆಗೆ ತಿರುಗಿಕೊಂಡು ಮಲಗಿದನು. ಹೀರೆಯು ಆಗ ಕುಣಿದಾಡುತ್ತ ಮನೆಯ ಹೊರಗೆ ಹೋಗಿ ಹಾಡಿದಳು:—

ಸ್ಮರಗರಳಖಂಡನಂಮಮಶಿರಸಿಮಂಡನಂ ।
ದೇಹಿಪದವಲ್ಲವಮುದಾರಂ ॥

ಅದು ಮೊದಲು ದೇವೇಂದ್ರನ ಮೃತ್ಯುಶಯ್ಯೆಯು ಕಂಟಕಮಯವಾಯಿತು. ಮರಣಕ್ಕೆ ಸ್ವಲ್ಪ ಮುಂದೆ ಜ್ವರದ ಪ್ರಲಾಪದಲ್ಲಿ, ಪದಪಲ್ಲವಮುದಾರಂ, ಎಂದು ಪ್ರಲಾಪಿಸುತ್ತಿದ್ದನು.

ದೇವೇಂದ್ರನ ಮರಣಾನಂತರ ಬಹಳ ದಿನಗಳವರೆಗೂ ಆ ಉದ್ಯಾನದಲ್ಲಿ ಮಾಲಿಗಳು ಅರ್ಧರಾತ್ರಿಯ ಕಾಲದಲ್ಲಿ ಹೆಂಗಸಿನ ಕೊರಳನಿಂದ—

ಸ್ಮರಗರಳಖಂಡನಂಮಮಶಿರಸಿಮಂಡನಂ ।
ದೇಹಿಪದಪಲ್ಲವಮುದಾರಂ ॥

ಎಂದು ಹಾಡುವದನ್ನು ಕೇಳಿ ಭಯಪಡುತಲಿದ್ದರು.

ನಾವು ವಿಷವೃಕ್ಷವನ್ನು ಸಮಾಪ್ತ ಮಾಡಿದೆವು. ಇದರಿಂದ ಮನೆಮನೆಯಲ್ಲಿಯೂ ಅಮೃತವು ಫಲಿಸುವುದೆಂದು ದೃಢವಾಗಿ ನಂಬುತ್ತೇವೆ.

ಸ ಮಾ ಪ್ತ .



# ಶುದ್ಧಾಶುದ್ಧ.

| ಪುಟ. | ಪಙ್ತಿ. | ಅಶುದ್ಧ. | ಶುದ್ಧ. |
| --- | --- | --- | --- |
| ೮ ಕೆಳಗಿನಿಂದ | ೧ | ಇಟ್ಟಿಗಯು | ಇಟ್ಟಿಗೆಯು |
| ೯ ಡಿಟೊ | ೬ | ಕಮಲದಂದ | ಕಮಲದಂದದಿ |
| ೧೨ | ೨ | ಬಾಯಿಂದ | ಬಾಯಿಯಿಂದ |
| ೨೦ ಕೆಳಗಿನಿಂದ | ೬ | ಬೀಳೀ | ಬಿಳೀ |
| ೨೨ ಡಿಟೋ | ೧೦ | ಶರೀವು | ಶರೀರವು |
| ೩೩ | ೧ | ವೇವಮಂದಿರದ | ದೇವಮಂದಿರದ |
| ೩೩ ಕೆಳಗಿನಿಂದ | ೧೨ | ವಾಹಿಂಗೆ | ವಾಡಿಗೆ |
| ೩೫ | ೧ | ಗಂಡನ್ನು | ಗಂಡನನ್ನು |
| ೩೬ ಕೆಳಗಿನಿಂದ | ೧೧ | ಬಂನು | ಬಂದು |
| ೩೭ ಡಿಟೊ | ೮ | ಹೆಂಸು | ಹೆಂಗಸು |
| ೩೭ ,, | ೬ | ಸ್ವಪ್ಪ | ಸ್ವಪ್ನ |
| ೩೮ ,, | ೬ | ವದು | ವುರು |
| ೪೦ ,, | ೭ | ಮುಜ್ಜಿ | ಮುಚ್ಚಿ |
| ೪೫ ,, | ೧ | ನವದವಸಂತದ | ನವವಸಂತದ |
| ೪೬ ,, | ೭ | ತಿಳಯುತಲಿದ್ದಳು | ತಿಳಯುತಲಿದ್ದನು |
| ೫೦ ,, | ೪ | ಮೆಯತ್ರೊ | ಮೈತ್ರೆಯೊ |
| ೫೪ | ೩ | ತೃಷ್ಣೆಗೆ | ತೃಷ್ಣೆಯು |
| ೫೮ ಕೆಳಗಿನಿಂದ | ೧ | Roas | Roast |
| ೮೬ | ೮ | ಉಲ್ಲೇಖವಾರಗಿದೆ | ಉಲ್ಲೇಖವಾಗಿದೆ |

| | | | | |
|---|---|---|---|---|
| ೮೮ | | ೮ | ಇವಳ | ಇವಳು |
| ೯೩ | ಕೆಳಗಿನಿಂದ | ೧ | ಸ್ಪಷ್ಟ | ಸ್ಪ್ರಷ್ಟ |
| ೯೫ | ಡಿಟೊ | ೧೨ | ಮುಂಚಿ | ಮುಚ್ಚಿ |
| ೯೫ | ಡಿಟೊ | ೫ | ಸಹಿಸದೆ | ಸಹಿಸದೆನು |
| ೯೭ | | ೪ | ಕಲ್ಪ | ಕಲ |
| ೧೧೫ | ಕೆಳಗಿನಿಂದ | ೪ | ಜ್ಞಾಪಕ್ಕೆ | ಜ್ಞಾಪಕಕ್ಕೆ |
| ೧೨೫ | | ೨ | ಸ್ವರಪವಾದ | ಸ್ವರೂಪವಾದ |
| ೧೩೬ | | ೭ | ಮಧುಭಾವದಿಂದ | ಮಧುರಭಾವದಿಂದ |
| ೧೪೫ | ಕೆಳಗಿನಿಂದ | ೭ | ಹೊಟಿದು | ಹೊಡೆದು |
| ೧೪೭ | | ೮ | ಕಮಳಲು | ಕಮಲಳು |
| ೧೬೬ | ಕೆಳಗಿನಿಂದ | ೪ | ಸುಖದನ್ನು | ಸುಖವನ್ನು |

೧೭೬ ಕೆಳಗಿನ ಕಡೇ ಪಙ್ಕ್ತಿಯಾದಮೇಲೆ "ದೇವೇಂದ್ರ— ನನಗೋಸ್ಕರ ನೀನು ಭಯಪಡಬೇಕಾದುದಿಲ್ಲ" ಎಂದು ಸೇರಿಸಿ ಓದಬೇಕು.

| | | | | |
|---|---|---|---|---|
| ೨೨೬ | ಕೆಳಗಿನಿಂದ | ೪ | ರೀರವನ್ನು | ಶರೀರವನ್ನು |

Sree Rama

The
# Karnataka Granthamala.

SERIES NO 27.

---

# ಮಾಧವೀ ಲತಾ.

---

ಬಿ. ವೆಂಕಟಾಚಾರ್ಯರಿಂದ

ವಿರಚಿಸಲ್ಪಟ್ಟದ್ದು.

---

ಮೈಸೂರು.

ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್ ಪ್ರೆಸ್.

೧೯೦೧.

ಶ್ರೀಃ.

---

# ಮಾಧವೀ ಲತಾ.



ಅಡವಿಯಹುಡುಗಿ, ಆನಂದಮಠ, ಇಂದಿರಾ, ಉನ್ಮಾದಿನೀ, ಕಮಲಾಕಾಂತ,
ಕಪಾಲಕುಂಡಲಾ, ದೇವೀಚೌಧುರಾಣಿ, ಪ್ರಾಚೀನ ನವೀನಕಾಲದಸ್ತ್ರೀಪುರು
ಷರು, ರಾಮೇಶ್ವರನಅದೃಷ್ಟ, ರಾಧಾರಾಣಿ, ವೈಜ್ಞಾನಿಕಪ್ರಹಸನ, ರಜನೀ,
ಲೋಕರಹಸ್ಯ, ಭ್ರಾಂತಿವಿಲಾಸ, ಸೀತಾವನವಾಸ, ಮೃಣ್ಮಯೀ,
ಯುಗಳಾಂಗುರೀಯ, ರಮಾಬಾಯಿ, ಅಹಲ್ಯಾಬಾಯಿ,
ಭರತಖಂಡದ ಪೂರ್ವವೃತ್ತ, ಸೀತಾರಾಮ, ಶಾಂತಿ,
ಪರಿಮಳಾ, ಗ್ರಾಮ್ಯಕಥಾ, ವಿಷವೃಕ್ಷ,
ಚಂದ್ರಶೇಖರ, ಇದೊಂದುಚಿತ್ರ,
ಭಾರತಮಹಿಳಾ,
ರಾಜಸಿಂಹ, ಶಕುಂತಲಾ, ದುರ್ಗೇಶನಂದಿನೀ, ದೇಶಭಾಷೋನ್ನತಿಯ ಆವಶ್ಯಕತೆ,
ನೀಳಾಗೀತಾ,

ಮುಂತಾದ

ಗ್ರಂಥಪ್ರಣೇತರಾದ

ಬಿ. ವೆಂಕಟಾಚಾರ್ಯರಿಂದ

ವಿರಚಿಸಲ್ಪಟ್ಟುದು.



ಮೈಸೂರು

ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್ ಪ್ರೆಸ್.

೧೯೦೧.



ಕ್ರಯ ] [ ರೂಪಾಯಿ ೧.

# ವಿಜ್ಞಾಪನೆ.

---

ಈ ಗ್ರಂಥವನ್ನು ವಿಖ್ಯಾತರಾದ ಶ್ರೀ ಬಂಕಿಂ ಚಂದ್ರಚಟ್ಟೋಪಾಧ್ಯಾಯರವರ ಅಗ್ರಜರಾದ ಶ್ರೀ ಸಂಜೀವ ಚಂದ್ರಚಟ್ಟೋಪಾಧ್ಯಾಯರಿಂದ ರಚಿತವಾದ ಬಂಗಾಳಿ ಗ್ರಂಥವನ್ನವಲಂಬಿಸಿ ಕನ್ನಡಿಸಿ ಬರೆದುದಾಗಿದೆ. ಗ್ರಂಥವು ಆದ್ಯಂತವೂ ನೀತಿಬೋಧಕವಾದುದಾಗಿಯೂ ಧ್ವನಿವಿಶಿಷ್ಟವಾಗಿ ಚಮತ್ಕಾರವಾಗಿಯೂ ಇರುವುದು. ಅನ್ಯರ ದೋಷದಿಂದ ನಮಗೆ ಎಷ್ಟು ಕಷ್ಟವುಂಟಾದೀತೆಂಬುದನ್ನು ಬೋಧೆ ಮಾಡುವುದು. ಪರೋಪಕಾರವು ಮುಖ್ಯವಾದ ಧರ್ಮವೆಂದು ಫಲಿತಾಂಶವಾಗಿ ತಿಳಿಯಬಹುದು. ಈ ಗ್ರಂಥವು ಸ್ವದೇಶ ವಿದೇಶಗಳಲ್ಲಿ ಬಹಳ ಆದರದಿಂದ ಗೌರವಿಸಲ್ಪಟ್ಟಿದೆ. ಇತಿ—

ಮೈಸೂರು
೨೬—೭—೧೯೦೧.

ಬಿ. ವೆಂಕಟಾಚಾರ್ಯ.



| | | | |
|---|---|---|---|
| ೧೨೬ | ಕೆಳಗಿನಿಂದ. ೪ | ಸಿದ. | ಸಿದ್ಧ |
| ೧೩೮ | ೫ | ಮುಚ್ಞಿ. | ಮುಚ್ಚಿ |
| ೧೪೩ | ೧೨ | ಕಳಂದ. | ಕಳಂಕದ |
| ೧೫೦ | ಕೆಳಗಿನಿಂದ. ೧ | ಕದೆಯುದೆ. | ಕರೆಯುದೆ |
| ೧೫೧ | ೧೨ | ಗಮನಿಡಿ. | ಗಮನಿಸ |
| ,, | ೧೩ | ನೋಸ. | ನೋಡಿ |
| ೧೫೩ | ಕೆಳಗಿನಿಂದ. ೪ | ದುಡು. | ದುಡ್ಡು |
| ೧೫೫ | ೧೨ | ಹಿಂದಿರುಗೆ. | ಹಿಂದಿರಿಗಿ |
| ೧೬೨ | ೬ | ದರ್ಶವನ್ನ. | ದರ್ಶನವನ್ನ |
| ೧೬೯ | ಕೆಳಗಿನಿಂದ ೮ | ಹಿಂರುಗಿ. | ಹಿಂದಿರುಗಿ |
| ೧೭೮ | ೧ | Advnce. | Advance |
| ೨೦೦ | ೧೦ | ಬಂರೆರಡು. | ಬಂದೆರಡು |
| ೨೧೪ | ೧೧ | ಚುಂಚ. | ಚೆಂಚು |
| ೨೧೫ | ೧ | ಹೋಗು. | ಹೋಗುತ |
| ೨೨೨ | ಕೆಳಗಿನಿಂದ ೩ | ಪೊರ್ರೈಸಲಿಲ್ಲವೆ ? | ಪೂರೈಸಲಿಲ್ಲವೆ ? |
| ೨೩೨ | ೧೧ | ದಾನಮಾದಿ. | ದಾನಮಾಡಿ |

---

# ಶುದ್ಧಾಶುದ್ಧ.

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೩ | ಕೆಳಗಿನಿಂದ ೨ | ಮಖದ | ಮುಖದ |
| ೪ | ೧ | ಸಿಹಂಶತ | ಸಿಂಹಶತ |
| ೪ | ಕೆಳಗಿನಿಂದ ೩ | ಎಲ್ಲರನ್ನು. | ಎಲ್ಲರನ್ನೂ |
| ೮ | ,, ೪ | ಚಕೂಡ. | ಚಕೂಡಾ |
| ೩೧ | ೧೨ | ಬೋಧೆಯಾವಾಯಿತು. | ಬೋಧೆಯಾಯಿತು |
| ೩೪ | ೮ | ದೆವ. | ದೇವ |
| ೩೮ | ೧ | ರಿಯು. | ಚಾರಿಯು |
| ,, | ೧೦ | ಪ್ರಾಂತ. | ಪ್ರಾಂತರ |
| ೩೯ | ೫ | ಬಿಲ್ವವನ. | ಬಿಲ್ವವೃ |
| ೪೪ | ೫ | ಏನುಂದು. | ಏನೊಂದು |
| ೪೭ | ಕೆಳಗಿನಿಂದ ೨ | ಕಡ್ಲೆ. | ಕೂಡಲೇ |
| ೬೧ | ,, ೭ | ಉಪಕರಣಪಳೂ ಸಿದ್ಧವಾಗದೇ. | ಉಪಕರಣಗಳೂ ಸಿದ್ಧ [ ವಾಗಿದ್ದ |
| ೮೩ | ,, ೧೧ | ಏನೋನೋ. | ಏನೇನೋ |
| ೮೪ | ೯ | ಬಟ್ಟು. | ಬೊಟ್ಟು |
| ,, | ೧೦ | ಘೆಂಟೆ. | ಘಂಟೆ |
| ೮೫ | ೧೨ | ಘೆಟನಾ. | ಘಟನಾ |
| ೧೨೪ | ೨ | ಬಾ. | ಬಾಯಿ |

ಶ್ರೀಯೈನಮಃ

# ಮಾಘಮೀಲತಾ.



## ಮೊದಲನೆಯ ಪರಿಚ್ಛೇದ.

---

ಬಂದಾನೊಂದು ಕಾಲದಲ್ಲಿ ಸಿಂಹಶತಗ್ರಾಮವೆಂಬ ಪಟ್ಟಣದಲ್ಲಿ ಒಬ್ಬ ಧನಾಢ್ಯನಾದ ರಾಜನಿದ್ದನು. ಈಗ ಆ ಪಟ್ಟಣವೂ ಇಲ್ಲ. ಆ ರಾಜನೂ ಇಲ್ಲ. ಒಂದೆರಡು ದೊಡ್ಡ ದೊಡ್ಡ ಅರಮನೆಗಳ ಭಗ್ನಾಂಶಗಳು ಮಾತ್ರ ಉಳಿದಿವೆ. ಧನವಂತರಾದವರ ಗುರುತುಗಳು ಕಡೆಗೆ ಉಳಿಯುವುದು ಇಷ್ಟೇ ಸರಿ — ಕಲ್ಲುಗುಡ್ಡೆ, ಅಥವಾ ಇಟ್ಟಿಗೆ ಕಂಭಗಳು. ಇದು ಅವರಿಗೆ ತಕ್ಕ ಪರಿಣಾಮ! ಈಗ ವಿಕ್ರಮಾದಿತ್ಯನ ಸಿಂಹದ್ವಾರದ ಒಂದು ಭಗ್ನಾಂಶವು ಮಾತ್ರ ಉಳಿದಿದೆ. ಆದರೆ ದರಿದ್ರನಾದ ಕಾಳಿದಾಸನ ಶಾಕುಂತಳ ಗ್ರಂಥವು ಈಗಲೂ ಹೊಸದಾಗಿ ಪ್ರಸ್ಫುಟಿತವಾದ ಕಾನನದ ಕುಸುಮದ ಹಾಗೆ ಚಿತ್ರಿಸಲ್ಪಟ್ಟು ನಿಂತು ಕಣ್ಗೊಳಿಸುತ್ತಿದೆ; ಪೂರ್ಣಚಂದ್ರನ ಹಾಗೆ ಮನೋಹರವಾಗಿಯೂ ದಿಗಂತವ್ಯಾಪಿಯಾಗಿಯೂ ಇದೆ. ಮೂರ್ಖನಾದವನ ಇದಿರಿಗೆ ಶಕುಂತಳೆ ವ್ಯರ್ಥ. ಅಂಧನ ಇದಿರಿಗೆ ಚಂದ್ರನೂ ಸುಳ್ಳು. ವಿಕ್ರಮಾದಿತ್ಯನು ಸ್ವರ್ಣ ಸಿಂಹಾಸನದ ಮೇಲೆ ಅಟ್ಟಹಾಸದಿಂದಿರುವಾಗ ಬಡಪಾಪಿಯಾದ ಕಾಳಿದಾಸನು ಕೆಳಗೆ ಕೈಮುಗಿದುಕೊಂಡು ನಿಂತಿರುವುನು. ಇದು ತಪ್ಪಲ್ಲವೆ?

ಸಿಂಹಶತಗ್ರಾಮದ ಕಡೇ ರಾಜನಾದ ಇಂದ್ರಭೂಪನು ಪರಾಕ್ರಮ

ಶಾಲಿಯಾಗಿರಲಿಲ್ಲ. ಸಾಮಾನ್ಯರಾದ ಜನರ ಹಾಗೆ ಶಾಂತನಾಗಿಯೂ ಸರಳ ಹೃದಯನಾಗಿಯೂ ಇದ್ದನು. ಆ ಸರಳತೆಯೇ ಅವನಿಗೆ ಅನೇಕ ಅನರ್ಥಗಳಿಗೆ ಮೂಲವಾಯಿತು. ಅತಿ ಪ್ರಾಚೀನಕಾಲದಿಂದ ಈ ರಾಜವಂಶದಲ್ಲಿ ಜ್ಯೇಷ್ಠ ಪುತ್ರನು ರಾಜ್ಯಕ್ಕೂ ರಾಜೈಶ್ವರ್ಯಕ್ಕೂ ಅಧಿಕಾರಿಯಾಗುವುದೂ, ಕನಿಷ್ಠರಾದ ಪುತ್ರರಿಗೆ ತಿಂಗಳುಗಟ್ಟಲೆ ಅವರವರ ವೆಚ್ಚಕ್ಕೆ ತಕ್ಕಷ್ಟು ವರ್ಷಾಶನ ಕೊಡುವುದೂ ಹೀಗೆ ಸಂಪ್ರದಾಯವಾಗಿತ್ತು. ಈ ನಿಯಮವು ಸಂಗತವಾದುದೋ, ಅಸಂಗತವಾದುದೋ, ಅದು ಹೇಗಾದರೂ ಇರಲಿ. ಅದರಿಂದ ಈ ರಾಜವಂಶದಲ್ಲಿ ಎರಡು ಹೊಸದಾದ ವೈಷಮ್ಯಗಳು ಹುಟ್ಟಿದ್ದುವು; ಒಂದು ಪ್ರಕೃತಿಗತವಾದುದು, ಮತ್ತೊಂದು ಆಕೃತಿಗತವಾದುದು. ಒಂದು ವಂಶದವರು ಸರ್ವದಾ ಸಂತುಷ್ಟರಾಗಿಯೂ ಸರಳರಾಗಿಯೂ ಶಾಂತರಾಗಿಯೂ ಉದಾರಸ್ವಭಾವವುಳ್ಳವರಾಗಿಯೂ ಇರುವುರು. ಮತ್ತೊಂದು ಶಾಖೆಯವರು ಸರ್ವದಾ ಈರ್ಷ್ಯಾಪರವಶರಾಗಿಯೂ ಕುಟಿಲರಾಗಿಯೂ ಇರುವುದು. ಒಂದು ಶಾಖೆಯವರು ರೂಪವಂತರಾಗಿಯೂ ಮತ್ತೊಂದು ಶಾಖೆಯವರು ಕುತ್ಸಿತರಾಗಿಯೂ ಇರುವುರು. ಒಂದೇ ವಂಶದಲ್ಲಿ ಇಂತಹ ಪರಸ್ಪರ ಪ್ರಭೇದವು ವಿಸ್ಮಯ ಜನಕವಾದುದು. ಆದರೂ ಉಂಟಾಗಿತ್ತು. ಅತುಳೈಶ್ವರ್ಯಾಧಿಕಾರಿಯಾದವನಿಗೆ ಅಸಂತೋಷಕ್ಕೆ ಕಾರಣವೇನೂ ಇಲ್ಲ. ಎಲ್ಲರೂ ಅಂತಹವರಿಗೆ ಆಶೈಶವವಾಗಿ ಸಂತೋಷವುಂಟುಮಾಡುವುದಕ್ಕೆ ಪ್ರಯತ್ನಿಸುವರು. ಆವರೆ ಐಶ್ವರ್ಯದ ವೈಭವವನ್ನು ಹೊಂದದಾತನು ಸರ್ವದಾ, ತಂದೆಯ ಇಷ್ಟು ಐಶ್ವರ್ಯ! ಏನು ಅಪರಾಧ ಮಾಡಿದುದಕ್ಕೆ ನಾನು ಅದರಿಂದ ವಂಚಿತನಾದೆ? ಸಾಮಾನ್ಯರಾದ ಜನರ ಸಂತಾನರೂ ಪಿತೃವೈಭವದಲ್ಲಿ ಸಮಾನವಾದ ಅಂಶಕ್ಕೆ ಭಾಗಿಗಳಾಗುತ್ತಾರೆ. ನಾನು ರಾಜಪುತ್ರನಾಗಿ ನನ್ನ ಅದೃಷ್ಟಕ್ಕೆ ಏನೂ ಇಲ್ಲದೆ ಹೋಯಿತಲ್ಲಾ! ಎಂದು ಮುಂತಾದ ಯೋಚನೆಯಿಂದ ಸರ್ವದಾ ಅವರ ಭ್ರೂವು

ಕುಂಚಿತವಾಗಿ, ಸರ್ವದಾ ಅವರು ತಿರ್ಯಗ್ದೃಷ್ಟಿಯುಳ್ಳವರಾಗಿ, ಸ್ವರದಾ ಅವರ ದಂತಗಳು ಸಂಲಗ್ನವಾಗಿ ಸರ್ವದಾ ಅವರ ಮುಖವು ವಿಕಟವಾಗಿರುವುದು. ಮುಖದ ಮೇಲಿರುವ ಮನಸ್ಸಿನ ಆಧಿಪತ್ಯವು ಅತಿ ಚಮತ್ಕಾರವಾದುದು ಮನೋವೃತ್ತಿಯು ಯಾವಾಗಲೂ ಮುಖದಲ್ಲಿ ಉದಯವಾಗುತಲಿರುವುದು. ಒಂದು ಮನೋವೃತ್ತಿಗೆ ಸ್ಥಾನವು ಭ್ರೂಗಳಾಗಿರುವುವು. ಒಂದು ಮನೋವೃತ್ತಿಗೆ ಭ್ರೂಗಳೂ ಮತ್ತು ನೇತ್ರಗಳೂ ಸ್ಥಾನವಾಗಿರುವುವು. ಒಂದು ಮನೋವೃತ್ತಿಗೆ ಸ್ಥಾನವು ಓಷ್ಠ, ಒಂದಕ್ಕೆ ಓಷ್ಠ ಪಾರ್ಶ್ವ ಮತ್ತು ಮೂಗು. ಹೀಗೆಲ್ಲಾ ಕೋಪ, ಈರ್ಷ್ಯೆ, ಶೋಕ ಆಹ್ಲಾದ ಮುಂತಾದ ಯಾವ ಮನೋವೃತ್ತಿಯಾಗಲಿ ಒಂದೊಂದೂ ಮುಖದಲ್ಲಿ ಒಂದು ಭಾಗವಿಲ್ಲದಿದ್ದರೆ ಒಂದುಭಾಗವನ್ನು ಅಧಿಕಾರ ಮಾಡುತಲಿರುವುದು. ಯಾವ ಮನೋವೃತ್ತಿಯು ಸರ್ವದಾ ಉದಯವಾಗಿರುವುದೋ ಅದರ ಅಧಿಕಾರದ ಸ್ಥಳವು ಕ್ರಮವಾಗಿ ಪುಷ್ಟಿಯುಳ್ಳದ್ದಾಗುತ್ತ ಬರುವುದು ಮುಖದಲ್ಲಿ ಆಭಾಗವು ಕ್ರಮವಾಗಿ ಹೆಚ್ಚು ಸ್ಪಷ್ಟವಾಗಿ ನೋಡಿದ ಕೂಡಲೆ ಕಣ್ಣಿಗೆ ಬೀಳುವುದು. ಆ ಕಾಲದಲ್ಲಿ ಆ ಮನೋವೃತ್ತಿಯು ಮನಸ್ಸಿನಲ್ಲಿ ಉಪಸ್ಥಿತವಾಗಿರಲಿ, ಉಪಸ್ಥಿತವಾಗಿಲ್ಲದೆ ಇರಲಿ, ಮುಖದಲ್ಲಿ ಅದರ ಚಿಹ್ನೆಯು ಇದ್ದೇ ಇರುವುದು. ಆದುದರಿಂದ ನೋಡಿದ ಮಾತ್ರದಿಂದಲೇ ಮನುಷ್ಯನಿಗೆ ಮುಖದಲ್ಲಿ ಯಾವ ವೃತ್ತಿಯ ಗತಿವಿಧಿಯು ಅಧಿಕವಾಗಿದೆ ಎಂಬುದು ಗೊತ್ತಾಗುತ್ತದೆ. ಇಂತಹವರು ಸ್ವಭಾವತಃ ಉಗ್ರವಾಗಿರುವರು, ಇಂತಹವರು ಸ್ವಭಾವತಃ ಶಾಂತರು, ಇಂತಹವರು ಸ್ವಭಾವತಃ ದಯಾಳುಗಳೆಂದು ನೋಡಿದಮಾತ್ರ ಅನುಭವವಾಗಿ ಹೇಳುವುದಕ್ಕೆ ಇದೇ ಕಾರಣ. ಮತ್ತಾವಕಾರಣವೂ ಇಲ್ಲ.

ಕುಪ್ರವೃತ್ತಿಯು ಕುತ್ಸಿತವಾದುದು. ಮುಖದ ಯಾವ ಭಾಗವು ಕುಪ್ರವೃತ್ತಿಗೆ ಅಧಿಕಾರ ಸ್ಥಳವೋ ಆ ಭಾಗವು ಪುಷ್ಟಿಯಾದರೆ ಮುಖವು

ಕುತ್ಸಿತವಾಗುವುದು. ಆದಕಾರಣ ಸಿಹಂಶತಗಾ್ರಮದ ರಾಜವಂಶದ ಬಂಧು ಶಾಖೆಯವರು ಕುತ್ಸಿತರಾಗಿದ್ದರು. ಈರ್ಷ್ಯೆ, ವಿರಕ್ತಿ, ಅಸಂತೋಷ ಮೊದಲಾದ ವೃತ್ತಿಗಳು ಸರ್ವದಾ ಅವರ ಮನಸ್ಸಿನಲ್ಲಿ ಜಾಗರಿತವಾಗಿರುವುವು.

ಸಜ್ಜನರಾದವರಿಗೆ ಒಳ್ಳೆಕಾಂತಿ ಇರುವುದು. ಸತ್ಪ್ರವೃತ್ತಿಯು ಮನಸ್ಸಿನಲ್ಲಿ ಪ್ರಬಲವಾಗಿದ್ದರೆ ಮುಖವು ಒಳ್ಳೆಯ ಕಾಂತಿಯುಳ್ಳದುದಾಗಿರುವುದು ಸಜ್ಜನರಾಗದವರನ್ನು ಯಾರು ಕಾಂತಿಯುಳ್ಳವರೆಂದು ತಿಳಿಯುವರೋ ಅವರಿಗೆ ಭ್ರಾಂತಿಯೇ ಸರಿ. ಕಾಂತಿಯು ಮುಖದಲ್ಲಿ ಅಂಶಾಧಿಕಾರವನ್ನು ಮಾಡುವುದಿಲ್ಲ. ಅದು ಮನಸ್ಸಿನ ಅಂಶವಾಗಿದೆ. ಅವಸ್ಥಾನುಸಾರವಾಗಿ ಪ್ರಕೃತಿಯಿಂದ ಆಕೃತಿಯುಂಟಾಗುವುದು.

ಇಂದ್ರಭೂಪನು ಸ್ವಯಂ ಸರ್ವದಾ ಸಂತುಷ್ಟನು. ಎಲ್ಲರನ್ನೂ ಸಂತೋಷಪಡಿಸುವುದಕ್ಕೆ ಪ್ರಯತ್ನಿಸುವನು. ಜ್ಞಾತಿಗಳನ್ನು ಮಾತ್ರ ಸಂತೋಷಪಡಿಸಲಾರದವನಾಗಿದ್ದನು. ಅವನು ಅವರ ಸರ್ವಸ್ವವನ್ನೂ ತೆಗೆದುಕೊಂಡಿದ್ದನು. ಅವರು ಹೇಗೆತಾನೇ ಸಂತುಷ್ಟರಾಗಿರುವರು ? ಜ್ಞಾತಿಗಳ ಅಭಿಪ್ರಾಯದಲ್ಲಿ ಅವನು ಅಧಾರ್ಮಿಕನು, ಅವಿವೇಚಕನು, ಅತ್ಯಾಚಾರಿ. ಆದರೆ ಜ್ಞಾತಿಯರಲ್ಲೊಬ್ಬನು ಮಾತ್ರ ಇಂದ್ರಭೂಪನನ್ನು ಪ್ರಶಂಸೆ ಮಾಡುತಲಿದ್ದನು. ಯಾವಾಗಲೂ ಆತನ ಅನುಗತನಾಗಿದ್ದನು. ಅವನ ಹೆಸರು ಚೂಡಾಧನಬಾಬು. ಅವನು ಅತ್ಯಂತ ಪ್ರಿಯವಾದಿಯಾಗಿ, ನಮ್ರನಾಗಿ, ಶಾಂತನಾಗಿ, ನಿರ್ವಿರೋಧಿಯಾಗಿದ್ದನು. ಅವನನ್ನು ಇಂದ್ರಭೂಪನು ವಿಶೇಷವಾಗಿ ಪ್ರೀತಿಸುವನು. ಆತನು ಯಾರನ್ನು ತಾನೇ ವಿಶ್ವಾಸದಿಂದ ಪ್ರೀತಿಸದಿರನು ? ಎಲ್ಲರನ್ನು ಪ್ರೀತಿಸುತಲಿದ್ದನು.

ಚೂಡಾಧನಬಾಬುವು ಬಹಳ ಜಾಗರೂಕನು. ರಾಜಸಮ್ಮುಖದಲ್ಲಿ ತಾನಾಗಿಯೇ ಯಾವ ಮಾತನ್ನೂ ಎತ್ತನು. ಮಹಾರಾಜನು ಏನಾದರೂ

ಕೇಳಿದರೆ ಸನ್ಮಾನದಿಂದ ನತಶಿರನಾಗಿ ಕೇಳಿದ ಮಾತಿಗೆ ಎಷ್ಟೋ ಅಷ್ಟು ಉತ್ತರವನ್ನು ಕೊಡುವನು. ಸ್ವಂತ ಅಭಿಪ್ರಾಯವನ್ನು ತಿಳಿಸುತ್ತಿರಲಿಲ್ಲ. ಸಾಮಾನ್ಯಜನರ ಅಭಿಪ್ರಾಯವೇನು, ಇತರರ ಅಭಿಪ್ರಾಯವೇನು, ದಿವಾನರ ಅಭಿಪ್ರಾಯವೇನು, ಇವೇ ಮುಂತಾದುದನ್ನು ಆವಶ್ಯಕಬಿದ್ದರೆ ಅರಿಕೆ ಮಾಡುವನು. ಇಂದ್ರಭೂಪನು ಅದರಿಂದಲೇ ಸಂತುಷ್ಟನಾಗಿ ಚೂಡಾಧನ ಬಾಬುವು ಬಹಳ ವಿಜ್ಞನೆಂದು ತಿಳಿದುಕೊಳ್ಳುವನು.

ರಾಜಾ ಇಂದ್ರಭೂಪನು ಭೋಜನಕಾಲದಲ್ಲಿ ಬಹುಜನರ ಸಹಪಙ್ತಿಯಲ್ಲಿ ಭೋಜನಮಾಡುವನು. ಅನೇಕ ಭಕ್ಷ್ಯಭೋಜ್ಯಗಳು ಬಡಿಸಲ್ಪಡುವುವು. ಆದರೆ ಪರಿಚಾರಕರು ನೋಡುವುದರಲ್ಲಿ ಚೂಡಾಧನಬಾಬುವು ಬಡಿಸಿದುದರಲ್ಲಿ ಯಾವದನ್ನೂ ಮುಟ್ಟದೆ ಆರಿಸಿ ಆರಿಸಿ ಕೇವಲ ಬಳ್ಳಿಯದಲ್ಲದ ಪದಾರ್ಥಗಳನ್ನೇ ತೆಗೆದುಕೊಳ್ಳುವನು.

ಭೋಜನವಾದಮೇಲೆ ಇಂದ್ರಭೂಪನು ಪುರಾಣಶ್ರವಣವನ್ನು ಮಾಡುವನು. ಆ ರಾಜಸಭೆಯಲ್ಲಿ ಭಗವದ್ಗೀತೆ, ರಾಮಾಯಣ, ಯೋಗವಾಸಿಷ್ಠ, ಮಹಾಭಾರತ ಪುರಾಣವಾಗುವುದು. ಕೇಳುವವರೆಲ್ಲರೂ ಸಂಸ್ಕೃತಜ್ಞರಾಗಿದ್ದುದರಿಂದ ಅರ್ಥ ಹೇಳಬೇಕಾಗಿರಲಿಲ್ಲ. ಆ ಸಮಯದಲ್ಲಿ ಮಾತನಾಡಬೇಕಾಗಿದ್ದರೆ, ಸಂಸ್ಕೃತದಲ್ಲಿಯೇ ಮಾತನಾಡಬೇಕಾಗಿರುವುದು. ಆದುದರಿಂದ ಕೆಲವರಿಗೆ ಇಷ್ಟವಿದ್ದರೂ ಮಾತನಾಡದೆ ಸುಮ್ಮನಿದ್ದುಬಿಡುವರಾಗಿ ನಿರ್ವಿಘ್ನವಾಗಿ ಪುರಾಣ ಸಾಗುತಲಿರುವುದು. ಆದರೆ ರಾಮಾಯಣ ಅಥವಾ ಮಹಾಭಾರತ ಪುರಾಣವಾಗುತ್ತಿರುವಾಗ ಈ ನಿಯಮವು ನಡೆಯುತ್ತಿರಲಿಲ್ಲ. ಅಂಥ ಮುನಿಯ ವಿಲಾಪ, ಸೀತಾದೇವಿಯ ವಿಲಾಪ, ದಶರಥವಿಲಾಪ, ಮುಂತಾದ ಪ್ರಮೇಯಗಳು ಆರಂಭವಾದಾಗ ಮೊದಲುಮೊದಲು ನಿಶ್ಶಬ್ದವಾಗಿ ಪುರಾಣ ಶ್ರವಣ ಮಾಡುವರು. ಕ್ರಮವಾಗಿ ಎಲ್ಲರ ಹೃದಯವು ಪೂರ್ಣವಾಗಿ ತುಂಬುತ್ತಲೇ ಆಗ ಕೇಳುತ್ತಿದ್ದವರಲ್ಲಿ ಒಬ್ಬೊಬ್ಬರು ಶೋಕವನ್ನು ಸಂವರಣ

ಮಾಡುವುದರಲ್ಲಿ ಸಮರ್ಥರಾಗದೆ ಕುಂಠಿತವಾದ ಭಾವದಿಂದ ನಿಶ್ವಾಸವನ್ನು ಬಿಡುವರು. ಆ ಕೂಡಲೇ ಅವರ ಪಾರ್ಶ್ವದಲ್ಲಿದ್ದ ಒಬ್ಬಿಬ್ಬರು ಜೋರಾಗಿ ನಸ್ಯ ಹಾಕಿಕೊಳ್ಳುವ ಶಬ್ದವು ಕೇಳಿಸುವುದು. ಅನಂತರ ನಾಲ್ಕು ದಿಕ್ಕುಗಳಿಂದಲೂ ನಸ್ಯ ಸೇದುವ ತುಮುಲುಶಬ್ದವು ಏಳುವುದು. ಕೇವಲ ಮೂಗಿನ ದೀರ್ಘವಾದ ಶಬ್ದ. ಇದೊಂದು ಪ್ರಕಾರವಾದ ಅಳುವು. ಅಧ್ಯಾಪಕ ವೈದೀಕರ ಈ ವಿಧವಾದ ಅಳುವು ಪೂರೈಸುವುದರೊಳಗಾಗಿ ರಾಜಾ ಇಂದ್ರಭೂಪನೇ ಸ್ವಂತವಾಗಿ ಕಂಪಿತವಾದ ಕಂಠಸ್ವರದಿಂದ ಶ್ಲೋಕವನ್ನು ಪ್ರಕಾಶಮಾಡಿಬಿಡುವುದು. ಅನಂತರ ಎಲ್ಲರೂ ಮಾತನಾಡುವುದಕ್ಕೆ ಯಾವ ಅಭ್ಯಂತರವೂ ಇರದು. ಮೊದಲು ಒಂದೆರಡು ಸಂಸ್ಕೃತಮಾತುಗಳು. ಅನಂತರ ಎಲ್ಲಾ ದೇಶಭಾಷೆಯಲ್ಲಿಯೇ ನಡೆಯುವುದು. ಆಗ ಎಲ್ಲರೂ ಮಾತನಾಡುವರು. ಆದರೆ ಚೂಡಾಧನಬಾಬುಮಾತ್ರ ನಿಸ್ತಬ್ಧವಾಗಿರುವನು. ರಾಮಾಯಣ, ಮಹಾಭಾರತ ಸಹ ಅವನಿಗೆ ಇಷ್ಟವಾಗಿರಲಿಲ್ಲ. ಮಿಕ್ಕವರಿಗೆಲ್ಲಾ ಅವು ಏತಕ್ಕೆ ಇಷ್ಟವಾಗಿರುವುವೋ ಅದನ್ನು ಅವನು ಅನುಭವ ಮಾಡಲಾರದವನಾಗಿದ್ದನು. ಅವನು ಒಂದು ದಿನ ದಿವಾನರನ್ನು ಕುರಿತು, ತಾವು ರಾಮಾಯಣ ಪಾರಾಯಣವಾಗುವುದನ್ನು ಕೇಳುವುದಕ್ಕೆ ಕುಳಿತುಕೊಳ್ಳುವುದಿಲ್ಲವೇತಕ್ಕೆಂದು ಕೇಳಿದನು. ದಿವಾನನು, ರಾಮಾಯಣವು ಕರ್ಮನಾಶಕರವಾದುದು. ಒಂದುದಿನ ಕೇಳಿದರೆ ನನಗೆ ಎರಡು ದಿನ ಕೆಲಸ ಮಾಡುವುದಕ್ಕೆ ಆಗುವುದಿಲ್ಲ, ಕೆಲಸಗಳೆಲ್ಲಾ ನಿಂತುಹೋಗುತ್ತವೆಂದು ಹೇಳಿದನು. ಚೂಡಾಧನಬಾಬು ನಕ್ಕನು. ಅವನ ವಿಕಟವಾದ ಹಲ್ಲುಗಳು ಕಂಡವು. ಅದನ್ನು ನೋಡಿ ದಿವಾನನಿಗೆ, ಹಲ್ಲುಬಿಡುವುದು ನಗುವುದಾದರೆ, ನರಿಯೂ ಕೂಡ ನಗುಬಲ್ಲದು ಎಂದು ಪರಿಚಾರಕನು ಹೇಳಿದ ಮಾತು ಜ್ಞಾಪಕಕ್ಕೆ ಬಂತು. ವಾಸ್ತವವಾಗಿ ಎಲ್ಲರ ನಗುವೂ ನಗುವಾಗುವುದಿಲ್ಲ. ಎಲ್ಲರೂ ನಗುಲಾರರು. ಮತ್ತು ಅನೇಕರು ನಗುವುದಕ್ಕೆ ಅಧಿಕಾರಿಗಳೂ ಅಲ್ಲ.

ಎಲ್ಲರೂ ನಗುವುದೇನೋ ಉಂಟು. ನಗುವುದಕ್ಕೆ ಯಾರಿಗೆ ತಾನೇ ಆಶೆಯಿಲ್ಲ? ಇನ್ನೊಬ್ಬರು ನಗುವುದನ್ನು ನೋಡಿದರೆ ನಗುವು ಬರುತ್ತದೆ. ಆದರೆ ಅನಧಿಕಾರಿಯಾದವನು ನಕ್ಕರೆ ಅವನ ನಗುವನ್ನು ನೋಡಿದರೆ ನಗುವು ಬರುವುದಿಲ್ಲ; ಹೆಚ್ಚು ಭಯವೇ ಉಂಟಾಗುತ್ತದೆ. ಸುಖಿಯಾದವರಿಗೆ ನಗುವುದಕ್ಕೆ ಗೊತ್ತು. ಸರಳ ಹೃದಯರೂ ಉದಾರಿಗಳೂ ಸಹ ನಗುವುದಕ್ಕೆ ಚನ್ನಾಗಿ ಬಲ್ಲರು. ಪ್ರಣಯಿಗಳಾದವರು ಚಮತ್ಕಾರವಾದ ನಗುವನ್ನು ನಗುತ್ತಾರೆ, ಶೋಕಾಕುಲರಾದ ಜನರು ಅಂಧಕಾರದಲ್ಲಿ ಸುರಿಯುವ ಬಿರುಮಳೆಯು ಮೇಲೆ ಬಿದ್ದ ದೀಪದ ಬೆಳಕಿನ ಹಾಗೆ ಮ್ಲಾನವಾದ ನಗುವನ್ನು ನಗುತ್ತಾರೆ. ಆದರೆ ಕುಟಿಲರಾದ ಜನರು ನಗಲಾರರು. ಆದುದರಿಂದಲೇ ಪರಿಚಾರಕನು ಚೂಡಾಧನ ಬಾಬುವಿನ ನಗುವಿಗೆ ಹಲ್ಲು ಬಿಡುವುದೆಂದು ಹೇಳಿದನು.

ಚೂಡಾಧನನು ಪ್ರಾಯಶಃ ಅರಮನೆಯಲ್ಲಿಯೇ ಕಾಲವನ್ನೆಲ್ಲಾ ಕಳೆಯುವನು ಅವನಿಗೆ ಅಲ್ಲಿ ಮಾಡುವುದಕ್ಕೆ ಕೆಲಸವೇನೂ ಇರಲಿಲ್ಲ. ಆದರೂ ಅವನು ಪ್ರತ್ಯಹವೂ ಪ್ರತ್ಯೂಷದಲ್ಲಿ ಎದ್ದು ಬಂದು ರಾಜದ್ವಾರದಲ್ಲಿ ನಿಂತು ಕಾದಿದ್ದು ಇಂದ್ರಭೂಪನು ಹೊರಗೆ ಹೊರಟಾಗ ಆತನೊಂದಿಗೆ ಪುಷ್ಪೋದ್ಯಾನದಲ್ಲಿ ತಿರುಗಾಡುವುನು. ಕೇವಲ ರಾಜನ ಸಮೀಪದಲ್ಲಿರುತ್ತಿರಲಿಲ್ಲ. ಇತರರು ಬಂದು ರಾಜನ ಸಂಗಡ ಮೆಲ್ಲಗೆ ಮಾತನಾಡಿದರೆ ಕೇಳಿಸುವಷ್ಟು ದೂರದಲ್ಲಿ ನಿಲ್ಲದಿದ್ದರೂ ರಾಜನು ಅವರಿಗೆ ಹೇಳುವ ಪ್ರತ್ಯುತ್ತರವನ್ನು ಕೇಳುವಷ್ಟು ದೂರದಲ್ಲಿ ನಿಂತಿರುವನು. ಯಾರು ಎಷ್ಟು ಏಕಾಂತವಾಗಿ ಮೃದುವಾದ ಸ್ವರದಿಂದ ಮಾತನಾಡಿದರೂ ರಾಜನು ಯಾವಾಗಲೂ ಗಟ್ಟಿಯಾಗಿಯೇ ಪ್ರತ್ಯುತ್ತರವನ್ನು ಹೇಳುವುನು. ಇಂದ್ರಭೂಪನಿಗೆ ಮೆಲ್ಲಗೆ ಮಾತನಾಡುವುದಕ್ಕೆ ಬಾರದು. ಮತ್ತು ಅವನು ಪ್ರಾಯಶಃ ಯಾವ ಏಕಾಂತವನ್ನೂ ಇಟ್ಟುಕೊಳ್ಳಲಾರ ತನ್ನ ಸ್ವಂತ ಸಮಾಚಾರ

ವನ್ನಾದರೂ ಎಲ್ಲರ ಇದಿರಿಗೂ ಹೇಳಿಬಿಡುವನು, ಎಲ್ಲಾ ಸಂಗತಿಗಳನ್ನೂ ಮುಕ್ತಕಂಠನಾಗಿ ಬಾಯಿಯಲ್ಲಿ ಹೇಳಿಕೊಳ್ಳುತ್ತ ಆಲೋಚಿಸುವುದೇ ಅವನಿಗೆ ಅಭ್ಯಾಸವಾಗಿತ್ತು.

ರಾಜನು ಪುಷ್ಪೋದ್ಯಾನದಿಂದ ತನ್ನ ರಾಜಕೀಯವಾದ ಕೆಲಸಗಳನ್ನು ಮಾಡುವುದಕ್ಕೆ ಹೊರಟುಹೋದಾಗ ಚೂಡಾಧನನು ಆ ಅವಕಾಶದಲ್ಲಿ ರಾಜಭೃತ್ಯರ ಸಂಗಡ ಸರಸವಾದ ಮಾತನಾಡುತಲಿರುವುನು. ಒಂದೊಂದು ಸಮಯದಲ್ಲಿ ಅಧ್ಯಾಪಕರ ಸಂಗಡ ಶಾಸ್ತ್ರೀಯವಾದ ತರ್ಕವಮಾಡುತಲಿರುವುನು. ಅವನು ನಾನಾ ಶಾಸ್ತ್ರದಲ್ಲಿ ಪಂಡಿತನಾಗಿದ್ದನು. ಪಂಡಿತರು ಅವನ ಪಾಂಡಿತ್ಯವನ್ನು ಕುರಿತು ಪ್ರಶಂಸೆ ಮಾಡುತಲಿದ್ದರು. ಇತರರು ಅವನ ಸದ್ವ್ಯವಹಾರವನ್ನು ಕುರಿತು ಪ್ರಶಂಸೆಮಾಡುತಲಿದ್ದರು. ಆದರೆ ದಿವಾನನು ಮಟ್ಟಿಗೆ ಈ ವಿಚಾರದಲ್ಲಿ ಮೌನವಾಗಿರುವನು.

ರಾಜನು ಚೂಡಾಧನನ ಸಂಗಡ ಹೃಷ್ಟಚಿತ್ತನಾಗಿ ಮಾತನಾಡುವುದಲ್ಲದೆ, ಅವನನ್ನು ಯಾವಾಗಲೂ ಸಂತೋಷಪಡಿಸಲು ಯತ್ನವುಳ್ಳವನಾಗಿರುವನು. ಏತಕ್ಕೆಂದರೆ, ಅವನ ಅಭಿಪ್ರಾಯದಲ್ಲಿ ಚೂಡಾಧನನ ತಂದೆಯು ರಾಜ್ಯಾಧಿಕಾರಿಯಾಗಿದ್ದರೆ ಅವನೂ ಎಷ್ಟೋ ಸುಖವನ್ನನುಭವಿಸುತಲಿದ್ದನೆಂದು ತಿಳಿದಿದ್ದನು. ಅದುಕಾರಣ ಚೂಡಾಧನನು ಆ ಕೊರತೆಯನ್ನು ಅನುಭವಮಾಡದಿರಲು ರಾಜನು ಸರ್ವದಾ ಆ ಪ್ರಯತ್ನದಲ್ಲಿರುವನು. ಆದರೆ ಆರ್ಥಾನುಕೂಲ್ಯದಿಂದ ಆ ಕೊರತೆಯನ್ನು ತಪ್ಪಿಸಲಾರದವನಾಗಿದ್ದನು. ದಿವಾನನು ಅದಕ್ಕೆ ಯಾವದಾದರೂ ವ್ಯಾಘಾತವಮಾಡುತಲಿದ್ದನು. ಅವನ ಅಭಿಪ್ರಾಯದಲ್ಲಿ ಚೂಡಾಧನನಿಗೆ ದುಡ್ಡು ಇಲ್ಲದಿರುವುದೇ ರಾಜನಿಗೆ ಮಂಗಳಕರವಾದುದೆಂದು ತಿಳಿದಿದ್ದನು.

ಚೂಡಾಧನಬಾಬುವು ದಿವಾನನ ವೈರಿತ್ವವನ್ನು ತಿಳಿದವನಾಗಿದ್ದರೂ ಅದಕ್ಕೋಸ್ಕರ ದಿವಾನನಲ್ಲಿ ಯಾವ ಅಸದ್ವ್ಯವಹಾರವನ್ನು ಮಾಡುತ್ತಿರ

ಲಿಲ್ಲ. ದಿವಾನನನ್ನು ಹೆಚ್ಚು ಶ್ಲಾಘನೆಯೇ ಮಾಡುತಲಿದ್ದನು. ಇದನ್ನು ಕಂಡು ರಾಜನಾದಿಯಾಗಿ ಎಲ್ಲರೂ ಚೂಡಾಧನನು ಮಂಗಳಾಕಾಂಕ್ಷಿಯೆಂತಲೇ ತಿಳಿದಿದ್ದರು. ಒಂದು ದಿನ ಅಕಸ್ಮಾತ್ತಾಗಿ ದಿವಾನನ ಮನೆಗೆ ಬೆಂಕಿ ಬಿತ್ತು. ತತ್ಕ್ಷಣದಲ್ಲಿ ಚೂಡಾಧನಬಾಬು ಎಲ್ಲರಿಗಿಂತಲೂ ಮುಂದಾಳಾಗಿ ಹೋಗಿ ದಿವಾನನನ್ನು ಉದ್ಧಾರಮಾಡಿದನು. ಅದಕ್ಕಾಗಿ ಎಲ್ಲರೂ ಚೂಡಾಧನನನ್ನು ಕೊಂಡಾಡಿದರು. ದಿವಾನನು ಮಾತ್ರ ಕೊಂಡಾಡಲಿಲ್ಲ. ಇದಕ್ಕಾಗಿ ಎಲ್ಲರೂ ದಿವಾನನನ್ನು ನಿಂದಿಸುವರು. ದಿವಾನನು ತನ್ನ ನಿಂದೆಯನ್ನು ಕೇಳಿದರೂ ಏನೊಂದುತ್ತರವನ್ನು ಹೇಳುತ್ತಿರಲಿಲ್ಲ. ಒಂದು ತಡವೆ ಮಾತ್ರ ತನ್ನ ಮಗನನ್ನು ಒಂದು ನಿರ್ಜನವಾದ ಸ್ಥಳಕ್ಕೆ ಕರೆದು ಮನೆಗೆ ಬೆಂಕಿ ಬಿದ್ದುದನ್ನು ಮರೆಯಬೇಡವೆಂದು ಹೇಳಿದನು.

ಪುತ್ರ—ಏತಕ್ಕೆ ?

ದಿವಾನ—ಹಾಗೆ ಮರೆತರೆ ಬೆಂಕಿ ಹಾಕಿದವರನ್ನು ಮರೆಯುವೆ.

ಪುತ್ರ—ಯಾರು ಬೆಂಕಿಯನ್ನು ಹಾಕಿದರು ?

ದಿವಾನ—ಚೂಡಾಧನಬಾಬು.

ಪುತ್ರ—ಅವನು ತಮ್ಮನ್ನು ಉದ್ಧಾರಮಾಡಿದನಲ್ಲವೆ ?

ದಿವಾನ—ಉದ್ಧಾರಮಾಡಬೇಕೆಂತಲೇ ವಿಪತ್ತುಂಟುಮಾಡಿದನು.

ಪುನಃ ಪುತ್ರನು ಏನೊಂದುತ್ತರವನ್ನು ಹೇಳದೆ ನಿಂತುಕೊಂಡನು. ದಿವಾನನು ರಾಜನ ಅರಮನೆಗೆ ಹೊರಟುಹೋದನು. ಅಲ್ಲಿ ಹೋಗಿ ನೋಡಲಾಗಿ ಚೂಡಾಧನನು ಕೆಲವು ವೃದ್ಧರಾದ ಅಧ್ಯಾಪಕರ ಮಧ್ಯದಲ್ಲಿ ನಿಂತುಕೊಂಡು ಮಾತನಾಡುತಲಿದ್ದುದು ಕಂಡುಬಂತು. ಚೂಡಾಧನನು ಸ್ವಭಾವವಾಗಿ ಮಿತಭಾಷಿ; ಅದರಲ್ಲಿಯೂ ಮೆಲ್ಲಮೆಲ್ಲಗೆ ಮೃದುವಾಗಿ ಮಾತನಾಡತಕ್ಕವನು. ಪ್ರಕೃತದಲ್ಲಿ ಅವನು ತನ್ನ ಸ್ವಭಾವಕ್ಕೆ ವಿರೋಧವಾಗಿ ಮಾತನಾಡುವದನ್ನು ಕೇಳಿ ದಿವಾನನು ಬೇರೆ ಏನೋ ಕೆಲಸಮಾಡುವ ನೆಪ

ದಿಂದ ಸ್ವಲ್ಪ ದೂರದಲ್ಲಿ ನಿಂತು ಕೇಳುತ್ತಿದ್ದನು. ದಿವಾನನು ಬಂದುದನ್ನು ಕಂಡು ಚತುರಾಧನನು ಧ್ವನಿಯನ್ನು ಮತ್ತಷ್ಟು ಹೆಚ್ಚು ಮಾಡಿದನು. ಅದು ದಿವಾನನಿಗೆ ಗೊತ್ತಾಯಿತು. ಚತುರಾಧನನು ಹೇಳತೊಡಗಿದನು ;—ಏನೆಂದರೆ :—ಪುತ್ರನ ಕೆಟ್ಟ ನಡತೆಯು ತಂದೆಯ ದೋಷದಿಂದುಂಟಾಗುತ್ತದೆ. ನಿರ್ಬೋಧರಾದ ತಂದೆಗಳು ಎಲ್ಲಾ ಸಮಾಚಾರಗಳನ್ನೂ ಹೇಳಿ ಜಾಗರೂಕರಾಗಿರಬೇಕೆಂದು ಬುದ್ಧಿವಾದವನ್ನು ಹೇಳುವುದರಲ್ಲಿ ತಾವೇ ಅಜಾಗರೂಕರಾಗುತ್ತಾರೆ. ಬುದ್ಧಿವಂತಿಗೆ ಹೇಳಿಕೊಡುತ್ತೇವೆಂದು ಮನಸ್ಸಿನಲ್ಲಿ ಭಾವಿಸಿಕೊಂಡು ಕುಟಿಲತೆಯನ್ನು ಕಲಿಸುತ್ತಾರೆ. ಉಪಕಾರವನ್ನು ಮಾಡಿದರೆ ಉಪಕೃತರಾದೆವೆಂದು ಅರಿಯದೆ, ಉಪಕಾರಕ್ಕೆ ಪ್ರತಿಯಾಗಿ ಅಪಕಾರ ಮಾಡಲು ತಾವೇ ಅಸಮರ್ಥರಾಗಿ, ಅಪಕಾರವನ್ನು ಮಾಡುವ ಭಾರವನ್ನು ಮಕ್ಕಳ ಮೇಲೆ ಹಾಕುತ್ತಾರೆ, ಎಂದು ಮುಂತಾಗಿ ಹೇಳುತ್ತಿದ್ದನು.

ದಿವಾನನು ಇಷ್ಟು ಕೇಳಿ ಇನ್ನು ಮುಂದೆ ಕೇಳದೆ ಬೇರೆ ಕೆಲಸಕ್ಕೆ ಹೊರಟುಹೋದನು. ಹೋಗುತ್ತ ದಾರಿಯಲ್ಲಿ ಒಬ್ಬ ಸಿಪಾಯಿಯನ್ನು ಕುರಿತು, ನನ್ನ ಪಲ್ಲಕ್ಕಿಯ ಸಂಗಡ ಬಂದವರು ಯಾರೆಂದು ಕೇಳಿದನು.

ಸಿಪಾಯಿ—ಯಾರೂ ಸಂಗಡ ಬರಲಿಲ್ಲ. ಯಾರನ್ನೂ ನೋಡಲಿಲ್ಲ.

ದಿವಾನ—ಆಶ್ಚರ್ಯ!

ದಿವಾನನು 'ಆಶ್ಚರ್ಯ' ಎಂದು ಮಾತ್ರ ಬಾಯಿಯಿಂದ ಹೇಳಿದನು. ಆದರೆ ಮನಸ್ಸಿನಲ್ಲಿ ಏನೇನೋ ಯೋಚಿಸುತ್ತ ಯಾವದನ್ನೂ ಗೊತ್ತುಮಾಡಲಾರದೆ ಹೋದನು.

## ಎರಡನೆಯ ಪರಿಚ್ಛೇದ.

---

ಆ ದಿನ ರಾತ್ರಿ, ಚೂಡಾಧರನು ಬಹಳ ಹೊತ್ತು ಅರಮನೆಯಲ್ಲಿದ್ದನು. ಬೇರೆ ದಿವಸಗಳಲ್ಲಿ ಪ್ರಾಯಶಃ ಸಾಯಂಕಾಲವಾಗಕೂಡಲೆ ಮನೆಗೆ ಹೊರಟು ಹೋಗುವನು. ಹೋಗುವಾಗ ಸ್ವಲ್ಪ ಬೇಗಬೇಗನೆ ಹೋಗುವನು. ಜನರು, ಚೂಡಾಧರಬಾಬುವು ದೀಪಗಳನ್ನೆಲ್ಲಾ ಆರಿಸುವದಕ್ಕೆ ಮನೆಗೆ ಬೇಗನೆ ಹೋಗುತ್ತಾನೆಂದು ಹೇಳುವರು, ವಾಸ್ತವಿಕವಾಗಿ, ಆ ಮಾತು ಸ್ವಲ್ಪಮಟ್ಟಿಗೆ ನಿಜವೇ ಹೌದು. ಅವನ ಮನೆಯಲ್ಲಿ ಅವನಿಗೋಸ್ಕರ ಕಾದು ದೀಪವನ್ನುರಿಸಿ ತದ್ದ್ವಾರಾ ಎಣ್ಣೆ ವೆಚ್ಚವಾಗಕೂಡದೆಂದು ಏರ್ಪಾಡು ಮಾಡಿದ್ದನು. ಅವನು ಅಷ್ಟು ಕೇವಲ ದರಿದ್ರನಾಗಿರಲಿಲ್ಲ. ಮನೆಯಲ್ಲಿ ದಾಸದಾಸಿಯರು ಇದ್ದರು. ದ್ವಾರಪಾಲಕರೂ ಇದ್ದರು. ಅಷ್ಟಿದ್ದರೂ ವ್ಯರ್ಥವಾಗಿ ಎಣ್ಣೆಯು ಖರ್ಚಾಗಲೇತಕ್ಕೆ? ಅದುಕಾರಣ ಮನೆಯಲ್ಲಿ ದೀಪಗಳು ಬಹಳ ಉರಿಯುತ್ತಿರಲಿಲ್ಲ.

ಅವನ ಮನೆಯನ್ನು ನೋಡಿದರೆ, ಭಾಗ್ಯವಂತರ ಅಥವಾ ರಾಜವಂಶದವರ ಮನೆಯಾಗಿ ಕಾಣುತ್ತಿರಲಿಲ್ಲ. ಮನೆಯೇನೋ ಇಟ್ಟಿಗೆಯಿಂದ ಕಟ್ಟಲ್ಪಟ್ಟದ್ದೇ ಹೌದು. ಆದರೆ ಬಹಳ ಚಿಕ್ಕದು, ಮತ್ತು ಬೀಳುವಹಾಗಿತ್ತು. ನಾಲ್ಕು ಕಡೆಯಲ್ಲಿಯೂ ಗೋಡೆಯಲ್ಲಿ ನಾನಾವಿಧವಾದ ಪಕ್ಷಿಗಳು, ಕುದುರೆ, ಆನೆ, ಸಿಪಾಯಿ ಮುಂತಾದ ಚಿತ್ರಗಳು ಬರೆಯಲ್ಪಟ್ಟಿದ್ದವು. ನೋಡಿದರೆ ಕೋರಾನ್ನದಯ್ಯನ ಚೀಟಿಬಟ್ಟೆಯ ಹಾಗೆ ಕಾಣುವುದು. ಮನೆಯೊಳಗೆ ಗಾಳಿಯು ಪ್ರವೇಶಕ್ಕೆ ವಿಶೇಷ ಮಾರ್ಗವಿರಲಿಲ್ಲ. ಆ ಕಾಲದಲ್ಲಿ ಮನೆಗೆ ಚಿಕ್ಕಚಿಕ್ಕ ಜಾಲಾಂತರ ಕಿಟಿಗೆಗಳನ್ನು ಇಡುವ ಪದ್ಧತಿ. ಚೂಡಾಧರನ ಮನೆಗೆ ಅಂತಹ ಕಿಟಿಗೆಗಳೂ ಬಹಳ ಇರಲಿಲ್ಲ. ಎರಡು ಮೂರೂ ಜಲಾಂ

ತರ ಕಿಟಿಗೆಗಳು ಮಾತ್ರ ಇದ್ದವು. ಬಾಗಿಲಿನ ಮುಂದುಗಡೆಯಾಗಲಿ ಅಂಗಳದಲ್ಲಾಗಲಿ ತುಲಸಿ ಅಥವಾ ಹೂವು ಗಿಡಗಳು ಯಾವದೂ ಇರಲಿಲ್ಲ. ಆ ಕಾಲದಲ್ಲಿ ಗೃಹಸ್ಥರ ಮನೆಯ ಮುಂದುಗಡೆ ತುಲಸಿ ಬೃಂದಾವನ; ಹೂವು ಗಿಡಗಳು ಇಲ್ಲದಿದ್ದರೆ ಧರ್ಮವಿರುದ್ಧವೆಂದು ನಿಂದನೀಯವಾದುದು. ಒಂದು ದಿನ ಒಬ್ಬ ಬ್ರಾಹ್ಮಣನು ಭಿಕ್ಷಾರ್ಥವಾಗಿ ಚೂಡಾಧನನ ಮನೆಗೆ ಭಿಕ್ಷಾಂ ದೇಹಿ ಎಂದು ಬಾಗಿಲಿನಲ್ಲಿ ಬಂದು ನಿಂತನು. ಅನಂತರ ಅತ್ತಿತ್ತ ನೋಡಲಾಗಿ ಮನೆಯಲ್ಲಿ ಯಾವ ಹೂವು ಗಿಡಗಳಾಗಲಿ ತುಲಸಿ ಕಟ್ಟೆಯಾಗಲಿ ಇಲ್ಲದಿರುವುದನ್ನು ಕಂಡು ತಕ್ಷಣದಲ್ಲಿಯೇ ಅಲ್ಲಿಂದ ಭಿಕ್ಷೆ ಕೇಳದೆ ಹಿಂದಿರಿಗಿ ಹೊರಟುಹೋಗುತಲಿದ್ದನು. ಗೃಹಿಣಿಯು ಸ್ವಂತವಾಗಿ ಭಿಕ್ಷವನ್ನು ತೆಗೆದುಕೊಂಡು ನೀಡಲು ಅವನನ್ನು ಕರೆದಳು. ಭಿಕ್ಷುಕನು ಭಿಕ್ಷವನ್ನು ತೆಗೆದುಕೊಳ್ಳದೆ, ಅಮ್ಮಾ ! ನಿಮ್ಮ ಭಿಕ್ಷೆಯನ್ನು ನಾನು ತೆಗೆದುಕೊಳ್ಳಲಾರೆ. ನಿಮ್ಮ ಮನೆಯಲ್ಲಿ ಪುಷ್ಪೋದ್ಯಾನವು ಇಲ್ಲವಾಗಿ ನಿಮ್ಮ ಮನೆಯಲ್ಲಿ ಶ್ರೀಮನ್ನಾರಾಯಣನು ಇಲ್ಲವೆಂದು ತಿಳಿಯುತ್ತೇನೆಂದನು.

ಭಿಕ್ಷುಕನು ಇನ್ನೂ ಸ್ವಲ್ಪಹೊತ್ತು ಅಲ್ಲಿಯೇ ನಿಂತು ನೋಡಿದ್ದರೆ, ನಿಮ್ಮ ಮನೆಯಲ್ಲಿ ಯಾವ ಹಕ್ಕಿಯು ಕೂಡ ಸಾಕಿಲ್ಲ. ಮನೆಯಲ್ಲಿ ಮಕ್ಕಳು ಮರಿ ಇಲ್ಲವೆಂದು ತೋರುತ್ತದೆಯಾದಕಾರಣ ನಾನು ನೀವು ನೀಡುವ ಭಿಕ್ಷವನ್ನು ತೆಗೆದುಕೊಳ್ಳಲಾರೆ ; ನಿಸ್ಸಂತಾನರಾಗಿರುವವಳು ಕೊಡುವ ಭಿಕ್ಷವು ಅಶುಚಿಯಾದುದೆಂದೂ ಹೇಳಬಹುದಾಗಿತ್ತು. ವಾಸ್ತವಿಕವಾಗಿ ಚೂಡಾಧನನಿಗೆ ಸಂತಾನವಿರಲಿಲ್ಲ. ಮನೆಯಲ್ಲಿ ತಾನೂ ತನ್ನ ಹೆಂಡತಿ ಇಬ್ಬರೇ ವಾಸವಾಗಿದ್ದರು. ಪುತ್ರವತಿಯಾದರೆ ಸ್ತ್ರೀಜಾತಿಗೆ ಯಾವ ಕೋಮಲತೆ ಹುಟ್ಟುವದೋ, ಸರ್ವಜನರಲ್ಲಿಯೂ ಯಾವ ಸ್ನೇಹ ಮತ್ತು ದಯೆಯುಂಟಾಗುವುದೋ ಅಂತಹ ಕೋಮಲತೆ, ದಯೆ ಅಥವಾ ಸ್ನೇಹವು ಚೂಡಾಧನ ಬಾಬುವಿನ ಗೃಹಿಣಿಗೆ ಯಾವಾಗಲೂ ಹುಟ್ಟಲಿಲ್ಲ.

ಚೂಡಾಧನನು ತನ್ನ ಹೆಂಡತಿಯು ದಯಾಮಯಿಯೆಂದೂ, ಸ್ನೇಹಮಯಿಯೆಂದೂ ಶುದ್ಧನಾಗಿ ಸ್ವಾರ್ಥಪರತಾಶೂನ್ಯಳೆಂದೂ ತಿಳಿದುಕೊಂಡಿದ್ದನಲ್ಲದೆ ಇದೆಲ್ಲಾ ಬಹಳ ಕೆಟ್ಟಗುಣಗಳೆಂತಲೂ ತಿಳಿದವನಾಗಿ, ಅದಕ್ಕೋಸ್ಕರ ಹೆಂಡತಿಯನ್ನು ಪದೇಪದೆ ತಿರಸ್ಕಾರಮಾಡುವನು. ಆದರೂ ಗೃಹಿಣಿಯು ರಾತ್ರಿಕಾಲದಲ್ಲಿ ಸ್ವಾಮಿಯ ಭೋಜನಪಾತ್ರದ ಹತ್ತಿರ ಕುಳಿತುಕೊಂಡು ತನ್ನ ಸ್ನೇಹ ಮಮತೆ ದಯೆ ಮುಂತಾದ ವಿಶೇಷವಾದ ಗುಣಗಳ ನಾನಾ ಪರಿಚಯವನ್ನು ತೋರಿಸುವಳು. ಆ ಗುಣಗಳಲ್ಲೊಂದಾದರೂ ಸ್ವಭಾವಸಿದ್ಧವಾದುದಾಗಿರಲಿಲ್ಲ. ಎಲ್ಲಾ ಕಪಟಾಚರಣೆಯಾಗಿತ್ತು. ಆದರೆ ಚೂಡಾಧನನು ಅವೆಲ್ಲಾ ಅವಳ ಸ್ವಭಾವಸಿದ್ಧವಾದ ಗುಣಗಳೆಂದು ಭಾವಿಸುವನು. ಚೂಡಾಧನಬಾಬುವಾದರೋ ಅಸಾಧಾರಣಬುದ್ಧಿಶಾಲಿಯಾಗಿದ್ದನು. ಎಲ್ಲರ ಮನಸ್ಸಿನ ಆಳವನ್ನು ನೋಡಬಲ್ಲನು. ಆದರೆ ತನ್ನ ಹೆಂಡತಿಯಲ್ಲಿ ಮಾತ್ರ ಅಂಧನಾಗಿದ್ದನು. ಅವಳ ಚಾಕಚಕ್ಯಗಳನ್ನು ಅರಿಯಲಾರದವನಾಗಿದ್ದನು. ಗೃಹಿಣಿಯು ವಿಶೇಷ ಬುದ್ಧಿಮತಿಯಾಗಿರಲಿಲ್ಲ. ನೆರೆಹೊರೆಯವರ ಅಭಿಸಂಧಿಗಳನ್ನು ಸ್ವಲ್ಪವೂ ತಿಳಿದುಕೊಳ್ಳಲಾರಳು. ಆದರೂ ಅವಳು ಚೂಡಾಧನನ ಅಂತಸ್ತಲಪರ್ಯಂತವೂ ಹೊಕ್ಕು ನೋಡಿ ತಿಳಿದುಕೊಳ್ಳುವಳು.

ಯಾವರಾತ್ರಿ ಚೂಡಾಧನಬಾಬುವು ಬೇಗಬೇಗನೆ ಮನೆಗೆ ಬರುತ್ತಿದ್ದನೋ ಆ ರಾತ್ರಿ ಮನೆಯ ಹತ್ತಿರ ಅವನಿಗೋಸ್ಕರ ಇಬ್ಬರು ಮನುಷ್ಯರು ಕಾದಿದ್ದರು. ಚೂಡಾಧನನು ಬರುತ್ತಲೇ ಅವರನ್ನು ಕಂಡು ಮಹಾ ಆಹ್ಲಾದವನ್ನು ಪ್ರಕಾಶಮಾಡಿದನು, ಅಂದರೆ, ಮಾತನಾಡಿ ಪ್ರಕಾಶಮಾಡಿದನು. ಅನಂತರ ಅವರು ಮೂವರೂ ಏಕತ್ರ ಕುಳಿತುಕೊಂಡು ಮೆಲ್ಲಮೆಲ್ಲಗೆ ಮಾತನಾಡಲಾರಂಭಿಸಿದರು. ಕಡೆಗೆ ಏಳುವಾಗ ಚೂಡಾಧನನು, ಈ ಸಲ ನೀವು ಬಳೆಯನ್ನು ಹೇಗೆ ಹರಡುವಿರೋ ನೋಡುತ್ತೇನೆ ಎಂದು ಹೇಳಿದನು. ಇಬ್ಬರಲ್ಲೊಬ್ಬನು, ಬಳೆಯೇನೋ ನೀವೇ ಆದಿರಿ; ನಾವುಗಳು

ಬಲೆಯನ್ನು ನಿಲ್ಲಿಸುವ ಕಡ್ಡಿಗಳಹಾಗೆ; ನಾವು ನಿಮ್ಮ ಜತೇಲಿ ತಿರುಗುವೆವು ಎಂದು ಉತ್ತರವನ್ನು ಕೊಟ್ಟನು. ಈ ಇಬ್ಬರಲ್ಲಿ ಒಬ್ಬನ ಹೆಸರು ಜನಾರ್ದನ, ಮತ್ತೊಬ್ಬನ ಹೆಸರು ಕಾಳೀಪ್ರಸಾದ.

---

## ಮೂರನೆಯ ಪರಿಚ್ಛೇದ.

ರಾಜಾನುಗೃಹೀತರಾದವರಲ್ಲಿ ಪೀತಾಂಬರನೆಂಬ ಒಬ್ಬನಿದ್ದನು. ಜನರು ಅವನನ್ನು ಪಿತಮಹುಚ್ಚನೆಂದು ಹೇಳುವರು. ಪೀತಾಂಬರನ ಜನ್ಮಭೂಮಿ, ಅವನ ತಂದೆತಾಯಿಗಳು ಯಾರೆಂಬುದು ಸಹ ಯಾರಿಗೂ ಗೊತ್ತಿಲ್ಲ. ಪ್ರವಾದವಿತ್ತೇನಂದರೆ;—ನಾಲ್ವತ್ತಾರನೆಯ ವರುಷದಲ್ಲಿ ಪಿತಮನು ಮಕ್ಕಳನ್ನು ಕಳವು ಮಾಡುವ ಕಳ್ಳರ ಭಯಕ್ಕೋಸ್ಕರ ಸ್ವದೇಶವನ್ನು ಬಿಟ್ಟು ಪಲಾಯನವಮಾಡಿ ಹೋಗಿ ಕಡೆಗೆ ಸಿಂಹಶತಗ್ರಾಮಕ್ಕೆ ಬಂದು ಆಶ್ರಯವನ್ನು ಹೊಂದಿದನೆಂದು ಹೇಳಿಕೊಳ್ಳುತ್ತಿದ್ದರು. ತಂದೆಯಾರೆಂದು ಕೇಳಿದರೆ, ಪಿತಮನು ಮುಖತಗ್ಗಿದವನಾಗಿ ತಲೆಯನ್ನು ಅಲ್ಲಾಡಿಸುತ್ತ, ಗೊತ್ತಿಲ್ಲವೆಂದು ಹೇಳುವನು. ತಾಯಿ ಯಾರೆಂದು ವಿಚಾರಿಸಿದರೆ, ಅವನು ಗಂಭೀರಭಾವದಿಂದ ರಾಜನ ಒಂದು ದೊಡ್ಡದಾದ ಆನೆಯನ್ನು ತೋರಿಸುವನು.

[.] ಪಿತಮನು ಪ್ರಾಯಶಃ ಯಾವಾಗಲೂ ವಿಮರ್ಷನಾಗಿಯೇ ಇರುವನು. ಬೀದಿಯಲ್ಲಿ ಹುಡುಗರು ಆಟವಾಡುವದನ್ನು ನೋಡಿದಾಗ ಹಾಗಿರುತ್ತಿರಲಿಲ್ಲ. ಆಗವನು ಅನವರತ ಮಾತನಾಡುತ್ತಿರುವನು. ಯಾರೂ ಸಿಕ್ಕದಿದ್ದರೆ ತನಗೆ ತಾನೇ ಮಾತನಾಡಿಕೊಳ್ಳುವನು. ಒಂದೊಂದುಸಲ ಸಂಗೀತವನ್ನು ಹಾಡುವನು. ಅವನ ಹಾಡನ್ನು ಕೇಳಿ ಜನರು ಬಹಳ ಆಶ್ಚರ್ಯವಾದುದೆಂದು

ಹೇಳುವರು. ಆದರೆ ಯಾರಾದರು ಹಾಡೆಂದು ಹೇಳಿದರೆ, ಪಿತಮನಿಗೆ ಬಹಳ ಕಷ್ಟಕ್ಕೆ ಬರುವುದು. ಒಂದು ಹಾಡೂ ಸ್ಮರಣೆಗೆ ಬಾರದು.

ಪಿತಮನಿಗೆ ಪ್ರಥಮಾವಸ್ಥೆಯಲ್ಲಿ ಜ್ಞಾಪಕಶಕ್ತಿ ಸುತರಾಂ ಇರಲಿಲ್ಲ. ಜನರು ಅವನನ್ನು ಹುಚ್ಚನೆಂದು ಹೇಳುವುದಕ್ಕೆ ಇದೊಂದು ವಿಶೇಷವಾದ ಕಾರಣವಾಗಿತ್ತು. ಸರಿಯಾದ ಮಾತುಗಳು ಜ್ಞಾಪಕಕ್ಕೆ ಬಾರದೆ ಕೇಳಿದ ಪ್ರಶ್ನೆಗೆ ಪ್ರತ್ಯುತ್ತರವನ್ನು ಕೂಡ ಹೇಳಲಾರದವನಾಗಿ ಸುಮ್ಮನಿರುವನು. ಮಾತನಾಡಿದರೆ ಹೇಳಬೇಕೆಂದಿದ್ದ ಮಾತಿಗೆ ಪ್ರತಿಯಾಗಿ ಬಾಯಿಯಿಂದ ಬೇರೆಮಾತು ಹೊರಟುಬಿಡುವುದು. ಅವನು, ತಾನು ಸರಿಯಾದ ಶಬ್ದವನ್ನೇ ಹೇಳಿದ್ದೇನೆಂದು ತಿಳಿದುಕೊಳ್ಳುವನು. ಆದರೆ ಅವನ ಮಾತನ್ನು ಕೇಳಿ ಜನರು ನಗುವುದನ್ನು ನೋಡಿ ಆಶ್ಚರ್ಯಪಡುವನು. ಬಾಯಾರಿಕೆಯಾದಾಗ ಕುಡಿಯುವುದಕ್ಕೆ ನೀರು ಬೇಕೆನ್ನುವುದಕ್ಕೆ ಪ್ರತಿಯಾಗಿ ಆನೆ ಬೇಕೆನ್ನುವನು. ಜನರು ಕೇಳಿ ನಗಲಾರಂಭಿಸುವರು. ನೀರು ಎಂಬ ಶಬ್ದಕ್ಕೆ ಪ್ರತಿಯಾಗಿ ಆನೆಯೆಂಬ ಶಬ್ದವನ್ನು ಪ್ರಯೋಗಿಸಿದೆನೆಂದು ಅವನಿಗೆ ಗೊತ್ತಾಗುತ್ತಿರಲಿಲ್ಲ. ಪುನಃಪುನಃ ಅದೇ ತಪ್ಪನ್ನೇ ಮಾಡುವನು. ಜನರು ಏನು ಕುಡಿಯುತ್ತಿ? ಎಂದು ಕೇಳಿದರೆ ಪಿತಮನು ಆನೆ ಕುಡಿಯುತ್ತೇನೆಂದು ಹೇಳುವನು. ಜನರು ಪುನಃ ನಗುವರು. ಪುನಃ ಕೇಳುವರು; ಪುನಃ ನಗುವರು.

ಜನರು ಪಿತಮನ ಪ್ರಕೃತವಾದ ಅವಸ್ಥೆಯನ್ನರಿಯರು. ಪಿತಮನಿಗೆ ಸ್ಮರಣಶಕ್ತಿಯಿಲ್ಲ. ಜನರು ಅವನಿಗೆ ಜ್ಞಾನವಿಲ್ಲವೆಂದು ತಿಳಿಯುವರು. ಪಿತಮನು ಮರೆತು ತಪ್ಪುಮಾತು ಹೇಳುವನು! ಜನರೂ ಮರೆತು ತಪ್ಪಾಗಿ ತಿಳಿಯುವರು. ಪಿತಮನ ತಪ್ಪಿನಿಂದ ಜನರಿಗೆ ನಗುವು ಹೆಚ್ಚಾಗುವುದು. ಜನರ ತಪ್ಪಿನಿಂದ ಪಿತಮನ ಕೋಪವು ಹೆಚ್ಚಾಗುವುದು. ಹುಚ್ಚನ ಕೋಪವು ರೇಗಿದರೆ ಜನರ ಆಹ್ಲಾದವೂ ಹೆಚ್ಚಾಗುತ್ತದೆ. ಇದರಿಂದ ನಿರ್ಭಾ

ಗ್ಯನಾದ ಪಿತಮನು ಮಧ್ಯೆ ಮಧ್ಯೇ ಊರುಬಿಟ್ಟು ಹೊರಟುಹೋಗು ವನು. ಕೆಲವುದಿನಗಳಮೇಲೆ ಪುನಃ ಹಿಂದಿರಿಗಿ ಬರುವನು. ಇದೆಲ್ಲಾ ಪ್ರಥಮಾವಸ್ಥೆಯವಿಚಾರ.

ಒಂದುದಿನ ಅಪರಾಹ್ಣದಲ್ಲಿ ರಾಜಾ ಇಂದ್ರಭೂಪನು ಕೆಲವು ಮಂತ್ರಿ ಮುಂತಾದವರೊಡನೆ ಪಶುಶಾಲೆಯನ್ನು ನೋಡಿಕೊಂಡು ಬರುವುದಕ್ಕೆ ಹೋಗಿದ್ದನು. ಪಶುಶಾಲೆಯಲ್ಲಿ ಪಕ್ಷಿಗಳ ಕಲಹವನ್ನು ಕೇಳುವನು. ವಾನರಗಳಿಗೆ ಬಾಳೆಹಣ್ಣನ್ನು ಕೊಡುತ್ತಿದ್ದನು. ಕರಡಿಯನ್ನು ತಿರಸ್ಕಾರ ಮಾಡುವನು. ಕಾಡುಮನುಷ್ಯನೊಂದಿಗೆ ಕುಶಲವಾರ್ತೆಯನ್ನು ಕೇಳು ವನು. ಹೀಗೆಲ್ಲಾ ಮಾಡಿಕೊಂಡು ಅಲ್ಲಲ್ಲಿ ತಿರುಗಾಡುತ್ತಿದ್ದಸಮಯದಲ್ಲಿ ಹಿಂದುಗಡೆಯಿಂದ ಒಬ್ಬ ಮನುಷ್ಯನು, ವನಕ್ಕಿಂತಲೂ ತಮ್ಮ ಈ ಗೃಹವು ಚೆನ್ನಾಗಿದೆ, ನಾನು ಗೃಹಸ್ಥನಾಗುವೆನು, ಇನ್ನು ವನದಲ್ಲಿ ಅಲೆಯಲಾರೆನು. ಈ ಗೃಹದಲ್ಲಿ ತಾವು ದಯವಿಟ್ಟು ನನಗೆ ಸ್ವಲ್ಪ ಸ್ಥಳವನ್ನು ಕೊಡಿಸಿದರೆ, ನಾನು ಇಲ್ಲಿ ವಾಸಮಾಡುವೆನೆಂದು ಹೇಳಿದ್ದುದು ಕೇಳಿಸಿತು.

ರಾಜನು ಹಿಂದಿರಿಗಿ ನೋಡಿ, ಈ ಮನುಷ್ಯನು ಯಾರೆಂದು ಕೇಳ ಲಾಗಿ, ಸಂಗಡ ಇದ್ದವರಲ್ಲೊಬ್ಬನು, ಹುಚ್ಚಪಿತಮನೆಂದು ಹೇಳಿದನು .ರಾ ಜನು ಪಿತಮನನ್ನು ಯಾವಾಗಲೂ ನೋಡಿರಲಿಲ್ಲ. ಆದರೆ ಅವನನ್ನು ನೋಡಿದಕೂಡಲೆ ರಾಜನಿಗೆ ಅವನಮೇಲೆ ದಯೆಯುಂಟಾಯಿತು. ಪಿತ ಮನ ಬೆನ್ನಿನಮೇಲೆ ಬೆತ್ತದ ಹೊಡೆತದ ಬಹು ಬಾಸುಂಡೆಗಳ ಗುರುತುಗಳಿ ದ್ದವು. ಕೆಲವುದರಲ್ಲಿ ರಕ್ತವೂ ಹೊರಟಿತ್ತು. ಮತ್ತೆ ಕೆಲವು ರಕ್ತೋ ನ್ಮುಖವಾಗಿದ್ದವು. ರಾಜನು ತನ್ನ ಬೆರಳಿನಿಂದ ಅವುಗಳನ್ನು ತೋರಿಸುತ್ತ, ಈ ಕುರುಹುಗಳು ಹೇಗೆ ಉಂಟಾದವೆಂದು ಕೇಳಿದನು. ಪಿತಮನು ಆ ಘಾತದ ಚಿಹ್ನೆಗಳನ್ನು ಒಂದುತಡವೆ ನೋಡಿಕೊಂಡು ನಕ್ಕು ಯಾವದೊಂ ದುತ್ತರವನ್ನೂ ಕೊಡಲಿಲ್ಲ. ರಾಜನು ಪುನಃ ಕೇಳಿದನು. ಪಿತಮನು,

ಮಹಾರಾಜನೆ! ಎಂದು ಹೊಟ್ಟೆಗೆ ಬೀಳುವದಿಲ್ಲವೋ ಅಂದು ಬೆನ್ನಿಗೆ ಬೀಳುತ್ತದೆ ಎಂದನು. ಎಲ್ಲರೂ ನಗಲಾರಂಭಿಸಿದರು. ರಾಜನು ಗಂಭೀರ ಭಾವದಿಂದ, ನೀನು ಹೇಳುವುದು ಅರ್ಥವಾಗುವುದಿಲ್ಲ, ವಿವರವಾಗಿ ಹೇಳೆಂದನು. ಪಿತಮನು, ಹೊಟ್ಟೆ ನನ್ನದು, ಬೆನ್ನು ಇತರರದು. ಆನೆಗೂ ಹಾಗೆಯೇ, ಕುದುರೆಗೂ ಹಾಗೆಯೇ, ಎತ್ತಿಗೂ ಹಾಗೆಯೇ, ಕತ್ತೆಗೂ ಹಾಗೆಯೇ; ಹೊಟ್ಟೆ ಸ್ವಂತದ್ದು; ಬೆನ್ನು ಇತರರಿಗೆ ಸೇರಿದುದು—ಇಲ್ಲ, ಇಲ್ಲ. ಅದು ಸರಿಯಲ್ಲ. ತಪ್ಪುಹೇಳಿದೆ. ನನ್ನ ಸ್ವಂತವಿಚಾರದಲ್ಲಿ ಸ್ವಲ್ಪ ಪ್ರಭೇದವುಂಟು. ಎತ್ತೂ ಮತ್ತು ಮನುಷ್ಯನೂ ಸಮಾನವಲ್ಲ. ಎತ್ತಿಗೆ ಯಾರು ಆಹಾರವನ್ನು ಕೊಡುವನೋ, ಅದರ ಬೆನ್ನು ಅವನಿಗೆ ಸೇರಿದುದು. ನನಗೆ ಯಾರು ಆಹಾರವನ್ನು ಕೊಡುವುದಿಲ್ಲವೋ ಅವನಿಗೆ ನನ್ನ ಬೆನ್ನು ಸೇರುತ್ತದೆ. ಯಾರು ನನಗೆ ಆಹಾರವನ್ನು ಕೊಡುವನೋ ಅವನು ನನ್ನನ್ನು ಆದರಿಸುತ್ತಾನೆ. ಇದೇ ಪ್ರಭೇದ, ಗೊತ್ತಾಯಿತೆ? ಈಗ ನಾನು ಗೃಹಸ್ಥನಾಗುವೆನು ಎಂದು ಹೇಳಿದನು

ಹತ್ತಿರದಲ್ಲಿದ್ದ ಭಟ್ಟಾಚಾರ್ಯನು, ಗೃಹಸ್ಥನಾಗಬೇಕಾದರೆ, ವಿವಾಹವಾಗಬೇಕು. ಈಗೇನು, ವಿವಾಹವಾಗಬೇಕೊ? ಎಂದು ಕೇಳಿದನು.

ಪಿತಮ—ನನಗೆ ವಿವಾಹವಾಗಿ ಬಹಳ ಕಾಲವಾಯಿತು.

ರಾಜಾ—ಎಲ್ಲಿ ವಿವಾಹಮಾಡಿಕೊಂಡೆ? ನಿನ್ನ ಹೆಂಡತಿಯೆಲ್ಲಿ?

ಪಿತಮ—ಜಗನ್ನಾಥಕ್ಷೇತ್ರದಲ್ಲಿ ವಿವಾಹವನ್ನು ಮಾಡಿಕೊಂಡೆನು. ಅಲ್ಲಿಗೆ ಹೋಗಿ ಒಬ್ಬ ಆಶ್ಚರ್ಯವಾದ ಹೆಂಗಸನ್ನು ನೋಡಿದೆ. ಅವಳು ಈ ಪ್ರಪಂಚದಲ್ಲಿರುವ ಎಲ್ಲ ಸುಂದರಿಗಳಿಗಿಂತಲೂ ಸುಂದರಿಯಾಗಿದ್ದಳು. ಸಮುದ್ರಕ್ಕೆ ಸಮಾನವಾದವರು ಯಾರೂ ಇಲ್ಲ. ನಾನು ತಡೆಯಲಾರದೆ ಅವಳನ್ನು ವಿವಾಹಮಾಡಿಕೊಂಡುಬಿಟ್ಟೆನು.

ರಾಜಾ—ಸಮುದ್ರ ಬಹಳ ಸುಂದರಿಯೆ?

ಪಿತಮ—ಅತ್ಯಂತ ಚಮತ್ಕಾರವಾದ ಸುಂದರಿ! ಆ ಶ್ಯಾಮಾಂಗಿಗೆ ಇಂದ್ರಧನುಸ್ಸೇ ಕಟಿಬಂಧನ (ಡಾಬು) ವಾಗಿದೆ. ಹೀಗಿರುವದರಿಂದ ಅವಳ ಸೌಂದರ್ಯವನ್ನು ಮತ್ತೆಷ್ಟು ವರ್ಣಿಸಲಿ. ಸುಂದರಿಯು ಅನವರತ ನಲಿಯುತ್ತಾಳೆ. ಬಳಕುತ್ತಾಳೆ, ಹಾರುತ್ತಾಳೆ, ಕುಣಿಯುತ್ತಾಳೆ, ಕಿಲಕಿಲನಗುತ್ತಾಳೆ.

ರಾಜಾ—ಆದರೆ ನಿನ್ನ ಹೆಂಡತಿಗೆ ಕುಲ (ಕೂಲ) ವಿಲ್ಲವೊ?

ಪಿತಮ—ಆದರೆ ದೊಡ್ಡವರಮನೆಯ ಹೆಣ್ಣು. ಯಾರು ಅವಳಲ್ಲಿ ಸ್ಥಾನವನ್ನು ಹೊಂದುವರೋ ಅವರೆಲ್ಲರೂ ದೊಡ್ಡವರಾಗುತ್ತಾರೆ. ಈಗ ಪರಾಮರ್ಶಿಸೋಣಾಗಲಿ. ಚಂದ್ರನೂ ಸೂರ್ಯನೂ ಈಗ ನೋಡಿದರೆ ಸಣ್ಣ ಸಣ್ಣವರಾಗಿದ್ದಾರೆ, ಆದರೆ ನನ್ನ ಹೆಂಡತಿಯ ಪಾರ್ಶ್ವದಲ್ಲಿ ಅವರು ಉದಯವಾದರೆ ಆಗ ಎಂತಹ ಮೂರ್ತಿಗಳಾಗಿರುವರು! ಆಗ ಸೂರ್ಯನು ಎಷ್ಟು ದೊಡ್ಡವನಾಗಿ ಮಹತ್ತಾಕಾರವುಳ್ಳವನಾಗಿ ಎಷ್ಟು ಸುಂದರನಾಗಿ ಕಾಣುತ್ತಾನೆ! ಅದೆಲ್ಲಾ ಚಂದ್ರ ಅಥವಾ ಸೂರ್ಯನ ಸ್ವಂತಗುಣವಲ್ಲ. ಆಹಾ! ಅವಳ ರೂಪವು ಎಂತಹದುದು! ಅವಳು ಎಷ್ಟು ನಿರ್ಮಲಳು! ಎಷ್ಟು ಗಂಭೀರವಾದ ಸ್ವಭಾವವುಳ್ಳವಳು! ಅವಳ ದಯೆ, ಅವಳ ಸ್ನೇಹ ಇಷ್ಟೆಂದು ಹೇಳಲಸಾಧ್ಯ. ಎಲ್ಲರನ್ನೂ ಹೊಟ್ಟೆಯಲ್ಲಿಟ್ಟುಕೊಂಡು ಕಾಪಾಡುತ್ತಾಳೆ.

ರಾಜಾ—ನೀನು ನಿನ್ನ ಹೆಂಡತಿಯನ್ನು ಬಿಟ್ಟುಬಂದುದೇತಕ್ಕೆ?

ಪಿತಮ—ಅದನ್ನು ಹೇಳಬೇಕಾದರೆ ಬಹಳವಿದೆ. ನಾನು ಅವಳ ರೂಪಕ್ಕೆ ಮೆಚ್ಚಿ ನನ್ನನ್ನು ನಾನೇ ಮರೆತುಕೊಂಡೆ, ಒಂದೊಂದಾಗಿ ನನ್ನ ಸರ್ವಸ್ವವನ್ನೆಲ್ಲಾ ಕೊಟ್ಟೆನು, ನನ್ನ ಹುಕ್ಕೆಯನ್ನು ಕೊಟ್ಟೆ, ಅದರ ಮೇಲಿನ ಬಟ್ಟೆಯನ್ನೂ ಸಹ ಕೊಟ್ಟೆನು. ಎಷ್ಟೋ ಆದರಮಾಡಿದೆ. ಎಷ್ಟೋ ಮಾತನಾಡಿದೆ. ಪ್ರೇಮೋನ್ಮತ್ತನಾಗಿ ಕಡೆಗೆ ಒಂದುದಿನ ಅವಳಮೇಲೆ ಹಾರಿಬಿದ್ದೆ. ಆದರೆ ಅವಳು ನನ್ನನ್ನು ಪುರಸ್ಕರಿಸಲಿಲ್ಲ. ನಾನು ಎಷ್ಟು ತಡವೆ ಅವಳ ಮೈಮೇಲೆ ಬಿದ್ದರೂ ಅಷ್ಟು ತಡವೆ ಅವಳು ನನ್ನನ್ನು ಮುಟ್ಟಿ ಹಿಡಿದುಕೊಂಡು

ತಂದುದೂರದಲ್ಲಿ ಮರಳಿನಮೇಲೆ ಹಾಕಿಬಿಡುವಳು. ನಾನು ಇನ್ನೆಷ್ಟುತಾನೇ ಸಹಿಸಲಾಪೆ, ತಾವೇ ಹೇಳಿರಿ. ನಾನು ಎದ್ದು ನಿಂತುಕೊಂಡು ಚೆನ್ನಾಗಿ ಬೈದೆ; ಅವಳ ಸಂಗಡ ಕಾದಾಡಿಕೊಂಡು ಹೊರಟುಬಂದೆ. ಅವಳು ಬಹಳ ಕೆಟ್ಟ ಹೆಂಗಸು. ಸ್ವಾರ್ಥಪರಳು. ಜನರ ಸರ್ವಸ್ವವನ್ನೂ ತೆಗೆದುಕೊಂಡು ಬಚ್ಚಿಟ್ಟುಕೊಳ್ಳುತ್ತಾಳೆ. ರತ್ನವೇನು, ಮುತ್ತುಗಳೇನು, ಹವಳಗಳೇನು, ಎಷ್ಟೋ ಉಂಟು. ತಾನು ಒಂದು ದಿನವಾದರೂ ಧರಿಸಿಕೊಳ್ಳುವುದಿಲ್ಲ. ಹೀಗಿದ್ದರೂ ಜನರ ಸರ್ವಸ್ವವನ್ನೂ ತೆಗೆದುಕೊಳ್ಳಲೇತಕ್ಕೆ? ನಿಮ್ಮ ಹೆಂಡಂದಿರ ಕೈಯಿಂದ ಪಾರಾಗಬಹುದು; ಅವಳಿಂದ ತಪ್ಪಿಸಿಕೊಂಡು ಪಾರಾಗಿ ಬರುವುದು ಕಷ್ಟ. ಹಿಂದೂ ಹೆಂಗಸು ಮನೆಯನ್ನು ಮುರಿದಾಳು. ಇವಳು ಪರ್ವತವನ್ನು ಮುರಿದು ಬಡಿದುಹಾಕುತ್ತಾಳೆ. ಅವಳ ಒಳಗಿನ ಅಂತರ್ಯದಲ್ಲಿ ಏನಿದೆಯೋ ಹೇಳುವುದಕ್ಕೆ ಯಾರಿಗೆ ಸಾಧ್ಯ? ಮೇಲೆಮೇಲೆ ನಗುತ್ತಾಳೆ. ಗಟ್ಟಿಯಾಗಿ ಕಿಲಕಿಲನಗುತ್ತಾಳೆ. ಆದರೆ ಒಳಗೆ ಇರುವುದು ನನಗೆ ಮಾತ್ರ ಗೊತ್ತು. ಒಂದೊಂದುಸಲ ನನಗೆ ದಯೆಯುಂಟಾಗಿ ಹತ್ತಿರ ಕುಳಿತುಕೊಂಡಿದ್ದರೆ, ಅವಳಿಗೆ ಅಷ್ಟು ಕಷ್ಟವುಂಟಾಗುವುದಿಲ್ಲ. ಎಷ್ಟಾದರೂ ನಾನು ಗಂಡಸು.

ಈ ಸಮಯದಲ್ಲಿ ರಾಜನಸಂಗಡ ಬರುತಲಿದ್ದ ಪಾರಿಷದರಲ್ಲೊಬ್ಬನು ಪಿತಮನನ್ನು ಕುರಿತು, ನೀನು ಕೋಪಿಸಿಕೊಂಡು ಬರುವಾಗ ನಿನ್ನ ಮಡದಿಯು ನಿನ್ನನ್ನು ಸಮಾಧಾಯಿಸಿ ಹಿಂದಿರಿಗಿಸಲಿಲ್ಲವೆ? ಎಂದು ಕೇಳಿದನು.

ಪಿತಮ—ಇಲ್ಲ. ನಾನು ಪುನಃ ಹಿಂದಿರಿಗಲಿಲ್ಲ. ಅದನ್ನು ಕಂಡು ಅವಳು ಹಾಹಾಕಾರಮಾಡಲಾರಂಭಿಸಿದಳು. ನಾನು ಬಹಳದೂರ ಬಂದರೂ ನನಗೆ ಅವಳ ಹಾಹಾಕಾರಶಬ್ದವು ಕೇಳಿಸುತಲಿತ್ತು. ಈಗಲೂ ಜನರು ಹೇಳುವುದರಲ್ಲಿ ನನ್ನ ಹೆಂಡತಿಯು ವಿರಹಯಾತನೆಯಿಂದ ಇನ್ನೂ ಮೊರೆಯಿಡುತ್ತಾಳೆಂದು ಕೇಳಿದೆ.

ಪಾರಿಷದ—ಪುನಃ ಹಿಂದಿರಿಗಿ ಹೋಗು.

ಪಿತವು—ಇನ್ನು ಹೋಗುವುದಿಲ್ಲ. ಇನ್ನು ಹೋಗುವುದಕ್ಕೆ ನನಗೆ ಶಕ್ತಿಯಿಲ್ಲ. ಮುದುಕನಾದೆ, ಮಹಾರಾಜರ ಅಪ್ಪಣೆಯಾದರೆ ನಾನು ಇಲ್ಲಿಯೆ ಈ ಹುಲಿಯುಮನೆಯು ಪಾರ್ಶ್ವದಲ್ಲಿರುವ ಮನೆಯಲ್ಲಿ ವಾಸಮಾಡುವೆನು

ರಾಜಾ—ಬೇಡ. ನಮ್ಮ ಅತಿಥಿಶಾಲೆಗೆ ನಡೆ ; ಅಲ್ಲಿ ನಿನಗೆ ಯಾವ ಕಷ್ಟವೂ ಇಲ್ಲದಹಾಗೆ ಎಲ್ಲಾ ಅನುಕೂಲವನ್ನೂ ಒದಗಿಸಿಕೊಡುವಹಾಗೆ ಅಪ್ಪಣೆಮಾಡುತ್ತೇನೆ.

ಪಿತವು—ಅತಿಥಿಶಾಲೆಯು ದರಿದ್ರರಿಗೋಸ್ಕರವಿರುವುದು ; ನಾನು ಅಲ್ಲಿಗೆ ಹೋಗಲಾರೆ. ನನಗೆ ಇಲ್ಲಿಯೇ ಸ್ಥಳವನ್ನು ಕೊಡಿಸಬೇಕು. ವ್ಯಾಘ್ರ ಸಿಹ್ಮಗಳೊಂದಿಗೆ ಇದ್ದರೆ ನನ್ನ ಮರ್ಯಾದೆಯು ಹೆಚ್ಚುವುದು. ಪುನಃ ನನ್ನನ್ನು ಯಾರೂ ತಾಡನೆಮಾಡಲಾರರು

ರಾಜಾ—ಮರ್ಯಾದೆ ಬೇಕಾದರೆ ನನ್ನ ಜತೇಲಿ ಬಾ. ನಿನಗೆ ಜನರು ಮರ್ಯಾದೆಮಾಡುವಹಾಗೆ ಮಾಡುತ್ತೇನೆ. ಇಲ್ಲಿ ನಿನಗೆ ಸ್ಥಳಬೇಡ.

ಪಿತವುನು ಅದಕ್ಕೆ ಒಪ್ಪಿಕೊಳ್ಳಲಿಲ್ಲ. ಅನೇಕ ವಿಧವಾಗಿ ಕೇಳಿಕೊಂಡದ್ದರಮೇಲೆ ರಾಜನು ಅವನಿಗೆ ಅಲ್ಲಿಯೇ ಸ್ಥಳವನ್ನು ಕೊಟ್ಟನು.

ರಾಜಾ ಇಂದ್ರಭೂಪನು ಪಶುಶಾಲೆಯಿಂದ ಹೊರಗೆ ಬಂದು ತನ್ನನುಚರರನ್ನು ಕುರಿತು, ಮರೆತೆ, ಆ ಹುಚ್ಚನ ಹೆಸರೇನೆಂದು ಕೇಳಿದನು. ಅನುಚರರಲ್ಲೊಬ್ಬನು ಅವನ ಹೆಸರು ಪೀತಾಂಬರನೆಂದು ಹೇಳಿದನು. ರಾಜನು ಅನ್ಯಮನಸ್ಕನಾಗಿ ಸ್ವಲ್ಪದೂರ ಹೋಗಿ ಹಿಂದಿರಿಗಿ ನಿಂತುಕೊಂಡು ಅನುಚರರನ್ನು ನೋಡುತ್ತ, ಎಂತಹ ಆಶ್ಚರ್ಯವಾದ ಹುಚ್ಚ ! ಎಂದನು. ಎಲ್ಲರೂ ಏಕವಾಕ್ಯವಾಗಿ, ಹೌದು, ಮಹಾಸ್ವಾಮಿ ! ಎಂದರು. ಚೂಡಾಧನ ಬಾಬುಮಾತ್ರ ಏನೂ ಹೇಳಲಿಲ್ಲ. ರಾಜನು ಪುನಃ ಸ್ವಲ್ಪದೂರ ಹೋಗೋಗುತ್ತ ಮಧ್ಯೆ ನಿಂತು ಅನುಚರರನ್ನು ಕುರಿತು, ಇಷ್ಟು ಬಳೊಳ್ಳ

ಸ್ಥಳಗಳಿದ್ದರೂ ಅದನ್ನೆಲ್ಲಾ ಬಿಟ್ಟು ಹುಲಿಯ ಪಾರ್ಶ್ವದಲ್ಲಿರುವುದಕ್ಕೆ ಇಳಿಸುವವನಿಗಿಂತಲೂ ಇನ್ನು ಹುಚ್ಚನುಂಟೆ? ಈ ಹುಚ್ಚನಿಗೆ ಹುಲಿಯ ಪಾರ್ಶ್ವದಲ್ಲಿ ವಾಸಮಾಡುವುದಕ್ಕೆ ಇಷ್ಟು ಆಶೆ ಏತಕ್ಕೆ ಇರಬಹುದೆಂದು ಕೇಳಿದನು. ಈ ಸಮಯದಲ್ಲಿ ಹಿಂದಲಿಂದ ಒಬ್ಬನು, ಪಿತಮನು ಒಬ್ಬನೇ ಅಲ್ಲ, ಮಹಾರಾಜರೂ ಹುಲಿಯನ್ನು ಕಂಡರೆ ಆಶೆಯುಳ್ಳವರಾಗಿದ್ದಾರೆ. ತಮ್ಮ ಕೈಲಿರುವ ಕೋಲಿನ ಹಿಡಿಯಲ್ಲಿ ಹುಲಿಯ ಮುಖವೇ ಇದೆಯೆಂದನು. ಇಂದ್ರ ಭೂಪನು ಮೊದಲು ಆಗಂತುಕನನ್ನು ನೋಡದೆ ಕೈಲಿದ್ದ ಕೋಲಿನ ಹಿಡಿಯನ್ನು ನೋಡಿದನು. ಆಗಂತುಕನು, ಮಹಾರಾಜ! ಮುಖವು ಬಂಗಾರದುದಾಗಿದೆ. ಹುಲಿಯು ತಮ್ಮಲ್ಲಿ ಸ್ವರ್ಣಮುಖವುಳ್ಳದ್ದಾಗಿದೆಯೆಂದನು.

ಎಲ್ಲರೂ ಹಿಂದಿರಿಗಿ ನೋಡಲಾಗಿ ಹುಚ್ಚ ಪಿತಮನು ಬಂದಿದ್ದನು. ರಾಜನು, ಇದೇನು, ಪುನಃ? ನೀನು ಓಡಿಬಂದು ಬಿಟ್ಟೆ? ಎಂದು ಕೇಳಿದನು.

ಪಿತಮ—ನಾನೇ ಓಡಿಬರಲಿಲ್ಲ. ನನ್ನನ್ನು ಹೊಡದು ಅಟ್ಟಿದರು. ರಕ್ಷಕರು ದುಡ್ಡು ಕೊಡೆಂದು ಕೇಳಿದರು. ನಾನು ಹುಲಿಯ ಹಾಗೆ ತರ್ಜನೆ ಗರ್ಜನೆ ಮಾಡಿ ಅವರ ಮೈಮೇಲೆ ಬೀಳುವುದಕ್ಕೆ ಹೋದೆ. ಅವರು ನನ್ನನ್ನು ಹೊಡಿದು ಓಡಿಸಿದರು.

ರಾಜಾ—ನೀನು ನಿಜವಾಗಿಯೂ ಹುಚ್ಚನೆ? ಹೇಳು, ನೋಡೋಣ.

ಪಿತಮ—ಹೌದು, ಮಹಾಸ್ವಾಮಿ! ನಾನು ಹುಚ್ಚ, ಹುಚ್ಚ ಪಿತಮ.

ರಾಜಾ—ಹುಚ್ಚ, ಅಂದರೆ ಗೊತ್ತುಂಟೆ?

ಪಿತಮ—ಗೊತ್ತುಂಟು. ನನ್ನನ್ನು ಹುಚ್ಚನೆಂದು ಹೇಳುತ್ತಾರೆ.

ರಾಜಾ—ಹುಚ್ಚ ಅಂದರೆ ಅರ್ಥವೇನು ?

ಪಿತಮ—ಅರ್ಥ, ಪಿತಮ—ಅಂದರೆ ನಾನು.

ಒಬ್ಬ ಭಟ್ಟಾಚಾರ್ಯ—ಪಶುಶಾಲೆಗೆ ಪುನಃ ಹೋಗುವುದಿಲ್ಲವೆ ?

ಪಿತಮ—ಇಲ್ಲ—ಅಲ್ಲಿ ಹೊಡಿಯುತ್ತಾರೆ.

ರಾಜನು ಹಿಂದಿರುಗಿದನು. ಪಶುಶಾಲೆಗೆ ಹೋಗಿ ಇಬ್ಬರು ಮೂವರು ರಕ್ಷಕರನ್ನು ಕೆಲಸದಿಂದ ತಪ್ಪಿಸಿ ಯಜಮಾನನನ್ನು ತಕ್ಕಂತೆ ದಂಡಿಸಿದನು. ಪಿತಮನು ಪುನಃ ಪಂಜರದೊಳಕ್ಕೆ ಹೋದನು.

---

## ನಾಲ್ಕನೆಯ ಪರಿಚ್ಛೇದ.

ಈ ಸಮಯದಲ್ಲಿ ಎಲ್ಲರೂ ತಮ್ಮತಮ್ಮ ಮನಸ್ಸಿನಲ್ಲಿ ಪಿತಮನ ಮಾತು ಕಥೆಗಳನ್ನು ಕುರಿತು ಆಲೋಚಿಸುತಲಿದ್ದರು ಚೂಡಾಧನನು, ಪಿತಮನು ನಿರ್ಬೋಧನಲ್ಲ, ಸಮಯವರಿತು ಕೆಲಸವನ್ನು ಮಾಡುತ್ತಾನೆ. ಪಿತಮನು ಚೆನ್ನಾಗಿ ಯೋಚಿಸಿ ಒಳ್ಳೊಳ್ಳೆ ಉಪಾಯಗಳನ್ನು ಮಾಡುತ್ತಾನೆ. ಆಶ್ರಯ ಮತ್ತು ಆಹಾರ ಹೊರತು ಹುಚ್ಚನಿಗೆ ಮತ್ತೇನು ಆವಶ್ಯಕವಾದುದು? ಯಾರು ತನ್ನ ಪ್ರಯೋಜನಾಂಶವನ್ನು ಸಾಧಿಸಿಕೊಳ್ಳುತ್ತಾನೋ ಅಂತಹವನನ್ನು ಹುಚ್ಚನೆಂದು ಹೇಳುವುದು ಹೇಗೆ? ಅಂತಹವನು ನಿರ್ಬೋಧನಾದಾನು ಹೇಗೆ? ಪಿತಮನು ನನಗಿಂತಲೂ ಹೆಚ್ಚು ಬುದ್ಧಿವಂತನು. ನಾನು ಇದುವರೆಗೂ ನನ್ನ ಕಾರ್ಯವನ್ನು ಸಾಧನಮಾಡಿಕೊಳ್ಳಲಾರದೆ ಹೋದೆನು. ಪಿತಮನು ಹುಚ್ಚನಾದರೂ ತನ್ನ ಕಾರ್ಯವನ್ನು ನೆರವೇರಿಸಿಕೊಂಡನು. ನನ್ನ ಸ್ವಂತ ಉದಾಸೀನದಿಂದ ನನ್ನ ಎಲ್ಲಾ ಕೆಲಸಗಳನ್ನೂ ನಷ್ಟಮಾಡಿಕೊಂಡೆನೆಂದು ಯೋಚಿಸಿಕೊಂಡನು.

ಧನಂಜಯ ಭಟ್ಟಾಚಾರ್ಯನು ಮನಸ್ಸಿನಲ್ಲಿ, ಪಿತಮನು ಎಂತಹ ಉನ್ಮಾದಗ್ರಸ್ತನು! ಇಷ್ಟು ಬೇರೆ ಸ್ಥಳಗಳಿದ್ದರೂ ಹುಲಿಯ ಪಾರ್ಶ್ವದಲ್ಲಿ ವಾಸಮಾಡುವುದಕ್ಕೆ ಹೋದನು. ಮಹಾರಾಜನು ಅತಿಥಿಶಾಲೆಯಲ್ಲಿ ಸ್ಥಳವನ್ನು ಕೊಡಲೊಪ್ಪಿದನು; ತನ್ನ ಸಮೀಪದಲ್ಲಿಟ್ಟುಕೊಂಡಿರುವುದಕ್ಕೊಪ್ಪಿದನು. ಆದರೂ ಆದವನಿಗೆ ಸಮ್ಮತವಾಗಲಿಲ್ಲ. ಯಾರು ಸಮುದ್ರವನ್ನು

ವಿವಾಹಮಾಡಿಕೊಂಡಿದ್ದೇನೆಂದು ತಿಳಿದಿದ್ದಾನೋ, ಅಂತಹವನು ಹೀಗೆ ಆಚರಿ ಸುವುದೇನು ಆಶ್ಚರ್ಯವೆಂದಂದುಕೊಂಡನು.

ದ್ವಾರಪಾಲಕರಾವಮದಿನನು ಮನಸ್ಸಿನಲ್ಲಿ, ಹುಚ್ಚನು ಏನು ತಿನ್ನು ವನು? ರೊಟ್ಟಿಯಾಗಲಿ ಅನ್ನವಾಗಲಿ ಅವನಿಗೆ ಯಾರೂ ಕೊಡರು. ರಾಜನು ಅವನ ಊಟದ ವಿಚಾರದಲ್ಲಿ ಏನು ಏರ್ಪಾಡನ್ನೂ ಮಾಡಿಲ್ಲ. ಹುಚ್ಚನು ಕಡೆಗೆ ಹಸಿಕಡ್ಲೆ ತಿನ್ನಬೇಕು. ಅದರಿಂದ ನಷ್ಟವೇನು? ಬರೆಹೊಟ್ಟೆಗೆ ಕಡ್ಲೆ ಸಿಕ್ಕಿದರೆ ಎಷ್ಟೋವಾಸಿ. ಅದರೊಂದಿಗೆ ಮೂರುನಾಲ್ಕುಸೇರು ಹಾಲು ಕೊಟ್ಟರೆ ಇನ್ನೇನು ಬೇಕಾದಿತು? ಇಂತಹ ಊಟಸಿಕ್ಕುವುದಾದರೆ ನಾನೂ ಚಾಕರಿಯನ್ನು ಬಿಟ್ಟು ಅಲ್ಲಿ ಹೋಗಿ ಇರುವೆನೆಂದಂದುಕೊಂಡನು.

ರಾಜಾ ಇಂದ್ರಭೂಪನೂ ಪಿತಮನ ಸಮಾಚಾರವನ್ನೇ ಯೋಚಿಸು ತಲಿದ್ದನು. ಅವನ ಮನಸ್ಸಿನಲ್ಲಿ ಪಿತಮನ ಸಂಬಂಧವು ಜ್ಞಾಪಕಕ್ಕೆ ಬಂ ದೂ ಬಾರದ ಹಾಗಿರುವುದು. ಮನಸ್ಸಿನಲ್ಲಿ ಪಿತಮನ ಛಾಯೆಯು ಇದ್ದ ಹಾಗೆ ಕಾಣುವುದು. ನೋಡುವುದಕ್ಕೆ ಹೋದರೆ ಏನೂ ಗೊತ್ತಾಗುತ್ತಿರ ಲಿಲ್ಲ. ರಾಜನು ಮನಸ್ಸಿನಲ್ಲಿ, ಪಿತಮನು ಯಾರು? ಇವನನ್ನು ನಾನು ಯಾವಾಗಲಾದರೂ ನೋಡಿದ್ದೇನೆಯೆ? ಯಾವಾಗ ನೋಡಿದ್ದೇನು? ಬಾಲ್ಯ ದಲ್ಲಿಯೆ ಅಥವಾ ಯೌವನದಲ್ಲಿಯೆ ನೋಡಿರುವುದು? ನಾನು ಎಷ್ಟೋ ಜನ ರನ್ನು ನೋಡಿದ್ದೇನೆ. ಅವರನ್ನು ಪುನಃ ನೋಡಿದರೆ ಇವನನ್ನು ನೋಡಿದ ಹಾಗೆ ಜ್ಞಾಪಕವು ಉದ್ರೇಕವಾಗುವುದಿಲ್ಲ. ಸ್ಮರಣೆಯಿಲ್ಲದಿದ್ದರೆ ಹೀಗೆ ಮನಸ್ಸಿಗೆ ವ್ಯಾಕುಲವುಂಟಾಗುವುದಿಲ್ಲ. ಇವನ ಹೆಸರು ಪಿತಮು, ಪೀತಾಂ ಬರ. ಇವನಿಗೆ ಮತ್ತಾವುದಾದರೂ ಹೆಸರು ಉಂಟೆ? ಯಾವ ಹೆಸರು ಇತ್ತು? ಈ ಮನುಷ್ಯ ಯಾರು? ನಿಜವಾಗಿಯೂ ಇವನು ಹುಚ್ಚನೆ? ಇವನ ಮಾತುಕಥೆಗಳೇನೋ ಅಸಂಗತವಾಗಿವೆ. ಆದರೆ ಅಸಂಲಗ್ನವಾಗಿಲ್ಲ. ಹುಚ್ಚನಮಾತು ಹೀಗೆ ಇರದು. ಪಿತಮನಿಗೆ ಜ್ಞಾನವಿದೆ. ಅವನು ಹುಚ್ಚ

ನೆಂದು ತೋರುವುದಿಲ್ಲವೆಂದಂದುಕೊಂಡನು.

ಜ್ಞಾನವಿದ್ದರೂ ಹುಚ್ಚನಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಅನೇಕ ಸಮಯದಲ್ಲಿ ಹುಚ್ಚನೆಂಬ ಶಬ್ದಕ್ಕೆ ಕೆಲವು ಅಂಶಗಳಲ್ಲಿ ಜ್ಞಾನವುಳ್ಳವನೆಂದು ಅರ್ಥವಾಗುತ್ತದೆ. ಈಗ ಮಾಧು ಎಂಬುವನು ಭಿಕ್ಷೆಮಾಡುತ್ತಾನೆ, ತಂದುದನ್ನು ಅಡಿಗೆಮಾಡುತ್ತಾನೆ, ಅಡಿಗೆಯಾದುದನ್ನು ಊಟಮಾಡುತ್ತಾನೆ, ಭಯಪಡುತ್ತಾನೆ. ಇಷ್ಟಾದರೂ ಜನರು ಅವನನ್ನು ಹುಚ್ಚನೆಂದು ಹೇಳುತ್ತಾರೆ. ಭಯಪಡತಕ್ಕವನಿಗೆ ಅದರ ಪರಿಣಾಮವು ಬೋಧೆಯುಂಟಾಗುತ್ತದೆ. ಪರಿಣಾಮವನ್ನರಿಯುವವನು ಶುದ್ಧವಾಗಿ ಜ್ಞಾನಶೂನ್ಯನೆಂದು ಹೇಳುವುದಕ್ಕಾಗುವುದಿಲ್ಲ. ಅಭಯನೆಂಬುವನು ಪುಷ್ಪವನ್ನು ತೋಟದಿಂದ ಎತ್ತಿಕೊಂಡು ಬಗುತ್ತಾನೆ, ಪೂಜೆಮಾಡುತ್ತಾನೆ, ಚದುರಂಗವನ್ನು ಆಡುತ್ತಾನೆ. ಅಂತಹನನನ್ನೂ ಜನರು ಹುಚ್ಚನೆನ್ನುತ್ತಾರೆ. ಸೀತಾರಾಮನು ತನ್ನ ಭೂಮಿಯ ಕಂದಾಯವನ್ನು ಬರಮಾಡಿಕೊಳ್ಳುತ್ತಾನೆ, ಹಣಕೊಟ್ಟು ತೆಗದು ಲೇವಾದೇವಿ ಮಾಡುತ್ತಾನೆ, ಲೆಕ್ಕಾಚಾರ ಮಾಡುತ್ತಾನೆ, ತರ್ಕಮಾಡುತ್ತಾನೆ. ಅವನೂ ಜನರಲ್ಲಿ ಹುಚ್ಚನಾಗಿದ್ದಾನೆ. ಇವರಿಗೆಲ್ಲಾ ಸ್ವಲ್ಪಸ್ವಲ್ಪ ಜ್ಞಾನವಿದ್ದೇ ಇರಬೇಕು. ಹಾಗಿದ್ದರೂ ಇವರನ್ನೆಲ್ಲಾ ಜನರು ಹುಚ್ಚರೆಂದು ಹೇಳಲೇತಕ್ಕೆ ?

ಸಾಧಾರಣವಾಗಿ ಸಕಲ ವಿಷಯದಲ್ಲಿಯೂ ಯಾವ ಪರಿಮಾಣದಲ್ಲಿ ಜ್ಞಾನವಿರಬೇಕೋ ಆ ಪರಿಮಾಣದಲ್ಲಿ ಯಾವದಾದರೂ ಒಂದು ವಿಷಯದಲ್ಲಿ ಜ್ಞಾನವು ಕಡಮೆಯಾಗಿದ್ದರೆ ಅಂತಹ ಜ್ಞಾನಕಡಮೆಯಾದವರನ್ನು ಜನರು ಹುಚ್ಚರೆಂದು ಹೇಳುತ್ತಾರೆ. ಅಂದರೆ, ಜ್ಞಾನದ ಸಾಮಂಜಸ್ಯವಿಲ್ಲದಿದ್ದರೆ ಜನರು ಹುಚ್ಚನೆಂದು ಹೇಳುತ್ತಾರೆ. ಕಡೆಗೆ ಎಲ್ಲರೂ ಹೇಳದಿದ್ದರೂ ಕೆಲವರಾದರೂ ಹಾಗೆ ಹೇಳುತ್ತಾರೆ. ಹುಡುಗರು ಬೆತ್ತಲೆಯಾಗಿ ಓಡಾಡುತ್ತಾರೆ. ಯಾರೂ ಅವರನ್ನು ಹುಚ್ಚರೆಂದು ಹೇಳುವುದಿಲ್ಲ. ಹುಡುಗರಿಗೆ ಬೇರೆ

ವಿಷಯಗಳಲ್ಲಿ ಯಾವ ಜ್ಞಾನವಿದೆಯೋ ಈ ವಿಷಯದಲ್ಲಿಯೂ ಅದೇ ಜ್ಞಾನವಿದೆ. ಅದು ಕಾರಣ ಯಾರೂ ಹುಡುಗರನ್ನು ಹುಚ್ಚರೆಂದು ಹೇಳುವುದಿಲ್ಲ. ಹುಚ್ಚನಾದ ಅಭಯನು ಚತುರಂಗವನ್ನಾಡುತ್ತಾನೆ; ಸಾಂಸಾರಿಕವಾದ ಕಾರ್ಯಗಳನ್ನೆಲ್ಲಾ ಮಾಡುತ್ತಾನೆ, ಆದರೆ ನೀರು ಎಲ್ಲಿದೆ? ಎಂಬ ಮಾತು ಅವನ ಕಿವಿಗೆ ಬಿದ್ದರೆ ಬೈಯುವದಕ್ಕೆ ಪ್ರಾರಂಭಿಸಿ, ಚೀತ್ಕಾರಮಾಡುತ್ತಾನೆ. ಚತುರಂಗದ ಆಟದಲ್ಲಿ ಅಥವಾ ಸಾಂಸಾರಿಕವಾದ ಕಾರ್ಯಗಳಲ್ಲಿ ಅವನು ತೋರ್ಪಡಿಸುವ ಜ್ಞಾನವು ಈ ಸ್ಥಳದಲ್ಲಿ ತೋರ್ಪಡುವುದಿಲ್ಲ. ಅದು ಕಾರಣ ಜ್ಞಾನಸಂಬಂಧದಲ್ಲಿ ಸಾಮಂಜಸ್ಯಸಾಲದೆಂದು ಜನರು ಅವನನ್ನು ಹುಚ್ಚನೆನ್ನುತ್ತಾರೆ.

ಈಗ ಹತ್ತುಸಾವಿರ ವರುಷಗಳಿಗೆ ಮೊದಲು ಜ್ಞಾನಸಾಮಂಜಸ್ಯವಿರಲಿಲ್ಲವೆಂದು ಹೇಳಬಹುದಷ್ಟೆ. ಆ ಕಾಲದ ಜನರು ಆ ಅಸಾಮಂಜಸ್ಯವು ತಮ್ಮಲ್ಲಿತ್ತೆಂದು ತಿಳಿದುಕೊಳ್ಳುತ್ತಿರಲಿಲ್ಲ. ಯಾರೂ ಯಾರನ್ನೂ ಹುಚ್ಚರೆಂದು ಹೇಳುತ್ತಿರಲಿಲ್ಲ. "ಹುಚ್ಚ" ಎಂಬುದು ಹೊಸಬೈಗಳು ಸಾಮಂಜಸ್ಯವುಂಟಾದಮೇಲೆ ಆ ಶಬ್ದವು ಹುಟ್ಟಿ ಬೈಗಳಾಗುವುದಕ್ಕೆ ಪ್ರಾರಂಭವಾಗಿದೆ. ಕೇವಲ ಆದಿಮಕಾಲದಲ್ಲಿದ್ದ ಅಸಾಮಂಜಸ್ಯವನ್ನು ಈಗ ನಾವು ನೋಡಿದರೆ ಅದೆಲ್ಲಾ ಹುಚ್ಚಾಟವೆಂದು ಹೇಳುವವರಾಗಿದ್ದೇವೆ. ಕಡೇಪಕ್ಷ ಅದೆಲ್ಲಾ ನಮಗೆ ಆಶ್ಚರ್ಯಕರವಾಗಿರುವುವು.

ಈಗ ವರ್ತಮಾನಕಾಲದಲ್ಲಿ ನಮ್ಮಲ್ಲಿ ಕಾಡುಬರುವ ಅಸಾಮಂಜಸ್ಯವು ಶುದ್ಧವಾಗಿ ಸಾಮಂಜಸ್ಯವಾಗಿಲ್ಲ. ಯಾರು ಹೊಗೆಯಂತ್ರಗಳನ್ನು ಮಾಡುತ್ತಾರೋ, ಚಂದ್ರಸೂರ್ಯರ ಗತಿಯನ್ನು ಗಣನೆಮಾಡುತ್ತಾರೋ, ಭಾಷ್ಪದಿಂದ ನೀರನ್ನು ಸೃಷ್ಟಿಸತಕ್ಕವರೆಂದೆಣಿಸಿಕೊಂಡಿರುತ್ತಾರೋ, ಅಂತಹವರೇ ಮಳೆಗೋಸ್ಕರ ದೈವಪ್ರಯತ್ನವನ್ನಪೇಕ್ಷಿಸುತ್ತಾರೆ. ಮಾರಿಕಾದಿ ಸಾಂಕ್ರಮಿಕರೋಗ, ಕ್ಷಾಮಾದಿಗಳು ಬಂದರೆ ಅವುಗಳ ನಿವಾರಣ

ಕ್ರೋಸ್ಪರ, ನಡೇರಿ, ಧರ್ಮಮಂದಿರಗಳಿಗೆ ಹೋಗಿ ಪ್ರಾರ್ಥನೆಮಾಡೋಣ, ಕ್ಷಾಮರೋಗಾದಿಗಳು ನಿವಾರಣವಾಗುವುದೆಂದು ಹೇಳುತ್ತಾರೆ. ಇಂತಹ ಬುದ್ಧಿಯ ವೈಷಮ್ಯವನ್ನು ನೋಡಿ ಈಗ ಯಾರೂ ಅದನ್ನು ಅಸಂಗತವಾದುದೆಂದು ಹೇಳುವುದಿಲ್ಲ ಆದರೆ ಮುಂವಕ್ಕೆ ಹೇಳುವರಲ್ಲದೆ ಇಂತಹ ಬುದ್ಧಿವಂತರನ್ನೂ ಜನರು ಹುಚ್ಚರೆಂದು ಹೇಳುವರು.

ಈ ಅರ್ಥದಲ್ಲಿ ಈಗ ನಾವೆಲ್ಲರೂ ಹುಚ್ಚರೇ ಹೌದು. ಬುದ್ಧಿಯ ವೈಷಮ್ಯ ಅಥವಾ ಜ್ಞಾನದ ಅಸಾಮಂಜಸ್ಯವು ಎಲ್ಲರಿಗೂ ಇದ್ದೇಇದೆ. ಆದರೆ ಯಾರೂ ಎಲ್ಲರನ್ನೂ ಹುಚ್ಚರೆಂದು ಹೇಳುವುದಿಲ್ಲ. ಹುಚ್ಚ ಎಂಬುದು ರೂಢವಾದ ಮಾತು. ಹಾಗಾದರೆ ನಿರ್ಬೋಧ ಎಂದರೂ, ಸ್ವಾರ್ಥಪರ ಎಂದರೂ, ದಾಂಭಿಕ ಎಂದರೂ, ಕೃಪಣ ಎಂದರೂ, ನಿಷ್ಠುರ ಎಂದರೂ, ಹಿಂಸ್ರಕ ಎಂದರೂ ಎಲ್ಲಾ ಒಂದೇಮಾತು. ಅವೆಲ್ಲಾ ಬುದ್ಧಿಯ ವಿಕೃತವಾಚಕಗಳು, ಹುಚ್ಚತನದ ಪರಿಚಾಯಕವಾದುವು. ಹುಚ್ಚ ಎಂದು ಸಂಪೂರ್ಣವಾಗಿ ನಾಮಕರಣಮಾಡಬೇಕಾದರೆ ಈಗಲೂ ಇನ್ನೂ ಅನೇಕ ಲಕ್ಷಣಗಳು ಬೇಕಾಗಿ ಉಳಿದಿದೆ.

ಪಿತಮನಿಗೆ ತಾನು ಹುಚ್ಚನೆಂಬುವದು ತಿಳಿಯದು. ಬುದ್ಧಿಯಲ್ಲಿ ಇತರರು ಯಾವ ಪ್ರಕಾರ ಇದ್ದಾರೋ ತಾನೂ ಅದೇಪ್ರಕಾರವಾಗಿದ್ದೇನೆಂದು ತಿಳಿದಿದ್ದನು. ಇದು ಪಿತಮನ ನಂಬುಗೆ. ಯಾವ ಅಂಶದಲ್ಲಿ ಏನು ವ್ಯತಿಕ್ರಮವೋ ಅವನದನ್ನು ಅರಿಯನು. ಅವನು ಹುಚ್ಚ ಎಂಬುದು ತನ್ನ ಹೆಸರಿನ ಒಂದಂಶವೆಂದೂ, ಅದಕ್ಕೋಸ್ಕರ ಜನರು ತನ್ನನ್ನು ಹುಚ್ಚಪಿತಮನೆಂದು ಕರೆಯುತ್ತಾರೆಂದೂ ತಿಳಿದುಕೊಂಡಿದ್ದನು.

ಪಶುಶಾಲೆಯಲ್ಲಿ ಲೋಹಪಂಜರದಲ್ಲಿ ಸ್ಥಾನವನ್ನು ಹೊಂದಿ ಪಿತಮನು ಶಯನಮಾಡಿದನು. ಶಯನವೆಂದರೆ ಅನೇಕ ಸಮಯದಲ್ಲಿ ತೃಪ್ತಿವಾಚಕ.

ಇಂದ್ರಭೂಪನು ನೋಡಲಾಗಿ ಪಿತಮನು ಅವನನ್ನು ಲಕ್ಷ್ಯಮಾಡ

ಲಿಲ್ಲವೆಂಬು ಗೊತ್ತಾಯಿತು. ರಾಜನು ನಕ್ಕನು. ಪಿತಮನೂ ನಕ್ಕನು. ರಾಜನು ಪಿತಮನನ್ನು ಕುರಿತು, ನೀನು ನನ್ನನ್ನು ಜ್ಞಾಪಿಸಿಕೊಂಡಿದ್ದೀಯಾ? ಎಂದು ಕೇಳಿದನು.

ಪಿತಮು—ಇಂದು ಮಹಾರಾಜರವರ ಪಶುಶಾಲೆಯು ಸಂಪೂರ್ಣವಾಯಿತು.

ರಾಜಾ—ಹೇಗೆ?

ಪಿತಮು—ನನ್ನಿಂದ; ನಾನು ಮನುಷ್ಯ ಪಶು. ಬಂದು ಪ್ರಕಾರವಾಗಿ ನರಸಿಹ್ಮ. ಅಂದರೆ, ನೃಸಿಹ್ಮದೇವರು. ಆ ರಾಜನು ನೃಸಿಹ್ಮದೇವನನ್ನು ಪಂಜರದೊಳಗೆ ಕಳುಹಿಸಲಾರದೆ ಹೋದನು. ನೀನು ಕಳುಹಿಸಲು ಸಮರ್ಥನಾದೆ. ನೀನೇ ಜಯಶಾಲಿ. ಮಹಾರಾಜರಿಗೆ ಜಯವಾಗಲಿ! ಈ ಅವತಾರದಿಂದ ನಾನು ಬಹಳ ಸುಖಿಯಾದೆನು. ಭಕ್ತನನ್ನು ರಕ್ಷಿಸಲಾರದೆ ಹೋದೆ. ಭಕ್ತನೇ ನನ್ನನ್ನು ರಕ್ಷಿಸಿದ ಹಾಗಾಯಿತು. ವರವನ್ನು ಬೇಡು. ರಾಜನೆ! ವರವನ್ನು ಕೊಡುತ್ತೇನೆ. ತಥಾಸ್ತು. ಈಗ ಮನೆಗೆ ಹೋಗು. ನಾನು ನಿದ್ರೆಯುಂಗೈಯುವೆನು

ರಾಜಾ—ನೃಸಿಂಹದೇವ! ನಿನ್ನ ಪ್ರಹ್ಲಾದನು ಯಾರು?

ಪಿತಮು—ನೀನೇ ನನ್ನ ಪ್ರಹ್ಲಾದ. ನೀನೇ ನನ್ನ ಭಕ್ತ.

ರಾಜಾ—ಇನ್ನು ನಿನ್ನ ರಾಜಾ ಹಿರಣ್ಯಕಶಿಪು ಯಾರು?

ಪಿತಮು—(ಚೂಡಾಧನಬಾಬುವನ್ನು ತೋರಿಸಿ) ಇವನೇ ನನ್ನ ಹಿರಣ್ಯಕಶಿಪು.

ರಾಜಾ—ಚೂಡಾಧನನು ರಾಜನಲ್ಲವಷ್ಟೆ.

ಪಿತಮು—ಶೀಘ್ರವಾಗಿ ಆಗುವನು.

ಹಠಾತ್ ರಾಜನೂ ಚೂಡಾಧನನೂ ನಡುಗಿದರು. ರಾಜನಿಗೆ ಏನೋ ಬಂದು ಭಯವುಂಟಾಗಿ ಹೃತ್ಕಂಪವಾಯಿತು. ಆದರೆ ಕೂಡ್ಲೆ ಅದು ಹೋ

ಯಿತು. ಒಂದುಸಲ ರಾಜನು ಮನಸ್ಸಿನಲ್ಲಿ, ಹುಚ್ಚನು ಇದ್ದಕಿದ್ದ ಹಾಗೆ ಅಶುಭವನ್ನು ನುಡಿವನೇತಕ್ಕೆಂದಂದುಕೊಂಡನು. ಉತ್ತರಕ್ಷಣದಲ್ಲಿಯೇ ಹುಚ್ಚನ ಮಾತು. ನನಗೆ ಸಂತಾನವಿರುವಾಗ ಚೂಡಾಧನನು ಹೇಗೆ ರಾಜ ನಾಗುವುನು ? ಚೂಡಾಧನನಿಗೆ ಮಂಗಳವಾಗಲಿ; ನನ್ನ ಚಂದ್ರನ ಹಾಗಿರುವ ಮಗನೂ ಚಿರಜೀವಿಯಾಗಿರಲೆಂದಂದುಕೊಂಡನು.

ಚೂಡಾಧನನ ಚಾಂಚಲ್ಯವನ್ನು ಯಾರೂ ನೋಡಲಿಲ್ಲ. ಅವನ ಕಣ್ಣುಗಳು ಭಯಪಟ್ಟವನ ಹಾಗೆ ವಿಸ್ಫಾರಿತವಾಗಿ ಕೂಡ್ಲೆ ಮೊದಲಿನಹಾಗೆ ಸಾಮಾನ್ಯದೃಷ್ಟಿಯುಳ್ಳವುಗಳಾಗಿ ಶಾಂತಮೂರ್ತಿಯಾದನು.

---

## ಐದನೆಯ ಪರಿಚ್ಛೇದ.

ರಾಜಾ ಇಂದ್ರಭೂಪನು ಪಶುಶಾಲೆಯಿಂದ ಹೊರಟು ಅನ್ಯಮನಸ್ಕ ನಾಗಿ ಅತಿಥಿಶಾಲೆಯ ಕಡೆ ಹೊರಟನು. ಮುಂದುಗಡೆ ಇಬ್ಬರು ಭೋಜಪುರದ ಜಟ್ಟಿಗಳು ಕದದಹಾಗೆ ಅಗಲವಾದ ಉಬ್ಬಿದ ಎದೆಯನ್ನು ಮುಂದುಮಾಡಿ ಕೊಂಡು ತಲೆಯನ್ನು ಅಲ್ಲಾಡಿಸುತ್ತ ಕತ್ತಿ, ಗುರಾಣಿಗಳನ್ನು ಕೈಯಲ್ಲಿ ಹಿಡಿದುಕೊಂಡು ಹೋಗುತಲಿದ್ದರು. ಅವರಿಗೆ ಇಪ್ಪತ್ತು ಮಾರುದೂರ ಹಿಂದೆ ಸ್ವಯಂರಾಜಾ. ಆತನ ಹಿಂದುಗಡೆ ಹನ್ನೆರಡು ಮಂದಿ ಅಧ್ಯಾಪಕರು, ರಾಜ ಪುರೋಹಿತ ಮತ್ತು ಚೂಡಾಧನಬಾಬು. ಅವರಹಿಂದೆ ರಾಜಚಿಕಿತ್ಸಕ, ಜಾತಿ ಯಲ್ಲಿ ವೈದ್ಯ. ಅನಂತರ ಖಜಾನೆಗುಮಾಸ್ತೆ-ಅವನು ಕಾಯಸ್ಥಜಾತಿಯವನು. ಅನಂತರ ಒಬ್ಬ ಆಚಾರ್ಯನು ಡಮರಾಕೃತಿಯುಳ್ಳ ವಾಲುಕಾಕ್ಷರಿತ ಘಟಿಕಾ ಯಂತ್ರವನ್ನು (Hourglass) ಎರಡುಕೈಯಿಂದ ಎತ್ತಿಕೊಂಡು ಏಕಾಗ್ರ ಚಿತ್ತದಿಂದ ಮರಳು ಜರಿದು ಬೀಳುವುದನ್ನು ನೋಡಿಕೊಂಡು ನಡೆಯುತಲಿ ದ್ದನು. ಆಚಾರ್ಯನಹಿಂದುಗಡೆ ಪರಿಚಾರಕರು, ಕೆಲವರ ಕೈಯಲ್ಲಿ ಛತ್ರಿ,

ಕೆಲವರ ಕೈಯಲ್ಲಿ ಪೀಕದಾನು, ಕೆಲವರ ಕೈಯಲ್ಲಿ ಪಾನದಾನು, ಹೀಗೆ ಹೋಗುತಲಿದ್ದರು. ಎಲ್ಲರಿಗೂ ಹಿಂದೆ ಬಂದು ಸುಂದರವಾದ ಪಲ್ಲಕ್ಕಿಯನ್ನು ಬೋಯಿಗಳು ಹೆಗಲುಮೇಲೆ ಹೊತ್ತುಕೊಂಡು ಹೋಗುತ್ತಿದ್ದರು. ಎರಡು ಪಾರ್ಶ್ವದಲ್ಲಿಯೂ ನಾಲ್ಕೈದು ಜನ ರಕ್ಷಕರು ದೊಣ್ಣೆ ಸೋಟಾ ಹಿಡಿದು ಕೊಂಡು ಬರೆ ಪಲ್ಲಕ್ಕಿಯನ್ನು ಬವರಿಕೆಯಿಂದ ನೋಡಿಕೊಂಡು ಹೋಗುತ ಲಿದ್ದರು.

ರಾಜನ ಉಡುಪು ಅತಿ ಸಾಮಾನ್ಯವಾಗಿತ್ತು. ಮಣಿ ಮುತ್ತು ಮುಂ ತಾದುವು ಯಾವದೂ ಇಲ್ಲ. ಜರಿತಾರಿ ಪೇಟಾ ಮುಂತಾದ ಆಡಂಬರವಿಲ್ಲ. ಅಧ್ಯಾಪಕರಂಹಾಗೆ ಸಾಮಾನ್ಯವಾದ ಪಟ್ಟುವಸ್ತ್ರವನ್ನು ತ್ರಿಕಚ್ಛವಾಗಿ ಉಟ್ಟಿ ದ್ದನು. ಭುಜದಮೇಲೆ ಉತ್ತರೀಯ. ಪಾದಗಳಲ್ಲಿ ಪಾದುಕೆ. ಕೈಯಲ್ಲಿ ಒಂದು ಯಷ್ಟಿ. ಈಕಾಲದ ಆಚರಣೆಯನ್ನು ಹೋಲಿಸಿ ನೋಡಿದರೆ ಹಸ್ತ ದಲ್ಲಿದ್ದ ದಂಡವು ಬಹಳ ಉದ್ದವಾದುದೆಂದು ಹೇಳಬೇಕು. ಬಂದೂವರೆ ಮೊಳಕ್ಕಿಂತಲೂ ಉದ್ದವಾಗಿತ್ತು. ರಾಜನು ಹಿಡಿಯುವ ದೊಣ್ಣೆಯಾದ ಕಾರಣ ಉದ್ದವಾಗಿರಲಿಲ್ಲ. ದೊಡ್ಡಮನುಷ್ಯರು ಹಿಡಿಯುವ ಕೋಲು ಹೀಗೆ ಉದ್ದವಾಗಿರುವುದು. ಆ ಕಾಲದಲ್ಲಿ ಚೌಕೀದಾರರ ದೊಣ್ಣೆ ಹಣೆ ಮಟ್ಟಕ್ಕೆ ಇರುವುದು. ಬೋಯಿಗಳ ಕೋಲು ಭುಜಕ್ಕೆ ಬರುವುದು. ದೊಡ್ಡಮನುಷ್ಯರು ಹಿಡಿಯುವ ಕೋಲು ಎದೆಮಟ್ಟಕ್ಕೆ ಇರುವುದು.

ರಾಜನು ಕೋಲನ್ನು ಹಿಡಿಯುತುಂಬ ಹಿಡಿದುಕೊಂಡು ಹೋಗುತಲಿ ದ್ದನು. ಆ ಕಾಲದಲ್ಲಿ ಇದೇ ಪದ್ಧತಿಯಾಗಿತ್ತು. ಎಲ್ಲಾ ಪದಾರ್ಥಗಳ ನ್ನೂ ಮುಷ್ಟಿಬದ್ಧವಾಗಿ ಹಿಡಿಯುತಲಿದ್ದರು. ಹಿಡಿಯುತುಂಬ ಹಿಡಿದು ಕೆಲಸಮಾಡುತಲಿದ್ದರು. ಆ ಕಾಲದಲ್ಲಿ ಬೆರಳುಗಳ ವ್ಯವಹಾರವು ವಿಶೇಷ ವಾಗಿರಲಿಲ್ಲ. ಏತಕ್ಕೆಂದರೆ, ಶಿಲ್ಪ, ತಂತ್ರ ಯಂತ್ರಗಳು ಹೆಚ್ಚು ಪ್ರಚಲಿತ ವಾಗಿರಲಿಲ್ಲ. ಶಿಲ್ಪಯಂತ್ರಗಳು ಬರುವುದಕ್ಕೆ ಮೊದಲು ಕೃಷಿ ಅವಸ್ಥೆ

ಯಲ್ಲಿ (Agricultural stage) ಸಮಾಜದ ಕೆಲಸಕಾರ್ಯಗಳೆಲ್ಲಾ ಮುಷ್ಟಿ ಯಿಂದಲೇ ಆಗುತಲಿದ್ದವು. ಭೂಮಿಯನ್ನು ಅಗಿಯುವುದು ಮೊದಲ್ಗೊಂಡು ಘಂಟೆ ಹೊಡೆಯುವ ಪರ್ಯಂತ ಎಲ್ಲಾ ಕಾರ್ಯಗಳೂ ಮುಷ್ಟಿಯ ಕಾರ್ಯ ವಾಗಿತ್ತು. ಪ್ರಹಾರವು ಮುಷ್ಟಿಯದ್ವಾರಾ, ಭಿಕ್ಷಾದಾನವು ಮುಷ್ಟಿ ಯಿಂದ, ಬರೆಯುವುದು (ಕಂಠಾಣಿಯಿಂದ) ಮುಷ್ಟಿದ್ವಾರಾ. ಅದುಕಾರಣ ಕೋಲನ್ನು ಹಿಡಿಯುವದೂ ಮುಷ್ಟಿತುಂಬ ಹಿಡಿಯುತ್ತಿದ್ದರು.

ರಾಜಾ ಇಂದ್ರಭೂಪನು ಗೌರಾಂಗನಾಗಿದ್ದನು. ದೀರ್ಘಾಕಾರ, ಸ್ವಲ್ಪ ಸ್ಥೂಲಕಾಯನಾಗಿದ್ದನು. ಅವನನ್ನು ನೋಡುತ್ತಲೇ ಮೊದಲು ಅವನ ಮೂಗಿನಮೇಲೆ ದೃಷ್ಟಿಬೀಳುವುದು. ಮೂಗು ವಿಶೇಷ ಉನ್ನತ ವಾಗಿರಲಿಲ್ಲ. ಆದರೆ ಉದ್ದ. ಕ್ರಮವಾಗಿ ಉನ್ನತವಾಗಿರಲಿಲ್ಲ. ಭ್ರೂಯು ಗ್ಮದಿಂದ ಬಂದೇ ಪ್ರಕಾರವಾಗಿ ಬಂದಿತ್ತು. ಹುಬ್ಬು ಕೂಡಿತ್ತು. ಮೈಯಲ್ಲಿ ಚಂದನಲೇಪನವಿಲ್ಲ. ಆದರೂ ಅನವರತ ಆ ಗಂಧವಿರುವುದು. ವಯಃ ಕ್ರಮದಲ್ಲಿ ಪ್ರಾಯಶಃ ಐವತ್ತು ವರುಷದವನು.

ರಾಜನು ಅತಿ ಮಂದಗಮನದಿಂದ ಹೋಗುತ್ತಿದ್ದನು. ಒಂದೆರಡು ಸಲ ತಲೆ ಆಲ್ಲಾಡಿಸುವನು. ಮನಸ್ಸಿನಲ್ಲಿ ತನ್ನೊಳಗೆ ತಾನೇ ಮಾತನಾಡಿ ಕೊಳ್ಳುವನು. ತಾನು ರಾಜಬೀದಿಯಲ್ಲಿ ಹೋಗುತ್ತೇನೆಂಬದನ್ನು ಒಂದು ಪ್ರಕಾರವಾಗಿ ಮರೆತುಕೊಂಡಿದ್ದನು. ಹೀಗೆ ಸ್ವಲ್ಪದೂರ ಹೋಗಿ ಒಂದು ಸ್ಥಳದಲ್ಲಿ ನಿಂತುಕೊಂಡನು. ನಾಲ್ಕು ಕಡೆಯಿಂದಲೂ ನಗರವಾಸಿಗಳು ಅವ ನಿಗೆ ಪ್ರಣಾಮವನ್ನು ಮಾಡುವರು. ರಾಜನು ಅದಕ್ಕೆ ದೃಷ್ಟಿಕೊಡದೆ ಸಂಗಡ ಬರುತಲಿದ್ದವರನ್ನು ಕುರಿತು, ಗ್ರಹಾಚಾರ್ಯರು ಎಲ್ಲಿ? ಎಂದು ಕೇ ಳಿದನು. ಗ್ರಹಾಚಾರ್ಯನು ಮುಂದಾಗಿ ಬಂದನು. ರಾಜನು ಅವನನ್ನು ಕುರಿತು, ಈಗ ಯಾವ ಯೋಗವೆಂದು ಕೇಳಿದನು.

ಗ್ರಹಾಚಾರ್ಯ—ವ್ಯತೀಪಾತಯೋಗ.

ರಾಜನು ಇದನ್ನು ಕೇಳಿ ಪುನಃ ಮೊದಲಿನ ಹಾಗೆ ಮುಂದಕ್ಕೆ ತೆರಳಿದನು. ಆದರೆ ಕ್ರಮವಾಗಿ ಅವನು ವಿಮರ್ಷಭಾವವನ್ನು ತಾಳಿದನು. ಆ ವ್ಯಾಕುಲವುಳ್ಳಭಾವವು ಸ್ಪಷ್ಟವಾಗುತ್ತ ಬಂತು.

ರಾಜನು ಪಶುಶಾಲೆಯಲ್ಲಿದ್ದಾಗಲೇ ದಿವಾವಸಾನವಾಗಿ ಮುಂಗತ್ತಲಾಗುತ್ತ ಬಂದಿತ್ತು. ಈಗ ಮಲಗುವ ಹೊತ್ತಾಗಿತ್ತು. ಮನೆಮನೆಯಲ್ಲಿಯೂ ಶಂಕಘಂಟಾಗಟೆ ಶಬ್ದಕ್ಕೆ ಪ್ರಾರಂಭವಾಗಿತ್ತು. ಶಂಖನಾದವು ಮೊದಲು ಒಂದೆರಡು ಅಲ್ಲಲ್ಲಿ ಭಗ್ನಸ್ವರದಲ್ಲಿ ನಿಮ್ನಸ್ವರದಲ್ಲಿ ಕಂಪಿತಸ್ವರದಲ್ಲಿ ಪ್ರಾರಂಭವಾಗಿ ಅನಂತರ ಒಂದೇತಡವೆಗೆ ಪ್ರತಿಮನೆಯಲ್ಲಿಯೂ ಗಂಭೀರವಾಗುತ್ತ ಬಂತು. ಆ ಶಬ್ದದಿಂದ ಆಕಾಶವು ತುಂಬಿತು. ರಾಜನು ಮತ್ತಷ್ಟು ವ್ಯಾಕುಲಭಾವವನ್ನು ಹೊಂದಿದನು. ಶಂಖನಾದವು ಅವನ ಕಿವಿಗೆ ಮರಣೋನ್ಮುಖನಾದ ಭಯಂಕರನಾದ ಅಸುರನು ಹತಾಶನಾಗಿ ಆರ್ತನಾದ ಮಾಡುವ ಹಾಗೆ ಬೋಧೆಯಾಯಿತು. ಶಂಖಧ್ವನಿಯು ಅವನಿಗೆ ಅಮಂಗಳಧ್ವನಿಯಾಗಿ ಬೋಧೆಯಾಗುತ್ತ ಬಂದು ಅವನ ಪ್ರಾಣವೇ ಹೊರಗಾಗುವ ಹಾಗೆಕಂಡಿತು.

ರಾಜನು ಪುನಃ ಸ್ವಲ್ಪ ದೂರದಲ್ಲಿ ನಿಂತುಕೊಂಡು ಚೂಡಾಧನನನ್ನು ಕರೆದನು. ಚೂಡಾಧನನು ಸಂಕೋಚದಿಂದ ಮುಂದಾಗಿ ಬಂದನು. ರಾಜನು ನನ್ನ ಹತ್ತಿರ ಬಾ, ಇನ್ನೂ ಸ್ವಲ್ಪ ಹತ್ತಿರ ಬಾ ಎಂದು ಹೇಳಿ, ನೀನು ನನ್ನ ಪಿತಾಮಹನ ಪ್ರಪೌತ್ರ, ನನ್ನ ಭ್ರಾತುಷ್ಪುತ್ರ, ಇಷ್ಟು ಬಂದರೆ ನಿನ್ನನ್ನು ನನ್ನ ಸ್ವಂತದವನನ್ನಾಗಿ ಮಾಡಿಕೊಳ್ಳಬಲ್ಲೆನೆಂದು ಇಷ್ಟು ಹೇಳಿ ಮಿಕ್ಕ ಮಾತುಗಳನ್ನು ಭಗ್ನಸ್ವರದಲ್ಲಿ ಹೇಳಿ ಚೂಡಾಧನನ ಕೈಹಿಡಿದುಕೊಂಡು ಮುಂದೆ ನಡೆದನು. ಸ್ವಲ್ಪದೂರ ಹೋಗಿ, ಅಲ್ಲಿ ನೀನು ನಿರೋಗಿಯಾಗಿ ಚಿರಜೀವಿಯಾಗಿರೆಂದು ಚೂಡಾಧನನಿಗೆ ಆಶೀರ್ವಾದಮಾಡಿದನು. ಚೂಡಾಧನನಿಗೆ ಯಾವದೂ ಗೊತ್ತಾಗದೆ ನಮ್ರಮುಖನಾಗಿ ರಾಜನ ಸಂಗಡ ಹೋದನು. ಈ ಸಮಯದಲ್ಲಿ ದೇವಮಂದಿರದಲ್ಲಿ ನವಬತ್ತು ಆಯಿತು. ಸೀತಾ

ರಾಮದೇವರಿಗೆ ಮಂಗಳಾರತಿಯಾಗಲಾರಂಭವಾಯಿತು. ನಗರವಾಸಿಗಳು ದೇವರ ದರ್ಶನಕ್ಕೆ ಹೊರಟರು.

ನವಬತ್ತು ಓಲಗ ಶಂಖ ಜಾಗಟೆ ಘಂಟೆ ಮೃದಂಗ ತಾಳ ಮುಂತಾದ ಸಕಲ ವಾದ್ಯಗಳೂ ಒಂದೇ ತಡವೆ ಆರಂಭವಾದವು. ಬಳಗೆ ಹುಡುಗರು ಕುಣಿಯುವುದಕ್ಕೆ ಪ್ರಾರಂಭಿಸಿದವು. ಮಿಕ್ಕ ಹುಡುಗರೆಲ್ಲರೂ ಅತ್ತ ಕಡೆ ಹೋದರು. ಹೋಗುವುದಕ್ಕೆ ಶಕ್ತಿಯಿಲ್ಲದ ಹುಡುಗರು ಅಳುವುದಕ್ಕೆ ತೊಡಗಿದವು. ಒಂದು ಸಣ್ಣ ಕುಟೀರದ ಮುಂದುಗಡೆ ಒಂದು ಹೆಣ್ಣು ಮಗು ಕುಳಿತುಕೊಂಡು ಅಳುತ್ತಿತ್ತು. ಆ ಮಗುವಿನ ಅಣ್ಣನು ಅದನ್ನು ಎತ್ತಿಕೊಳ್ಳುತ್ತಿದ್ದನು. ಆದರೆ ವಾದ್ಯಗಳಾಗುವುದಕ್ಕೆ ಪ್ರಾರಂಭವಾದ ಕೂಡಲೆ ಮಗುವನ್ನು ಎತ್ತಿಕೊಳ್ಳುವುದು ಬಿಟ್ಟು ದೇವರದರ್ಶನಕ್ಕೆ ಓಡಿಹೋದನು. ಮಗುವು ಕರೆದುಕೊಂಡು ಹೋಗಲಿಲ್ಲವೆಂದು ಹೆಚ್ಚಾಗಿ ಅಳುತಿತ್ತು. ಮಗುವಿನ ವಯಸ್ಸು ಒಂದು ವರುಷವಾಗಬಹುದು. ಬಡವರ ಮಗುವಾದರೂ ಮೈತುಂಬಿಕೊಂಡು ನೋಡುವುದಕ್ಕೆ ಚಲುವಾಗಿತ್ತು. ಮೈಯಲ್ಲಿ ಕೊಳೆಯಿರಲಿಲ್ಲ. ಕಣ್ಣುಗಳಿಗೆ ಕಜ್ಜಳಹಚ್ಚಿತ್ತು. ಹುಬ್ಬುಗಳ ಮಧ್ಯೆ ಒಂದು ಕಿಲ್ಲಾದ ಬಟ್ಟು. ಮುಖವು ಚೆನ್ನಾಗಿ ತೊಳೆದಿತ್ತು.

ಮಗುವು ಅಳುತ್ತಿದ್ದುದನ್ನು ಕಂಡು ರಾಜನು ಅಲ್ಲಿ ನಿಂತುಕೊಂಡನು. ಚೂಡಾಧನನು ರಾಜನ ಇಷ್ಟವನ್ನು ಅನುಭವಮಾಡಿ ಮಗುವನ್ನು ಸಮಾಧಾಯಿಸುವುದಕ್ಕೆ ಹೋದನು. ಚಪ್ಪಳೆತಟ್ಟಿ ಮಗುವನ್ನು ಎತ್ತಿಕೊಳ್ಳುವುದಕ್ಕೆ ಕರೆದನು. ಮಗುವು ಭಯಪಟ್ಟು ಮುಖವನ್ನು ತಿರಿಗಿಸಿಕೊಂಡು ಮನೆಯ ಕಡೆಗೆ ಹೋಗಲು ಅಂಬಗಾಲು ಹಾಕಿತು. ವ್ಯಾಕುಲಿತವಾದ ಸ್ವರದಿಂದ ಮತ್ತಷ್ಟು ಗಟ್ಟಿಯಾಗಿ ಅಳಲಾರಂಭಿಸಿತು. ರಾಜನು ಚೂಡಧನನನ್ನು ಸರಿಯುವ ಹಾಗೆ ಹೇಳಿ ತಾನು ಮುಂದಾಗಿ ಬಂದೆರಡು ಸಲ ಮಗುವನ್ನು ಕರೆದನು. ಹುಡುಗಿಯು ಹಿಂದಿರಿಗಿ ನೋಡಿ ಕೂಡಲೆ ಎರಡು

ಕೈಗಳನ್ನೂ ನೀಡಿತು. ಹಿಂದಿದ್ದ ಒಬ್ಬ ಭಟ್ಟಾಚಾರ್ಯನು, ಹುಡುಗಿಯು! ಬ್ರಾಹ್ಮಣಕನ್ಯೆಯೆಂದು ಹೇಳಿದನು. ರಾಜನು ಅತ್ಯಂತ ಆದರದಿಂದ ಮಗು ವನ್ನೆತ್ತಿಕೊಂಡು, ಆದರ ಮುಖವನ್ನು ಮುದ್ದಿಟ್ಟುಕೊಂಡನು. ಮಗುವು ಕೈತಟ್ಟಿಕೊಂಡು ಬೀದಿಯಕಡೆಗೆ ಕೈತೋರಿಸುತ್ತ "ಅದು ಅದು" ಎಂದು ಕೂಗಿತು. ರಾಜನು ಪುನಃ ಮಗುವನ್ನು ಮುದ್ದಿಟ್ಟುಕೊಂಡು, ದೇವರ ದರ್ಶನವಾಗಬೇಕೆ? ನಡೆ, ನಾನೂ ನಿನ್ನ ಜತೇಲಿ ಬಂದು ದೇವರದರ್ಶನ ಮಾಡುತ್ತೇನೆ. ಶ್ರೀರಾಮಚಂದ್ರನ ದರ್ಶನವಾಗಿ ಬಹಳ ದಿನಗಳಾದವು. ನಿನ್ನಿಂದ ಅವನ ಸ್ಮರಣೆಬಂತು. ನಡೆ, ನಿನ್ನನ್ನೆತ್ತಿಕೊಂಡು ಹೋಗುತ್ತೇ ನೆಂದನು. ಮಗುವು ಆನಂದದಿಂದ ನಗಲಾರಂಭಿಸಿತು.

ಮಗುವಿನ ಗರ್ಭಧಾರಿಣಿಯು ನೀರುತರುವುದಕ್ಕೆ ಹೋಗಿದ್ದಳು. ಹಿಂದಿರಿಗಿ ಬರುತ್ತ ಕುಟೀರದ ಮುಂದೆ ದೊಡ್ಡವರು ಅನೇಕರು ನಿಂತಿರುವು ದನ್ನು ಕಂಡು ಕಂಕುಳಲ್ಲಿ ಕೊಡಸಮೇತಳಾಗಿ ಮರೆಯಲ್ಲಿ ನಿಂತುಕೊಂಡಿ ದ್ದಳು. ಅವಳಿಗೇನೂ ಗೊತ್ತಾಗಲಿಲ್ಲ. ಎಲ್ಲರೂ ಅಲ್ಲಿಂದ ಹೊರಟುಹೋ ದಮೇಲೆ ನೆರೆಯವರಿಂದ ನಡೆದ ವೃತ್ತಾಂತವನ್ನು ತಿಳಿದುಕೊಂಡು, ಆ ಬ್ರಾ ಹ್ಮಣಿಯು ರಾಜನು ತನ್ನ ಮಗುವನ್ನು ಹಿಂದಕ್ಕೆ ಕೊಡಲಾರನೆಂದು ಮನ ಸ್ಸಿನಲ್ಲಿ ಭಾವಿಸಿ, ಯಥಾರೀತಿಯಾಗಿ ಅಳುತ ಕುಳಿತುಕೊಂಡಳು.

ರಾಜನು ಮಗುವನ್ನೆತ್ತಿಕೊಂಡು ಶ್ರೀರಾಮದೇವರ ದೇವಸ್ಥಾನದ ಬಾಗಲಿನಲ್ಲಿ ಹೋಗಿ ನಿಂತನು. ಮಗುವು ತಲೆಯೆತ್ತಿ ವಾದ್ಯಗಳಾಗುವ ಕಡೆಗೆ ಕೈತೋರಿಸಿತು. ರಾಜನು ಕ್ರಮವಾಗಿ ದೇವಸ್ಥಾನಕ್ಕೆ ಹತ್ತಿಹೋ ದನು. ಅವನನ್ನು ಕಂಡು ಎಲ್ಲರೂ ಸನ್ಮಾನದಿಂದ ಸರಿದುನಿಂತರು. ರಾಜ ನು ಮಗುವನ್ನು ಇಳಿಸಿ, ಅತಿ ಭಕ್ತಿಭಾವದಿಂದ ದೇವರಿಗೆ ಪ್ರಣಾಮವನ್ನು ಮಾಡಿದನು. ಮಗುವೂ ಆತನ ಪಾರ್ಶ್ವದಲ್ಲಿ ಮಣಿಗಿಕೊಂಡು ಬಂದು ಪ್ರಕಾರನಾಗಿ ಪ್ರಣಾಮವನ್ನು ಮಾಡಿತು. ಪ್ರಣಾಮವನ್ನು ಮಾಡುತ

ಹಾಗೆಯೇ ರಾಜನ ಕಡೆಗೆ ಮುಖವನ್ನು ತಿರುಗಿಸಿನೋಡಿತು ರಾಜನು ಎದ್ದು ದನ್ನು ಕಂಡು ಮಗುವೂ ಎದ್ದು ನಿಂತುಕೊಂಡಿತು. ಸ್ವರ್ಣಾಲಂಕಾರವಾಗಿದ್ದ ದೇವಮೂರ್ತಿಯನ್ನು ನೋಡಿ ಮಗುವು "ಅದು ಅದು" ಎಂದು ರಾಜನಿಗೆ ತೋರಿಸಿತು. ಪುನಃ ಪುನಃ ದೇವರಿಗೆ ಪ್ರಣಾಮವನ್ನು ಮಾಡಲಾರಂಭಿಸಿತು. ಈ ಸಮಯದಲ್ಲಿ ವಾದ್ಯಗಳಾಗುವುದು ನಿಂತಿತು. ಮಗುವು "ಹೋಗು ಹೋಗು" ಎಂದು ಹೇಳುತ್ತ ನಾಲ್ಕುಕಡೆಗೆ ನೋಡಿತು. ಕಡೆಗೆ ರಾಜನ ಮೊಳಕಾಲನ್ನು ಹಿಡಿದುಕೊಂಡು ನಿಂತಿತು. ರಾಜನು, ಮನೆಗೆ ಹೋಗಬೇಕೆ? ಎಂದು ಕೇಳಿದನು. ಮಗುವು ಪುನಃ ದೇವಮೂರ್ತಿಯ ಕಡೆಗೆ ಕೈತೋರಿಸಿ "ಇದು ಇದು" ಎಂದು ಹೇಳಿತು.

ದೇವಮಂದಿರದಲ್ಲಿ ಒಬ್ಬ ಬ್ರಹ್ಮಚಾರಿಯಿದ್ದನು. ಅವನು ಮುಂದಾಗಿ ಬಂದು, ಮಹಾರಾಜ! ಈ ಮಗುವು ರಾಜಕನ್ಯೆಯೆ? ಎಂದು ಕೇಳಿದನು. ರಾಜನು, ಅಲ್ಲವೆಂದು ಹೇಳಿ ಮಗುವನ್ನು ಪುನಃ ಮೊದಲಿನ ಹಾಗೆ ಎತ್ತಿಕೊಂಡನು. ಮಗುವು ರಾಜನ ಕಂಕುಳಲ್ಲಿದ್ದ ಹಾಗೆ ಅವನ ಮುಖವನ್ನು ದೃಷ್ಟಿಸಿನೋಡಿ ಅನಂತರ ರಾಜನ ಭುಜದಮೇಲೆ ತಲೆಯನ್ನಿಟ್ಟುಕೊಂಡು ಸ್ಥಿರಭಾವದಿಂದ ಇತ್ತು. ಆಗ ರಾಜನು ಬ್ರಹ್ಮಚಾರಿಯನ್ನು ಕುರಿತು, ಮಗುವು ಯಾರ ಕನ್ಯೆಯೋ ಅದು ನನಗೆ ಇದುವರೆಗೂ ಗೊತ್ತಾಗಲಿಲ್ಲ. ದಾರಿಯಲ್ಲಿ ಮಗುವು ಅಳುತ್ತಿತ್ತು. ನನ್ನನ್ನು ನೋಡಿ ನನ್ನ ಹತ್ತಿರ ಬಂದಿತು. ಏನು ಮಾಡಿದರೂ ಮತ್ತಾರಹತ್ತಿರಕ್ಕೂ ಹೋಗುವುದಿಲ್ಲವೆಂದನು.

ಬ್ರಹ್ಮಚಾರಿ—ಆಶ್ಚರ್ಯ! ಹೀಗಿರುವ ಮಕ್ಕಳನ್ನು ನಾನೆಲ್ಲಿಯೂ ನೋಡಿಲ್ಲ. ಮಕ್ಕಳು ಪರಿಚಯವಿಲ್ಲದವರ ಹತ್ತಿರ ಹೋಗುವದಿಲ್ಲ.

ರಾಜಾ—ಮಗುವಿಗೆ ನಿದ್ರೆ ಬಂದಹಾಗೆ ಕಾಣುತ್ತದೆ. ಇದರ ಆತ್ಮೀಯರು ಯಾರಾದರೂ ಉಂಟೆ? ಬಂದಿದ್ದಾರೆಯೆ?

ಬ್ರಹ್ಮಚಾರಿ—ಬಂದಿದ್ದಾರೆ.

ಹೀಗೆಂದು ಹೇಳಿದ ಕೂಡಲೆ ಒಬ್ಬ ಬ್ರಾಹ್ಮಣನು ಕೈಮುಗಿದು ಬಂದು ಇದಿರಿಗೆ ನಿಂತು, ಮಹಾಸ್ವಾಮಿ! ಮಗುವಿಗೆ ನಾನು ಆತ್ಮೀಯ ನೆಂದನು.

ರಾಜಾ—ತಾವು ಮಗುವಿಗೆ ಏನಾಗಬೇಕು?

ಬ್ರಾಹ್ಮಣ—ತಂದೆ.

ರಾಜಾ—ತಾವು ಬಹಳ ಭಾಗ್ಯವಂತರು. ಈ ಕನ್ಯೆಯು ನನ್ನದಾಗಿದ್ದರೆ ನಾನೂ ಭಾಗ್ಯವಂತನೆಂತಲೇ ತಿಳಿದುಕೊಳ್ಳುತ್ತಿದ್ದೆ. ಕಂಕುಳನಿಂದ ಇಳಿಸುವುದಕ್ಕೆ ಇಷ್ಟವಾಗುವುದಿಲ್ಲ. ಆದರೆ ತಮ್ಮ ಮಗುವನ್ನು ಹೇಗೆ ಇಟ್ಟುಕೊಳ್ಳಲಿ? ಇಲ್ಲವಾದರೆ ನಾನೇ ಈ ಮಗುವನ್ನು ಲಾಲನೆಪಾಲನೆ ಮಾಡುವೆನು.

ಈ ಮಾತನ್ನು ಕೇಳಿ ಬ್ರಾಹ್ಮಣನು ಭಯದಿಂದ ಅತ್ತಿತ್ತ ನೋಡುತಲಿದ್ದನು. ಅವನನ್ನು ನೋಡಿ ಅವನ ನೆರೆಯುವನೊಬ್ಬನು, ಮಹಾರಾಜ! ತಾವು ಈ ದೇಶಕ್ಕೆ ರಾಜರು. ನಾವೆಲ್ಲರೂ ತಮಗೆ ಮಕ್ಕಳಹಾಗೆ—ತಮಗೆ ಯಾವದು ಇಷ್ಟವಾದರೆ ಹಾಗೆ ಮಾಡಬಲ್ಲಿರಿ. ತಾವು ಮಗುವನ್ನು ಗ್ರಹಣ ಮಾಡಿದರೆ ಇದಕ್ಕಿಂತಲೂ ನಮಗೆ ಮತ್ತಾವ ಸೌಭಾಗ್ಯವುಂಟಾದೀತು? ದರಿದ್ರರ ಮಗುವನ್ನು ತಾವು ಎತ್ತಿಕೊಳ್ಳೋಣಾಗಿದೆ. ಇದರಿಂದ ನಾವೆಲ್ಲರೂ ಚರಿತಾರ್ಥರಾದೆವು ಯಾವದೇಶದ ರಾಜನಿಗೆ ದರಿದ್ರರಲ್ಲಿ ಉದಾಸೀನತೆ ಯಿಲ್ಲವೋ ಆ ದೇಶದ ಪ್ರಜೆಗಳಗಿಂತಲೂ ಮತ್ತಾರೂ ಸುಖಿಯಾಗಲಾರರೆಂದು ಹೇಳಿದನು.

ರಾಜನು ಪ್ರತ್ಯುತ್ತರವನ್ನು ಹೇಳುವುದಕ್ಕೆ ಮೊದಲೇ ಚೂಡಾಧನನು, ಶಿಶುವಿಚಾರದಲ್ಲಿ ರಾಜಾಪ್ರಜಾ ಎಂಬ ಪ್ರಭೇದವಿಲ್ಲ; ಧನವಂತರು ದರಿದ್ರರು ಎಂದೂ ಭೇದವಿಲ್ಲ. ಸಂತಾನಮಾತ್ರ ಪವಿತ್ರವಾದುದು. ಯಾರು

ಮಗುವನ್ನು ಎತ್ತಿಕೊಳ್ಳುತ್ತಾರೋ ಅಂತಹವರು ಪವಿತ್ರರಾಗುವರು, ಚರಿತಾರ್ಥರಾಗುವರು. ಮಗುವಿಗೇನೂ ಗೌರವವೃದ್ಧಿಯುಂಟಾಗಲಾರದೆಂದು ಹೇಳಿದನು.

ರಾಜಾ—ಆದರೂ ನಾನು ಮಗುವನ್ನು ಎತ್ತಿಕೊಂಡಿದ್ದೇನೆ. ನಾನು ಎತ್ತಿಕೊಂಡದ್ದು ವ್ಯರ್ಥವಾಗಕೂಡದು. ಮಗುವು ರಾಜಕನ್ಯೆಯಹಾಗೆ ಪ್ರತಿಪಾಲಿತವಾಗುವುದು. ಆರೀತಿಯಾಗಲು ನಾನು ನಾಳೆ ಬೆಳಗ್ಗೆ ಏರ್ಪಾಡುಮಾಡುವೆನು. ನನಗೆ ಬಹಳ ವ್ಯಾಕುಲವಾಗಿತ್ತು. ಮನಸ್ಸಿನಲ್ಲಿ ಅಳುವುಬರುವಹಾಗಿತ್ತು. ಈ ಕನ್ಯೆಯನ್ನೆತ್ತಿಕೊಂಡಮೊದಲು ನನ್ನ ದುರ್ಭಾವನೆಗಳೆಲ್ಲಾ ಹೋಗಿವೆ. ಮನಸ್ಸು ನಿರ್ಮಲವಾಗಿದೆ, ಬಹಳ ಚಮತ್ಕಾರವಾದ ಚಲುವಾದ ಮಗು. ಈ ಮಗುವು ಸುಖವಾಗಿರುವುದಕ್ಕೆ ಏನು ಆವಶ್ಯಕವೋ ಅದನ್ನೆಲ್ಲಾ ಮಾಡುವೆನು. ಈಗ ನಿಮ್ಮ ಮಗುವನ್ನು ನೀವು ಕರೆದುಕೊಂಡುಹೋಗಿ.

ಬ್ರಹ್ಮಚಾರಿ—ಇದು ತಮ್ಮ ದಯೆ! ಪರಮಾಶ್ಚರ್ಯವಾದ ದಯೆ!

ದರಿದ್ರಬ್ರಾಹ್ಮಣನು ಮಗುವನ್ನು ರಾಜನಕೈಯಿಂದ ತೆಗೆದುಕೊಳ್ಳುವುದಕ್ಕೆ ಸಾಹಸವುಳ್ಳವನಾಗಲಿಲ್ಲ. ಚೂಡಾಧನಬಾಬುವು ಮಗುವನ್ನು ಎತ್ತಿಕೊಂಡು ಬ್ರಾಹ್ಮಣನಿಗೆ ಸಮರ್ಪಣೆ ಮಾಡಿದನು. ಮಗುವು ಮಲಗಿತ್ತು. ಚೂಡಾಧನನು ಎತ್ತಿಕೊಳ್ಳುತ್ತ ಎಚ್ಚರವಾಗಿ ತಂದೆಯ ಕಂಕುಳಗೆ ಹೋಗಿ ಅಳಲಾರಂಭಿಸಿತು. ತಂದೆಯು ಮಗುವನ್ನು ಸಮಾಧಾಯಿಸುವುದಕ್ಕೋಸ್ಕರ ಹೆಂಗಸರಹಾಗೆ, ನನ್ನ ಕಂದ! ನನ್ನ ಮುತ್ತೆ; ಅಳಬೇಡವೆಂದು ಹೇಳುತ್ತ ತಲೆಯನ್ನು ತಟ್ಟಿದನು. ಮಗುವು ಆದರಿಂದ ಶಾಂತವಾಗಲಿಲ್ಲ. ಆಗ ರಾಜನು ಹತ್ತಿರ ಹೋಗಿ, ನನ್ನ ಹತ್ತಿರ ಬರುತ್ತೀಯಾ? ಬಾ ಎಂದನು. ಮಗುವು ರಾಜನು ಕರೆಯುವುದನ್ನು ಕೇಳಿ ತಲೆಯನ್ನೆತ್ತಿ ರಾಜನನ್ನು ನೋಡಿತು. ನೋಡುತ್ತಲೇ ಕೈಚಾಚಿ ರಾಜನ ಹತ್ತಿರ ಹೋ

ಗುವ ಇಷ್ಟವನ್ನು ತೋರ್ಪಡಿಸಿತು. ರಾಜನು ಕೂಡಲೆ ಎತ್ತಿಕೊಂಡನು. ಮಗುವು ಮೊದಲಿನಹಾಗೆ ರಾಜನ ಭುಜದಮೇಲೆ ತಲೆಯನ್ನಿಟ್ಟುಕೊಂಡು ಮಲಗಿತು. ಎಲ್ಲರಿಗೂ ಆಶ್ಚರ್ಯವುಂಟಾಯಿತು. ರಾಜನಿಗೂ ಆಶ್ಚರ್ಯವುಂಟಾಯಿತು.

ಮಗುವಿಗೆ ಸ್ವಲ್ಪ ಚನ್ನಾಗಿ ನಿದ್ರೆಹತ್ತಿದಮೇಲೆ ರಾಜನು ಮಗುವನ್ನು ಬ್ರಾಹ್ಮಣನಕೈಲಿ ಕೊಟ್ಟು ಹೊರಟುಹೋದನು. ಹೋಗುವಾಗ ಮಗುವಿನ ಹೆಸರೇನೆಂದು ಕೇಳಿದನು. ಬ್ರಾಹ್ಮಣನು ಮಗುವಿನ ಹೆಸರು ಮಾಧವೀಲತಾ ಎಂದು ಹೇಳಿದನು.

---

## ಆರನೆಯ ಪರಿಚ್ಛೇದ.

ದೇವಸ್ಥಾನದಲ್ಲಿ ದೇವರಿಗೆ ಮಂಗಳಾರತಿಯಾದಕೂಡಲೇ ಎಲ್ಲರೂ ದೇವರಿಗೆ ಪ್ರಣಾಮವನ್ನು ಮಾಡಿದರು. ಬ್ರಹ್ಮಚಾರಿಯು ಮಾತ್ರ ಎದೆಯಮೇಲೆ ಕೈಯಿಟ್ಟುಕೊಂಡು ನಿಂತಿದ್ದನು. ನಮಸ್ಕಾರಮಾಡಲಿಲ್ಲ. ಆತನು ಯಾವಾಗಲೂ ದೇವರಿಗೆ ಪ್ರಣಾಮವನ್ನು ಮಾಡಲಿಲ್ಲ. ಇದನ್ನು ಎಲ್ಲರೂ ಬಲ್ಲರು. ಆದರೂ ಅದಕ್ಕೋಸ್ಕರ ಯಾರೂ ಅವನಲ್ಲಿ ಭಕ್ತಿಮಾಡುವುದನ್ನು ಕಡಮೆಮಾಡಲಿಲ್ಲ. ಎಲ್ಲರೂ ಬ್ರಹ್ಮಚಾರಿಯು ಜ್ಞಾನಿಯೆಂತಲೂ ಅದಕ್ಕೋಸ್ಕರವೇ ಆತನು ಶ್ರೀ ಸೀತಾರಾಮದೇವರಿಗೆ ಪ್ರಣಾಮವನ್ನು ಮಾಡುವುದಿಲ್ಲವೆಂತಲೂ ಹೇಳುವರು.

ಬ್ರಹ್ಮಚಾರಿಯು ಪ್ರತಿಮಾಸವೂ ಒಂದುಸಲ ಸಾಯಂಕಾಲದಲ್ಲಿ ರಾಮದೇವರ ಮಂಗಳಾರತಿಯನ್ನು ನೋಡುವುದಕ್ಕೆ ಬರುವನು. ಇಂತಹಸಮಯದಲ್ಲಿ ಯಾರು ಅಲ್ಲಿರುವರೋ ಅಂತಹರೊಂದಿಗೆ ಬ್ರಹ್ಮ

ರಿಯು ಅತ್ಯಂತ ಸ್ನೇಹಭಾವದಿಂದ ಮಾತನಾಡುವನು. ಆತನಿಗೆ ಅನೇಕರ ಹೆಸರು ಗೊತ್ತು. ಅವರವರ ಸಾಂಸಾರಿಕಾವಸ್ಥೆಯೆಲ್ಲಾ ಗೊತ್ತು. ಅವರವರ ಹೆಸರನ್ನು ಹಿಡಿದು ಕರೆದು ಅವರವರ ಸಂಸಾರದ ಕುಶಲವಾರ್ತೆಯನ್ನು ಕುರಿತು ಪ್ರಶ್ನೆಮಾಡುವನು. ಆದರೆ ಯಾರಾದರೂ ಏನಾದರೂ ಸತ್ಪರಾಮರ್ಶವನ್ನು ಕೊಡಬೇಕೆಂದು ಕೇಳಿದರೆ ಬ್ರಹ್ಮಚಾರಿಯು ಏನೊಂದುತ್ತರವನ್ನೂ ಕೊಡನು. ಬಂದೊಂದಾಸಲ, ನಾನು ಸಂಸಾರಿಯಲ್ಲ. ಸಂಸಾರದ ವಿಷಯದಲ್ಲಿ ನನಗಿಂತಲೂ ಚೆನ್ನಾಗಿ ಪರಾಮರ್ಶವನ್ನು ಕೊಡತಕ್ಕವರು ಬೇರೆ ಅನೇಕರು ಇದ್ದಾರೆಂದು ಹೇಳುವನು.

ಸಿಂಹಶತಗ್ರಾಮಕ್ಕೆ ಪ್ರಾಯಃ ಬಂದು ಹರಿದಾರಿ ದೂರದಲ್ಲಿ ಬಂದು ಪ್ರಾಂತ ಮಧ್ಯದಲ್ಲಿ ಬಂದು ಭಗ್ನವಾದ ದೇವಮಂದಿರದಲ್ಲಿ ಬ್ರಹ್ಮಚಾರಿಯು ವಾಸಮಾಡುತ್ತಿದ್ದನು. ದೇವಸ್ಥಾನವು ಯಾವದೋ ದೇವಮೂರ್ತಿಯ ಪ್ರತಿಷ್ಠೆಗೋಸ್ಕರ ನಿರ್ಮಿತವಾಗಿರಬೇಕು. ಆದರೆ ನಾವು ಯಾವ ಕಾಲದ ಕಥೆಯನ್ನು ಹೇಳುತ್ತೇವೋ ಆ ಕಾಲದಲ್ಲಿ ಮಂದಿರದೊಳಗೆ ಯಾವ ಮೂರ್ತಿಯೂ ಇರಲಿಲ್ಲ ಪ್ರವಾದವಿದ್ದುದೇನೆಂದರೆ :—ಪ್ರತಿಷ್ಠೆಗೋಸ್ಕರ ಬಂದು ಕಾಳಿಯಮೂರ್ತಿಯನ್ನು ಅಲ್ಲಿ ತಂದಿಟ್ಟಿದ್ದ ಹಾಗೂ, ರಾತ್ರಿಕಾಲದಲ್ಲಿ ವೈಷ್ಣವಸಂಪ್ರದಾಯಕ್ಕೆ ಸೇರಿದ ಕೆಲವು ನಿರೀಹರಾದ ಶಾಂತರಾದ ಸತ್ಪುರುಷರು ಬಂದು ಕಾಳಿಯಮೂರ್ತಿಪ್ರತಿಮೆಯನ್ನು ತೆಗೆದುಕೊಂಡು ಹೋಗಿ ಅಲ್ಲಿದ್ದ ಬಂದು ಕೆರೆಯಲ್ಲಿ ಹಾಕಿದರೆಂದೂ ಕಾಳಿಯಮೂರ್ತಿಯನ್ನು ಸ್ಪರ್ಶಮಾಡಿದ್ದುದಕೋಸ್ಕರ ಅವರು ಆ ರಾತ್ರಿ ಆ ಕೆರೆಯಲ್ಲಿ ಸ್ನಾನಮಾಡಿದರೆಂದೂ ಹೇಳಿಕೊಳ್ಳುತ್ತಾರೆ. ಪ್ರವಾದವು ನಿಜವಾದುದೋ ಸುಳ್ಳಾದುದೋ, ಅದು ಹೇಗಾದರೂ ಇರಲಿ, ಕೆರೆಯ ಹೆಸರೇನೋ ಕಾಳೀಸರೋವರವೆಂದು ಬಂದು ಇದೆ.

ಈ ಸ್ಥಳದಲ್ಲಿ ಬ್ರಹ್ಮಚಾರಿಯನ್ನು ನೋಡುವುದಕ್ಕೆ ಹೋದರೆ

ಆತನು ಅಲ್ಲಿ ಕಾಣುತ್ತಿರಲಿಲ್ಲ. ಮಂದಿರದ ಬಾಗಿಲು ಸರ್ವದಾ ತೆರೆಯಲ್ಪಟ್ಟಿರುವುದು. ಒಳಗೆ ಹೋಗಿ ನೋಡಿದರೆ ಬ್ರಹ್ಮಚಾರಿಯು ಕಾಣಿಸುತ್ತಿರಲಿಲ್ಲ. ಮಂದಿರಕ್ಕೆ ಮೂರುಕಡೆಯಲ್ಲಿಯೂ ಪ್ರಾಂತರ. ಒಂದು ಕಡೆಯಲ್ಲಿ ಕಾಳೀ ಸರೋವರ. ಅಲ್ಲಿ ಒಂದು ವಕುಳ ವೃಕ್ಷ, ಎರಡು ಬಿಲ್ವವೃಕ್ಷಗಳು ಹೊರತು ಮತ್ತಾವ ವೃಕ್ಷ ಅಥವಾ ಲತೆಗಳೂ ಇರಲಿಲ್ಲ. ನಾಲ್ಕು ದಿಕ್ಕುಗಳಲ್ಲಿಯೂ ಬಹುದೂರ ಕಾಣಿಸುವುದು. ಆದರೂ ಬ್ರಹ್ಮಚಾರಿಯು ದೃಷ್ಟಿಗೋಚರವಾಗನು. ಯಾವಾಗ ಹುಡುಕಿದರೂ ಹೀಗೆಯೇ ಆಗುವುದು. ಆದರೂ ಜನರು ಸನ್ಯಾಸಿಯು ಅಲ್ಲೇ ವಾಸ ಮಾಡುತ್ತಾನೆಂದು ಹೇಳುವರು. ತಿಂಗಳಾದರೆ ಶ್ರೀರಾಮದೇವರ ದೇವಸ್ಥಾನದಲ್ಲಿ ಅವನು ಬಂದಿರುವನು. ಆತನ ವಿಚಾರದಲ್ಲಿ ಜನರ ಶ್ರದ್ಧೆಯು ಅತ್ಯಾಶ್ಚರ್ಯವಾಗಿತ್ತು. ಅವನಿಗೆ ದೈವಭಕ್ತಿ ಇರಲಿಲ್ಲ. ಅವನು ದೇವರಿಗೆ ಪೂಜೆ ಅಥವ ಪ್ರಣಾಮವನ್ನು ಮಾಡಿಲ್ಲ. ಅವನು ಸಂಧ್ಯಾವಂದನೆಯನ್ನು ಮಾಡಿದ್ದು ಯಾರೂ ನೋಡಿಲ್ಲ. ಆದರೂ ಜನರು ಅವನನ್ನು ಪರಮ ಧಾರ್ಮಿಕನೆಂದು ಹೇಳುವರು. ಅವನು ಯಾವಾಗಲೂ ಒಂದು ಪ್ರಶ್ನೆಯನ್ನೂ ಸಹ ಕೇಳಲ್ಲ. ಆದರೂ ಜನರಲ್ಲಿ ಅವನು ಜ್ಯೋತಿಷ್ಯದಲ್ಲಿ ಮಹಾ ಜ್ಞಾನಿ ಎಂದು ಹೇಳುವರು. ಅವನು ಯಾವಾಗಲೂ ಯಾರಿಗೂ ಔಷಧ ಕೊಟ್ಟಿಲ್ಲ. ಆದರೆ ಜನರು ಅವನು ಇಷ್ಟಬಂದರೆ ಸಕಲ ರೋಗವನ್ನೂ ಆರೋಗ್ಯ ಮಾಡಬಲ್ಲನೆಂದು ಹೇಳುವರು. ಜನರಿಗೆ ಇಂತಹ ನಂಬುಗೆ ಅಥವಾ ಶ್ರದ್ಧೆ ಹೇಗೆ ಉಂಟಾಯಿತೋ ತಿಳಿಯಲಸಾಧ್ಯ. ಆದರೆ ಚೂಡಾಧನಬಾಬುವು ಬೇರೆ ವಿಧವಾಗಿ ತಿಳಿದುಕೊಂಡಿದ್ದನು. ಅವನು ಒಂದುದಿನ ದಿವಾನನ ಮಗನಾದ ನವಕುಮಾರನ ಸಂಗಡ ಮಾತನಾಡುತ್ತಿದ್ದಾಗ ಬ್ರಹ್ಮಚಾರಿಯು ಪ್ರಾಣ ಮೋಸಗಾರನಾಗಿರಬೇಕು ಅಥವಾ ಬಹಳ ಅದೃಷ್ಟಶಾಲಿಯಾಗಿರಬೇಕೆಂದು ಹೇಳಿದನು. ನವಕುಮಾರನೂ ಹಾಗೆಯೇ ಇರಬಹುದೆಂದು ಒಪ್ಪಿಕೊಂಡನು.

ಬ್ರಹ್ಮಚಾರಿಯು ಶ್ರೀರಾಮದೇವರ ದೇವಸ್ಥಾನದಿಂದ ಹೊರಟು ಆ ಗ್ರಾಮಾಭಿಮುಖವಾಗಿ ಹೋಗುತ್ತಿದ್ದನು. ಸ್ವಲ್ಪದೂರ ಹೋಗುತಿದ್ದಾಗ ಕೆಲಸಕ್ಕೋಸ್ಕರ ಸಿಂಹಶತಗ್ರಾಮಕ್ಕೆ ಬಂದಿದ್ದು ಹಿಂದಿರುಗಿ ಹೋಗುತ್ತಿದ್ದ ಹಳ್ಳಿಯ ಜನರು ಹಾದಿಯಲ್ಲಿ ಬ್ರಹ್ಮಚಾರಿಯನ್ನು ನೋಡಿದರು. ಬ್ರಹ್ಮಚಾರಿಯು ಅವರನ್ನು ಕುರಿತು ಕುಶಲ ಪ್ರಶ್ನೆಯಂ ಮಾಡಿದನು. ಅವರಲ್ಲೊಬ್ಬನು ಏನೇನೋ ಸಮಾಚಾರಗಳನ್ನು ಹೇಳುತ್ತ ಕಡೆಗೆ, ಠಾಕೂರರೆ! ಈಗತಾನೇ ನಾನೊಂದು ಕೆಟ್ಟ ವರ್ತಮಾನವನ್ನು ಕೇಳಿದೆ. ರಾಜನು ಧರ್ಮಿಷ್ಠನಾಗಿದ್ದರೆ ಪ್ರಜೆಗಳೂ ಧರ್ಮಿಷ್ಠರಾಗಿರುತ್ತಾರೆ. ರಾಜನು ಹೀಗಾದರೆ ನಮ್ಮಗಳ ಅವಸ್ಥೆ ಏನಾಗಬೇಕು! ಈಗತಾನೇ ರಾಜನು ಸಂಧ್ಯಾ ಕಾಲದಲ್ಲಿ ಸಂಗಡ ಜನರನ್ನು ತೆಗೆದುಕೊಂಡು ಸ್ವಂತವಾಗಿ ಹೋಗಿ ಒಬ್ಬ ಬ್ರಾಹ್ಮಣ ಕನ್ಯೆಯನ್ನು ಅಪಹರಿಸಿಕೊಂಡು ಹೋದನೆಂದು ಕೇಳಿದೆ. ಆ ಕನ್ಯೆಯ ತಾಯಿಯಾದ ಯುವತಿಯು ಎಷ್ಟೋ ಗೋಳಾಡಿದಳು. ಯಾರೂ ಅವಳ ರಕ್ಷಣೆಗೆ ಬರಲಿಲ್ಲ. ರಕ್ಷಕನಾದವನೇ ಭಕ್ಷಕನಾದರೆ ಯಾರುತಾನೇ ಮಾಡುವದೇನು? ಬೇಲಿ ಎದ್ದುಬಂದು ಹೊಲವನ್ನು ಮೆಯಿದರೆ ಕಾಯುವವರು ಯಾರು? ಭಯದಿಂದ ಆ ಹುಡುಗಿಯ ತಂದೆಯು ಓಡಿಹೋದನು; ಯಜಮಾನನು ಮನೆಯಲ್ಲಿಲ್ಲ. ಅವನಿದ್ದರೆ, ಆ ರಾಜನು ಅಷ್ಟು ಅತ್ಯಾಚಾರವನ್ನು ನಡೆಸುವದಕ್ಕಾಗುತ್ತಿರಲಿಲ್ಲ. ಅದು ಹೇಗಾದರೂ ಆಗಲಿ; ಈಗ ದೇಶಕ್ಕೆ ಎಂತಹ ದಶೆ ಬಂತು! ಈಗ ಈ ಘೋರವಾದ ಕಲಿ ಬಂದು ರಾಜನಾಗಿ ಪ್ರಜೆಯ ಕನ್ಯಾಹರಣವೆ! ಏನು ಸರ್ವನಾಶ!! ಮುದಿ ವಯಸ್ಸಿನಲ್ಲಿ ರಾಜನಿಗೆ ಇಂತಹ ದುರ್ಮತಿಯೆ! ಇದಕ್ಕಿಂತಲೂ ದೇಶಕ್ಕೆ ಇನ್ನೇನು ಅಮಂಗಳವಾಗಬೇಕು? ಎಂದು ಮುಂತಾಗಿ ಪರಿತಾಪಪಟ್ಟನು.

ವೃದ್ಧನಾದ ರೈತನು ಇಷ್ಟು ಹೇಳಿ ಸುಮ್ಮನಾದುದನ್ನು ಕಂಡು ಅವನ ಜತೆಯಲ್ಲಿದ್ದ ಒಬ್ಬ ಹುಡುಗನು ಆ ಬಡಪಾಪಿ ಹುಚ್ಚ ಪಿತನುನ

ಸಮಾಚಾರವನ್ನು ಹೇಳು. ರಾಜನು ಅವನನ್ನು ಪಂಜರದಲ್ಲಿ ಹಾಕಿದ್ದಾನೆಂದನು.

ವೃದ್ಧನಾದ ರೈತ—ಬಳ್ಳಿಯುಮಾತು ನೆನವಿಗೆ ತಂದೆ! ಠಾಕೂರರೇ! ದುಃಖ ಸಮಾಚಾರವನ್ನು ಮತ್ತೆಷ್ಟು ಹೇಳಲಿ! ಒಬ್ಬ ಹುಚ್ಚನು ಬೀದಿಯಲ್ಲಿ ಭಿಕ್ಷವನ್ನು ಬೇಡುತ್ತ ತಿರುಗುತಲಿದ್ದನು. ಯಾರಿಗೂ ಏನೊಂದು ತೊಂದರೆಯನ್ನು ಮಾಡುತ್ತಿರಲಿಲ್ಲ. ಅವನನ್ನು ಹಿಡಿದು ತಂದು ಹುಲಿಯ ಬಾಯಿಗೆ ಕೊಡಬೇಕೆಂದು ಹುಕುಂ ಆಯಿತು. ಯಾರೋ ಚೂಡಾಧನಬಾಬು ಇದ್ದಾನಂತೆ. ಕಡೆಗೆ ಅವನು ಅವನನ್ನುಳಿಸಿದನು. ಆದರೂ ದಿವಾನನ ಪರಾಮರ್ಶದಮೇಲೆ ರಾಜನು ಅವನನ್ನು ಹಿಡಿಸಿ ಪಂಜರದಲ್ಲಿ ಹಾಕಿಸಿದನು. ಹುಲಿಯ ಪಾರ್ಶ್ವದಲ್ಲಿಟ್ಟಮೇಲೆ ಹುಲಿಯ ಬಾಯಿಗೆ ಕೊಟ್ಟಹಾಗೆಯೇ ಆಯಿತು. ಇಷ್ಟು ಹೊತ್ತಿಗೆ ಹುಲಿಯು ಅವನನ್ನು ಬಾಯಿಗೆ ಹಾಕಿಕೊಂಡೇ ಇರಬಹುದು. ನಾನು ನನ್ನ ಕಣ್ಣಾರೆ ನೋಡಿಬಂದೆ. ಹುಲಿಯು ಅವನನ್ನು ಕಂಡು ಹಾರಾಡುತ್ತದೆ. ಎಗರಾಡುತ್ತದೆ. ಒಂದೊಂದು ತಡವೆ ಆ ಕಬ್ಬಿಣದ ಸಲಾಕಿಯ ಮೇಲೆ ಎರಡುಕಾಲೂ ಇಟ್ಟುಕೊಂಡು ಪಿತಮನನ್ನು ನೋಡುತ್ತದೆ. ಹಾ ಎಂದು ಬಾಯಿಬಿಚ್ಚಿ ಅರಚುತ್ತದೆ.

ಹುಡುಗ—ಒಂದು ಕಡೆ ಹುಲಿ. ಮತ್ತೊಂದು ಕಡೆ ಕರಡಿ.

ವೃದ್ಧ—ಏನು ಆಪತ್ತು! ಏನು ಆಪತ್ತು!! ಇಷ್ಟು ಪಾಪವುಂಟೆ! ಭೂತಾಯಿಯು ಇನ್ನು ಹೊತ್ತಾಳೆ! ರಾಜ ಇನ್ನು ಉಳಿಯನು!

ಬ್ರಹ್ಮಚಾರಿಯು ಏನೊಂದುತ್ತರವನ್ನೂ ಕೊಡಲಿಲ್ಲ. ಸ್ವಲ್ಪದೂರ ಅನ್ಯಮನಸ್ಕನಾಗಿ ಹೋಗುತ್ತಿದ್ದನು. ಕಡೆಗೆ ಪ್ರತ್ಯುತ್ತರವನ್ನು ಹೇಳುವುದಕ್ಕೆ ಹಿಂದಿರಿಗಿ ನೋಡಿದಾಗ ಹಳ್ಳಿಜನರು ಯಾರೂ ಇರಲಿಲ್ಲ. ಬೇರೆ ಹಾದಿಯನ್ನು ಹಿಡಿದು ಹೋಗಿದ್ದರು. ಬ್ರಹ್ಮಚಾರಿಯು ಕೆಲವು ನಿಮಿಷಗಳು ಅಲ್ಲಿಯೇ ನಿಂತುಕೊಂಡಿದ್ದು ಕಡೆಗೆ ಏನೊ ಯೋಚಿಸಿಕೊಂಡು ಸಿಂಹ

ಶತಗ್ರಾಮಾಭಿಮುಖವಾಗಿ ಹಿಂದಿರಿಗಿ ಹೋದನು.

ರಾತ್ರಿ ಹತ್ತು ಹನ್ನೊಂದುಘಂಟೆ ಸಮಯದಲ್ಲಿ ಬ್ರಹ್ಮಚಾರಿಯು, ದಿವಾನನ ಅತಿಥಿಶಾಲೆಗೆ ಪ್ರವೇಶಮಾಡಿದನು. ಆ ವರ್ತಮಾನವನ್ನು ಕೇಳಿ ದಿವಾನನು ಅಲ್ಲಿಗೆ ಬಂದನು. ಒಂದು ಪ್ರಣಾಮವನ್ನು ಮಾಡಿ ಕುಳಿತಮೇಲೆ ಬ್ರಹ್ಮಚಾರಿಯು, ಎಲ್ಲಾ ಕುಶಲವೆ? ಎಂದು ಕೇಳಿದನು.

ದಿವಾನ–ತಮ್ಮ ಶ್ರೀಚರಣಪ್ರಸಾದದಿಂದ ಎಲ್ಲಾ ಕುಶಲವೆಂತಲೇ ಹೇಳಬೇಕು.

ಬ್ರಹ್ಮಚಾರಿ—ಅದನ್ನು ಕೇಳುವುದೇ ನನಗೆ ಸುಖ. ನೋಡಿ ಬಹಳ ಕಾಲವಾಯಿತು. ಸಮಾಚಾರವೇನೂ ಗೊತ್ತಾಗಲಿಲ್ಲ. ಅ‍ಕ್ಕೋ ಸ್ಕರ ನೋಡಿಕೊಂಡು ಹೋಗೋಣವೆಂದು ಬಂದೆ.

ದಿವಾನ — ಎಲ್ಲಾ ತಮ್ಮ ಅನುಗ್ರಹ.

ಬ್ರಹ್ಮಚಾರಿ–ರಾಜರು ಕುಶಲರೆ?

ದಿವಾನ–ಶರೀರದ ದಾರ್ಢ್ಯವೇನೋ ಚೆನ್ನಾಗಿಯೇ ಇದೆ. ಮನಸ್ಸು ಅಸ್ವಸ್ಥವಾಗಿದೆಯೆಂದು ತೋರುವುದಿಲ್ಲ.

ಬ್ರಹ್ಮಚಾರಿ–ರಾಜಕಾರ್ಯವಿಚಾರವು ಹೇಗಿದೆ?

ದಿವಾನ–ಅದೂ ಕೆಟ್ಟಿಲ್ಲ. ಆದರೆ ಈಗಿರುವವರೆಲ್ಲರೂ ಅವರ ಮಂಗಳಾಕಾಂಕ್ಷಿಗಳಾಗಿಲ್ಲ.

ಬ್ರಹ್ಮಚಾರಿ–ನನಗೆ ಅದು ಸ್ವಲ್ಪ ತಿಳಿಯಬಂದಿದೆ. ಆದರೆ ಸಂಪೂರ್ಣವಾಗಿ ಅರಿಯೆ. ಈಗ ಅದನ್ನೆಲ್ಲಾ ಕೇಳಲು ನನಗೆ ಇಷ್ಟವೂ ಇಲ್ಲ. ತಮ್ಮಂತಹ ಬುದ್ಧಿಶಾಲಿಗಳು ಪರಾಮರ್ಶೆಮಾಡಲು ಇರುವಾಗ ಎಲ್ಲಾ ಮಂಗಳವಾಗುವ ಸಂಭವವೇ ಹೊರತು ಬೇರೆಯಿಲ್ಲ. ಎಲ್ಲಾ ವಿಪತ್ತುಗಳಿಂದಲೂ ಉದ್ಧಾರವಾಗಬಹುದು. ಆದರೆ ವಿಪಕ್ಷದಳದವರು ಸ್ವಲ್ಪ ಪ್ರಬಲರಾಗಿರುವಹಾಗಿದೆ ಅಥವಾ ಕಾರ್ಯಕಾರಿತೆ ಶಕ್ತಿಯು ಸ್ವಲ್ಪ ವೃದ್ಧಿಯನ್ನು

ಹೊಂದಿದ ಹಾಗೆ ತೋರುತ್ತದೆ.

ದಿವಾನ—ಅದೇನೋ ನಿಜ. ಅದು ಈಗತಾನೇ ಗೊತ್ತಾಯಿತು.

ಬ್ರಹ್ಮಚಾರಿ—ಹೇಗೆ?

ದಿವಾನ—ರಾಜನಲ್ಲಿ ಪ್ರಜೆಗಳ ಭಕ್ತಿ ಹೇಗೆ ಕಡಮೆಯಾಗಬೇಕೋ ಅದಕ್ಕೆ ತಕ್ಕಹಾಗೆ ಅಪವಾದಗಳದ್ದಿವೆ. ಆಗಲಿ ಅದಕ್ಕೋಸ್ಕರ ನಾನು ಅಷ್ಟು ವ್ಯಸ್ತನಾಗಿಲ್ಲ. ಆದರೆ ಒಂದು ವಿಚಾರದಲ್ಲಿ ಮಾತ್ರ ಮನಸ್ಸಿಗೆ ಸಂದೇಹವುಂಟಾಗಿದೆ. ಸಾಯಂಕಾಲದಲ್ಲಿ ರಾಜರು ಮಗುವನ್ನೆತ್ತಿಕೊಂಡರು. ಆದರೆ ರಾತ್ರಿ ಒಂದು ಪ್ರಹರದೊಳಗಾಗಿ ಆ ಸಮಾಚಾರವು ವಿಕೃತಿಯನ್ನು ಹೊಂದಿ ದೇಶದಲ್ಲೆಲ್ಲಾ ಪ್ರಚಾರವಾಗಿದೆ.

ಬ್ರಹ್ಮಚಾರಿ—ತಮಗೆ ಇದೆಲ್ಲಾ ತಿಳಿಯಬಂದುದರಿಂದ ಈ ವಿಚಾರಗಳಲ್ಲಿ ಇನ್ನೇನೂ ಯೋಚನೆಯಿಲ್ಲ. ಈಗ ಆಶ್ರಮಕ್ಕೆ ಹೋಗುತ್ತೇನೆ.

ದಿವಾನನು ಪ್ರಣಾಮವನ್ನು ಮಾಡಿ ಬ್ರಹ್ಮಚಾರಿಯನ್ನು ಕಳುಹಿಸಿ ಕೊಟ್ಟನು. ರಾತ್ರಿ ಅಲ್ಲಿಯೇ ಇರಬೇಕೆಂದು ಕೇಳಿಕೊಳ್ಳಲಿಲ್ಲ.

## ಏಳನೆಯ ಪರಿಚ್ಛೇದ.

ಮರುದಿನ ಬೆಳಗ್ಗೆ ಒಬ್ಬ ಚೋಪದಾರನು ರಾಮದೇವರ ದೇವಸ್ಥಾನದ ಬೀದಿಯಲ್ಲಿ ಬಂದು ನಿಂತನು. ಅವನ ಕೈಯಲ್ಲಿ ಮುಸಲ್ಮಾನರು ಮಾಡಿದ ಒಂದು ಉದ್ದವಾದ ಭಲ್ಲೆ. ಅವನದನ್ನು ಬಲವಾಗಿ ನೆಲಕ್ಕೆ ಹಾಕಿ ಹೊಡೆದನು. ಅದು ನೆಲದಲ್ಲಿ ಹೂಳಿಕೊಂಡು ಕೈಯಿಂದ ಹಿಡಿಯದೆ ನಿಂತಿತು. ಅನಂತರ ಚೋಪದಾರನು ಅಲ್ಲಿಯೇ ಅತ್ತಿತ್ತ ಒಂದೇ ಸಮಕ್ಕೆ ಹೆಜ್ಜೆ ಹಾಕಿ

ಕೊಂಡು ಅತಿ ಗಂಭೀರಭಾವದಿಂದ ತಿರುಗಾಡುತಲಿದ್ದನು. ಹಳ್ಳಿಗಾಡು ಜನರು ಒಬ್ಬೊಬ್ಬರಾಗಿ ಬಂದು ಅಲ್ಲಿ ಸೇರಿದರು. ಇದ್ದಕ್ಕಿದ್ದ ಹಾಗೆ ಚೋಪದಾರನು ಅಲ್ಲಿಗೆ ಬರುವುದಕ್ಕೆ ಕಾರಣವಿಲ್ಲವೆಂದು ಯೋಚಿಸಿ ಒಬ್ಬಿಬ್ಬರು ಕಾರಣವನ್ನು ಕೇಳಲು ಧೈರ್ಯಗೊಂಡು ಕೇಳಿದರು. ಚೋಪದಾರನು ಪ್ರಶ್ನೆ ಕೇಳಿದವರ ಮುಖವನ್ನು ಒಂದು ತಡವೆ ನೋಡಿಬಿಟ್ಟು ಏನುಂದುತ್ತರವನ್ನೂ ಕೊಡಲಿಲ್ಲ. ಚೋಪದಾರನು ಹಿಂದುಸ್ಥಾನಿ, ಅದುಕಾರಣ ಯಾರೂ ಅವನನ್ನು ಪುನಃ ಪ್ರಶ್ನೆಯನ್ನು ಮಾಡಲು ಸಾಹಸವುಳ್ಳವರಾಗಲಿಲ್ಲ, ಸ್ವಲ್ಪದರಲ್ಲಿಯೇ ಸಮಾಚಾರವೆಲ್ಲಾ ಗೊತ್ತಾಗುತ್ತದೆಂದು ತಿಳಿದುಕೊಂಡು ಎಲ್ಲರೂ ಕಾದಿದ್ದರು. ಚೋಪದಾರನು ಯಥಾಪ್ರಕಾರ ಪಾದಚಾರಣಮಾಡಲಾರಂಭಿಸಿದನು.

ಹುಡುಗರು ಬೆಳ್ಳಿಯ ಹಾಗೆ ಥಳಥಳಿಸುತ್ತಿದ್ದ ಭಲ್ಲೆಯ ಅಲಗನ್ನು ನೋಡಿ ಅದನ್ನು ಪರಸ್ಪರ ತೋರಿಸುತಲಿದ್ದರು. ಯುವಕರು ತಮ್ಮತಮ್ಮಲ್ಲಿಯೇ ಮೆಲ್ಲಮೆಲ್ಲಗೆ ನಾನಾವಿಧವಾಗಿ ತರ್ಕಿಸಿಕೊಳ್ಳುತ್ತಿದ್ದರು. ಕೆಲವರು ಇಲ್ಲಿ ಒಂದು ದೇವಮಂದಿರವು ನಿರ್ಮಿತವಾಗುತ್ತದೆ. ಅದುದರಿಂದಲೇ ಇಲ್ಲಿ ಚೋಪದಾರನು ಬಂದು ನಿಂತಿದಾನೆಂದು ಹೇಳುವರು. ಮತ್ತೆ ಕೆಲವರು, ಅದು ತಪ್ಪು, ಇಲ್ಲಿ ಒಂದು ಅತಿಥಿಶಾಲೆಯು ಕಟ್ಟಲ್ಪಡುತ್ತದೆ ಎಂದು ಹೇಳುವರು. ಇನ್ನು ಕೆಲವರು, ಇದು ಇಟ್ಟಿಗೆ ಗಾರೆ ವ್ಯಾಪಾರವಲ್ಲ ; ಏನೋ ಗುರುತರವಾದ ವ್ಯಾಪಾರವಾಗಿದೆ, ಅದು ಕೂಡಲೆ ಗೊತ್ತಾಗುತ್ತದೆಂದು ಹೇಳುವರು. ಇನ್ನೊಬ್ಬ ನಾಲ್ಕನೆಯ ಮನುಷ್ಯನು, ಇದು ಮತ್ತೇನೂ ಅಲ್ಲ; ಇಲ್ಲಿ ಒಂದು ಕೀರ್ತಿಸ್ತಂಭವನ್ನು ಕಟ್ಟುತ್ತಾರೆ, ಚೋಪದಾರನು ಭಲ್ಲೆಯನ್ನು ನೆಟ್ಟಿರುವ ಸ್ಥಳದಲ್ಲಿಯೇ ಕಟ್ಟುವರೆಂದು ಹೇಳಿ ಮುಖಭಂಗಿ ಮಾಡಿ ಸ್ವಲ್ಪ ನಕ್ಕನು. ಅವನ ಮುಖಭಂಗಿಯಿಂದ ಕೂಡಿದ ನಗುವಿನ ಅರ್ಥವು ಅನೇಕರಿಗೆ ಗೊತ್ತಾಗಿ, ಸರಿಯಾಗಿ ಹೇಳಿದನು ಸರಿಯಾಗಿ ಹೇಳಿದ

ನೆಂದು ತಿಳಿದು, ಪ್ರಕಾಶ್ಯವಾಗಿ ಎಲ್ಲರೂ ನಕ್ಕರು. ನಗುವು ನಿಂತಮೇಲೆ ಒಬ್ಬನು, ಸ್ತಂಭವನ್ನು ಸ್ವಲ್ಪ ಸರಿಸಿ ಕಟ್ಟುತ್ತಾರೆಂದು ಹೇಳಿ ಹತ್ತಿರ ಇದ್ದ ಒಂದು ಮನೆಯನ್ನು ನೋಡುತ್ತ ತೋರಿಸಿದನು. ಪುನಃ ನಗವು ಉಂಟಾಯಿತು.

ಯಾವ ಮನೆಯನ್ನು ನೋಡಿ ಎಲ್ಲರೂ ನಕ್ಕರೋ ಆ ಮನೆಯ ಬಾಗಿಲು ತೆರೆದಿತ್ತು. ಒಬ್ಬ ವೃದ್ಧಳಾದ ವಿಧವೆಯು ಗಳದಲ್ಲಿ ಚಿಕ್ಕಚಿಕ್ಕ ರುದ್ರಾಕ್ಷಿಮಾಲೆಯನ್ನು ಹಾಕಿಕೊಂಡು ಮಲಿನವಾದ ಬಿಳೀ ಮಲ್ಲನ್ನುಟ್ಟು ಬಾಗಿಲಿಗೆ ಬಂದು ಅತಿ ತೀವ್ರದೃಷ್ಟಿಯಿಂದ ನೋಡಿದಳು. ಬಹಳ ಜನರು ನಿಂತಿರುವುದನ್ನು ಕಂಡು ಭಯದಿಂದ ಬಾಗಿಲನ್ನು ಹಾಕಿಕೊಂಡು, ಏನೋ ವಿಪತ್ತು ಬಂತು. ಯಾರು ಮಾಡಿದ ಪಾಪ ಯಾರಮೇಲೋ ಬಂದಹಾಗಾಯಿತೆಂದಂದುಕೊಂಡಳು. ಅನಂತರ ಅವಳು ಸೊಸೆಯನ್ನುದ್ದೇಶಿಸಿ, ಇಂದು ನೀರುತರುವುದಕ್ಕಾಗಲಿ ಬೇರೆ ಕೆಲಸಕ್ಕಾಗಲಿ ನೀನು ಹೊರಗೆ ಹೋಗಬೇಡ. ನೀರುಬೇಕಾದರೆ ನಾನೇ ತರುತ್ತೇನೆಂದಳು. ಸೊಸೆಯು ಮನೆಯನ್ನು ಗುಡಿಸುತ್ತಿದ್ದಳು. ಏನೂ ಪ್ರತ್ಯುತ್ತರವನ್ನು ಹೇಳಲಿಲ್ಲ. ತನ್ನ ಮಗಳನ್ನು ಸ್ನೇಹದಿಂದ ನೋಡುತ್ತ ತಲೆಯನ್ನು ಅಲುಗಾಡಿಸುತ್ತ, ನೀರುತರಬೇಕಾದರೆ ನಮ್ಮ ಪುಟ್ಟುಹೋಗಿ ತರುತ್ತಾಳೆ, ಏನೆ, ಪುಟ್ಟು? ಎಂದಳು. ಪುಟ್ಟು ಧೂಳಿನಲ್ಲಿ ಕುಳಿತುಕೊಂಡು ಅವಲಕ್ಕಿಯನ್ನು ಒಂದೊಂದು ಕಾಳಾಗಿ ತಿನ್ನುತ್ತಿದ್ದಳು. ತಾಯಿಯ ಧ್ವನಿಯನ್ನು ಕೇಳಿ ಅವಳನ್ನು ನೋಡಿದಳು. ತಾಯಿಯು ಪುನಃ ಏನೆ, ಪುಟ್ಟು? ಎಂದಳು. ಪುಟ್ಟು ಕಿಲಕಿಲನಕ್ಕು ಒಂದು ಅವಲಕ್ಕಿ ಕಾಳನ್ನು ಸಣ್ಣ ಬೆರಳುಗಳಲ್ಲಿ ಹಿಡಿದು ತಾಯಿಗೆ ತೋರಿಸಿ 'ಇದು' ಎಂದಳು. ತಾಯಿಯು, "ತಿನ್ನುತಿನ್ನು, ಕಾಗೆ ತೆಗೆದುಕೊಂಡು ಹೋದೀತು, ತಾಯಿ" ಎಂದಳು. ಕಾಗೆಯ ಹೆಸರು ಹೇಳುತ್ತಲೇ ಭೀತಳಾಗಿ ಪುಟ್ಟು ನಾಲ್ಕು ಕಡೆಗೂ ತಿರಿಗಿನೋಡಿದಳು. ಪುಟ್ಟುಒಂದು ವರುಷದ

ಮಗು, ಮಾತನಾಡುವುದಕ್ಕೆ ಬಾರದು. ಒಂದೆರಡು ಮಾತು ಗೊತ್ತು. ಕಾಗೆಯೆಂದು ಹೇಳುವರೆ ತನಗೇನೋ ವಿಪತ್ತೆಂದು ತಿಳಿದಿದ್ದಳು. ಬೆಳಗ್ಗೆ ಏಳುತ್ತಲೇ ಸ್ವಲ್ಪ ಅವಲಕ್ಕಿ ಸಿಕ್ಕಿತು ; ಅದನ್ನು ಕಾಗೆ ತೆಗೆದುಕೊಂಡು ಹೋದೀತೆಂಬ ಭಯದಿಂದ ನಾಲ್ಕು ದಿಕ್ಕುಗಳಲ್ಲಿಯೂ ನೋಡುತ್ತಿದ್ದಳು.

ವಾಸ್ತವಿಕವಾಗಿ ಆಗ ಒಂದು ಕಾಗೆಯು ಒಂದು ಮನೆಯಮೇಲೆ ಕೂತಿತ್ತು. ಪುಟ್ಟಿ ಅದನ್ನು ಕಂಡು ಅಳುವುದಕ್ಕೆ ತೊಡಗುತ್ತಲೇ ಅವಳ ಗರ್ಭಧಾರಿಣಿಯು ಒಂದು ಕಾಗೆಯನ್ನು ಓಡಿಸಿದಳು. ಪುಟ್ಟಿ ಆಹ್ಲಾದದಿಂದ ನಕ್ಕು "ಹತ್‌ಹತ್" ಎಂದು ಎರಡು ಕೈಗಳನ್ನೂ ಅಲ್ಲಾಡಿಸಿದಳು. ತಾಯಿಯು ಬಗ್ಗಿ ಅವಳ ಗಲ್ಲವನ್ನು ಹಿಡಿದು ಮುದ್ದಿಟ್ಟುಕೊಂಡು ಆದರಿಸಿ, "ತಿನ್ನು, ನನ್ನ ಕಂದ! ಇಲ್ಲಿಯೇ ಕೂತು ತಿನ್ನು ಅವಲಕ್ಕಿಯನ್ನು ಮಣ್ಣಿಗೆ ಹಾಕಬೇಡ, ಕುಡಿಕೆಯಲ್ಲಿಟ್ಟುಕೊಂಡು ತಿನ್ನು, ನಾಳೆ ನಿನ್ನನ್ನು ರಾಜಕುಮಾರನು ಮದುವೆಮಾಡಿಕೊಂಡರೆ ಚಿನ್ನದ ಕುಡಿಕೆಯಲ್ಲಿ ಅವಲಕ್ಕಿಯನ್ನು ಹಾಕಿಕೊಂಡು ತಿನ್ನುವೆ, ಹೌದೇನೆ? ನನ್ನ ಪುಟ್ಟು?" ಎಂದಳು. ಪುಟ್ಟಿ ಪುನಃ ನಕ್ಕು ಎರಡು ಕೈಗಳನ್ನೂ ಚಾಚಿದಳು. ತಾಯಿಯು ಮುಖಚುಂಬನ ಮಾಡಿ ಹೊರಟುಹೋದಳು. ಅವಳು ಹೊರಟುಹೋದಕೂಡಲೆ ಕಾಗೆಯು ಪುನಃ ಬಂದು ಪುಟ್ಟಿ ಹತ್ತಿರಕೂತಿತು. ಪುಟ್ಟಿ ಭಯದಿಂದ ಕಣ್ಣುಮುಚ್ಚಿಕೊಂಡಳು. ಕಾಗೆಯು ಅವಲಕ್ಕಿಯನ್ನೆಲ್ಲಾ ಆರಿಸಿ ತೆಗೆದುಕೊಂಡು ಹಾರಿಹೋಯಿತು. ಅನಂತರ ಪುಟ್ಟು ಕುಡಿಕೆಯನ್ನು ನೋಡಿ ಅಳುವುದಕ್ಕೆ ತೊಡಗಿದಳು. ಅಳುವನ್ನು ಕೇಳಿ ತಾಯಿಯು ಓಡಿಬಂದು ಕುಡಿಕೆಯು ಬರಿದಾಗಿದ್ದುದನ್ನು ಕಂಡು, ಮೊದಲು ಕಾಗೆಯನ್ನೂ ಅನಂತರ ತನ್ನ ಅದೃಷ್ಟವನ್ನೂ ಬೈದುಕೊಂಡಳು. ಅನಂತರ ಪುಟ್ಟುವನ್ನು ಎತ್ತಿಕೊಂಡು, ಅವಳ ಕಣ್ಣೊರಸುತ್ತ, ಈ ನಿರ್ಭಾಗ್ಯಳ ಹೊಟ್ಟೆಯಲ್ಲಿ ಹುಟ್ಟಿದೇತಕ್ಕೆ? ಇನ್ನು ಅವಲಕ್ಕಿಯನ್ನು ಎಲ್ಲಿಂದ ತರಲಿ? ಎಂದಂದುಕೊಂಡಳು.

ಪುಟ್ಟು ಅಳುವನ್ನು ನಿಲ್ಲಿಸಿ ತಾನೇ ಕಣ್ಣನ್ನೊರಿಸಿಕೊಂಡಳು. ಅದರಿಂದ ಕಣ್ಣಿನ ಕಪ್ಪು ಮೂಗು ಕೆನ್ನೆ ಮುಖಕ್ಕೆ ಹತ್ತಿತು. ತಾಯಿಯು, ಇದೇನೆ ಮುಖವೆಲ್ಲಾ ಕಪ್ಪು! ಎಂದು ಬಟ್ಟೆಯನ್ನು ತಂದು ಮುಖವನ್ನು ಒರಿಸುತ್ತ, ನಮ್ಮ ಪುಟ್ಟುವನ್ನು ಪುನಃ ಇಂದು ರಾಜನು ಎತ್ತಿಕೊಳ್ಳುವನು. ಪುನಃ ಎತ್ತಿಕೊಳ್ಳುವುದಕ್ಕೆ ರಾಜನು ಬರುತ್ತಾನಲ್ಲವೆ, ಪುಟ್ಟು? ಎಂದಳು. ಮಾಧವೀಲತೆಯ ಮುದ್ದುಹೆಸರು ಪುಟ್ಟು.

ಮನೆಯೊಳಗೆ ಹೀಗೆ ತಾಯಿಯು ಮಗುವನ್ನು ಆದರಿಸುತ್ತಿರುವಾಗ ರಾಜಬೀದಿಯಲ್ಲಿ ಒಬ್ಬ ಕಾರಕೂನನು ಬಂದು ಹತ್ತಿರದಲ್ಲಿದ್ದ ಗೃಹಸ್ಥರ ಹೆಸರು ಮುಂತಾದುದನ್ನು ಬರೆದುಕೊಳ್ಳುತ್ತಿದ್ದನು. ಕೆಲವರ ಮನೆಯ ಅಳತೆಯನ್ನು ತೆಗೆದುಕೊಳ್ಳುತ್ತಿದ್ದನು, ಮನೆಯ ಸ್ವತ್ವಕರ್ತರಿಗೆ ಇದನ್ನು ಕಂಡು ಇನ್ನು ತಿಳಿಯಬೇಕಾದುದೇನೂ ಉಳಿಯಲಿಲ್ಲ. ಅವರೆಲ್ಲರೂ ಮನೆಯನ್ನು ಬಿಟ್ಟು ಹೋಗಬೇಕಾಗುತ್ತದೆಂದು ನಿಶ್ಚಯಜ್ಞಾನವುಳ್ಳವರಾದರು. ಗೃಹಸ್ಥರಾದವರಿಗೆ ಇದಕ್ಕಿಂತಲೂ ಹೆಚ್ಚು ದೌರ್ಭಾಗ್ಯವೇನುಂಟು? ಮೊದಲು ಮೊದಲಿನ ರಹಸ್ಯ ಹಾಸ್ಯಗಳೆಲ್ಲಾ ಲೋಪವಾದವು. ಎಲ್ಲರೂ ಗಂಭೀರಭಾವದಿಂದ ನಿಂತುಕೊಂಡು ಮನಸ್ಸಿನಲ್ಲಿ ಮಾಧವೀಲತೆಯ ತಂದೆ ರಾಮಸೇವಕನನ್ನು ತಿರಸ್ಕಾರಮಾಡಲಾರಂಭಿಸಿದರು. ರಾಮಸೇವಕನು ಆಗ ಮನೆಯಲ್ಲಿರಲಿಲ್ಲ. ಬೆಳಗ್ಗೇವೆ ಆಹಾರಸಾಮಗ್ರಿಗಳನ್ನು ಸಂಪಾದಿಸಿಕೊಂಡು ಬರುವುದಕ್ಕೆ ಮನೆಯನ್ನು ಬಿಟ್ಟು ಹೊರಟುಹೋಗಿದ್ದನು.

ಸ್ವಲ್ಪ ಹೊತ್ತಿನಲ್ಲಿಯೇ ರಾಮಸೇವಕನೂ ಬಂದುನಿಂತನು. ಧೋತ್ರದ ಶೆರಗಿನಲ್ಲಿ ಕೆಲವು ತರಕಾರಿಗಳು ಬಾಳೆಕಾಯಿ, ಬಿಲ್ವಪತ್ರೆಮುಂತಾದ್ದು ಗಂಟುಹಾಕಿತ್ತು. ಕೈಯಲ್ಲಿ ಒಂದೆರಡು ಬದನೆಕಾಯಿ, ಅವನನ್ನು ಗುರುತಿಸಿದ ಕೂಡಲೆ ಚೋಪದಾರನು ಬಂದು ಅವನಿಗೆ ಪ್ರಣಾಮವನ್ನುಮಾಡಿ ಕೈಮುಗಿದುಕೊಂಡು ತನ್ನ ಸೇವೆಗೋಸ್ಕರ ನಿಯಮಿತರಾದ ದಾಸದಾಸಿ

ಯರು ಬರುತಲಿದ್ದಾರೆ. ತನಗೋಸ್ಕರ ವಸ್ತ್ರಾಭರಣಗಳನ್ನು ತರುತ್ತಾರೆ. ಈಗ ಸದ್ಯಃ ನಾಲ್ಕುಮಂದಿ ದ್ವಾರಪಾಲಕರು ತನ್ನ ಅಪ್ಪಣೆಗೋಸ್ಕರ ಕಾದಿದ್ದಾರೆಂದು ಮುಂತಾಗಿ ಹೇಳಿದನು. ರಾಮಸೇವಕನಿಗೆ ಏನೊಂದೂ ಗೊತ್ತಾಗದೆ ಚೋಪದಾರನು ಮತ್ತಾರಸಂಗಡಲೋ ಮಾತನಾಡುತ್ತಾನೆಂದು ತಿಳಿದುಕೊಂಡು ತನ್ನ ಹಿಂದೆ ತಿರಿಗಿ ನೋಡಿದನು. ಅಲ್ಲಿ ಯಾರೂ ಇರಲಿಲ್ಲ. ಆಗವನು ಹತಬುದ್ಧಿಯುಳ್ಳವನಾಗಿ, ತರಕಾರಿ ಬದನೇಕಾಯಿಗಳನ್ನು ಬಿಸಾಟುಚೋಪದಾರನನ್ನು ದೃಷ್ಟಿಸಿನೋಡುತ್ತ ನಿಂತನು. ಆಗ ನೆರೆಯವನೊಬ್ಬನು, ನಾವು ಊರುಬಿಟ್ಟು ದೇಶಾಂತರಹೋಗುವುದು ನಿನಗೆ ಇಷ್ಟವಿದ್ದರೆ, ಮೊದಲೇ ಹೇಳಬಿಡು, ಹೊರಟುಹೋಗುತ್ತೇವೆ. ನೀನು ಹಿಂಚುಮುಂಚು ನೋಡಬೇಕಾದ ಅವಶ್ಯಕವಿರುವುದಿಲ್ಲವೆಂದನು. ಮತ್ತೊಬ್ಬನು, ನೀನು ದೊಡ್ಡಮನುಷ್ಯ, ನಮ್ಮಂತಹ ಬಡಪಾಪಿಗಳಮೇಲೆ ಇಷ್ಟು ದೌರಾತ್ಮ್ಯವೇತಕ್ಕೆ ? ಇಷ್ಟು ಅತ್ಯಾಚಾರಮಾಡುವುದು ನಿನಗೆ ಉಚಿತವಲ್ಲವೆಂದನು. ರಾಮಸೇವಕನು ಕಾತರನಯನನಾಗಿ ಎಲ್ಲರನ್ನೂ ಬಿರುಗಣ್ಣು ಬಿಟ್ಟುನೋಡಿದನು. ಈ ಸಮಯಕ್ಕೆ ಸರಿಯಾಗಿ ಅರಮನೆಯಿಂದ ಸಾಮಾನುಗಳು ಬಂದವು. ಎಲ್ಲರ ದೃಷ್ಟಿಯು ಅದರಮೇಲೆ ಬಿತ್ತು. ಎಲ್ಲರೂ ಮುಂದಾಗಿ ಬಂದು ನಿಂತರು. ಮೊದಲು ಎಲ್ಲರ ಮುಖವೂ ಭಾರವಾಯಿತು. ಅನಂತರ ಅವರವರಲ್ಲಿಯೇ ಏಕಾಂತದಲ್ಲಿ ಉಪಹಾಸವು ಪ್ರಾರಂಭವಾಯಿತು. ಕೆಲವರು ಕಟಾಕ್ಷದ್ವಾರಾ, ಕೆಲವರು ಇತರರ ಅಂಗಸ್ಪರ್ಶದ್ವಾರಾ ಉಪಹಾಸ ಮಾಡಲಾರಂಭಿಸಿದರು. ತಮ್ಮ ತಮ್ಮ ಮನೆಗೆ ಹೊರಟುಹೋದರು. ಅವರ ಹಾಸ್ಯಪ್ರವೃತ್ತಿಯು ಶಾಂತವಾಗಲಿಲ್ಲ. ಧನಾಢ್ಯರನ್ನು ಕುರಿತು ಉಪಹಾಸ, ದರಿದ್ರರನ್ನು ಕುರಿತು ಉಪಹಾಸ, ವೃದ್ಧರನ್ನು ಕುರಿತು ಉಪಹಾಸ, ಯುವತಿಯನ್ನು ಕುರಿತು ಉಪಹಾಸ, ಸತೀತ್ವವನ್ನು ಕುರಿತು ಉಪಹಾಸ, ಹೀಗೆಲ್ಲಾ ಮನೆಮನೆಯಲ್ಲಿಯೂ ಆರಂಭವಾಯಿತು.

ಅವರ ಗೃಹಿಣಿಯರೂ ಈರ್ಷ್ಯಾಪರವಶರಾಗಿ ನಾನಾಮಾತನಾಡುವು ದಕ್ಕೆ ಆರಂಭಿಸಿದರು. ಅನೇಕ ರಮಣಿಯರು, ಬಡವೆ ತೊಡುವ ಕುತ್ತಿಗೆಗೆ ನೇಣುಹಾಕಿದರು ಎಂದಂದುಕೊಂಡರು.

## ಎಂಟನೆಯ ಪರಿಚ್ಛೇದ.

ಮಧ್ಯಾಹ್ನಾತ್ಪರ ರಾಜಾ ಇಂದ್ರಭೂಪನು ಆತ್ಮೀಯರೊಂದಿಗೆ ಪುರಾಣಶ್ರವಣಮಾಡುತ್ತಿರುವಾಗ ಒಂದು ಪಲ್ಲಕ್ಕಿಯು ಆತನ ಅಂತಃ ಪುರಕ್ಕೆ ಪ್ರವೇಶಮಾಡಿತು. ಪರಿಚಾರಕನೊಬ್ಬನು ಬಂದು ಕೈಮುಗಿದು ಕೊಂಡು, ಪಲ್ಲಕ್ಕಿಯು ಬಂದು ತಲಪಿತೆಂದು ವರ್ತಮಾನವನ್ನು ಹೇಳಿದನು. ರಾಜನು, ಇಂಗಿತದಿಂದ ವರ್ತಮಾನವನ್ನು ಗ್ರಹಣಮಾಡಿದನು. ಪುರಾಣವು ಮೊದಲಿನಹಾಗೆ ನಡೆಯುತಲಿತ್ತು.

ಪಲ್ಲಕ್ಕಿಯು ಅಂತಃಪುರದಲ್ಲಿ ಇಳಿಸಲ್ಪಟ್ಟಿತು. ಮೂರು ನಾಲ್ಕು ಮಂದಿ ಪರಿಚಾರಕಿಯರು ಬಂದು ಪಲ್ಲಕ್ಕಿಯ ಬಾಗಿಲನ್ನು ತೆರೆದರು. "ಹೋಗು ಹೋಗು" ಎಂದು ಒಂದು ಸಣ್ಣ ಹೆಣ್ಣುಮಗು ತನ್ನ ಚಿಕ್ಕ ಕೈಗಳಿಂದ ಚಪ್ಪಳೆ ಹೊಡಿಯುತ್ತ ಹೊರಕ್ಕೆ ಕೈಚಾಚಿತು. ಅನಂತರ ಪಲ್ಲಕ್ಕಿಯಿಂದ ಹೊರಗೆ ಹೊರಡುವಪ್ರಯತ್ನಮಾಡಿತು. ಪರಿಚಾರಕಳೊಬ್ಬಳು ಅದನ್ನು ಎತ್ತಿಕೊಂಡಳು. ಅವಳ ಕೊಂಕುಳಿನಿಂದ ತಾಯಿಯನ್ನು ಕೂಗಿತು. ಪಲ್ಲಕ್ಕಿಯಲ್ಲಿ ಯುವತಿಯೊಬ್ಬಳಿದ್ದಳು. ಅವಳೇ ಮಗುವಿನ ತಾಯಿ. ಪರಿಚಾರಕರು ಸನ್ಮಾನದಿಂದ, ದಯಮಾಡಿ ಇಳಿಯಬೇಕೆಂದರು. ಅವಳು ಮೆಲ್ಲಮೆಲ್ಲಗೆ ಇಳಿದಳು. ಅವಳು ಮುರಷಿದಾಬಾದಿನ ಪಟ್ಟೆಸೀ

ತಾಂಬರವನ್ನುಟ್ಟಿದ್ದಳು. ಆಪಾದಮಸ್ತಕವೂ ನಾನಾವಿಧವಾದ ಆಭರಣಗಳನ್ನು ತೊಟ್ಟಿದ್ದಳು. ಆದರೆ ಅವೆಲ್ಲಾ ಅಂಗೋಪಯೋಗಿಯಾಗಿರಲಿಲ್ಲ. ಅವುಗಳಲ್ಲನೇಕ ಆಭರಣಗಳು ಅಂಗದಿಂದ ಕಳಚಿಬೀಳುವಹಾಗಿದ್ದವು. ಪಲ್ಲಕ್ಕಿ ಹತ್ತಿರ ನಿಂತು ಯುವತಿಯು ಅವುಗಳನ್ನೆಲ್ಲಾ ಕಟ್ಟಿಕೊಳ್ಳುವುದಕ್ಕೆ ಪ್ರಯತ್ನಪಟ್ಟಳು. ಆದರೆ ಆ ಪ್ರಯತ್ನವು ಸಾಗದುದನ್ನು ಕಂಡು ಒಬ್ಬ ಪರಿಚಾರಿಕೆಯು ಓಡಿಬಂದು ತಕ್ಕ ಸಹಾಯವನ್ನು ಮಾಡಿದಳು. ತೊಟ್ಟಿದ್ದ ಅಲಂಕಾರಗಳ ದೌರಾತ್ಮ್ಯವು ನಿಂತಮೇಲೆ ಯುವತಿಯು ಉಟ್ಟಿದ್ದ ಪಟ್ಟವಸ್ತ್ರ ಆಯತ್ತವಾಗಿ ನಿಲ್ಲಲಾರದೆ ಜರಗುವಹಾಗೆ ಕಂಡಿತು. ಪರಿಚಾರಿಕೆಯರು ಅದನ್ನು ತಿಳಿದುಕೊಂಡವರಾಗಿ ಕೈಹಿಡಿದು ಕರೆದುಕೊಂಡು ಬರುವರಹಾಗೆ ಯುವತಿಯು ಉಟ್ಟಿದ್ದ ಸೀರೆಯ ಸಮೇತವಾಗಿ ಅವಳ ಮೈಯನ್ನು ಭದ್ರವಾಗಿ ಹಿಡಿದುಕೊಂಡು ರಾಣಿಯ ಬಳಿಗೆ ಕರೆದುಕೊಂಡು ಹೋದರು.

ರಾಣಿಯು ಆ ಕಾಲದಲ್ಲಿ ಸ್ವಲ್ಪದೂರ ವರಾಂಡದಲ್ಲಿ ವ್ಯಜನಹಸ್ತಳಾಗಿ ನಿಂತು ತಲೆಯನ್ನು ಸ್ವಲ್ಪ ಓರೆಮಾಡಿಕೊಂಡು ನೋಡುತಲಿದ್ದಳು. ಯುವತಿಯು ಅತಿಕುಂಠಿತಭಾವದಿಂದ ಬಂದು ರಾಣಿಗೆ ಪ್ರಣಾಮವನ್ನು ಮಾಡಿದಳು. ರಾಣಿಯು ಆಶೀರ್ವಾದಮಾಡಿ ಕೈಹಿಡಿದೆತ್ತಿ ಹತ್ತಿರ ಕುಳಿತುಕೊಳ್ಳುವಹಾಗೆ ಹೇಳಿ, ತಾನುಹೋಗಿ ಪರಿಚಾರಿಕೆಯ ಕೊಂಕುಳಲ್ಲಿದ್ದ ಮಗುವನ್ನು ಎತ್ತಿಕೊಂಡಳು. ಪರಿಚಾರಿಕೆಯ ಹತ್ತಿರವಿದ್ದಾಗ ಇದ್ದ ಮಗುವಿನ ಮ್ಲಾನಭಾವವೂ ಕ್ರಂದನೋದ್ಯಮವೂ ಕೊಂಕುಳುಪರಿವರ್ತನವಾದಕೂಡಲೆ ಕಡಮೆಯಾಯಿತು. ರಾಣಿಯಕೊಂಕುಳಿಗೆ ಹೋಗುತ್ತಲೆ ಹುಡುಗಿಯು ರಾಣಿಯು ಉಟ್ಟಿದ್ದ ಪಟ್ಟೆಸೀರೆಯ ಸೆರಗನ್ನು ನೋಡಿತು. ಒಂದುಸಲ ಮುಖವನ್ನೆತ್ತಿ ರಾಣಿಯ ಮುಖವನ್ನು ನೋಡಿತು. ಅವಳ ಕಿವಿಯಲ್ಲಿದ್ದ ವಜ್ರಖಚಿತವಾದ ಆಭರಣವನ್ನು ಕಂಡು ಅದನ್ನು ಸ್ಪರ್ಶಮಾಡುವುದ

ಕೆನ್ನೀಸ್ವರ ಅದರ ಸಣ್ಣ ಕೈಯನ್ನು ನೀಡಿತು. ಕೈ ಅದುವರೆಗೆ ಎಟಕದೆ ಹೋಯಿತು. ಅನಂತರ ಮಗುವಿನ ದೃಷ್ಟಿಯು ರಾಣಿಯ ಕಂಠದಲ್ಲಿದ್ದ ಹಾರದಮೇಲೆ ಬಿತ್ತು. ಆ ಕೂಡಲೆ ಮಗುವು ಅದನ್ನು ಹಿಡಿದುಕೊಂಡು 'ಇದು' ಎಂದಿತು. ರಾಣಿಯು ಮಗುವಿನ ಮುಖವನ್ನು ಚುಂಬನಮಾಡಿ ಶಯ್ಯೆಯಮೇಲೆ ಕುಳಿತುಕೊಂಡು ಮಗುವನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು, ಅದರ ತಾಯಿಯನ್ನು ಕುರಿತು, ಮಗುವಿನ ಹೆಸರೇನು? ಎಂದು ಕೇಳಿದಳು. ಗರ್ಭಧಾರಿಣಿಯು, ಅದರ ಹೆಸರು ಪುಟ್ಟು ಎಂದಳು.

ರಾಣಿ—ನಿನ್ನೆದಿನ ಮಹಾರಾಜರು ಇದರ ಹೆಸರು ಮಾಧವೀಲತೆಯೆಂದು ಹೇಳಿದ್ದರು.

ತಾಯಿ—ಅದೂ ಆಗಬಹುದು. ಮಾಧವೀಲತೆ ಎಂಬ ಹೆಸರಿಗಿಂತಲೂ ಪುಟ್ಟು ಎನ್ನುವ ಹೆಸರು ಚೆನ್ನಾಗಿದೆ. ಗಂಡಸರು ಮಾಧವೀಲತೆಯೆಂದು ಕರೆಯಲಿ, ನಾವು ಪುಟ್ಟು ಎಂದು ಕರೆಯೋಣ.

ಈ ಸಮಯದಲ್ಲಿ ಪುಟ್ಟುವಿನ ದೃಷ್ಟಿಯು ತಾಯಿಯಮೇಲೆ ಬಿದ್ದು ಅವಳ ಹತ್ತರ ಹೋದಳು. ಪುನಃ ತಾಯಿಯ ತೊಡೆಯಮೇಲಿನಿಂದ ರಾಣಿಯ ಹತ್ತರ ಬಂದು ತಾಯಿಯನ್ನು ನೋಡಿ ನಕ್ಕಳು. ತಾಯಿಯು ಬಾ ಎಂದು ಕೈ ನೀಡುತ್ತಲೇ ಪುಟ್ಟು ರಾಣಿಯ ಸೆರಗನ್ನು ಮುಖಕ್ಕೆ ಸ್ವಲ್ಪ ಎಳೆದು ಮರೆಮಾಡಿಕೊಂಡು ಸ್ವಲ್ಪ ಸ್ವಲ್ಪ ಮುಖವನ್ನು ತೋರಿಸುತ್ತ ತಾಯಿಯನ್ನು ನೋಡಲಾರಂಭಿಸಿದಳು. ತಾಯಿಯು ನೋಡಿದ ಕೂಡಲೆ ನಕ್ಕು ಪುನಃ ಮುಖವನ್ನು ಮರೆಮಾಡಿಕೊಳ್ಳುವಳು.

ರಾಣಿಯು ಒಬ್ಬ ಪರಿಚಾರಿಕೆಯನ್ನು ಕರೆದು, ನಮ್ಮ ರಾಜಕುಮಾರನಿಗೆ ಈ ಆಟಗಳು ಗೊತ್ತಿಲ್ಲ. ರಾಜಕುಮಾರನೆಲ್ಲಿ? ಒಂದುಸಲ ಕರೆತಂದು ಪುಟ್ಟುವಿನ ಹತ್ತಿರ ಕುಳ್ಳಿರಿಸು, ಇಬ್ಬರೂ ಏನುಮಾಡುವರೋ,

ನೋಡೋಣವೆಂದಳು. ಪರಿಚಾರಿಕೆಯು ಅಪ್ಪಣೆಯಪ್ರಕಾರವೆಂದು ಹೇಳಿ ಹೊರಟುಹೋದಳು.

ಮತ್ತೊಬ್ಬ ಪರಿಚಾರಿಕೆಯು ಸ್ವಲ್ಪಮಿಠಾಯಿಯನ್ನು ತಂದು ಪುಟ್ಟನಕೈಯಲ್ಲಿ ಕೊಟ್ಟಳು. ಪುಟ್ಟು ಅದನ್ನು ತಿನ್ನತಕ್ಕದುದೆಂದರಿಯದೆ ಆಡುವಸಾಮಾನೆಂದುರುಳ್ಳನೋಡಿದಳು. ಅವಳು ಸ್ತನ್ಯದ ಹಾಲು,ಅವಲಕ್ಕಿ, ಬೆಲ್ಲ, ಇಷ್ಟು ಬಿಟ್ಟು ಮತ್ತಾವದನ್ನೂ ಯಾವಾಗಲೂ ತಿಂದರಿಯಳು. ಮಿಠಾಯಿ ಪೇಡಾ ಇವುಗಳನ್ನು ಯಾವಾಗಲೂ ಕಾಣಳು. ಅದುಕಾರಣ ಕೈಗೆ ಕೊಟ್ಟ ಮಿಠಾಯಿಯನ್ನು ಬಿಸಾಟುಬಿಟ್ಟಳು.

ಈ ಸಮಯದಲ್ಲಿ ಅಂತಃಪುರದ ಬಾಗಿಲಲ್ಲಿ ನಗಾರಿಶಬ್ದವಾಯಿತು. ರಾಣಿಯು, ರಾಜರಸವಾರಿ ಬಂತೆಂದಳು. ಒಬ್ಬ ಪರಿಚಾರಿಕೆಯು ಪುಟ್ಟುವಿನ ತಾಯಿಯನ್ನು ಬೇರೆ ಕೊಠಡಿಯೊಳಕ್ಕೆ ಕರೆದುಕೊಂಡುಹೋದಳು. ರಾಜನು ಹಸನ್ಮುಖನಾಗಿ ಒಳಗೆ ಬಂದನು. ರಾಜನನ್ನು ಕಂಡಕೂಡಲೆ ಪುಟ್ಟು ಕೈನೀಡಿದಳು ರಾಜನು ಪುಟ್ಟುವನ್ನು ಎತ್ತಿಕೊಂಡು ರಾಣಿಯ ಹತ್ತಿರ ಕುಳಿತುಕೊಂಡು, ರಾಣಿಯನ್ನು ಕುರಿತು, ನಾನು ನೆನ್ನೆ ರಾತ್ರಿ ಹೇಳಿದಹಾಗೆ ಹುಡುಗಿಯು ಚಲುವೆಯಲ್ಲವೆ? ಎಂದನು

ರಾಣಿ—ಮಗುವನ್ನು ಎತ್ತಿಕೊಂಡಕೂಡಲೆ ಮೈಯೆಲ್ಲ ಉಬ್ಬಿ ಆನಂದದಿಂದ ಪುಳಕಿತವಾಯಿತು.

ರಾಜಾ—ಶರೀರವು ಅತ್ಯಂತ ಕೋಮಲವಾಗಿದೆ.

ರಾಣಿ—ನಾನದನ್ನು ಒಪ್ಪುವದಿಲ್ಲ. ಮಕ್ಕಳ ಮೈ ಇರುವುದೇ ಹೀಗೆ. ರಾಜಕುಮಾರನಶರೀರವು ಇದಕ್ಕಿಂತಲೂ ಕೋಮಲವಾಗಿದೆ.

ರಾಜಾ—ಹಾಗಾದರೆ ಏನು ಹೇಳುತಲಿದ್ದೆ?

ರಾಣಿಯು ಹಿಂದು ಮುಂದು ನೋಡಿ, ಬೇರೆ ಮಕ್ಕಳನ್ನು ಎತ್ತಿಕೊಂ

ಡರೆ ಇಷ್ಟು ಸುಖವಾಗಿ ತೋರುವುದಿಲ್ಲ. ಈ ಮಗುವಿಗೇನೋ ಸ್ವಲ್ಪ ಮಂತ್ರಶಕ್ತಿ ಯಿರುವಹಾಗೆ ಕಾಣುತ್ತದೆ ಎಂದಳು.

ರಾಜನು ನಕ್ಕು, ಅಂತಹದುದೇನೂ ಇಲ್ಲ. ನಾನು ಮಗುವನ್ನು ಪ್ರೀತಿಸುತ್ತೇನೆಂಬುವರಮೇಲೆ ನಿನಗೂ ಆರೀತಿ ಪ್ರೀತಿಯುಂಟಾಗಿದೆ ಎಂದನು.

ರಾಣಿ—ಹಾಗೆಯೇ ಆಗಲಿ. ಮಗುವಿನಲ್ಲೇನೂ ಕುಂದಕವಿಲ್ಲ. ಎಲ್ಲಾ ಚೆನ್ನಾಗಿ ಗುಣವಂತಲೇ ಹೇಳಬೇಕು. ಬೇರೇ ಹುಡುಗರಾಗಿದ್ದರೆ ಎಷ್ಟೋ ಅಳುತಿದ್ದುವು. ಪುಟ್ಟಿದಂದ ಮೊದಲ್ಗೊಂಡು ಕೇವಲ ನಗುತಲೇ ಇದ್ದಾಳೆ. ಮತ್ತು ಆಷ್ಟುತಡವೆ ನಕ್ಕರೂ ಆಷ್ಟುತಡವೆ ತಮ್ಮ ಜ್ಞಾಪಕವೇ ಬರುತ್ತದೆ. ಏತಕ್ಕೆ ಹಾಗಾಗುತ್ತದೆ. ಹೇಳೋಣಾಗಲಿ, ನೋಡೋಣ?

ರಾಜಾ—ಪೂಥವಿ ನಗುವುದು ನನ್ನಹಾಗೆ ನಗುತ್ತಾಳೆಂದು ತೋರುತ್ತದೆ. 12362

ರಾಣಿ—ಇದು ನನಗೆ ಚೆನ್ನಾಗಿ ಗೊತ್ತಾಗಲಿಲ್ಲ. ಮತ್ತು, ಇದು ನೋಡೋಣಾಗಲಿ, ಇವಳ ಕೈ ತಮ್ಮ ಕೈಯ ಹಾಗೆಯೇ ಇದೆ.

ರಾಜಾ—ಮತ್ತು ಇದು ನೋಡು, ಇವಳ ಕಣ್ಣುಗಳೆರಡನ್ನೂ ನೋಡು; ನೋಡಿದಕೂಡಲೇ ಅವು ನಿನ್ನ ಕಣ್ಣುಗಳಹಾಗಿರುವುದನ್ನು ಕಂಡು ನನಗೆ ಆಶ್ಚರ್ಯವಾಯಿತು.!

ರಾಣಿ—ಏನು ಆಶ್ಚರ್ಯ! ಮನುಷ್ಯರ ಹಾಗೆ ಮನುಷ್ಯರಿದ್ದಾರೆಯಲ್ಲವೆ?

ರಾಜಾ—ಈ ಪ್ರಪಂಚದಲ್ಲಿ ಯಾವದೂ ಆಶ್ಚರ್ಯವಲ್ಲ. ರಾಮ ಸೀತೆಯರ ಹಾಗೆ ನಮಗೂ ಘಟಿಸಿದ್ದರೆ, ಇದು ನನ್ನ ಲವ ಎಂತಲೇ ಹೇಳುತ್ತಿದ್ದೆ. ಅಂತಹ ಘಟನೆಗಳು ಯಾವದೂ ನಮಗೆ ಉಂಟಾಗಲಿಲ್ಲ.

ರಾಣಿ—ಹೌದಾ! ಹೌದಾ! ಚೆನ್ನಾಗಿ ಹೇಳೋಣಾಯಿತು! ಇದೆಲ್ಲಾ ದೇವರ ಹಣೆಯಲ್ಲಿಯೇ ಬರೆದಿರಲಿ.

ರಾಜ:—ಸಾಯಂಕಾಲವಾಯಿತು. ಬ್ರಾಹ್ಮಣಕನ್ಯೆಯನ್ನು ಹೆಚ್ಚು ಹೊತ್ತು ಇಟ್ಟುಕೊಂಡಿರಬಾರದು. ಈಗ ನಾನು ಹೋಗುತ್ತೇನೆ.

ರಾಜನು ಹೊರಟುಹೋದನು. ಅಂತಃಪುರವನ್ನು ಬಿಟ್ಟು ಹೊರಡುತ್ತಲೇ ಮೊದಲಿನಹಾಗೆ ವಾದ್ಯೋದ್ಯಮವಾಯಿತು. ವಾದ್ಯೋದ್ಯಮವಾದ ಕೂಡಲೇ ರಾಜಪ್ರಾಂಗಣದಲ್ಲಿ ಮುಸಲದಹಾಗೆ ಇದ್ದ ಭಂಗಾರದ ಕಟ್ಟಿಗೆಯನ್ನು ಹಿಡಿದುಕೊಂಡಿದ್ದ ನಕಿಬನು ಉಚ್ಚಸ್ವರದಿಂದ ಚೀತ್ಕಾರ ಮಾಡುತ್ತಾ ರಾಜನು ಅಂತಃಪುರವನ್ನು ಬಿಟ್ಟು ಹೊರಟ ಸಮಾಚಾರವನ್ನು ಪ್ರಚಾರ ಮಾಡಿದನು ನವಬತ್ತು ಆಗುವುದಕ್ಕೆ ಪ್ರಾರಂಭವಾಯಿತು. ಅರಮನೆಯ ಬಾಗಲಲ್ಲಿ ಸುಸಜ್ಜಿತವಾದ ಆನೆಯು ನಿಂತಿದ್ದುದು ಬೃಂಹಿತಮಾಡಲಾರಂಭಿಸಿತು. ಮಂತ್ರಿಗಳೆಲ್ಲರೂ ಮುಂದಾಗಿ ಬಂದುನಿಂತರು. ಪರಿಚಾರಕರೆಲ್ಲರೂ ಶ್ರೇಣೀಬದ್ಧವಾಗಿ ನಿಂತರು. ರಾಜನು ಪ್ರಷ್ಪೋದ್ಯಾನಕ್ಕೆ ಹೋದನು.

---

## ಐಬತ್ತನೆಯ ಪರಿಚ್ಛೇದ.

ಇಂದ್ರಭೂಪನು ಎದ್ದು ಹೊರಟುಹೋದಮೇಲೆ ಪ್ರಟ್ಟುವಿನ ತಾಯಿಯು ಬಂದು ಹೊರಟುಹೋಗುವುದಕ್ಕೆ ರಾಣಿಯ ಅಪ್ಪಣೆಯನ್ನು ಬೇಡಿದಳು. ರಾಣಿಯು ನಕ್ಕು, ಪ್ರಟ್ಟುವೂ ರಾಜಕುಮಾರನೂ ಮಾತನಾಡಲಿ, ಇನ್ನು ಸ್ವಲ್ಪ ಇರಬಹುದೆಂದಳು. ಈ ಸಮಯದಲ್ಲಿ ಪರಿಚಾರಿಕೆಯು ರಾಜಕುಮಾರನನ್ನು ಎತ್ತಿಕೊಂಡುಬಂದು ಪ್ರಟ್ಟುವಿನ ಇದುರಿಗೆ ಕುಳ್ಳರಿಸಿದಳು.

ಇಬ್ಬರಿಗೂ ಒಂದೇ ವಯಸ್ಸು. ನೋಡುವುದಕ್ಕೆ ಒಂದೇ ರೂಪು ಉಳ್ಳವರಾಗಿದ್ದರು. ರಾಜಕುಮಾರನು ಸ್ವಲ್ಪ ದುರ್ಬಲ. ಆಗ ಪುಟ್ಟು ನೆಲದ ಮೇಲೆ ಕೂತುಕೊಂಡು ಸ್ವರ್ಣಮುದ್ರೆಗಳನ್ನಿಟ್ಟುಕೊಂಡು ಬೇರೆ ಜ್ಞಾನದಿಂದ ಆಟವಾಡುತಲಿದ್ದಳು. ರಾಣಿಯು ಅವಳನ್ನು ಮೊದಲು ಎತ್ತಿಕೊಂಡಾಗ ಅವಳ ಕೈಗೆ ಕೆಲವು ಮೊಹರೆಗಳನ್ನು ಕೊಟ್ಟಿದ್ದಳು. ದಾಸಿಯೊಬ್ಬಳು ಆ ಮೊಹರೆಗಳನ್ನು ತೆಗೆದಿಟ್ಟುಕೊಂಡಿದ್ದವಳು ಪುಟ್ಟುವಿನ ತಾಯಿಯು ಮನೆಗೆ ಹೋಗಲು ಎದ್ದುದರಿಂದ ಪುನಃ ಮೊಹರೆಗಳನ್ನು ಪುಟ್ಟುವಿನ ಕೈಯಲ್ಲಿ ಕೊಟ್ಟಳು. ಪುಟ್ಟು ಅವುಗಳನ್ನಿಟ್ಟುಕೊಂಡು ಏನೋಜ್ಞಾನದಿಂದಾಡುತ್ತಿದ್ದಳು. ರಾಜಕುಮಾರನನ್ನು ಪುಟ್ಟು ಇದುರಿಗೆ ಕೂಡಿಸಿದ ಮೇಲೆ ಪುಟ್ಟು ಆಟವನ್ನು ಬಿಟ್ಟು ರಾಜಕುಮಾರನನ್ನು ನೋಡುವುದಕ್ಕೆ ಪ್ರಾರಂಭಿಸಿದಳು. ಸ್ವಲ್ಪ ಹೊತ್ತಿನಮೇಲೆ ತನ್ನ ಪುಟ್ಟು ಬೆರಳನ್ನು ರಾಜಕುಮಾರನ ಮೈಮೇಲಿಟ್ಟು ಪುನಃ ಭಯದಿಂದ ಕೈ ತೆಗೆದು, ಎಲ್ಲರನ್ನೂ ನೋಡಿದಳು. ರಾಜಕುಮಾರನು ಅಳುವುದಕ್ಕೆ ತೊಡಗಿದನು. ಆ ಕೂಡಲೇ ಪುಟ್ಟು ಬಂದು, 'ಈ, ಈ' ಎಂದು ರಾಜಕುಮಾರನ ಮುಖಕ್ಕೆ ತೋರಿಸಿದಳು. ರಾಜಕುಮಾರನು ಅಳುವನ್ನು ನಿಲ್ಲಿಸಿ, ಅವಳ ಕೈಲಿದ್ದ ಮೊಹರೆಯನ್ನು ನೋಡಿ ಅನಂತರ ಅದನ್ನು ಅವಳ ಕೈಯಿಂದ ಕಿತ್ತು ಹಾಕಿ ಪುನಃ ಅಳಲಾರಂಭಿಸಿದನು. ರಾಣಿಯು ಅಯ್ಯೋ! ನನ್ನ ಹಾಳು ಅದೃಷ್ಟವೆ; ಎಂದು ಬಿಸುಸುಯ್ದಳು. ದಾಸಿಯೊಬ್ಬಳು ಬಂದು ರಾಜಕುಮಾರನನ್ನು ಎತ್ತಿಕೊಂಡು ಮುದ್ದಿಟ್ಟುಕೊಂಡಳು.

ಪುಟ್ಟುವಿನ ತಾಯಿಯು ಅಪ್ಪಣೆ ತೆಗೆದುಕೊಂಡು ಹೊರಟುಹೋದಳು. ಅಪ್ಪಣೆ ಕೊಡುವಾಗ ರಾಣಿಯು ಏನೂ ಹೇಳದೆ ಸಂಗಡ ಒಬ್ಬ ದಾಸಿಯನ್ನು ಕಳುಹಿಸಿಕೊಟ್ಟಳು. ದಾಸಿಯು ಪುಟ್ಟುವನ್ನು ಎತ್ತಿಕೊಂಡುಹೋಗಿ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಹೊರಟುಬಂದಳು. ಪುಟ್ಟುವಿನ

ತಾಯಿಯು ಪಲ್ಲಕ್ಕಿಯಲ್ಲಿ ಕುಳಿತುಕೊಳ್ಳುವಾಗ ದಾಸಿಯು ಕೈಯನ್ನು ಹಿಡಿದುಕೊಂಡು, ರಾಜ್ಯೇಶ್ವರಿಯು ನನ್ನಮೇಲೆ ಕೋಪ ಮಾಡಿದಳೇನು? ಎಂದು ಕೇಳಿದಳು. ದಾಸಿಯು, ಅದು ಎಂತಹ ಮಾತು! ಎಂದಳು ಬೋಯಿಗಳು ಬಂದು ಪಲ್ಲಕ್ಕಿಯನ್ನು ಹೊತ್ತುಕೊಂಡುಹೋದರು. ಪುಟ್ಟಿವನ್ನೆತ್ತಿಕೊಂಡು ಬಂದಿದ್ದ ದಾಸಿಯು, ಬೇರೆ ಮಹಲಿಗೆ ಹೋದಳು. ಅಲ್ಲಿ ರಾಜನ ತಂಗಿಯು ಇರುವಳು. ಅವಳಿಗೆ ಮಕ್ಕಳು ಇಲ್ಲ. ಅವಳ ಸೇವಕರೆಲ್ಲರೂ ವೃದ್ಧೆಯರಾದ ಗಂಡನಿಲ್ಲದ ಹೆಂಗಸರಾಗಿದ್ದರು ವಿಶೇಷವಾಗಿ ಬ್ರಾಹ್ಮಣ ಹೆಂಗಸರೇ ಹೆಚ್ಚಾಗಿದ್ದರು. ಅವರಲ್ಲಿ ಒಬ್ಬ ಜೋಯಿಸನ ಹೆಂಡತಿಯು ಪಂಚಾಂಗವನ್ನು ಹೇಳುತ್ತ ಮಧ್ಯಾಹ್ನದಮೇಲೆ ಏನಾದರೂ ಗ್ರಂಥಗಳನ್ನು ಓದುವಳು. ಕಾಳಿಯ ಮೇಲಿನ ಹಾಡುಗಳನ್ನು ರಾಜನ ತಂಗಿಗೆ ಹೇಳುವಳು.

ರಾಣಿಯು ದಾಸಿಯು ಅಲ್ಲಿಗೆ ಹೋದಾಗ ಕಾಳಿಯ ಮೇಲಿನ ಹಾಡು ಮುಗಿದು, ಎಲ್ಲರೂ ಹತ್ತಿ ತೆಗೆದುಕೊಂಡು ಬಿಡಿಸುತ್ತಲಿದ್ದರು. ಪ್ರತ್ಯಹವೂ ಬ್ರಾಹ್ಮಣಹೆಂಗಸರು ಹತ್ತಿಯಿಂದ ಯಜ್ಞೋಪವೀತಕ್ಕೋಸ್ಕರ ನೂಲು ಮಾಡುವರು. ರಾಜನ ತಂಗಿಯು ಮಾಡುತ್ತಿದ್ದ ವ್ರತಕ್ಕೆ ನಿತ್ಯವು ಯಜ್ಞೋಪವೀತಗಳು ಬೇಕಾಗಿರುವುವು.

ರಾಣಿಯ ದಾಸಿಯನ್ನು ನೋಡಿ ರಾಜಭಗಿನಿಯು, ನೀನು ಬಂದುದು ಒಳ್ಳೇಕೆಲಸವಾಯಿತು. ನಾನು ರಾಜರಿಗೋಸ್ಕರ ಸ್ವಂತವಾಗಿ ಕೆಲವು ಪದಾರ್ಥಗಳನ್ನು ಅಡಿಗೆ ಮಾಡಿದ್ದೇನೆಂದು ಹೇಳಿ ಅವಳನ್ನು ಬೇರೆ ಚಿಕ್ಕಮನೆಗೆ ಕರೆದುಕೊಂಡುಹೋಗಿ, ಬೆಳ್ಳಿಯ ತಟ್ಟೆಯಲ್ಲಿ ಎರಡು ಮೂರು ಪದಾರ್ಥಗಳನ್ನಿಟ್ಟುಕೊಟ್ಟಳು. ದಾಸಿಯು ಅವನ್ನು ತೆಗೆದುಕೊಂಡು, ಬಂದ ಮಾತನ್ನು ತಿಳಿಸುವುದಕ್ಕೆ ಬಂದಿದ್ದೆನೆಂದಳು.

ರಾಜಭಗಿನಿ—ಏನು ?

ದಾಸಿ—ಇಂದು ನಾನು ಆ ಹುಡುಗಿಯನ್ನು ನೋಡಿದ್ದೆ.

ರಾಜಭಗಿನಿ—ಯಾವ ಹುಡುಗಿ ?

ದಾಸಿ—ತಾವು ಎಲ್ಲಾ ಮರೆತರೇನು ?

ರಾಜಭಗಿನಿ—ನನಗೆ ಯಾವದು ತಾನೆ ಜ್ಞಾಪಕ ? ಹೇಳು.

ದಾಸಿ—ಆ ನಿರ್ಭಾಗ್ಯಳು.

ರಾಜಭಗಿನಿ—ಯಾವ ನಿರ್ಭಾಗ್ಯಳು ?

ದಾಸಿ—ತಾವು ಆ ವಿಪತ್ತು ಸಂಭವಿಸಿದ ರಾತ್ರಿಯನ್ನು ಮರೆತರಾ ?

ರಾಜಭಗಿನಿ—ಈಗ ಗೊತ್ತಾಯಿತು. ಎಲ್ಲಿ ನೋಡಿದೆ.

ದಾಸಿ—ಈ ಅರಮನೆಯಲ್ಲಿಯೇ—ಈಗತಾನೆ ನೋಡಿದೆ.

ರಾಜಭಗಿನಿ—ಅದು ಹೇಗೆ ? ಯಾರೆ ಕರೆತಂದವರು ? ನಡೆಯ್ಯೇ, ನಾನೂ ನೋಡೇನು.

ದಾಸಿ—ಈಗ ನೋಡುವುದಕ್ಕಾಗುವದಿಲ್ಲ. ಅವರು ಕರೆದುಕೊಂಡು ಹೊರಟುಹೋದರು.

ರಾಜಭಗಿನಿ—ಆಹಾ! ನಾನು ನೋಡಲಿಲ್ಲ. ಯಾರು ಕರೆತಂದಿದ್ದರು ?

ದಾಸಿ—ಆ ಹುಡುಗಿಯ ತಾಯಿ.

ರಾಜಭಗಿನಿ—ರಾಣಿಯು ಏನು ಹೇಳಿದಳು ?

ದಾಸಿ—ದರಿದ್ರರ ಮಗುವೆಂದು ಕೆಲವು ಮೊಹರೆಗಳನ್ನು ಕೊಟ್ಟಳು. ರಾಜರು ಹುಡುಗಿಯನ್ನು ಬಹಳ ಪ್ರೀತಿಸಿ ತಾವೇ ಎತ್ತಿಕೊಂಡು ಮುದ್ದಾಡಿದರು. ರಾಜಭಗಿನಿಯು ಕಣ್ಣೊರಿಸಿಕೊಂಡು ಅನ್ಯಮನಸ್ಕಳಾಗಿ ಕುಳಿತುಕೊಂಡಳು.

---

## ಹತ್ತನೆಯ ಪರಿಚ್ಛೇದ.

ಮರುದಿನ ಬೆಳಗ್ಗೆ ಎದ್ದು ಪುಟ್ಟುವಿನ ತಾಯಿಯು ಮನೆಯ ಕೆಲಸ ಮಾಡುವದಕ್ಕೆ ಪ್ರಾರಂಭಿಸಿ, ಮೊದಲು ಕಸಬರಿಗೆಯನ್ನು ತೆಗೆದುಕೊಂಡು ಗುಡಿಸುವುದಕ್ಕೆ ಹೊರಟಳು. ಆಗ ಒಬ್ಬ ದಾಸಿಯು ಅವಳ ಕೈಯಿಂದ ಕಸಬರಿಗೆಯನ್ನು ಕಸರಿಕೊಂಡಳು. ಪುಟ್ಟುವಿನ ತಾಯಿಯು ಅಡಿಗೆಮನೆ ಯಲ್ಲಿ ಒಲೆ ಸಾರಿಸುವುದಕ್ಕೆ ಹೋದಳು. ಮತ್ತೊಬ್ಬ ದಾಸಿಯು ಬಂದು, ಠಾಕೂರಿಣಿ! ಇದೆಲ್ಲಾ ನಮ್ಮ ಕೆಲಸವೆಂದಳು. ಅವಳಪ್ಪಣೆಯನ್ನು ನಿರೀ ಕ್ಷಿಸದೆ ಒಲೆಯನ್ನು ಸಾರಿಸಿದಳು. ಪುಟ್ಟುವಿನ ತಾಯಿಯು ಸೀರೆಯ ಸೆರಗಿನ ಲ್ಲಿ ಕೈಯೊರಿಸಿಕೊಳ್ಳುವುದಕ್ಕೆ ಪ್ರಾರಂಭಿಸಿದಾಗ ಅವಳ ದೃಷ್ಟಿಯು ಬಂದು ಮಣ್ಣು ಕೊಡದ ಮೇಲೆ ಬಿತ್ತು. ಅದನ್ನು ತೆಗೆದು ಕಂಕುಳಲ್ಲಿರಿಕಿಕೊಂಡು ನೀರು ತರುವುದಕ್ಕೆ ಹೊರಟಳು. ಇನ್ನೊಬ್ಬ ದಾಸಿಯು ಬಂದು ಕಂಕು ಳಿಂದ ಕೊಡವನ್ನು ಕಿತ್ತುಕೊಂಡು ನೀರು ತರುವುದಕ್ಕೆ ಹೋದಳು. ಪುಟ್ಟು ವಿನ ತಾಯಿಯು ಯಾವ ಕೆಲಸವನ್ನೂ ಮಾಡಲಾಗದೆ ಹೋದಳು. ಆಗ ಮಳು ಬಂದು ಕಿಟಕಿಯ ಬಳಿ ಹೋಗಿ ಬೆರಳಿನ ಉಗುರಿನಿಂದ ಅದರ ಬಾಗಿ ಲನ್ನು ಕೆರಿಯುತ್ತ, ಇದೇನು ಅನ್ಯಾಯ! ನಾನು ನನ್ನ ಮನೆ ಕೆಲಸ ಒಂದ ನ್ನಾದರೂ ಮಾಡಬಾರದೆ? ಹಾಗಾದರೆ ನಾನು ಇನ್ನೇನು ಮಾಡಲಿ? ಎಂದು ಅಭಿಮಾನದಿಂದ ಹೇಳಿಕೊಂಡಳು.

ಮನೆಯ ಹೊರಗೆ ಅವಳ ಗಂಡನಿಗೆ ಇದೆ ಅವಸ್ಥೆ. ಅಲ್ಲಿ ನಾಲ್ಕು ಮಂದಿ ದ್ವಾರಪಾಲಕರಿದ್ದರು. ಅವರು ರಾಮ ಸೇವಕನನ್ನು ಕಂಡಕೂಡಲೆ ಎದ್ದು ಕೈ ಮುಗಿದುಕೊಂಡು ನಿಲ್ಲುವರು. ಅದನ್ನು ನೋಡಿ ರಾಮ ಸೇವ ಕನು ಅಪ್ರತಿಭನಾಗಿ ಒಳಕ್ಕೆ ಬಂದು ಬಿಟ್ಟನು. ಒಳಕ್ಕೆ ಬಂದು ದ್ವಾರ ಪಾಲಕರಿಗೋಸ್ಕರ ತಂಬಾಕನ್ನು ತೀಡಿ ಸರಿಮಾಡಿ ಹೊರಕ್ಕೆ ತಂದನು.

ರಾಮಸೇವಕನು ಒಳಗೆ ಇದ್ದಾಗ ಕುಳಿತಿದ್ದ ದ್ವಾರಪಾಲಕರು ಅವನು ಹೊರಗೆ ಬಂದುದನ್ನು ಕಂಡು ವ್ಯಸ್ತರಾಗಿ ಎದ್ದು ನಿಂತರು. ರಾಮಸೇವಕನು ಅವರ ಹತ್ತಿರ ಹುಕ್ಕೆಯನ್ನು ಇಟ್ಟು, ನೀವು ತಂಬಾಕು ಸೇವನೆ ಮಾಡಿರೆಂದು ಹೇಳಿ ಒಳಕ್ಕೆ ಹೊರಟು ಹೋದನು. ರಾಮಸೇವಕನು ಹೊರಗೆ ಬಂದಾಗೆಲ್ಲಾ ದ್ವಾರಪಾಲಕರು ಎದ್ದು ನಿಲ್ಲುವರು. ಅದು ಕಾರಣ ರಾಮಸೇವಕನು ಅವರೆದುರಿಗೆ ಹೋಗಲು ಕುಂಠಿತನಾದನು. ಅಂತಃಪುರದಲ್ಲಿ ಸ್ಥಳವಿಲ್ಲ. ಅಲ್ಲಿ ಮೂರು ನಾಲ್ಕು ಮಂದಿ ದಾಸಿಗಳಿದ್ದರು. ಮುಂದುಗಡೆ ದ್ವಾರಪಾಲಕರು. ರಾಮಸೇವಕನಿಗೆ ಬಹು ಕಷ್ಟಕ್ಕೆ ಬಂತು. ಎಲ್ಲಿಗೆ ಹೋದಾನು? ಮೊದಲು ಅವನು ಎಷ್ಟು ಕಷ್ಟಪಡುತಲಿದ್ದರೂ ತನ್ನ ಸ್ವಂತ ಮನೆಯಲ್ಲಿ ಎಲ್ಲಿ ಬೇಕಾದರೂ ತಿರುಗಾಡಬಹುದಾಗಿತ್ತು. ಈಗ ಆ ಸುಖವು ಹೋಯಿತು. ಆಗಿನ ಕಾಲದಲ್ಲಿ ಪರಾನ್ನವಾದರೂ ತಿನ್ನಬಹುದು, ಪರಗೃಹದಲ್ಲಿ ಎಂದಿಗೂ ಇರಬಾರದೆಂದು ಹೇಳಿಕೊಳ್ಳುತ್ತಿದ್ದರು. ಈಗ ರಾಮಸೇವಕನು ಪ್ರಕಾರಾಂತರದಲ್ಲಿ ಸ್ವಂತ ಗೃಹದಲ್ಲಿ ಪರಗೃಹಸ್ಥನಾದನು. ತನ್ನ ಸ್ವಂತ ಮನೆಯಲ್ಲಿ ಪರರಿಗೋಸ್ಕರ ಕುಂಠಿತನಾಗಬೇಕಾಗಿ ಬಂತು. ಏತಕ್ಕೆ ಹೀಗಾಯಿತೆಂಬುದು ತಿಳಿಯಲಾರದೆ ರಾಮಸೇವಕನು, ಯಾರಿಗೆ ದಾಸ ದಾಸಿಯರಿದ್ದಾರೋ ಅವರೆಲ್ಲರೂ ಹೀಗೆಯೇ ಪರಗೃಹಸ್ಥರೆಂದು ಸಿದ್ಧಾಂತ ಮಾಡಿಕೊಂಡನು.

ರಾಮಸೇವಕನು ಕಿಟಕಿಯಿಂದ ಇಳಿ ಬಿದ್ದು ಹೊರಗೆ ಹೋದನು. ಹೋಗಿ ಅಲ್ಲಿ ಒಬ್ಬ ನೆರೆಯವನನ್ನು ನೋಡಿದನು. ನೆರೆ ಗೃಹಸ್ಥನು ನೋಡಿ ಸ್ವಲ್ಪ ನಕ್ಕನು. ರಾಮಸೇವಕನು, ನಡೆಯಣ್ಣ, ನಿಮ್ಮ ಮನೆಗೆ ಹೋಗೋಣವೆಂದನು. ನೆರೆ ಗೃಹಸ್ಥನು, ನನಗೆ ಕೆಲಸವಿದೆ ಎಂದು ಹೇಳಿ ಬೇರೆ ಕಡೆ ಹೊರಟುಹೋದನು. ರಾಮಸೇವಕನು ಮಧ್ಯಾಹ್ನದ ವರೆಗೂ ಅಲ್ಲಲ್ಲಿ ತಿರುಗಾಡಿಕೊಂಡು ಅನಂತರ ಕಿಟಕಿಯಿಂದ ಮನೆಯೊಳಗೆ ಪ್ರವೇಶ ಮಾಡಿ

ದನು. ಊಟಮಾಡಿಕೊಂಡು ಪುನಃ ಕಿಟಕಿಯಿಂದ ಇಳೀ ಬಿದ್ದು ಹೊರಟು ಹೋದನು.

ಅಪರಾಹ್ಣದಲ್ಲಿ ಪುಟ್ಟುವಿನ ತಾಯಿಯು ಒಬ್ಬಳೇ ಶಯನಾಗಾರದಲ್ಲಿ ಕುಳಿತುಕೊಂಡು ಯೋಚಿಸುತಲಿದ್ದಳು. ಇದಕ್ಕೆ ಮೊದಲು ಅವಳು ಯಾವಾಗಲೂ ಇಷ್ಟು ಚಿಂತಾಕ್ರಾಂತಳಾಗಿ ಕುಳಿತಿದ್ದುದು ಯಾರೂ ಕಾಣರು. ಅಪರಾಹ್ಣದಲ್ಲಿ ಸಮವಯಸ್ಕರೆಲ್ಲರೂ ಬಂದು ಸೇರುತಲಿದ್ದರು. ಅಲ್ಪ ವಯಸ್ಕರು ಏಕತ್ರ ಕುಳಿತಿದ್ದರೆ, ಮಾತನಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿಕೊಂಡಿದ್ದರೂ, ಅವರಲ್ಲಿ ಆಹ್ಲಾದದ ತರಂಗವು ಉಚ್ಛಲಿತವಾಗಲೇ ಬೇಕು. ದಾಸ ದಾಸಿಯರು ಬರುವದಕ್ಕೆ ಮೊದಲು ಸೆರೆಯುವರು ಬಂದು ಹೋಗುವದಕ್ಕೆ ಅಡ್ಡಿ ಇರಲಿಲ್ಲ. ದಾಸ ದಾಸಿಯರು ಬಂದು ನಿಂತಮೇಲೆ ಮನೆಗೆ ಯಾರೂ ಬರದ ಹಾಗಾಯಿತು. ಮೊದಲು ಮಧ್ಯಾಹ್ನದ ಮೇಲೆ ಯಾರಾದರೂ ಬಂದೇ ಬರುವರು. ಬಂದವರು, ಊಟವಾಯಿತೇ? ಏನೇನು ಅಡಿಗೆ? ಬದನೆಕಾಯಿ ಕೊಟ್ಟವರು ಯಾರು? ಎಣ್ಣೆ ಬಹಳ ತುಟ್ಟಿ ಯಾಯಿತು. ಯಾರಮ್ಮ! ಅಷ್ಟು ದುಡ್ಡು ಹಾಕಿ ಕೊಂಡು ತಿಂದಾರು? ಆರು ದುಡ್ಡಂತೆ, ಸೇರಿಗೆ! ಈಗಲೇ ಹೀಗಾದರೆ ಮುಂದೆ ಏನಾಗುತ್ತದೋ? ದೇವರು ಬಲ್ಲ? ಎಂದು ಮುಂತಾಗಿ ಮಾತು ಕಥೆಗಳು ನಡೆಯುತ್ತಿದ್ದವು. ಈಗ ಆಲಾಪಗಳು ನಡೆಯಲು ಯಾರೂ ಬರರು. ಬರುತ್ತಿದ್ದವರೆಲ್ಲರೂ ತಮ್ಮ ತಮ್ಮ ಮನೆಯಲ್ಲಿಯೇ ಕುಳಿತುಕೊಂಡು ಪುಟ್ಟುವಿನ ತಾಯಿಯ ವೃತ್ತಾಂತವನ್ನೇ ಚರ್ಚಿಸುತಲಿದ್ದರು. ಕೆಲವರು ಪುಟ್ಟು ತಾಯಿಯ ಅದೃಷ್ಟ ಎಂತಹದುದೇ! ಎನ್ನುವರು. ಅದಕ್ಕೆ ಪ್ರತ್ಯುತ್ತರವಾಗಿ ಕೆಲವರು ಕೆಟ್ಟ ರಂಡೇರಿಗೆ ಬರುವ ಅದೃಷ್ಟವು ಇಂತಹದುದೇ ಎಂದು ಹೇಳುವರು. ಕೆಲವರು, ರಾಜನು ಪುಟ್ಟೂ ತಾಯಿಗೆ ನಿಲುವಾಭರಣ ಕೊಟ್ಟಿದ್ದಾನೆಂದು ಹೇಳುವರು. ಮತ್ತೆ ಕೆಲವರು ಅವಳು ಉಟ್ಟಿದ್ದ ಬಟ್ಟೆಯಲ್ಲಿ

ಮೈಯೆಲ್ಲಾ ಕಾಣಿಸುತ್ತದೆ. ಯಾವ ಮಾರಾಯ ಮಾಡಿಸಿ ತಂದು ಕೊಟ್ಟ ನೋ! ಹೆಂಗಸರಿಗೆ ಇನ್ನು ಮಾನ ಬರಬೇಕೆಂದರೆ ಹೇಗೆ ಬಂದೀತು! ಎಂದರು. ಮತ್ತೂ ಕೆಲವರು, ಪುಟ್ಟೂ ತಾಯಿಗೆ ಮುಖದಲ್ಲಿ ಬಣ್ಣ ಏರಿದ ಹಾಗಿದೆಯಲ್ಲವೇ? ಎಂದರು. ಇನ್ನು ಕೆಲವರು ಸೇರಿ ಪುಟ್ಟೂ ತಾಯಿ ಯನ್ನು ಸುಟ್ಟರು. ಇನ್ನು ಜನರಿಗೆ ಮುಖತೋರಿಸಬಲ್ಲಳೇ! ಎಂದು ಹೇಳಿದರು.

ಯಾರು ಎಷ್ಟು ಹೇಳಿಕೊಂಡರೂ ಅವರೆಲ್ಲರಿಗೂ ಪುಟ್ಟೂ ತಾಯಿ ಯನ್ನು ನೋಡಬೇಕೆಂಬ ಆಸೆ ಅತಿಪ್ರಬಲವಾಗಿತ್ತು. ಆದರೆ ಹೋಗು ವುದಕ್ಕೆ ಯತ್ನ ತಪ್ಪಿ ಎಲ್ಲರೂ ಅವಳಿಗೆ ಕಳಂಕವನ್ನಾರೋಪಿಸುತಲಿದ್ದರು. ನೆರೆಹೊರೆ ಗೃಹಸ್ಥರೆಲ್ಲರೂ ತಮ್ಮ ತಮ್ಮ ಮನೆಯ ಹೆಂಗಸರು ಪುಟ್ಟೂ ತಾಯಿಯ ಮನೆಗೆ ಹೋಗಕೂಡದೆಂದು ನಿಷೇಧಿಸಿದ್ದರು. ಪುಟ್ಟೂ ತಾಯಿ ಯು ಇದನ್ನಾವದನ್ನೂ ಅರಿಯಳು. ಒಬ್ಬಳೇ ಕುಳಿತಿದ್ದಳು. ಆಗ ದಾಸಿಯೊಬ್ಬಳು ಬಂದು ತಲೆಬಾಚುವದಕ್ಕೆ ಕರೆದಳು. ಪುಟ್ಟೂ ತಾಯಿ ಯೂ ಎಲ್ಲಾ ವಿಚಾರಗಳಲ್ಲಿಯೂ ಪರಿಚಾರಕಿಯರ ಆಜ್ಞಾವಹಳಾದಳು. ಆದುಕಾರಣ ಅವಳು ಏನೊಂದುತ್ತರವನ್ನೂ ಹೇಳದೆ ಅವಳ ಹಿಂದೆ ಹೋಗಿ ಬೇರೆ ಬಂದು ಸ್ಥಳದಲ್ಲಿ ಕುಳಿತುಕೊಂಡಳು. ಅಲ್ಲಿ ನಾನಾ ಪ್ರಕಾ ರವಾದ ಪಾತ್ರೆಗಳೂ ನಾನಾ ಪ್ರಕಾರವಾದ ಉಪಕರಣಗಳೂ ಸಿದ್ಧವಾಗಿದ್ದ ವು. ಪುಟ್ಟೂ ತಾಯಿಗೆ ಅವುಗಳ ಹೆಸರನ್ನೆಲ್ಲಾ ಕೇಳಿ ತಿಳಿದುಕೊಳ್ಳಬೇ ಕೆಂಬ ಆಸೆಯುಂಟಾಯಿತು. ಆದರೆ ಕೇಳಲಾರದೆ ಹೋದಳು.

ಆಗಿನ ಕಾಲದ ಯುವತಿಯರು ಈಗಿನ ಕಾಲದವರ ಹಾಗೆ ಮೊಂಡು ಕೂದಲುಳ್ಳವರಾಗಿರಲಿಲ್ಲ. ಆಗ ಈಗಿನ ಹಾಗೆ ಕುಂಕುಮಕ್ಕೆ ವಿಷವನ್ನು ಸೇರಿಸಿ ವಿಶೇಷ ರಂಗು ಮಾಡುತ್ತಿರಲಿಲ್ಲ. ಆಗಿನವರು ಈಗಿನವರ ಹಾಗೆ ವೇಷಧಾರಿಗಳಂತೆ ತಲೆಯ ಜಡೆಯನ್ನು ಎತ್ತಿ ಕಟ್ಟಿ ಬೈತಲೆಯೆಲ್ಲಾ ಕೂದ

ಲು ಬಿದ್ದು ಪೆಟ್ಟಿದಲೆ ಮಾಡಿಕೊಳ್ಳುತ್ತಿರಲಿಲ್ಲ. ಅದು ಈಗಿನ ಹಾಗೆ ಫ್ಯಾಷನ್ (Fashion) ಆಗಿರಲಿಲ್ಲ. ಪರಿಚಾರಕಿಯು ಹೆರಳು ಹಾಕುವುದಕ್ಕೆ ಪುಟ್ಟೊಟ್ಟ ತಾಯಿಯು ಹಿಂದುಗಡೆ ಕೂತಳು. ಪುಟ್ಟೊಟ್ಟ ತಾಯಿಯ ಕೂದಲು ಮೇಘದ ಹಾಗೆ ರಾಶಿರಾಶಿಯಾಗಿ ಇಳೇಬಿತ್ತು. ಪರಿಚಾರಕಳು ಒಂದು ಕಡೆಯ ಕೂದಲನ್ನು ಹಿಡಿಯ ತುಂಬ ಹಿಡಿದುಕೊಂಡು, ಅಮ್ಮಾ! ಇದೇನು ರಾಶಿಕೂದಲು! ನಮ್ಮ ಮಹಾರಾಣಿಯವರಿಗೆ ಹೀಗಿಲ್ಲವೆಂದಳು. ಪುಟ್ಟೊಟ್ಟ ತಾಯಿಯು ಹಸನ್ಮುಖಳಾಗಿ ದರ್ಪಣವನ್ನು ತೆಗೆದುಕೊಂಡು ತನ್ನ ಕೇಶರಾಶಿಯನ್ನು ನೋಡಿಕೊಂಡಳು. ಅನಂತರ, ರಾಣಿಯ ತಲೆಯ ಕೂದಲು ಇದಕ್ಕಿಂತಲೂ ಕಡಮೆಯೇ? ಎಂದು ಕೇಳಿದಳು.

ಪರಿಚಾರಕಳು—ಅಹಾ! ಆ ದುಃಖವನ್ನು ಏನೆಂದು ಹೇಳಲಿ! ಈ ಸಲ ಬಾಣಂತಿಯಾದಾಗ ಅರ್ಧವೆಲ್ಲಾ ಉದುರಿ ಹೋಯಿತು. ಉಳಿದಿರುವದು ನನ್ನ ಪ್ರಯತ್ನದಿಂದುಳಿದುಕೊಂಡಿತು. ಕೂದಲು ಮಾತ್ರವೇ ಅಲ್ಲ. ರಾಣಿಯ ವರ್ಣವನ್ನು ನೋಡಲಿಲ್ಲವೇ? ಚೊಕ್ಕ ಬಂಗಾರ. ಅದನ್ನೂ ನಾನೇ ಮಾಡಿದ್ದು. ರಾಜರು ರಾಣಿಯನ್ನು ಇಷ್ಟು ಪ್ರೀತಿಸುವದೂ ನನ್ನ ಪ್ರಯತ್ನದಿಂದಲೇ ಉಂಟಾಗಿತ್ತು.

ಪುಟ್ಟೊಟ್ಟ ತಾಯಿ—ರಾಜನು ಈಗ ರಾಣಿಯನ್ನು ಅಷ್ಟು ವಿಶ್ವಾಸದಿಂದ ನೋಡುವದಿಲ್ಲವೇನು?

ಪರಿಚಾರಕಿ—ಇನ್ನೆಲ್ಲೀದು?

ಹೀಗೆಂದು ಹೇಳಿ ಪರಿಚಾರಕಳು ಕಣ್ಣು ಮಿಟಗಿಸಿ ಸ್ವಲ್ಪ ನಕ್ಕಳು. ಪುಟ್ಟೊಟ್ಟ ತಾಯಿಯು ಅದನ್ನು ಕಂಡಿದ್ದರೆ ಪುನಃ ಅದನ್ನು ಕುರಿತು ಹೆಚ್ಚು ವಿಚಾರಿಸುತ್ತಿರಲಿಲ್ಲ.

ಪುಟ್ಟೊಟ್ಟ ತಾಯಿ—ರಾಜನ ವಿಶ್ವಾಸವು ಹೋದುದೇಕೆ?

ಪರಿಚಾರಕಿ—ಅದು ಗೊತ್ತಿಲ್ಲವೇನು? ರಾಣಿಯು ಆ ವಶೀಕರಣ

ತೈಲವನ್ನು ಹಚ್ಚಿಕೊಳ್ಳಲಿಲ್ಲವೆಂದು ರಾಮಿಯು ಹೇಳಿದಳು. ಆದುದರಿಂದ ರಾಜನ ಪ್ರೀತಿಯೂ ಹೋಯಿತು.

ಪುಟ್ಟತಾಯಿ–ವಶೀಕರಣ ತೈಲವೆಂದರೇನು ?

ಪರಿ–ಅದೊಂದು ತೈಲ.

ಪುಟ್ಟತಾಯಿ–ಅದನ್ನು ಹಚ್ಚಿಕೊಳ್ಳುವದಿಲ್ಲವೇಕೆ ?

ಪರಿ–ಎಲ್ಲಿ ಸಿಕ್ಕೀತು ? ನಾನು ಬಿಟ್ಟು ಬಂದಮೇಲೆ ಅದನ್ನೊಳಗೆ ಮಾಡಿಕೊಡುವವರು ಯಾರು ? ವಶೀಕರಣ ತೈಲವು ಎಲ್ಲರ ಕೈಯಿಂದಲೂ ಆಗತಕ್ಕದ್ದಲ್ಲ. ನನ್ನ ಗಂಡನು ನನ್ನನ್ನು ಎಷ್ಟು ಪ್ರೀತಿಸುತ್ತಲಿದ್ದನೆಂದರೆ–ನನ್ನ ಕಂಡರೆ ಅವನ ಪ್ರಾಣವೇ ಹೊರಗಾಗುತಲಿತ್ತು. ಆದುದರಿಂದಲೇ ನಾನು ವಶೀಕರಣ ತೈಲವನ್ನು ಮಾಡುತಲಿದ್ದೆ. ಇತರರು ಮಾಡಿದರೆ ಫಲಿಸುವುದಿಲ್ಲ. ಯಾರಗಂಡನೇ ಆಗಲಿ ಹೆಂಡತಿಗೋಸ್ಕರ ಸಾಯಲಿಲ್ಲ.

ಪುಟ್ಟತಾಯಿ–ನಿನ್ನ ಗಂಡ ನಿನಗೋಸ್ಕರ ಪ್ರಾಣವನ್ನು ಬಿಟ್ಟನೆ ?

ಪರಿಚಾರಕಿ–ಅವನು ಒಂದು ನಿಮಿಷವಾದರೂ ನನ್ನ ಕಣ್ಣು ಮರೆಯಾಗನು. ಯಾವಾಗಲೂ ನನ್ನ ಜತೆಯಲಿಯೇ ಇರುವನು. ನಾನು ಸ್ನಾನಕ್ಕೆ ಹೋದರೆ ಮೈ ಒರಿಸಿಕೊಳ್ಳುವ ಬಟ್ಟೆಯನ್ನು ಭುಜದಮೇಲೆ ಹಾಕಿಕೊಂಡು ಕಾದು ನಿಂತಿರುವನು. ನೀರು ತರುವುದಕ್ಕೆ ಹೋದರೆ ದಾರಿಯಲ್ಲಿಯೇ ನಿಂತಿರುವನು. ಎಲ್ಲಿಗೆ ಹೋದರೆ ಅಲ್ಲಿಗೆ ಬರುವನು. ಒಂದುದಿನ ರಾತ್ರಿ ಅವನಿಗೆ ಹೇಳದೆ ನಾಟಕವನ್ನು ನೋಡುವುದಕ್ಕೆ ಹೋಗಿದ್ದೆ. ಅವನು ಮಧ್ಯೆ ಎಚ್ಚರವಾಗಿ ನನ್ನನ್ನು ಕಾಣದೆ ಕುತ್ತಿಗೆಗೆ ನೇಣು ಹಾಕಿಕೊಂಡು ಬಿಟ್ಟನು. ಎಲ್ಲರೂ, ಇದು ಎಂತಹ ಪ್ರೀತಿ! ಎಂದಂದುಕೊಂಡರು. ಬ್ರಹ್ಮಚಾರಿಯು ನಮ್ಮ ಮನೆಗೆ ಬಂದು, ನಿನ್ನ ಕೈಯಿಂದ ಮಾಡಿದ ತೈಲವೇ ಫಲಿಸುತ್ತದೆಂದು ಹೇಳಿ, ವಶೀಕರಣ ತೈಲವನ್ನು ಮಾಡುವ ರೀತಿಯನ್ನು ಹೇಳಿಕೊಟ್ಟನು. ಜನರು ಅಂದಿನಿಂದ ನನ್ನನ್ನು ವಶೀಕರಣಿ ಯೆಂದು ಕರೆಯು

ತ್ತಾರೆ. ಗಂಡನನ್ನು ವಶೀಕರಿಸಿದುದರಿಂದ ವಶೀಕರಣಿ ಯೆಂದು ಹೆಸರಾದುದು. ವಶೀಕರಣ ತೈಲವನ್ನು ಮಾಡುವದರಿಂದ ಆ ಹೆಸರು ಬರಲಿಲ್ಲ.

ಪುಟ್ಟೂತಾಯಿ-ನಾಟಕದಿಂದ ಬಂದವಳು ಏನು ಮಾಡಿದೆ?

ವಶೀಕರಿಣಿ—ಇನ್ನೇನು ಮಾಡುವುದು? ಸ್ವಲ್ಪ ಅತ್ತು, ಅಯ್ಯೋ! ನೀನೆಲ್ಲಿ ಹೋದೆ? ಹಿಂದಿರಿಗಿ ಬಾ, ನಾನು ಯಾವಾಗಲೂ ಇನ್ನುಮೇಲೆ ನಾಟಕವನ್ನು ನೋಡುವುದಕ್ಕೆ ಹೋಗುವುದಿಲ್ಲವೆಂದು ಅತ್ತತ್ತು ಸುಮ್ಮನಾದೆನು. ಅಮ್ಮಾ! ನಾನು ಹೆಂಗಸು. ಅತ್ತೂ ಕರೆದು ಕೂಡುವುದಕ್ಕೆ ಹೊತ್ತಿಲ್ಲ. ನಾಲ್ಕು ಮಂದಿ ಬಂದು ಅಳಬೇಡವೆಂದರೆ ಮಾಡುವುದೇನು? ಎಲ್ಲರೂ ಇನ್ನು ಅತ್ತು ಪ್ರಯೋಜನವಿಲ್ಲವೆಂದು ಹೇಳಿದರು.

ಪುಟ್ಟೂತಾಯಿಯು ಇನ್ನು ಹೆರಳನ್ನು ಎತ್ತಿ ಕಟ್ಟಿಸಿಕೊಳ್ಳಲಿಲ್ಲ. ಎಲ್ಲಾ ಆಯಿತೆಂದು ಎದ್ದಳು. ವಶೀಕರಣಿಯು, ಇನ್ನು ಸ್ವಲ್ಪ ಇರಮ್ಮಾ; ಕುಂಕುಮ ಹಚ್ಚುತ್ತೇನೆಂದಳು. ಕುಂಕುಮವೆಂದು ಹೇಳೋಣ ಪುಟ್ಟೂತಾಯಿಯು ಕೂತಳು. ಕೇಶವಿನ್ಯಾಸಗಳೆಲ್ಲಾ ಆದಮೇಲೆ ಪುಟ್ಟೂತಾಯಿಯು ತನ್ನ ಆಪಾದ ಮಸ್ತಕವನ್ನೂ ನೋಡಿಕೊಂಡಳು. ರಕ್ತವರ್ಣವು ಆಗಿನಕಾಲದ ಫ್ಯಾಷನ್ (Fashion) ಆಗಿತ್ತು. ಕಾಲಿಗೆ ಅಲಕ್ತ, ಉಡುವುದು ರಂಗಿನ ಸೀರೆ. ಓಷ್ಠವು ತಾಂಬೂಲರಾಗದಿಂದ ಅರಕ್ತ ಹಣೆಯಲ್ಲಿ ಕುಂಕುಮ. ಆಭರಣಗಳೆಲ್ಲಾ ಕೆಂಪು ರೇಷ್ಮೆ ದಾರದಲ್ಲಿ ಪೋಣಿಸುವುದು. ಆಗ ಎಲ್ಲರೂ ಕೆಂಪುಬಣ್ಣದಲ್ಲಿಯೇ ಆಸೆಯುಳ್ಳವರಾಗಿದ್ದರು. ಶಾಕ್ತೇಯರು ರಕ್ತಚಂದನವನ್ನು ಹಚ್ಚಿಕೊಳ್ಳುವರು. ಕೆಂಪು ಹೂವೇ ಪೂಜೆಗೆ ಉಪಯೋಗ. ಶಕ್ತಿಯುಪಾಸನೆಯೊಂದಿಗೆ ಕೆಂಪು ವರ್ಣವೂ ಗೌರವಾಸ್ಪದವಾಗಿತ್ತು. ಕೃಷ್ಣೋಪಾಸನೆಯು ಪ್ರಬಲವಾದಮೇಲೆ ರಕ್ತವರ್ಣಕ್ಕೆ ಪ್ರತಿಯಾಗಿ ಕೃಷ್ಣವರ್ಣಕ್ಕೆ ಆದರ ಹೆಚ್ಚಾಯಿತು. ಕೃಷ್ಣೋಪಾಸನವು ಹೆಚ್ಚಾದ ಕಾಲದಿಂದ ಕಾಂಗುಸೀರೆ, ಕಪ್ಪಂಚಿನ ಧೋತ್ರ, ಕರೆಕೋಟು, ಹಲ್ಲುಪುಡಿ ಕಪ್ಪು—ಪಂಜರದಲ್ಲಿ ಕೋಕಿಲ.

## ಹನ್ನೊಂದನೆಯ ಪರಿಚ್ಛೇದ.

ಪುಟ್ಟುತಾಯಿಯು ಅಲಂಕರಿಸಿಕೊಂಡನಂತರ ಪುಟ್ಟುವನ್ನು ಎತ್ತಿಕೊಂಡು ಕಿಟಕಿಯ ಹತ್ತಿರ ಬಂದು ನಿಂತಳು. ಮನಸ್ಸಿನಲ್ಲಿ ಯಾರ ಮನೆಗಾದರೂ ಹೋಗಿ ಸ್ವಲ್ಪ ಹೊತ್ತು ಕೂತುಬರಬೇಕೆಂದು ಆಶೆ. ಹೋಗುವುದಕ್ಕೆ ಅತ್ತಿತ್ತ ನೋಡುತ್ತ ಸನ್ನಾಹಮಾಡುತಲಿದ್ದಳು. ಹೋಗುವುದಕ್ಕೆ ಏತಕ್ಕೆ ಸಂಕೋಚವುಂಟಾಯಿತೋ ಅದವಳಿಗೆ ಗೊತ್ತಾಗಲಿಲ್ಲ. ಬಹುಶಃ ಒಡವೆಗಳನ್ನು ತೊಟ್ಟುಕೊಂಡು ಎಲ್ಲರ ಇದರಿಗೂ ಹೋಗುವುದಕ್ಕೆ ಲಜ್ಜೆಯುಂಟಾಗಿರಬಹುದೆಂದು ತೋರುತ್ತದೆ. ಆದರೆ ಅಲಂಕಾರಗಳನ್ನು ಎಲ್ಲರಿಗೂ ತೋರಿಸಬೇಕೆಂತಲೂ ಆಶೆಯು ಹುಟ್ಟಿದೆ. ಹೋಗೋಣವೇ ಬೇಡವೇ ಎಂದು ಯೋಚಿಸುತಲಿದ್ದಾಗ ಅವಳ ಗಂಡನು ಕಿಟಕಿಯ ಹತ್ತಿರ ಬಂದು ನಿಂತನು. ರಾಮಸೇವಕನು ಹೆಂಡತಿಯನ್ನು ನೋಡಿ ಹಠಾತ್ ವಿಮುಗ್ಧನಾದವನ ಹಾಗಾಗಿ ಹಾಗೆಯೇ ನೋಡುತ ನಿಂತನು. ಪುಟ್ಟುವಿನ ತಾಯಿಯ ವರ್ಣವು ಪರಿಷ್ಕಾರವಾಗಿ ರಂಗು ಏರಿದೆ. ಚಿಕ್ಕ ವಯಸ್ಸಿನ ಚಾಕಚಕ್ಯವು ಪುನಃ ಪ್ರಕಾಶಗೊಂಡಿದೆ. ತಾನು ಸುಂದರಿಯೆಂಬ ಜ್ಞಾನವು ಅವಳಿಗೆ ಹುಟ್ಟಿದೆ. ಮತ್ತು ಮೊದಲಿನ ಹಾಗೆ ಶರೀರದ ಸಂಕೋಚವೇನೂ ಇರಲಿಲ್ಲ. ಅವಳು ಸೀರೆಯ ಸೆರಗನ್ನು ಹಿಡಿದುಕೊಂಡು ಎಡ ಕಂಕುಳಲ್ಲಿ ಮಗುವನ್ನು ಎತ್ತಿಕೊಂಡು ಸ್ವಲ್ಪ ಬಳಕಿ ನಿಂತಿದ್ದಾಳೆ. ಪುಟ್ಟುವೂ ಸರ್ವ ಭಯ ನಿವಾರಕವಾದ ತಾಯಿಯ ಕಂಕುಳಲ್ಲಿದ್ದುಕೊಂಡು ಬೆರಳನ್ನು ಬಾಯಿಯಲ್ಲಿ ಚೀಪುತ್ತಾಳೆ. ರಾಮಸೇವಕನ ಕಣ್ಣಿಗೆ ಬಂದು ಪ್ರತಿಮೆಯ ಹಾಗೆ ಕಂಡಿತು. ಗೃಹಿಣಿಯು ಸುಂದರಿಯಾಗಿರುವುದನ್ನು ನೋಡುವುದಕ್ಕೆ ಎಲ್ಲರಿಗೂ ಅದೃಷ್ಟವಿರುವುದಿಲ್ಲ. ಧನವಂತರಿಗೆ ಅದನ್ನು ಕುರಿತು ಹೇಳಬೇಕಾದುದೆ ಇಲ್ಲ. ಅವರ ದೃಷ್ಟಿಯೆಲ್ಲಾ ಬೀದಿಯಲ್ಲಿ ಹೋಗುವವರ

ಮೇಲೆಯೇ ಹೆಚ್ಚು. ದರಿದ್ರರಾದವರ ಮಾತು ಪ್ರತ್ಯೇಕ. ರಾಮಸೇವಕನು ತನ್ನ ಹೆಂಡತಿಯು ಸುಂದರಿಯೋ ಕುತ್ಸಿತಳೋ ಅದನ್ನು ಇದುವರೆಗೂ ಅನುಭವಿಸಿರಲಿಲ್ಲ.

ರಾಮಸೇವಕನು ಪುಟ್ಟಮ್ಮತಾಯಿಯನ್ನು ಕುರಿತು, ಎಲ್ಲಿಗೆ ಹೋಗುತ್ತಿ? ಎಂದು ಕೇಳಿದನು.

ಪುಟ್ಟಮ್ಮತಾಯಿ—ಪದ್ಮಾ ಮುಂತಾದವರ ಮನೆಗೆ.

ರಾಮಸೇವಕ—ಹೋಗಿ ಕೇಸವಿಲ್ಲ.

ಪುಟ್ಟಮ್ಮತಾಯಿ—ಏತಕ್ಕೆ? ನಾನು ಹೋಗಲಿಲ್ಲವೆಂದು ಅವರು ಯಾರೂ ಬರುವುದಿಲ್ಲ. ಪದ್ಮ ನನ್ನನ್ನು ಬಹಳ ಪ್ರೀತಿಸುತ್ತಾಳೆ. ನನ್ನ ಛಿಂದಿ ಬಟ್ಟೆಯನ್ನು ನೋಡಿದಾಗ ಎಷ್ಟೋ ವ್ಯಸನಪಡುತ್ತಿದ್ದಳು. ಈಗ ನನ್ನ ಒಡವೆಗಳನ್ನು ನೋಡಿ ಬಹಳ ಸಂತೋಷಪಡುವಳು.

ಪುಟ್ಟಮ್ಮತಾಯಿಯು ಚಿಕ್ಕ ವಯಸ್ಕಳು. ಅವಳು, ಯಾರು ಹರಕು ಸೀರೆಯನ್ನು ನೋಡಿ, ಆಹಾ! ಹೀಗುಂಟೆ! ಎನ್ನುವರೋ ಅಂತಹವರಿಗೆ ಅಲಂಕಾರಗಳನ್ನು ನೋಡಿದರೆ ಮುಖವು ಭಾರವಾಗುತ್ತದೆಂದು ಅರಿಯಳು. ನೀವು ನಮಗಿಂತಲೂ ದರಿದ್ರರಾಗಿದ್ದರೆ ಆಗ ನಿಮ್ಮನ್ನು ನಾವು ಪ್ರೀತಿಸುವೆವು. ಹಾಗಾಗದಿದ್ದರೆ ಅವು ಬೇರೆ ಮಾತು.

ರಾಮಸೇವಕನು ಪುಟ್ಟಮ್ಮತಾಯಿಯನ್ನು ಮನೆಯೊಳಕ್ಕೆ ಕರೆದುಕೊಂಡು ಹೋದನು. ಪುಟ್ಟಮ್ಮತಾಯಿಯು ಮಾಡುವುದಕ್ಕೆ ಕೆಲಸವಿದ್ದರೆ ಇಷ್ಟಬಂದ ಹಾಗೆ ಓಡಾಡುತಲಿದ್ದಳೋ ಇಲ್ಲವೋ ಅದನ್ನು ಹೇಳುವುದಕ್ಕೆ ಸಂದೇಹವಾದರೂ ಪ್ರಕೃತ ರಾಮಸೇವಕನು ಅಭ್ಯಂತರಪಡಿಸಿದುದರಿಂದ ತನ್ನ ಕೆಲಸಕ್ಕೆ ಅಡ್ಡಿಯಾಯಿತೆಂದು ಹುಬ್ಬು ಗಂಟುಹಾಕಿಕೊಂಡಿದ್ದಳು. ರಾಮಸೇವಕನಿಗೆ ಅದಾವುದೂ ಗೊತ್ತಾಗಲಿಲ್ಲ. ಅವನು ಪುಟ್ಟುವನ್ನು ಆದರಿಸಲಾರಂಭಿಸಿದನು, ಪುಟ್ಟು ಅವನ ಮುಖವನ್ನು ನೋಡುತ್ತ, ಅಪ್ಪಾ! ಅಪ್ಪಾ!

ಎಂದು ಪುನಃಪುನಃ ಕೂಗಿದಳು. ಆದರೆ ಯಾವ ಸ್ಥಾನಕ್ಕೆ ಅಪ್ಪಾ ಎಂದು ಹೇಳಬೇಕೋ ಅದನ್ನು ಗೊತ್ತುಮಾಡಲಾರದೆ ಪುಟ್ಟು ಬಂದುಸಲ ಅವನ ಕಣ್ಣಿಗೆ ಬೆರಳು ಇಟ್ಟು "ಇದು ಅಪ್ಪಾ" ಎಂದೂ ಬಂದುಸಲ ಅವನ ಓಷ್ಠದಲ್ಲಿ ಬೆರಳು ಇಟ್ಟು "ಇದು ಅಪ್ಪಾ" ಎಂದೂ ಹೀಗೆ 'ಅಪ್ಪಾ' ಶಬ್ದಕ್ಕೆ ಸ್ಥಾನನಿರ್ದೇಶ ಮಾಡುತ್ತಿದ್ದಳು. ಪುಟ್ಟುವಿನ ಈ ಭ್ರಮೆಯನ್ನು ನೋಡಿ ಅವಳ ತಾಯಿಯೂ ನಕ್ಕಳು. ಅವಳಿಗೆ ಇದ್ದ ಮುಖಭಾರವು ಹೋಯಿತು. ಆಗವಳು ಪುಟ್ಟುವನ್ನು ಎತ್ತಿಕೊಂಡು ತೊಡೆಯಮೇಲೆ ಕುಳ್ಳಿರಿಸಿಕೊಂಡು ಪುನಃಪುನಃ ಮುಖಚುಂಬನ ಮಾಡುತ್ತ, ಸರಿಯಾದ ಮಾತು ಹೇಳದೆ, ನನ್ನ ಕಂದ! ಅವರನ್ನು ಗುರ್ತಿಸುವುದಕ್ಕೆ ಆಗುವುದಿಲ್ಲ! ಎಂದು ಮುದ್ದಾಡಿದಳು. ಅನಂತರ ಅವಳನ್ನು ಮೇಲಕ್ಕೆತ್ತಿಕೊಂಡು ಕೆನ್ನೆಮೇಲೆ ಮುಖವನ್ನಿಟ್ಟುಕೊಂಡು ದೀರ್ಘವಾಗಿ ಉಸಿರು ಮೇಲಕ್ಕೆಳದುಕೊಂಡು ತಾಯಿಗಳಿಗೆ ಉಂಟಾಗುವ ಸುಖಾವೇಶದೊಡನೆ, ಪುಟೂ! ಪುಟೂ! ನನ್ನ ಪುಟೂ! ಎಂದು ಹೇಳಲಾರಂಭಿಸಿದಳು.

ರಾಮಸೇವಕ——ಅದೇನೆ! ನೀನು ಮಗುವನ್ನು ಹಿಡಿದು ಹಿಸುಕುವುದರಲ್ಲಿ ಏನಾಗುವುದೋ, ನೋಡಿದರೆ ಭಯವಾಗುತ್ತದೆ.

ಪುಟ್ಟೂತಾಯಿ— ನಮ್ಮ ಪುಟ್ಟುವಿನ ಮೈಯಲ್ಲಿ ಎಂತಹ ಹಾಲಿನ ಸುವಾಸನೆ!

ರಾಮಸೇವಕ—ನಿನ್ನ ಮೈಯಲ್ಲಿ ಏನೋ ಸುಗಂಧವಿರುವಹಾಗಿದೆ.

ಪುಟ್ಟೂತಾಯಿ ಸ್ವಲ್ಪ ಲಜ್ಜಿತಳಾದಳು. ಲಜ್ಜೆಯಿಂದ ನಕ್ಕು, ವಶೀಕರಿಣಿಯು ಏನೇನೋ ಹಚ್ಚಿದಳು. ನಾನು ನಾಳೆ ವಶೀಕರಣ ತೈಲವನ್ನು ಹಚ್ಚಿಸಿಕೊಳ್ಳುತ್ತೇನೆಂದಳು.

ರಾಮಸೇವಕ——ವಶೀಕರಣತೈಲವನ್ನು ಹಚ್ಚಿಕೊಂಡರೆ ಆಗುವುದೇನು ?

ಪುಟ್ಟುತಾಯಿ—ನೀವು ನನ್ನನ್ನು ಪ್ರೀತಿಸುವಿರಿ.

ರಾಮಸೇವಕ—ನಾನು ಪ್ರೀತಿಸುವುದಿಲ್ಲವೆ?

ಪುಟ್ಟುತಾಯಿ—ಪ್ರೀತಿಸುವುದು ಎಲ್ಲಿ?

ರಾಮಸೇವಕ—ಹಾಗಾದರೆ ಪ್ರೀತಿಸುವುದೆಂದರೇನು?

ಪುಟ್ಟುತಾಯಿ—ಪ್ರೀತಿಸುವುದೆಂದರೆ ಗೊತ್ತಿಲ್ಲವೆ? ನೀವು ಯಾವಾಗಲೂ ಯಾರನ್ನೂ ಪ್ರೀತಿಸಲಿಲ್ಲವೇ?

ರಾಮಸೇವಕ—ಪ್ರೀತಿಸಿದ್ದೇನೆ. ಬಂದುಕಾಲದಲ್ಲಿ ತಾಯಿಯನ್ನು ಪ್ರೀತಿಸುತಲಿದ್ದೆ. ಈಗ ನಿನ್ನನ್ನು ಹಾಗೆಯೇ ಪ್ರೀತಿಸುತ್ತೇನೆ.

ಪುಟ್ಟುತಾಯಿ—ಹೌದೇನು?

ರಾಮಸೇವಕ—ಇಲ್ಲದೆ ಏನು? ನನಗೆ ಹೇಗೆ ತಿಳಿಯಬೇಕು?

ಪುಟ್ಟುತಾಯಿ—ನನ್ನ ಅದೃಷ್ಟವೆ! ಪ್ರೀತಿಸುವುದನ್ನು ತಿಳಿಯ ಹೇಳಿಕೊಡಬೇಕೆ? ನೆರೆಹೊರೆಯುವರನ್ನು ಕೇಳಿದರೆ, ಪ್ರೀತಿಸುವದೆಂಬದನ್ನು ಹೇಳಿಕೊಡುತ್ತಾರೆ. ನೀವು ಪ್ರೀತಿಸುತ್ತೇನೆಂದು ಹೇಳುತ್ತೀರಿ ಪುನಃ ಪ್ರೀತಿಯನ್ನುವುದು ಗೊತ್ತಿಲ್ಲವೆನ್ನುತ್ತೀರಿ.

ರಾಮಸೇವಕ—ಗೊತ್ತಿಲ್ಲದೆ ಏನು? ಹೋಲಿಸಿ ಹೇಳಿದರೆ ಗೊತ್ತಾದೀತು. ನಿನ್ನನ್ನು ತಾಯಿಯು ಹಾಗೆಯೇ ಪ್ರೀತಿಸುತ್ತೇನೆ.

ಪುಟ್ಟುತಾಯಿ—ಹೆಚ್ಚು ಏನು ಹೇಳಿದಹಾಗಾಯಿತು?

ರಾಮಸೇವಕ—ಹಾಗಲ್ಲ, ಹಾಗಲ್ಲ, ನಿಮ್ಮಿಬ್ಬರನ್ನೂ ಸಮಾನವಾಗಿ ಪ್ರೀತಿಸುತ್ತೇನೆ. ಅದರಲ್ಲಿ ನಿನ್ನನ್ನು ಸ್ವಲ್ಪ ಹೆಚ್ಚಾಗಿ ಪ್ರೀತಿಸುತ್ತೇನೆ.

ಪುಟ್ಟುತಾಯಿ—ನೀವು ನನ್ನನ್ನು ಪ್ರೀತಿಸುತ್ತೀರಿ ಎಂದು ನನಗೆ ಗೊತ್ತಾಗುವ ಬಗೆ ಹೇಗೆ? ನನ್ನ ಸಂಗಡ ಮಾತನಾಡಿದ್ದರಲ್ಲಿ ಯಾವಾಗಲಾದರೂ ನನ್ನನ್ನು ಪ್ರೀತಿಸುತ್ತೇನೆಂದು ಹೇಳಿದ್ದೀರಾ? ಜ್ಞಾಪಿಸಿಕೊಳ್ಳಿರಿ, ನೋಡೋಣ.

ರಾಮಸೇವಕ-ನಿಜವಾಗಿ ಹೇಳಿದೆ. ಪ್ರೀತಿಯನ್ನುವುದು ಯಾವದಕ್ಕೆ ಹೇಳುತ್ತಾರೋ ಅದು ನನಗೆ ಚೆನ್ನಾಗಿ ತಿಳಿಯದು. ತಿಳಿದಿದ್ದರೆ ಅವಶ್ಯಕವಾಗಿ ಹೇಳುತ್ತಿದ್ದೆ. ನಾನು ಗಂಡಹೆಂಡಂದಿರು ಕೂಡಿ ಮಾತನಾಡಿದುದನ್ನು ಯಾವಾಗಲೂ ಕೇಳಿಲ್ಲ. ಕೇಳಿದ್ದರೆ ತಿಳಿದುಕೊಳ್ಳುತ್ತಿದ್ದೆ. (ಸ್ವಲ್ಪ ನಕ್ಕು) ಒಬ್ಬ ಭಟ್ಟಾಚಾರ್ಯರು ಹೆಂಡತಿಯಲ್ಲಿದ್ದ ಆದರಾತಿಶಯದಿಂದ ಅವಳ ಕುತ್ತಿಗೆಯನ್ನು ಹಿಡಿದುಕೊಂಡು, ನನ್ನ ಶ್ರಾದ್ಧದ ಪಿಂಡವೆ! ಎಂದು ಮುದ್ದಾಡಿದರು. ಬೇಕಾದರೆ ಒಂದೆರಡು ಸಲ ಹಾಗೆ ಹೇಳುತ್ತ ನಿನ್ನನ್ನು ಪ್ರೀತಿಸುತ್ತೇನೆ.

ಪ್ರಟ್ಯೂತಾಯಿ–ನಕ್ಕು- ಬೇಡ, ಹಾಗಾದರೆ ನಿಮ್ಮ ಪ್ರೀತಿಯ ಮಾತು ನನಗೆ ಬೇಡ.

ರಾಮಸೇವಕ—ಒಳ್ಳೇದು, ನೋಡೋಣ–ಹೆಂಡತಿಯನ್ನು ಪ್ರೀತಿಸದಿರುವವನು ಈ ಭೂಮಂಡಲದಲ್ಲಿ ಉಂಟೆ?

ಪ್ರಟ್ಯೂತಾಯಿ–ಉಂಟು.

ರಾಮಸೇವಕ—ಯಾರು?

ಪ್ರಟ್ಯೂತಾಯಿ–ರಾಜಾ.

ರಾಮಸೇವಕ—ಅದುಂಟೆ? ರಾಜನು ರಾಣಿಯನ್ನು ಪ್ರೀತಿಸುವುದಿಲ್ಲವೆ? ಹಾಗಾದರೆ ಅವನ ಸಂಸಾರ ನಡೆಯುವುದು ಹೇಗೆ? ಇರಲಾರದು. ಅದು ಸುಳ್ಳುಮಾತು.

ಪ್ರಟ್ಯೂತಾಯಿ–ನನಗೆ ಅದು ಖಂಡಿತವಾಗಿ ಗೊತ್ತು. ಅರಮನೆಯ ಸಮಾಚಾರವೆಲ್ಲಾ ನನಗಿಂತಲೂ ಹೆಚ್ಚಾಗಿ ಯಾರಿಗೂ ಗೊತ್ತಿಲ್ಲ. ರಾಜನು ರಾಣಿಯನ್ನು ಸ್ವಲ್ಪವಾದರೂ ಪ್ರೀತಿಸಿಲ್ಲ.

ರಾಮಸೇವಕ—ಏತಕ್ಕೆ ಪ್ರೀತಿಸುವುದಿಲ್ಲ?

ಪ್ರಟ್ಯೂತಾಯಿ — ಕಾರಣವುಂಟು.

ರಾಮಸೇವಕ—ಹೇಳಬಾರದೇನು ?

ಪುಟ್ಟೂತಾಯಿ—ಅದನ್ನು ನಾನು ಹೇಳುವುದಿಲ್ಲ. ಅದು ಹೋಗಲಿ, ಈಗಹೇಳಿ, ನನ್ನನ್ನು ಪ್ರೀತಿಸುತ್ತೀರೊ ?

ರಾಮಸೇವಕ—ಪ್ರೀತಿಯನ್ನುವುದು ಯಾವದಕ್ಕೆ ಹೇಳುತ್ತಾರೋ ಅವನ್ನು ಹೇಳಿಕೊಡು, ಯಾರು ಹೆಂಡತಿಯನ್ನು ವಿಶೇಷವಾಗಿ ಪ್ರೀತಿಸುತ್ತಾರೋ ತೋರಿಸು. ಅವರನ್ನು ನೋಡಿ ಕಲಿತುಕೊಳ್ಳುತ್ತೇನೆ.

ಪುಟ್ಟೂತಾಯಿ—ನಕ್ಕು, ಹೇಳುತ್ತೇನೆ. ಹೇಳಬೇಕೊ ? ಗಂಡನು ಹೆಂಡತಿಗೋಸ್ಕರ ತನ್ನ ಪ್ರಾಣವನ್ನು—

ಇಷ್ಟು ಹೇಳುತ್ತಿದ್ದಹಾಗೆ ಪುಟ್ಟೂತಾಯಿಯು ನಡುಗಿದಳು. ಅವಳು ಅಯ್ಯೋ! ದೇವರೆ! ಇಂತಹ ಕೆಟ್ಟಮಾತು ಬಾಯಿಯಿಂದ ಏತಕ್ಕೆ ಹೊರಟಿತು ! ಎಂದು ಹೇಳಿಕೊಳ್ಳುತ್ತ ಕಳವಳಪಟ್ಟು ವ್ಯಸನಾಕ್ರಾಂತಳಾದಳು.

ರಾಮಸೇವಕನು ಆ ವೃತ್ತಾಂತವನ್ನು ಕುರಿತು ಮುಂದೆ ಏನೂ ಕೇಳದೆ, ಅವಳಿಗೆ ಮನಸ್ಸನ್ನು ತಿರುಗಿಸುವುದಕ್ಕೆ ಬೇರೆ ಮಾತು ಎತ್ತಿ, ಇಂದು ಪುಟ್ಟುವನ್ನು ಅರಮನೆಗೆ ಕರೆದುಕೊಂಡು ಹೋಗುವುದಿಲ್ಲವೆ ? ಎಂದು ಕೇಳಿದನು.

ಪುಟ್ಟೂತಾಯಿ—ಅದೇನೂ ಸಮಾಚಾರ ಬಂದಿಲ್ಲ.

ರಾಮಸೇವಕ—ನೀನು ಈ ಉಡುಪಿನಲ್ಲಿಯೇ ಹೋಗಿದ್ದೆಯೆ ?

ಪುಟ್ಟೂತಾಯಿ—ಇಲ್ಲ.

ರಾಮಸೇವಕ—ಈ ಹೊತ್ತು ನೀನು ಬಹಳ ಸುಂದರಿಯಾಗಿ ಕಾಣಿಸುತ್ತಿ.

ಪುಟ್ಟೂತಾಯಿಯು ಮೊದಲು ತಾನು ತೊಟ್ಟಿದ್ದ ಆಭರಣಗಳನ್ನು ನೋಡಿ ಅನಂತರ ತಾನು ಉಟ್ಟಿದ್ದ ಸೀರೆಯನ್ನು ನೋಡಿ ಸ್ವಲ್ಪ ನಕ್ಕು,

ನಾನು ಸುಂದರಿಯಾಗಿದ್ದರೆ, ಈಗ ನನ್ನನ್ನು ಪ್ರೀತಿಸುತ್ತೇನೆಂದು ಹೇಳಲಿಲ್ಲವೇಕೆ ? ಎಂದಳು.

ರಾಮಸೇವಕ—ನೀನು ಮೊದಲು ಪ್ರೀತಿಸಬೇಕೆಂದು ಹೇಳಲೇ ಇಲ್ಲ. ಇಂದೇನು, ಪ್ರೀತಿಸುವ ವಿಚಾರದಲ್ಲಿ ಇಷ್ಟು ಪ್ರಯತ್ನ ?

ಪುಟ್ಟುತಾಯಿ—ಮೊದಲು ನನಗೆ ಆಭರಣಗಳೂ ಇರಲಿಲ್ಲ. ಸೀರೆಯೂ ಇರಲಿಲ್ಲ. ಹೇಗೆ ಪ್ರೀತಿಸಿರಿ ಎಂದು ಹೇಳಲೆಂದು ಯೋಚಿಸುತಲಿದ್ದೆ. ಈಗ ನನಗೆ ಎಲ್ಲಾ ಬಂದಿದೆ, ಪ್ರೀತಿಸಿರಿ ಎಂದು ಈಗ ಹೇಳಿದರೂ ಹೇಳಬಹುದು.

ರಾಮಸೇವಕ—ಜನರು ವಸ್ತ್ರಾಲಂಕಾರಗಳನ್ನು ನೋಡಿ ಹೆಂಡತಿಯನ್ನು ಪ್ರೀತಿಸುತ್ತಾರೆಯೆ ? ವಸ್ತ್ರಾಲಂಕಾರವಿಲ್ಲದಿದ್ದರೆ ಪ್ರೀತಿಯೇ ಇಲ್ಲವೆ ?

ಪುಟ್ಟುತಾಯಿ—ಹೌದು, ವಸ್ತ್ರಾಲಂಕಾರವಿದ್ದರೆ ಹೆಂಗಸು ಸುಂದರಿಯಾಗುತ್ತಾಳೆ. ನನಗೆ ಇದುವರೆಗೂ ವಸ್ತ್ರಾಲಂಕಾರಗಳಿರಲಿಲ್ಲ. ನೀವು ಒಂದು ದಿನವಾದರೂ ನನ್ನನ್ನು ಸುಂದರಿಯೆಂದು ಹೇಳಲಿಲ್ಲ. ಇಂದು ನನ್ನನ್ನು ಸುಂದರಿಯೆಂದು ಹೇಳಿದಿರಿ. ನಾನು ಪ್ರೀತಿಸಿರಿ ಎಂದು ಕೇಳಿದೆ, ಅನ್ಯಾಯವೇನು ? ಹೇಳಿ.

ರಾಮಸೇವಕ—ಪುಟ್ಟುವಿಗೆ ವಸ್ತ್ರಾಲಂಕಾರಗಳಿಲ್ಲ. ಪುಟ್ಟು ಸುಂದರಳಲ್ಲವೆಂದು ಹೇಳುತ್ತೀಯೆ ? ಅಥವಾ ನೀನವಳನ್ನು ಪ್ರೀತಿಸುವುದಿಲ್ಲವೊ ? ಮುಖ್ಯವಾಗಿ ವಸ್ತ್ರಾಲಂಕಾರಗಳಿಂದ ಜನರು ಸುಂದರರಾಗುವುದಿಲ್ಲ.

ಪುಟ್ಟುತಾಯಿ—ಹಾಗಾಗದಿದ್ದರೆ, ಜನರು ವಸ್ತ್ರಾಲಂಕಾರಗಳಿಗೋಸ್ಕರ ಇಷ್ಟು ಬಿದ್ದು ಸಾಯುವುದೇಕೆ ? ನೀವು ಅದನ್ನು ಕೇಳಿಲ್ಲ. ಅಲಂಕರಿಸಿಕೊಂಡರೆ ಜನರು ಸುಂದರರಾಗಿ ಕಾಣಿಸುವುದಿಲ್ಲವೆ ?

ರಾಮಸೇವಕ—ಅಲಂಕಾರವು ಸುಂದರಿಯರ ಸೌಂದರ್ಯವನ್ನು ಹೆಚ್ಚಿಸುತ್ತದೆ. ಅದು ನಿಜ, ಮತ್ತು ಕುರೂಪಿಗಳ ಕುರೂಪವನ್ನು ಮತ್ತಷ್ಟು ಹೆಚ್ಚಿಸುತ್ತದೆ, ನೀನೇ ಎಷ್ಟುಸಲ, ಈ ಹೆಂಗಸು ಇರುವ ರೂಪಕ್ಕೆ ಒಡವೆ ಬೇರೆ; ಏನು ಚನ್ನಾಗಿದೆಯೊ! ಎಂದು ಹೇಳಲ್ಲವೆ?

ಪುಟ್ಟತಾಯಿ—ಸುಳ್ಳಲ್ಲ, ಕುರೂಪಿಗಳು ಒಡವೆ ಹಾಕಿಕೊಂಡರೆ ಬಹಳ ಕುತ್ಸಿತರಾಗಿ ಕಾಣಿಸುತ್ತಾರೆ. ಅವರಿಗೆ ಅದು ಗೊತ್ತಾಗುವುದಿಲ್ಲವೆ? ನಾನು ಕುತ್ಸಿತಳಾಗಿದ್ದೇನೆಯೋ, ಹೇಳ?

ರಾಮಸೇವಕ—ನೀನು ಬಹಳ ಸುಂದರಿಯಾಗಿ ಕಾಣಿಸುತ್ತಿ.

ಪುಟ್ಟತಾಯಿ—ಹಾಗಾದರೆ ನಾನು ಹೋಗಿ ಒಂದು ತಡವೆ ಪದ್ಮಳನ್ನು ನೋಡಿಕೊಂಡು ಬರುತ್ತೇನೆ?

ರಾಮಸೇವಕನು, ಸಕ್ಕು, ಹೋಗು ಎಂದು ಹೇಳ ಹೋಗುವುದಕ್ಕೆ ಬಿಡಲಿಲ್ಲ.

---

## ಹನ್ನೆರಡನೆಯ ಪರಿಚ್ಛೇದ.

:o:

ರಾಮಸೇವಕನೂ ಅವನ ಹೆಂಡತಿಯೂ ಏಕತ್ರ ಕುಳತುಕೊಂಡು ಮಾತನಾಡುತ್ತಿರುವಾಗ ರಾಜಾ ಇಂದ್ರಭೂಪನು ಪಾರಿಷದರೊಂದಿಗೆ ವಾಯುಸೇವನೆಗೋಸ್ಕರ ಹೋಗುತ್ತಿದ್ದನು. ರಾಮಸೇವಕನ ಮನೆಯ ಹತ್ತಿರ ಬಂದು ಸ್ವಲ್ಪ ನಿಂತನು. ಆದರೆ ಏನೂ ಹೇಳದೆ ಮೊದಲಿನಹಾಗೆ ಮಂದಪಾದವಿಕ್ಷೇಪದಿಂದ ಮುಂದೆ ತೆರಳದನು. ಮಾಧವೀಲತೆಯನ್ನು ನೋಡಬೇಕೆಂದು ಆಸೆ. ಅವಳನ್ನು ಕರೆತರಬೇಕೆಂದು ಹೇಳದ್ದರೆ ಆ

ಕೂಡ್ಲೆ ನೋಡಬಹುದಾಗಿತ್ತು. ಏನೋ ಯೋಚಿಸಿಕೊಂಡು ಕರೆತರಬೇಕೆಂದು ಅಪ್ಪಣೆಮಾಡಲಿಲ್ಲ. ಆದರೂ ನೋಡಬೇಕೆಂಬ ಕುತೂಹಲವೇನೋ ಹುಟ್ಟಿ ಅದು ಹೋಗಲಿಲ್ಲ. ದಾರಿಯಲ್ಲಿ ಯಾರಾದರೂ ಮಾಧವೀಲತೆಯನ್ನು ಎತ್ತಿಕೊಂಡು ಬರುವರೆಂದು ಯೋಚಿಸಿ ಉತ್ಸುಕಲೋಚನಗಳುಳ್ಳವನಾಗಿ ಅಲ್ಲಲ್ಲಿ ನೋಡುತ್ತ ಹೋಗುತ್ತಿದ್ದನು. ಸ್ವಲ್ಪದೂರ ಹೋಗುವುದರಲ್ಲಿ ಒಂದು ಸಣ್ಣ ಹುಡುಗಿಯು ಒಬ್ಬ ವೃದ್ಧನ ಕಾಲನ್ನು ಹಿಡಿದುಕೊಂಡು ಎದ್ದು ನಿಂತುಕೊಳ್ಳುವ ಪ್ರಯತ್ನಪಡುತಲಿತ್ತು. ಎತ್ತಿಕೊಳ್ಳಲೆಂದು ಆಸೆ. ಆದರೆ ವೃದ್ಧನು ಅತ್ತಕಡೆ ಒಂದುಸಲವೂ ನೋಡದೆ, ಬಿರುಗಣ್ಣು ಬಿಟ್ಟುಕೊಂಡು ರಾಜನನ್ನು ನೋಡುತಲಿದ್ದನು. ರಾಜನು ನಕ್ಕು, ಇತ್ತ ಕಡೆ ಏನು ನೋಡುತ್ತಿ? ನಿನ್ನ ಪಾದಮೂಲದಲ್ಲಿರುವವಳನ್ನು ನೋಡು, ಎಂದು ಹೇಳಿದನು. ವೃದ್ಧನು ಅಪ್ರತಿಭನಾಗಿ ಹುಡುಗಿಯನ್ನು ಎತ್ತಿಕೊಂಡು, ಮುದ್ದಿಟ್ಟುಕೊಂಡನು. ಹುಡುಗಿಯೂ ನಕ್ಕು ವೃದ್ಧನ ಮುಖಚುಂಬನಮಾಡಿತು. ರಾಜನು ನಗುಮುಖನಾಗಿ ನಿಂತುನೋಡುತಲಿದ್ದವನು ನಗುತನಗುತ ಮುಂದೆ ಹೊರಟುಹೋದನು. ಸ್ವಲ್ಪದೂರ ಹೋಗಿ ಹಿಂದಿರುಗಿ ನಗುತ ಹಿಂದೆ ಬರುತಲಿದ್ದ ಒಬ್ಬ ವೃದ್ಧನಾದ ಪಾರಿಷದನನ್ನು ಕುರಿತು, ವೃದ್ಧರು ಪ್ರೇಮಪ್ರೀತಿಗಳಿಂದ ಶುದ್ಧವಾಗಿ ವಂಚಿತರಾಗಿಲ್ಲವೆಂದು ಹೇಳಿ, ಪುನಃ ಸ್ವಲ್ಪದೂರ ಹೋಗಿ ಪುನಃ ನಿಂತು, ಪ್ರೇಮಕ್ಕೆ ಪ್ರತಿವಾದಿಗಳೇ ಇಲ್ಲವೆಂದನು.

ವೃದ್ಧಪಾರಿಷದ—ಯಥಾರ್ಥವಾಗಿ ಅಪ್ಪಣೆಕೊಡಿಸೋಣಾಯಿತು. ಈ ಪ್ರೇಮಕ್ಕೆ ಪ್ರತಿವಾದಿಗಳಿಲ್ಲ. ಯೌವನವೃದ್ಧರೆಲ್ಲರೂ ಈ ಪ್ರೇಮಕ್ಕೆ ಅಧಿಕಾರಿಗಳು.

"ಇಲ್ಲ—ಎಲ್ಲರೂ ಅಧಿಕಾರಿಗಳಲ್ಲ. ಚೂಡಾಧನಬಾಬುವನ್ನು ಆದರೆ ವಿಚಾರವನ್ನು ಕುರಿತು ಕೇಳಿರಿ" ಎಂಬೀ ಮಾತುಗಳು ಯಾರೋ ಒಬ್ಬನು

ಹಿಂದೆ ಹೇಳಿದ ಹಾಗೆ ಕೇಳಿಸಿತು. ಎಲ್ಲರೂ ಹಿಂದಿರುಗಿ ನೋಡಲಾಗಿ ಹುಚ್ಚ ಪಿತನುನಾಗಿದ್ದನು. ಅವನು ಒಂದು ಮರದ ಬುಡದಲ್ಲಿ ಕುಳಿತುಕೊಂಡು ನೆಲದಮೇಲೆ ಏನೋ ಬರೆಯುತಲಿದ್ದವನು ರಾಜನನ್ನು ಕಂಡು ಎದ್ದು ಬರುತಲಿದ್ದನು. ರಾಜನು, ಇದೇನು, ಪಿತನು! ಇಲ್ಲೇತಕ್ಕೆ ಇರುತ್ತಿ? ನಾನು ನಿನ್ನನ್ನು ನೋಡುವುದಕ್ಕೆ ಪಶುಶಾಲೆಗೆ ಹೋಗುತಲಿದ್ದೆನೆಂದು ಹೇಳಿದನು.

ಪಿತನು—ಮಹಾರಾಜ! ಪಶುಶಾಲೆಯಲ್ಲಿರುವುದಕ್ಕೆ ನಾನು ಪಶುವಲ್ಲ. ಜನರು ನನ್ನ ವಿಚಾರದಲ್ಲಿ ಪಶುಗಳ ಹಾಗೆ ವ್ಯವಹರಿಸಿದುದರಿಂದ ಆಗ ನಾನು ಅಲ್ಲಿಗೆ ಹೋದೆ. ಆದರೆ ಅಲ್ಲಿರುವುದಕ್ಕಾಗಲಿಲ್ಲ. ಅಲ್ಲಿ ಹುಲಿಗೂ ನನಗೂ ಬಹಳ ವಿರೋಧವುಂಟಾಯಿತು. ನಾನೆಲ್ಲಿ ಹೋದರೂ ಅಲ್ಲಿ ವಿರೋಧವುಂಟಾಗುವದರಿಂದ ಅಲ್ಲಿಂದ ಹೊರಟುಬಂದೆನು.

ರಾಜಾ—ವಿರೋಧ ವುಂಟಾಗುವದೇಕೆ?

ಪಿತನು—ಹುಲಿಯು ಯಾರನ್ನೂ ಪ್ರೀತಿಸುವುದಿಲ್ಲ. ಸ್ವಂತಬ್ರಾಹ್ಮಣಿಯನ್ನೂ ಪ್ರೀತಿಸುವುದಿಲ್ಲ. ಹಲ್ಲುಕಿರಿದು ಪ್ರೇಮಾಲಾಪ ಮಾಡುವವರ ಸಂಗಡ ಹೇಗೆತಾನೇ ವಾಸಮಾಡುವುದು?

ರಾಜಾ—ಹುಲಿಯು ನಿನ್ನನ್ನು ಹಿಡಿದುಕೊಂಡಿತ್ತೆ?

ಪಿತನು-ನನ್ನನ್ನು ಹಿಡಿದುಕೊಂಡಿರಲಿಲ್ಲ. ನಾನೇ ಅದನ್ನು ಹಿಡಿದು ಕೊಂಡಿದ್ದೆ. ಅದರ ಬಾಲವನ್ನು ಹಿಡಿದೆಳೆದೆ. ಆದುದರಿಂದ ಅದಕ್ಕೆ ಕೋಪ. ಅದಕ್ಕೆ ಮೊದಲು ಅದು ನನ್ನೊಡನೆ ಬಹಳ ಮಾತುಕಥೆ ನಡೆಸುತಲಿತ್ತು.

ರಾಜಾ—ಏನು ಮಾತುಕಥೆ?

ಪಿತನು—ಹುಲಿಯು, ನೀವು ಶುದ್ಧವಾಗಿ ಕಾಪುರುಷರು — ಶುದ್ಧವಾಗಿ ಸಾಹಸವಿಲ್ಲದವರೆಂದು ಹೇಳಿತು. ಅದಕ್ಕೆ ನಾನು ಉತ್ತರವಾಗಿ, ಹೌದು, ನಿಜ, ನೇನು ಈಗ ನಗರಕ್ಕೆ ಬಂದಿರುವುದೇ ಅದಕ್ಕೆ ಪ್ರಮಾಣವೆಂದು ಹೇಳಿದೆ.

ಹುಲಿಯು, ನನ್ನನ್ನು ಪಂಜರಬದ್ಧನನ್ನಾಗಿ ಮಾಡಿರುವುದು ನಿಮ್ಮ ಕೌಶಲ ವನ್ನು ತೋರಿಸುತ್ತದೆಯೇ ಹೊರತು ನಿಮ್ಮ ಬಲವೀರ್ಯಗಳ ಪರಿಚಯವನ್ನು ತೋರಿಸುವುದಿಲ್ಲ. ನೀವು ದುರ್ಬಲರು. ಅದಕ್ಕೆ ನೀವು ಏಕತ್ರವಿರುವುದೇ ದೃಷ್ಟಾಂತವಾಗಿದೆ. ನೀವು ನಮ್ಮಹಾಗೆ ಬಲಿಷ್ಠರಾಗಿದ್ದರೆ, ನಿಮ್ಮ ಸಮಾಜವೇ ಉಂಟಾಗುತ್ತಿರಲಿಲ್ಲ. ನೀವು ಯಾವಾಗಲೂ ಏಕತ್ರ ವಾಸಮಾಡುತ್ತಿರಲಿಲ್ಲ. ಆ ಪ್ರವೃತ್ತಿಯೇ ಹುಟ್ಟುತ್ತಿರಲಿಲ್ಲ. ನೀವೆಲ್ಲರೂ ನಮ್ಮ ಹಾಗೆ ಒಬ್ಬಂಟಿಗರಾಗಿರುತಲಿದ್ದಿರಿ. ನಮ್ಮಲ್ಲಿ ಪ್ರತಿಯೊಬ್ಬರೂ ವೀರರು. ಒಬ್ಬರು ಮತ್ತೊಬ್ಬರ ಸಹಾಯವನ್ನಪೇಕ್ಷಿಸುವುದಿಲ್ಲ. ಆದಕಾರಣ ನಮ್ಮಲ್ಲಿ ಸಮಾಜವೆಂಬುದಿಲ್ಲ. ದುರ್ಬಲರಿಗೆ ಸಮಾಜವೇ ಬಲವೆಂಬುದು ತಿಳಿದೇ ಇದೆಯೆಂದು ಹೇಳಿತು.

ರಾಜಾ—ಈಗ ನೀನು ನೆಲದಮೇಲೆ ಏನು ಬರೆಯುತ್ತಲಿದ್ದೆ ?

ಪಿತಮ—ತಮ್ಮ ಜಾತಕವನ್ನು ಗುಣಿಸುತ್ತಲಿದ್ದೆನು.

ರಾಜಾ—ಹಾಗಾದರೆ ಜೋತಿಷ್ಯವನ್ನು ಓದಿದ್ದೀಯೊ ?

ಪಿತಮ—ಚನ್ನಾಗಿ ಓದಿದ್ದೇನೆ.

ರಾಜಾ—ಒಳ್ಳೆಯದು, ಏನು ಗುಣಿಸಿದೆ ?

ಪಿತಮ—ಈಗ ತಮ್ಮ ಗ್ರಹಚಾರ ಸರಿಯಾಗಿಲ್ಲ. ಗ್ರಹವು ತಮ್ಮ ಜತೆಯಲಿಯೇ ತಿರುಗಾಡುತ್ತದೆ. ಆಪಾತತಃ ತಮಗೆ ನೀರಿನ ಭಯವುಂಟು.

ಈಮಾತು ಹೇಳುತ್ತಲೇ ಚೂಡಧನಬಾಬುವು ಚಂಚಲನಾಗಿ ಪಿತಮನನ್ನು ಪ್ರಖರವಾದ ದೃಷ್ಟಿಯಿಂದ ದೃಷ್ಟಿಸಿನೋಡಿದನು. ಆದರೆ ಕೂಡಲೇ ಶಾಂತಿಮೂರ್ತಿಯನ್ನು ಧಾರಣೆಮಾಡಿಕೊಂಡು ನಗುತನಗುತ ಪಿತಮನನ್ನು ಕುರಿತು, ಇನ್ನು ನನ್ನ ಗ್ರಹಚಾರವೊ ? ನನಗೆ ಯಾತರ ಭಯ ? ಎಂದು ಕೇಳಿದನು.

ಪಿತಮ—ತಮ್ಮ ಗ್ರಹಚಾರ ಚೆನ್ನಾಗಿದೆ. ಈ ಸಮಯದಲ್ಲಿ ನಾನು

ತಮ್ಮ ಪೋಷ್ಯಪುತ್ರನಾಗಬೇಕೆಂದು ಆಸೆಯುಂಟು. ನನ್ನನ್ನು ಪೋಷ್ಯಪುತ್ರನನ್ನಾಗಿ ತೆಗೆದುಕೊಳ್ಳುವಿರಾ? "ಪುತ್ರಃಪಿಂಡಪ್ರಯೋಜನಂ" ನಾನು ತಮ್ಮ ಶ್ರಾದ್ಧವನ್ನು ಮಾಡಬಲ್ಲೆ.

ಇದನ್ನು ಕೇಳಿ ರಾಜನು ವಿರಕ್ತನಾದನು. ಪಿತಮನು ಹಾಡು ಹಾಡುತ್ತ ಹೊರಟುಹೋದನು.

ಆದಿನ ರಾತ್ರಿ ಎರಡನೆಯ ಪ್ರಹರದ ಸಮಯದಲ್ಲಿ ಇಬ್ಬರು ಖರ್ವಾಕೃತಿಯುಳ್ಳ ಮನುಷ್ಯರು ಚೂಡಾಧನಬಾಬುವಿನ ಮನೆಯ ಬಾಗಲಲ್ಲಿ ನಿಂತುಕೊಂಡು ಮೆಲ್ಲಮೆಲ್ಲಗೆ ಮಾತನಾಡಿಕೊಳ್ಳುತ್ತಿದ್ದರು. ರಾತ್ರಿ ಅಂಧಕಾರ. ಅವರು ಯಾರಿಗೂ ಕಾಣಿಸಿಕೊಳ್ಳರು. ಅವರನ್ನು ನೋಡಿದರೆ ಜನರಿಗೆ ಭಯವುಂಟಾಗುವುದು. ಇಬ್ಬರ ಕೈಯಲ್ಲಿಯೂ ಕೋಲೊಳಗಿರುವ ಕತ್ತಿ. ಸೊಂಟದಲ್ಲಿ ಮಚ್ಚು. ಓಷ್ಠದಲ್ಲಿ ಲೋಮ, ಅಂದರೆ ಮೀಸೆ. ನೋಡುವುದಕ್ಕೆ ಭಯಂಕರವಾಗಿರುವರು. ಆಕಾಲದಲ್ಲಿ ಹಿಂದೂಗಳು ವಿಶೇಷವಾಗಿ ಮೀಸೆ ಅಥವಾ ಶ್ಮಶ್ರುವನ್ನು ಇಡುತ್ತಿರಲಿಲ್ಲ. ಆಗ ಹಿಂದೂಗಳು ನಮ್ರರಾಗಿಯೂ ಶಾಂತರಾಗಿಯೂ ಧರ್ಮಭೀರುಗಳಾಗಿಯೂ ಇದ್ದರು. ಆಗ ಮೀಸೆಯನ್ನಿಟ್ಟರೆ ವಿಪರೀತಾರ್ಥವನ್ನು ತಿಳಿಸುವುದು. ಆಕಾಲದಲ್ಲಿ ಮೀಸೆಯಿಟ್ಟವನು ಈಗಿನ ನಿಹಿಲಿಷ್ಟರ (Nihilist) ಹಾಗೆ ಪ್ರಕಾಶ್ಯವಾಗಿ, ನಾನು ರಾಜನನ್ನೊಪ್ಪುವುದಿಲ್ಲ. ನಾನು ಸಮಾಜವನ್ನೊಪ್ಪುವುದಿಲ್ಲ, ಯಾವದನ್ನೂ ಒಪ್ಪುವುದಿಲ್ಲವೆಂದು ಜನರಿಗೆ ತಿಳಿಸುವ ಅರ್ಥವಾಗುವುದು. ಆದುಕಾರಣ ಒಂದು ಕಾಲದಲ್ಲಿ ವಿಷ್ಣುಪುರದ ರಾಜರು ಮೀಸೆಯನ್ನಿಟ್ಟವನನ್ನು ಕಂಡರೆ ದಂಡಿಸುವರು. ಬಹಳ ಕಾಲದವರೆಗೂ ಮೀಸೆಯು ಸಾಹಸದ ಗುರುತಾಗಿತ್ತು. ಆದುದರಿಂದ ದೊಣ್ಣೇರಾಹುತರು ಮೀಸೆಯನ್ನಿಡುತಲಿದ್ದರು. ಅನಂತರ ಮನೆಯ ಆಳುಗಳು ಇಡಲಾರಂಭಿಸಿದರು. ಅನಂತರ ಸಾಹಸವುಳ್ಳ ಯುವಕರು ಈ ಪದ್ಧತಿಯನ್ನವಲಂಬಿಸಿದರು. ಈಗ ಎಲ್ಲರೂ

ವಿಶಾಸೆರಾಹುತರು. ವಿಶಾಸೆಯು ಈಗ ಯಾವ ಸಾಹಸವ್ಯಂಜಕವಾದುದೂ ಅಲ್ಲ. ಊಟಕಾರ್ಯದಲ್ಲಿ ಹೊತ್ತು—

ಸ್ವಲ್ಪ ಹೊತ್ತಿನಲ್ಲಿಯೇ ಚೂಡಾಧನಬಾಬು ಮೆಲ್ಲಮೆಲ್ಲಗೆ ಬಂದು ಶಬ್ದಮಾಡದೆ ಬಾಗಿಲನ್ನು ತೆರೆದನು. ಬಂದವರಲ್ಲೊಬ್ಬನು, ಇಷ್ಟುಹೊತ್ತು ನಿಂತುಬಿಟ್ಟರೆ ನಡೆಯುವುದಿಲ್ಲ. ನಾಲ್ಕು ಕಡೆಯಲ್ಲಿಯೂ ಜನರನ್ನು ಇಟ್ಟಿದ್ದಾರೆಂದನು. ಚೂಡಾಧನನು ಏನೊಂದುತ್ತರವನ್ನೂ ಹೇಳದೆ ಅವರನ್ನು ತನ್ನ ಬೈಠಕಖಾನೆಗೆ ಕರೆದುಕೊಂಡುಹೋದನು. ಅಲ್ಲಿ ದೀಪವಿರಲಿಲ್ಲ. ಅಂಧಕಾರದಲ್ಲಿ ಮೂವರೂ ಕೂತರು. ಚೂಡಾಧನನು, ನೆನ್ನೆರಾತ್ರಿ ಬರಲಿಲ್ಲವೇತಕ್ಕೆಂದು ಕೇಳಿದನು.

ಪ್ರಥಮವಕ್ತಾ—ನೆನ್ನೆ ರಾತ್ರಿ ನಾಲ್ಕುಕಡೆಗಳಲ್ಲಿಯೂ ಬಹಳಮಂದಿ ಸಿಪಾಯಿಗಳನ್ನು ಪಹರೆ ಇಟ್ಟಿದ್ದರು. ಗುಮಾನಿಮೇಲೆ ನಾಲ್ಕಾರು ಜನರನ್ನು ಹಿಡಿದುಕೊಂಡುಹೋಗಿ ಜೈಲಿನಲ್ಲಿಟ್ಟರು.

ಚೂಡಾಧನ—ಹಾಗಾದರೆ ದಿವಾನನಿಗೆ ಗುಮಾನಿಹುಟ್ಟಿದೆಯೆ ?

ಪ್ರಥಮವಕ್ತಾ—ಚೆನ್ನಾಗಿ ಸಂದೇಹಹುಟ್ಟಿದೆ. ಆದರೆ ನಮ್ಮನ್ನು ಯಾರೂ ಅರಿಯದಿರುವುದು ಬಂದಕ್ಕೆ ಒಳ್ಳೆಯದಾಗಿದೆ. ಗುರುತಿಲ್ಲದವರೆಂದು ಹಿಡಿದರೂ ಹಿಡಿಯಬಹುದು.

ಚೂಡಾಧನ—ದಿವಾನನಿಗೆ ಸಂದೇಹವುಂಟಾದ ಬಗೆ ಹೇಗೆ? ನಿಮ್ಮಲ್ಲಿ ಯಾರಾದರೂ ಅಜಾಗರೂಕರಾಗಿದ್ದಿರಬೇಕು.

ಪ್ರಥಮವಕ್ತಾ—ಸ್ವಲ್ಪವೂ ಅಜಾಗ್ರತೆಯಿಲ್ಲ. ಯಾರಿಗೆ ಗೊತ್ತು ? ಬೆಂಕಿಸುತ್ತಿದೆ. ಪ್ರಗಾಢನಿದ್ರೆಯಲ್ಲಿದ್ದರೂ ಎಚ್ಚರವಾಗಲೇಬೇಕು. ಪಟ್ಟಣದ ಜನರೆಲ್ಲರೂ ರಾಜನಿಗೆ ವಿರುದ್ಧವಾಗಿ ಎದ್ದಿದ್ದಾರೆ. ಅವರು ಸರ್ವದಾ ರಾಜನ ಅಧರ್ಮಾಚರಣೆಗಳನ್ನೇ ಹೊಗಳುತ್ತಾರೆ. ಇನ್ನು ತಿಳಿಯಬೇಕಾದುದು ಳಿದುದೇನು ?

ಅನಂತರ ಮೂವರೂ ಬಹಳ ಹೊತ್ತು ತರ್ಕ ವಿತರ್ಕಮಾಡಿದರು. ತರುವಾಯ ಎಲ್ಲರೂ ಎದ್ದರು. ಹೊರಟುಹೋಗುವಾಗ ಚೂಡಾಧನನು, ನೀವು ಆ ಹುಚ್ಚು ಪಿತಮನಮೇಲೆ ದೃಷ್ಟಿಯಿಡಬೇಕು, ಅವನು ಹುಚ್ಚ ನೆಂದು ನನಗೆ ಬೋಧೆಯಾಗುವುದಿಲ್ಲ. ಯಾರೋ ಛದ್ಮವೇಷಧಾರಿ ಧೂರ್ತ ನೆಂದು ನನಗೆ ತೋರುತ್ತದೆ. ನೀವು ಅವನ ವಿಚಾರ ನೋಡಿಕೊಂಡಿರ ಬೇಕೆಂದನು.

ಪ್ರಥಮವಕ್ತಾ—ನಾವೇನೂ ಹೇಳುವುದಿಲ್ಲ. ನಾನು ಅವನನ್ನು ಸಿದ್ಧೇ ಶ್ವರಿಗೆ ನರಬಲಿಕೊಟ್ಟು ಬಂದು ನಿಮಗೆ ವರ್ತಮಾನವನ್ನು ಕೊಡುತ್ತೇನೆ.

ದ್ವಿತೀಯವ್ಯಕ್ತಿ—ನಾನು ಪಿತಮನನ್ನು ಬಹಳವಾಗಿ ನೋಡಿದ್ದೇನೆ. ಅವನು ಛದ್ಮವೇಷಧಾರಿಯೆಂದು ನನ್ನ ಬುದ್ಧಿಗೆ ತೋರುವುದಿಲ್ಲ. ಪಿತಮನು ಹುಚ್ಚನೆಂಬದು ಸತ್ಯ. ಒಂದೊಂದುಸಲ ಅವನಿಗೆ ಬುದ್ಧಿಯು ಹಿಂದಿರಿಗಿ ಬಂದಾಗ ಬುದ್ಧಿಯು ಪ್ರಕಾಶವಾಗುತ್ತದೆ. ಆದರೆ ಕೂಡಲೆ ಅವನಿಗೇ ನೋ ಒಂದಾಂತರಿಕವಾದ ವ್ಯಸನವುಂಟಾಗಿ ವಿಕಾರವಾಗುತ್ತಾನೆ. ನೋಡಿ ದರೆ ಅವನ ಶತ್ರುವಿಗೂ ದಯೆಯುಂಟಾಗುತ್ತದೆ. ಹೀಗೆಂದು ಹೇಳಿದ ಮಾ ತ್ರಕ್ಕೆ ನಾನು ಅವನಮೇಲೆ ದಯೆಯನ್ನು ತೋರಿಸತಕ್ಕವನಲ್ಲ. ತಾವು ಏನು ಅಪ್ಪಣೆಕೊಟ್ಟರೆ ಅದನ್ನು ಮಾಡುವುದಕ್ಕೆ ಸಿದ್ಧವಾಗಿದ್ದೇನೆ.

ಎಲ್ಲರೂ ಎದ್ದಾಗ ಚೂಡಾಧನನು ಮೊದಲು ಮಾತನಾಡಿದವನೊಂದಿಗೆ ಏಕಾಂತವಾಗಿ, ನಿನ್ನ ಜತೆಗಾರನಮೇಲೆ ನನಗೆ ಅನುಮಾನವುಂಟಾಗಿದೆ. ಇವನು ಪಿತಮನ ಪಕ್ಷವೆಂದು ತೋರುತ್ತದೆ. ಅದುಕಾರಣ ಜಾಗರೂಕ ನಾಗಿರಬೇಕೆಂದು ಹೇಳಿದನು.

## ಹದಿಮೂರನೆಯ ಪರಿಚ್ಛೇದ.

ಯಾವ ನಿರ್ಜನವಾದ ದೇವಮಂದಿರದಲ್ಲಿ ಬ್ರಹ್ಮಚಾರಿಯು ವಾಸ ಮಾಡುತಲಿದ್ದನೋ ಚಂದ್ರಾಲೋಕದಲ್ಲಿ ಆ ಮಂದಿರದ ಗಾಂಭೀರ್ಯವು ವಿಶೇಷ ಹೆಚ್ಚಾಗುವುದು. ಅಪಾರವಾದ ಪ್ರಾಂತರದ ಮಧ್ಯದಲ್ಲಿ ಪ್ರಕಾಂಡ ವಾದ ಮಂದಿರ. ಇದುರಿಗೆ ದೊಡ್ಡ ಸರೋವರ. ಪಿತಮನು ರಾತ್ರಿಯಾದ ಹಾಗೆಲ್ಲಾ ಹೆಚ್ಚು ವ್ಯಸನಾಕ್ರಾಂತನಾಗುವನು. ಇದು ಅಸಂಭವವಲ್ಲ. ಸ್ಥಾನಮಾಹಾತ್ಮ್ಯವು ಅತಿ ಆಶ್ಚರ್ಯಕರವಾದುದು. ಆದುದರಿಂದಲೇ ತೀರ್ಥ ಮುಂತಾದ ಧರ್ಮಕ್ಷೇತ್ರಗಳುಂಟಾಗಿರುವುದು. ಭಯ, ಭಕ್ತಿ, ವಿಲಾಸ, ವೈರಾಗ್ಯ, ಇವೆಲ್ಲಾ ಸ್ಥಾನಮಾಹಾತ್ಮ್ಯಗುಣದಿಂದ ತಮಗೆ ತಾವೇ ಮನದಲ್ಲಿ ಉದಯವಾಗುತ್ತವೆ. ಅದುಕಾರಣ ಅನೇಕರು, ಮನುಷ್ಯನ ಪ್ರಕೃತಿಯು ಸ್ಥಾನಾನುಯಾಯಿಯೆಂದು ಹೇಳುತ್ತಾರೆ. ಕೆಲವು ದೇಶಗಳಲ್ಲಿ ಪರ್ವತಗುಡ್ಡ ಗಳು ಇಲ್ಲ. ಕಡೆಗೆ ಒಂದು ಕಠಿಣವಾದ ಕಲ್ಲೂ ಸಿಕ್ಕದು. ಹೀಗಿರುವುದು ಬಂಗಾಳೆಯಲ್ಲಿ ವಿಶೇಷ. ಬಂಗಾಳೆಯಲ್ಲಿರುವುದೆಲ್ಲಾ ಕೋಮಲವಾಗಿದೆ. ಮಣ್ಣು ಕೂಡ ಕೋಮಲವಾಗಿದೆ. ಸ್ವಲ್ಪ ತಾಪದಿಂದ ಶುಷ್ಕವಾಗಿ ಹೋಗು ತ್ತದೆ. ಸ್ವಲ್ಪ ರಸದಿಂದ ಕರಗಿಹೋಗುತ್ತದೆ. ಸ್ವಲ್ಪ ಭಯದಿಂದ ಆಹತ ವಾಗುತ್ತದೆ. ಹಿಂದೂಗಳಾದ ನಾವೂ ಹಾಗೆಯೇ ಕೋಮಲವಾಗಿದ್ದೇವೆ. ಆದುದರಿಂದಲೇ ಪ್ರಥಮದಲ್ಲಿ ವಲ್ಕಲಬಟ್ಟೆಯನ್ನುಡುತಲಿದ್ದೆವು. ಕ್ರಮ ವಾಗಿ ಕಾಲುನೀಡಿದೆವು. ಕಡೆಗೆ ನೆಲದಮೇಲೆ ಬಿದ್ದು ಒದ್ದಾಡುತ್ತೇವೆ. ಈಗ ನಾವು ವಿಲಾಯಿತಿಯ ಜೋಡನ್ನು ಧರಿಸುತ್ತೇವೆ. ದಂಭಮಾಡಿ ಕಾಲು ಚಾಚುತ್ತೇವೆ. ಆದರೆ ಅದರಿಂದಲೇ ನಮ್ಮ ಪ್ರಕೃತಿಯು ಪರಿವರ್ತನವಾ ಗುವದಿಲ್ಲ. ಅನುಕರಣಾನುರೋಧದಿಂದ ನೇದಲ್ಲಿ ಜೋಡಿನಮೊಳೆಗಳನ್ನು ಹೊಗರಿಸುತ್ತೇವೆ. ಆದರೆ ಕಡೆಗೆ ಜೋಡಿನ ಗುರುತು ಹಿಂದೂಗಳ ಅಂಗ

ದಲ್ಲಿ ನೋಡಿ ಕಣ್ಣೀರು ಬಿಡಬೇಕಾದೀತು. ಜೋಡಿನ ಅಥವಾ ಮೋಜಿನ ಸ್ವಭಾವವು ಬದಲಾಯಿಸುವುದಿಲ್ಲ. ಬಂಗಾಳೆಯಲ್ಲಿ ಪರ್ವತಗಳು ಹುಟ್ಟಿ ಅಲ್ಲಿನ ಮಣ್ಣು ಕಠಿಣವಾದರೆ ಆಗ ಹಿಂದೂಗಳಾದ ನಾವೂ ಕಠಿಣರಾಗುತ್ತೇವೆ. ಇಲ್ಲವಿದ್ದರೆ ಯಾವ ಜಾತಿಯವರು ಹಿಂದೂದೇಶಕ್ಕೆ ಬಂದಿದ್ದರೂ ಅವರೂ ಕೂಡ ನಮ್ಮ ಹಾಗೆ ಕೋಮಲ ಸ್ವಭಾವವುಳ್ಳವರೇ ಆಗುತ್ತಾರೆ.

ಬಾಮದಿನ ಗಭೀರವಾದ ರಾತ್ರಿ. ಪಿತಮನು ಕಾಳೀಸರೋವರದ ಕೂಲದಲ್ಲಿ ವ್ಯಾಕುಲವುಳ್ಳವನಾಗಿ ಕುಳಿತಿದ್ದನು. ಸ್ವಲ್ಪ ಹೊತ್ತಿನಮೇಲೆ ಚಂದ್ರೋದಯವಾಯಿತು. ದೂರದಲ್ಲಿ ಪ್ರಾಂತರದ ಮೇರೆಯಲ್ಲಿ ಮೇಘದ ಹಾಗೆ ಎದ್ದಿದ್ದ ಬೂದು ಧೂಮರಾಶಿಯನ್ನು ನೋಡುತ್ತ ಮಧ್ಯೆಮಧ್ಯೆ ತನಗೆ ತಾನೇ ಅಸ್ಫುಟವಾದ ಸ್ವರದಿಂದ ಏನೇನೋ ಮಾತನಾಡಿಕೊಳ್ಳುತ್ತಿದ್ದನು. ಈ ಸಮಯದಲ್ಲಿ ಬ್ರಹ್ಮಚಾರಿಯು ಮೆಲ್ಲಮೆಲ್ಲಗೆ ಬಂದು ಅವನ ಹಿಂದೆ ಕೂತನು. ಪಿತಮನು ಅವನ ಸಂಗಡ ಏನೂ ಮಾತನಾಡಲಿಲ್ಲ. ಅನ್ಯಮನಸ್ಕನಾಗಿ ಯಾವವನ್ನು ನೋಡುತಲಿದ್ದನೋ ಅದನ್ನೇ ನೋಡುತಲಿದ್ದನು. ಬ್ರಹ್ಮಚಾರಿಯು, ಪಿತಮ! ಹೇಗೆ ಇದ್ದೀಯೆ? ಎಂದು ಕೇಳಿದನು. ಪಿತಮನು ಮುಖವನ್ನು ತಿರುಗಿಸದೆ, ಚೆನ್ನಾಗಿದ್ದೇನೆಂದನು. ಬ್ರಹ್ಮಚಾರಿಯು, ನಿನ್ನ ಮನಸ್ಸಿನ ಅವಸ್ಥೆಯು ಹೇಗಿದೆ? ಎಂದು ಕೇಳಿದನು. ಪಿತಮನು ಏನೊಂದುತ್ತರವನ್ನೂ ಹೇಳದೆ ಪ್ರಾಂತರದ ಕೊನೆಯಲ್ಲಿದ್ದ ಧೂಮರಾಶಿಯನ್ನು ಬೆರಳಿನಿಂದ ತೋರಿಸಿದನು.

ಬ್ರಹ್ಮಚಾರಿ—ಈಗ ನೀನು ನಿನ್ನ ಅವಸ್ಥೆಯನ್ನು ತಿಳಿದುಕೊಂಡ ಹಾಗೆ ತೋರುತ್ತದೆ.

ಈ ಮಾತನ್ನು ಕೇಳಿದಮೇಲೆ ಪಿತಮನು ಮೆಲ್ಲಮೆಲ್ಲಗೆ ಬ್ರಹ್ಮಚಾರಿಯ ಕಡೆಗೆ ತಿರುಗಿ ಕುಳಿತುಕೊಂಡು ಬಂದು ದೀರ್ಘನಿಶ್ವಾಸವನ್ನು ಬಿಟ್ಟು ಬ್ರಹ್ಮಚಾರಿಯ ಮುಖವನ್ನು ನೋಡುತಿದ್ದನು. ಆ ಕಾತರದೃಷ್ಟಿಯನ್ನು

ನೋಡಿ ಬ್ರಹ್ಮಚಾರಿಯು ವ್ಯಥಿತನಾಗಿ, ಮನಸ್ಸಿನಲ್ಲಿ, ಇವನಿಗೆ ಏತಕ್ಕೋ ಸ್ಕರ ಈ ಮ್ಲಾನತೆ? ಸಂಸಾರಾಶ್ರಮವು ಯಾರಿಗೆ ಇಲ್ಲವೋ? ಅಂತಹವನು ಕಾತರನಾಗುವುದಕ್ಕೆ ಕಾರಣವಿಲ್ಲ. ಮಾಯೆಯೇ ದುಃಖಕ್ಕೆ ಹೇತು ಎಂದು ಹೇಳಿಕೊಂಡನು.

ಬ್ರಹ್ಮಚಾರಿಯು ಬಾದೇ ದೃಷ್ಟಿಯಿಂದ ಪಿತನುನನ್ನು ನೋಡುತ್ತ ತೊಡೆಯಮೇಲಿದ್ದ ಮತ್ತೊಂದು ತೊಡೆಯನ್ನು ಸರಿಸಿ ಸರಿಯಾಗಿ ಕುಳಿತು ಕೊಂಡು ಮನಸ್ಸಿನಲ್ಲಿ, ಯಾರೋ ಇಷ್ಟರಾದ ಜನರು ನಷ್ಟರಾಗಿರಬೇಕು. ಇವನು ವೃದ್ಧನು. ಆದರೂ ಯುವಕನಹಾಗೆ ಸುಖದುಃಖಗಳ ಅನುಭವವು ಇನ್ನೂ ಉಳಿದಿದೆ. ಇವನ ಚಿಕ್ಕವಯಸ್ಸಿನಲ್ಲಿ ಇನ್ನೆಷ್ಟು ಇತ್ತೋ ಹೇಳಲಾರೆ, ಎಂದಂದುಕೊಂಡನು.

ಈ ಸಮಯದಲ್ಲಿ ಪಿತನುನು, ನಾಳೆ ರಾಜಕುಮಾರನಿಗೆ ಜನ್ಮದಿನಸ. ನನಗೆ ಔತಣಬಂದಿದೆ: ನಿಮಗೂ ಔತಣವು ಬಂದಿತ್ತೆ? ಎಂದನು.

ಬ್ರಹ್ಮಚಾರಿ–ನಿನಗೆ ಔತಣಕೊಟ್ಟವರು ಯಾರು?

ಪಿತನು–ರಾಜನು ಸ್ವಂತವಾಗಿ ಹೇಳಿದನು. ನಾನು ತಮಗೆ ಔತಣ ಹೇಳಿದ್ದೇನೆ. ನಿಮ್ಮಿಂದ ರಾಜನಿಗೆ ಏನೂ ಉಪಕಾರವಾದಹಾಗೆ ತೋರುವುದಿಲ್ಲ. ಜನರಿಗೆ ಉಪಕಾರ ಮಾಡುವುದು ನಿಮ್ಮ ಆಶ್ರಮಕ್ಕೆ ವಿರೋಧವಾದದು. ಪರೋಪಕಾರ ಮಾಡುವುದು ಗೃಹಸ್ಥರಿಗೆ ಉತ್ತಮವಾದ ಧರ್ಮ. ಆತ್ಮೋಪಕಾರವು ಉದಾಸೀನರಿಗೆ ಧರ್ಮ. ಆದರೂ ಬಂದು ತಪ್ಪವೆ ಬನ್ನಿ.

ಬ್ರಹ್ಮಚಾರಿ–ರಾಜನಿಗೇನಾದರೂ ವಿಪತ್ತುಂಟೆ?

ಪಿತನು–ರಾಜನಿಗಿಂತಲೂ ನನಗೆ ಹೆಚ್ಚು ವಿಪತ್ತು. ನಾಳೆ ಚೆನ್ನಾಗಿ ಭೋಜನವಾಗುತ್ತದೆ. ಆದುದರಿಂದ ಸ್ವಲ್ಪ ಹೊತ್ತು ನಿದ್ರೆ ಹೋಗೋಣ.

ಹೀಗೆ ಹೇಳಿ ಪಿತಸನು ಕಾಳೀಸರೋವರದ ಸೋಪಾನದಲ್ಲಿಳಿದು ಶಯನ ಮಾಡಿದನು.

ಬ್ರಹ್ಮಚಾರಿ—ಪಿತಮ! ಬಾ, ಮಂದಿರದಲ್ಲಿ ಶಯನಮಾಡುವೆ.

ಪಿತಮ—ಮನೆಯೊಳಗೆ ಶಯನ ಮಾಡುವುದು ಬಹಳ ವಿಪತ್ತಿಗೆ ಕಾರಣ. ಮರಮುಟ್ಟು ಇಟ್ಟಿಗೆ ಕಲ್ಲು ಕಂಡರೆ ನನಗೆ ಬಹಳ ಭಯ. ಬಳ್ಳೀದು, ಬ್ರಹ್ಮಚಾರಿಗಳೆ! ಹೇಳಿ, ನೋಡೋಣ—ಮನುಷ್ಯನ ಆಕೃತಿ ಮತ್ತು ಪ್ರಕೃತಿಯು, ತತ್ರಾಪಿ ಉದರಭಾಗದ್ದು, ಹೇಗೆ ಸಂಶೋಧಸವಾಗಬೇಕು, ಹೇಳಿರಿ.

ಬ್ರಹ್ಮಚಾರಿ—ಸ್ವಲ್ಪ ಊಟಮಾಡುವಿಯಾ! ಇಂದು ಏನೂ ದೊರಿಯಲಿಲ್ಲವೆಂದು ತೋರುತ್ತದೆ.

ಪಿತಮ—ಚೆನ್ನಾಗಿ ಹೇಳಿದಿರಿ. ಆದರೆ ನಾಳೆ ಹೊಟ್ಟೆಗೆ ಸಿಕ್ಕುತ್ತದೆ. ಇಂದು ಇನ್ನೇನೂ ಬೇಡ. ಆದರೆ ಗತಸಾದೋಷನೇನೂ ಇಲ್ಲದಿದ್ದರೆ :—

ಇಷ್ಟು ಹೇಳಿ ಪಿತಮನು ಸುಮ್ಮನಾದನು.

ಬ್ರಹ್ಮಚಾರಿಯು ಪಿತಮನು ಮಲಗಿದನೆಂದು ತಿಳಿದು ಮೆಲ್ಲಗೆ ಎದ್ದು ಹೊರಟುಹೋದನು.

---

## ಹದಿನಾಲ್ಕನೆಯ ಪರಿಚ್ಛೇದ.

ಮಾರನೆಯದಿನ ಪ್ರಾತಃಕಾಲವಾದಮೇಲೆ ಪಿತಮನು ರಾಜನ ಅರಮನೆಯಕಡೆ ಹೊರಟನು. ದೂರದಿಂದ ನವಬತ್ತು ನಗಾರಿ ಶಬ್ದವನ್ನು ಕೇಳಿ ನಾನೇ ಸಾವಕಾಶ ಮಾಡಿದೆನೋ ಅಥವಾ ಉತ್ಸವವು ಆರಂಭವಾಗಿ

ದೆಯೋ ಎಂದಂದುಕೊಂಡನು. ರಾಜಪುರಿಯ ಕಡೆ ನೋಡಲಾಗಿ ಎಲ್ಲಾ ಕಡೆಯಲ್ಲಿಯೂ ರಕ್ತಪತಾಕಗಳು ಹಾರುತಲಿದ್ದವು. ಮನೆಗಳ ಮೇಲೆ ಅನೇಕಾನೇಕ ಕಪೋತಗಳು ಹಾರುತಲಿದ್ದವು. ಕೂಡುತಲಿದ್ದವು. ಪುನಃ ಎದ್ದು ಹೋಗುತಲಿದ್ದವು. ಪುನಃ ಒಟ್ಟಿಗೆ ಬಂದು ಕೂಡುವುವು. ಪುನಃ ಒಟ್ಟಿಗೆ ಎದ್ದು ಹಾರಿಹೋಗುವುವು. ನೋಡುವುದಕ್ಕೆ ಆಕಾಶದಲ್ಲಿ ವಜ್ರಗಳು ಜಡಿತವಾಗಿ ಪುನಃ ಜರಿದು ಬೀಳುವಹಾಗೆ ಕಾಣಿಸುವುವು. ಪಿತನುನು ಮತ್ತಷ್ಟು ದೂರ ಮುಂದೆ ಹೋಗಿ ನೋಡಲಾಗಿ ರಾಜದ್ವಾರದಲ್ಲಿ ವಿಸ್ತಾರವಾಗಿ ಜನರು ಸೇರಿದ್ದರು. ನಾನಾವಿಧವಾದ ವಾದ್ಯೋದ್ಯಮಗಳಾಗುತ್ತಿದ್ದವು. ನವಬತ್ತುಖಾನೆಯು ಬಹಳ ರಮಣೀಯವಾಗಿ ಕಣ್ಗೊಳಿಸುತಲಿತ್ತು. ಬೆಳ್ಳಿ ನಗಾರಿಗಳ ಮೇಲೆ ಸೂರ್ಯಕಿರಣ ಬಿದ್ದು ನಕ್ಷತ್ರಗಳಹಾಗೆ ಜ್ವಲಿಸುತಲಿತ್ತು. ಹತ್ತು ಹದಿನೈದು ಆನೆಗಳು ಸೊಗಸಾಗಿ ಅಲಂಕರಿಸಲ್ಪಟ್ಟು ಸುಸಜ್ಜೀಭೂತನಾಗಿ ನಿಂತಿದ್ದವು. ಪಿತಮನು ಬಂದು ಮಹಾನಂದದಿಂದ ಆನೆಗಳನ್ನು ಪ್ರದಕ್ಷಿಣಮಾಡಿ ಏನೋನೋ ಹೇಳತೊಡಗಿದನು. ಒಂದರ ಇದುರಿಗೆ ನಿಂತುಕೊಂಡು, ಛೀ! ತಾಯಿ! ನೀನೇತಕ್ಕೆ ಗೆಜ್ಜೇಸರ ಹಾಕೋಡೆ? ನಿನಗೆ ಮುಸ್ಸಾಗಿಹೋಗಿದೆ, ಎಂದನು. ಮತ್ತೊಂದರ ಹಿಂದುಗಡೆ ಹೋಗಿ ನಿಂತು, ನಿನ್ನ ಚಂದ್ರಹಾರವೆಲ್ಲಿ? ಎಂದನು. ಮೂರನೆಯ ಆನೆಯನ್ನು ಕುರಿತು, ನೀನು ಹಾಕಿಕೊಂಡಿರುವ ಹಾರವನ್ನು ನೋಡಿ ಹೆಂಗಸರು ನೀನು ಅದನ್ನು ಸರಿಯಾಗಿ ಹಾಕಿಕೊಂಡಿರುತ್ತಿಯೆಂದು ಹೇಳುವುದಿಲ್ಲ. ಹಾರವನ್ನು ಹಾಕಿಕೊಂಡರೆ ಸಾಲಂಕಾರವಾದ ಯುವತಿಯಹಾಗೆ ತಲೆಯನ್ನೆತ್ತಿ ಹಮ್ಮುಗಾತಿಯಹಾಗೆ ಎದೆಯನ್ನು ಮುಂದಕ್ಕೆ ಚಾಚಿಕೊಂಡು ನಿಲ್ಲಬೇಕು. ಹಾರವನ್ನು ಹೊರಗೆ ಕಾಣಿಸುವಹಾಗೆ ಎದೆಯಮೇಲಿನ ಸೆರಗನ್ನು ಚೆನ್ನಾಗಿ ಓರೆಮಾಡಬೇಕು. ಇಲ್ಲದಿದ್ದರೆ ನೆರೆಹೊರೆ ಹೆಂಗಸರಲ್ಲಿ ನಿನಗೆ ಮಾನಬರುವುದಿಲ್ಲವೆಂದನು.

ಈ ಸಮಯದಲ್ಲಿ ದಿವಾನನ ಮಗ ನವಕುಮಾರನು ಅರಮನೆಗೆ ಹೋಗುತಲಿದ್ದವನು ಪಿತಮನ ಮಾತುಗಳನ್ನು ಕೇಳಿ ನಗುತ, ನಗುತ ಏನು ಪಿತಮ! ನೆರೆಹೊರೆ ಹೆಂಗಸರಲ್ಲಿ ಆನೆಗೆ ಮಾನವೆಂತಹದು? ಎಂದು ಕೇಳಿದನು.

ಪಿತಮ–ಅಲಂಕಾರವಿಚಾರದಲ್ಲಿ–ಇಲ್ಲದಿದ್ದರೆ ಮತ್ತಾವದರಲ್ಲಿದ್ದೀತು? ಒಳ್ಳೇದು ಈಗ ಹೇಳೋಣಾಗಲಿ–ಧನಿಕರು ಹೆಂಗಸರಿಗೆ ಅಲಂಕಾರಮಾಡುವಹಾಗೆ ಆನೆಗೂ ಅಲಂಕರಿಸುತ್ತಾರೇತಕ್ಕೆ? ಅದೂಅಲ್ಲದೆ ಒಂದೇವಿಧವಾದ ಆಭರಣಗಳನ್ನು ತೊಡಿಸುತ್ತಾರೆ. ಹೆಂಗಸರ ಹಣೆಯಲ್ಲಿ ಮುಂದಲೆಬೊಟ್ಟು, ಆನೆಗೂ ಮುಂದಲೆ ಬಟ್ಟು. ಹೆಂಗಸರಿಗೆ ತಿಲಕ; ಆನೆಗೂ ತಿಲಕ. ಆನೆಗೂ ಸರಪಣಿ; ಹೆಂಗಸರಿಗೂ ಅದೇ. ಗೆಜ್ಜೆ ಉಭಯತಃ–ಘಂಟೆ, ಕಿಂಕಿಣಿ ಇವೆರಡೇ ಪ್ರಭೇದ. ಹಸ್ತಿನಿಯೂ ಗೃಹಿಣಿಯೂ ಇಬ್ಬರೂ ತಮಗೆ ಒಂದೇರೂಪವುಳ್ಳವರಾಗಿ ಕಾಣುವರೆ, ಅಥವಾ ಇಲ್ಲವೆ? ಈಗ ಹೇಳೋಣಾಗಲಿ.

ನವಕುಮಾರ–ಬಹಳಪ್ರಭೇದ ಕಾಣುವದಿಲ್ಲ. ಗೃಹಿಣಿಯು ಮನೆಯೊಳಗಿನ ಶೋಭಾ-ಹಸ್ತಿನಿಮನೆ ಹೊರಗಿನಶೋಭಾ–ಮಶತಾಪಸನ್ನವು ಇಬ್ಬರಿಗೂ ಸಮಾನ. ಇಬ್ಬರೂ ಬಂದಿಗಳು. ಕಾಲಿನ ಸರಪಣಿಗೆ ರೂಪಾಂತರ, ಗಟ್ಟಿಗೊಲುಸು.

ಪಿತಮ–ಆದರೆ ಆ ಕಾಲಿನ ಗೊಲುಸು ಸವೆದಹೋದಮೇಲೆ ಮುರಿದುಹೋಗುತ್ತದೆ. ಗೊಲುಸು ಮುರಿದರೆ ಪ್ರುರುಷರ ಕಪಾಲವೂ ಮುರಿದು ಒಡೆದುಹೋಗುತ್ತದೆ.

ನವಕುಮಾರ–ಇಷ್ಟು ದೂರಾಲೋಚನೆಯು ನಿನಗೆ ಇರುತ್ತೆ ಜನರು ನಿನ್ನನ್ನು ಹುಚ್ಚನೆಂದು ಹೇಳುವುದೇಕೆ?

ಪಿತಮನು ಏನೂ ಪ್ರತ್ಯುತ್ತರವನ್ನು ಕೊಡದೆ ಆನೆಯೊಂದಿಗೆ ಏನೇ

ನೋ ಮಾತನಾಡಲು ತೊಡಗಿದನು. ಕಡೆಗೆ ಅವನು ರಾಜದ್ವಾರದಲ್ಲಿ ನಿಂತು
ಒಳಗಿನ ಕೋಲಾಹಲವನ್ನು ಕೇಳುತ್ತ ನಿಂತನು. ಅದವನಿಗೆ ಪರ್ವತರು
ದ್ಧವಾದ ಜಲಕಲ್ಲೋಲದಹಾಗೆ ಮಧುರವಾಗಿ ಕೇಳಬಂತು. ದ್ವಾರಪಾಲ
ಕರು ಪಿತಮನನ್ನು ನಿಷೇಧಮಾಡಲಿಲ್ಲ. ಹುಚ್ಚನನ್ನು ಎಲ್ಲರೂ ಆದರಿಸು
ತ್ತಾರೆ. ಒಬ್ಬ ದ್ವಾರಪಾಲಕನು ಪಿತಮನನ್ನು ಹತ್ತರ ಕರೆದು ನನ್ನ
ಅದೃಷ್ಟವು ಹೇಗಿದೆಯೆಂದು ಪ್ರಶ್ನೆಯನ್ನು ಕೇಳಿದನು. ಪಿತಮನು ತಲೆ
ಯನ್ನು ಅಲ್ಲಾಡಿಸುತ್ತ, ಈಗ ನಾನು ಬಹಳ ವ್ಯಸ್ತನಾಗಿದ್ದೇನೆಂದು ಹೇಳಿ,
ಅವನಿಗೆ ಒಂದು ಮುಷ್ಟಿ ತುಂಬ ಸಿದ್ಧಿಯನ್ನು ತೆಗದುಕೊಟ್ಟನು. ಇದ
ನ್ನುಕಂಡು ನವಕುಮಾರನು, ನೀನು ಸಿದ್ಧಿಯನ್ನು ತಿನ್ನುತ್ತೀಯಾ?
ಎಂದು ಕೇಳಿದನು.

ಪಿತಮನು ಒಬ್ಬ ವೃದ್ಧನಾದ ದ್ವಾರಪಾಲಕನನ್ನು ನೋಡುತ್ತ ಹೇ
ಳತೊಡಗಿದನು; ಹೇಗೆಂದರೆ:— ಒಂದು ಆಶ್ಚರ್ಯಕರವಾದ ಘಟನಾಕ್ರಮ
ದಲ್ಲಿ ಈ ಸಿದ್ಧಿಯು ನನಗೆ ದೊರಕಿತು. ಈಗ ಕೆಲವು ದಿನಗಳಿಗೆ ಹಿಂದೆ
ನಾನು ಕೈಲಾಸಪರ್ವತದ ಹತ್ತಿರ ಹೋಗಿದ್ದೆ. ಆಗ ಸೂರ್ಯದೇವನು ಕೆಳ
ಗೆ ಬೀಳುವುದಕ್ಕೆ ಬಂದಿದ್ದನು. ದೂರದಿಂದ ಕೈಲಾಸವನ್ನು ನೋಡುತ
ನಿಂತೆನು. ಒಂದು ಪಾರ್ಶ್ವದಲ್ಲಿ ರುದ್ರಾಕ್ಷಿಯ ವನ. ಮೇಘಗಳ ತೊಡೆ
ಯಮೇಲೆ ಕೂತಿದ್ದಾಗ ಆ ರುದ್ರಾಕ್ಷಿವನವು ಎಷ್ಟು ರಮಣೀಯವಾಗಿತ್ತು!
ಆ ರಮಣೀಯವಾದ ದೃಶ್ಯವನ್ನು ನೋಡುತ್ತಿದ್ದಹಾಗೆ ಮಹಾಮಾಯಾಜ
ಗಜ್ಜನನಿಯು ಗಣಪತಿಯನ್ನೆತ್ತಿಕೊಂಡು ಸಿಹ್ಮದಮೇಲಿದ್ದ ಸಬರದಮೇಲಿನ
ಸಕಲಾತಿಯಮೇಲೆ ಕುಳಿತುಕೊಂಡುಬಂದಳು. ಆ ಸಿಹ್ಮವು ಆಶ್ಚರ್ಯವುಂ
ಟುಮಾಡುವದಾಗಿತ್ತು. ಸಿಹ್ಮವು ಆ ರುದ್ರಾಕ್ಷಿವನದಿಂದ ಹೊರಟುಬಂತು.
ಆ ಸಿಹ್ಮದ ದಿಮಾಕು ಏನೆಂದು ಹೇಳಲಿ! ಆ ಸಿಹ್ಮದಮೇಲೆ ಸವಾರನಾಗಿದ್ದಾ
ಅಣುಗ ಗಣಪತಿಗೆ ಎಷ್ಟೋ ಸಂತೋಷ! ಅವನು ತಾಯಿಯ ಕಂಕುಳ

ನಿಂದ ಇಳೀಬಿದ್ದು ಸಿಹ್ಮದ ಜಟೆಯನ್ನು ಹಿಡಿದೆಳೆಯುವುದಕ್ಕೆ ಹೋದನು. ಸಿಹ್ಮವು ಜಾಗರೂಕತೆಯಿಂದ ತಲೆಯನ್ನು ಬಗ್ಗಿಸಿಕೊಂಡು ಹೋಗುತ್ತಲಿತ್ತು. ಮಹಾಮಾಯೆಯು, ಛಿ! ವತ್ಸ! ಸಿಹ್ಮವನ್ನು ಮುಟ್ಟಬೇಡವೆಂದಳು. ಗಣಪತಿಯು ಮತ್ತಷ್ಟು ಬಗ್ಗಿ ಜಟೆಯನ್ನು ಹಿಡಿದುಕೊಳ್ಳುವುದಕ್ಕೆ ಹೋದನು. ಸಿಹ್ಮವು ಭಯಪಡಿಸುವುದಕ್ಕೋಸ್ಕರ ಹುಂಕಾರವಮಾಡಿತು. ಆ ಹುಂಕಾರಕ್ಕೆ ಕೈಲಾಸಪರ್ವತವೆಲ್ಲಾ ನಡುಗಿತು, ಗಣಪತಿಯು ಆಹ್ಲಾದದಿಂದ ಕುಣಿದಾಡುವುದಕ್ಕೆ ಪ್ರಾರಂಭಿಸಿದನು. ಚಿಕ್ಕಚಿಕ್ಕ ಕಾಲುಗಳನ್ನು ಎತ್ತಿಹಾಕಿದನು. ಕಾಲಿನಲ್ಲಿದ್ದ ಆಭರಣಗಳು ಶಬ್ದಮಾಡಲಾರಂಭವಾಯಿತು. ಇತ್ತಲಾಗಿ, ಕಾರ್ತಿಕೇಯನು ತಾಯಿಯಸಂಗಡ ಸಿಹ್ಮದ ಮೇಲೆ ಹತ್ತಿಸಿಕೊಳ್ಳಲಿಲ್ಲನೆಂದು ನೆಲದಮೇಲೆ ಉರುಳಾಡುತ್ತಿದ್ದನು. ಭೃಂಗಿಯು ಸಿದ್ಧಿಯನ್ನು ಕುಟ್ಟುತ್ತಿದ್ದನು. ಅದನ್ನು ಬಿಟ್ಟು ಹೋಗುವುದಕ್ಕಾಗಲಿಲ್ಲ. ಮತ್ತೊಬ್ಬ ಸೇವಕನು ಹೋಗಿ ಮಹಾದೇವನನ್ನು ಕರೆದುಕೊಂಡುಬಂದನು. ತಂದೆಯು ಬಂದುದನ್ನು ನೋಡಿ ಕಾರ್ತಿಕೇಯನು ಮತ್ತಷ್ಟು ಹೆಚ್ಚಾಗಿ ಉರುಳಾಡುವುದಕ್ಕೆ ಪ್ರಾರಂಭಿಸಿದನು. ಮಹಾದೇವನು ಪೂರಾ ಕಣ್ಣುಬಿಟ್ಟು ನೋಡಬೇಕೆಂದು ಪ್ರಯತ್ನಪಟ್ಟು, ಅಷ್ಟರೊಳಗೆ ಶಾಂತನಾಗಿ ಸ್ವಲ್ಪ ನಕ್ಕು, ವತ್ಸ! ಬಾ, ನಾವಿಬ್ಬರೂ ವೃಷಭವಾಹನರಾಗಿ ಹೋಗೋಣ. ವೃಷಭವು ಮಣಿಮಾಣಿಕ್ಯಗಳಿಂದಲಂಕೃತವಾಗಿ ನಿಂತಿದೆ. ಸಿಹ್ಮಕ್ಕೆ ಅಲಂಕಾರವೇ ಇಲ್ಲವೆಂದು ಹೇಳಿ, ವೃಷಭದ ಮೈಮೇಲೆ ತ್ರಿಶೂಲವನ್ನು ಒರಗಿಸಿಟ್ಟು ಸಬರದಮೇಲಿನ ಸಕಲಾತಿಯನ್ನು ತೆಗೆದು ಒದರಿದನು, ಹುಡುಗ ಕಾರ್ತಿಕೇಯನು ಎದ್ದು ಬಂದು ವೃಷಭಕ್ಕೆ ಒಂದು ಗುದ್ದು ಕೊಟ್ಟನು. ವೃಷಭದ ಆಭರಣಗಳೆಲ್ಲ ಝುಣಝುಣ ಶಬ್ದಮಾಡಿದವು. ಆದರೆ ವೃಷಭವು ಸ್ವಲ್ಪವೂ ಕದಲಲಿಲ್ಲ. ಸ್ವಲ್ಪಮಾತ್ರ ತಲೆಯನ್ನು ಬಗ್ಗಿಸಿಕೊಂಡಿತು. ಕಾರ್ತಿಕೇಯನು ವೃಷಭದ ಕುತ್ತಿಗೆಯಲ್ಲಿದ್ದ ವಜ್ರಖ

ಚಿತವಾದ ಗೆಜ್ಜೇಸರವನ್ನು ಹಿಡಿದು ಕಿತ್ತು ಬಿಸಾಟುಬಿಟ್ಟನು. ಅನಂತರ ನಂದಿಯು ಹೋಗಿ ತನ್ನ ತಂದೆಯ ಸೇವೆಗೋಸ್ಕರ ಸಿದ್ಧವಾಗಿ ತುಂಬಿಟ್ಟಿದ್ದ ಸಿದ್ಧಿಯ ಕಂಟ್ಲೆಯನ್ನು ತೆಗದು ಕೈಲಾಸಪರ್ವತದಿಂದ ಕೆಳಕ್ಕೆ ಬಿಸಾಟನು. ಆ ಕಂಟ್ಲೆಯಿಂದ ಸ್ವಲ್ಪ ಸಿದ್ಧಿಯನ್ನು ತೆಗದುಕೊಂಡು ಈ ನನ್ನ ಚತುರ್ಮುಖತೇಜಿಯಲ್ಲಿ (ಜೋಳಿಗೆಯಲ್ಲಿ) ಹಾಕಿಕೊಂಡುತಂದೆನು, ಎಂದು ಹೇಳಿ ಪಿಶುನನು ಪ್ರಾಂಗಣದೊಳಗೆ ಹೋದನು. ದ್ವಾರಪಾಲಕರು ಪಿಶುನನು ಸಿದ್ಧಪುರುಷನಾಗಿರುವುದರಿಂದ ಅವನು ಹೇಳಿದ ಘಟನಾವಿಶೇಷವು ಅಸಂಭವವಲ್ಲವೆಂದು ಒಪ್ಪಿಕೊಂಡರು. ನವಕುಮಾರನು ಸ್ವಲ್ಪ ನಕ್ಕು, ವಜ್ರಖಚಿತವಾದ ಗೆಜ್ಜೆಯಸರವೇನಾಯಿತು. ನೀನು ಅದನ್ನು ತಂದಿಯಾ? ತಂದಿದ್ದರೆ ಎಲ್ಲಿಟ್ಟಿದ್ದೀಯೆ? ಎಂದು ಕೇಳಿದನು.

ಪಿಶುನ-ನನ್ನ ಮನೆಯಲ್ಲಿಟ್ಟಿದ್ದೇನೆ.

ನವಕುಮಾರ-ನಿಮ್ಮ ಮನೆಯೆಲ್ಲಿ?

ಪಿಶುನ—ಗೊತ್ತಿಲ್ಲ.



## ಹದಿನೈದನೆಯ ಪರಿಚ್ಛೇದ.

ಅರಮನೆಯ ಪ್ರಥಮಪ್ರಾಂಗಣದಲ್ಲಿ ಔತಣಕ್ಕೆ ಬಂದಿದ್ದ ಜನರೆಲ್ಲರೂ ಸೇರಿದ್ದರು. ಅವರಲ್ಲಿ ಮುಕ್ಕಾಲುಪಾಲು ಜನರು ಕುಳಿತುಕೊಂಡು ಮಾತುಕಥೆಗಳನ್ನಾಡುತ್ತಿದ್ದರು. ಒಬ್ಬಿಬ್ಬರು ಅಲ್ಲಲ್ಲಿ ನಿಂತಿರುವರು. ಒಂದು ಕಡೆಯಲ್ಲಿ ಅಧ್ಯಾಪಕರು ಕುಳಿತುಕೊಂಡು ಶಾಸ್ತ್ರಾಲಾಪವಮಾಡುತಲಿದ್ದರು. ಆ ಕಾಲದಲ್ಲಿ ಕೇವಲ ಸ್ಮೃತಿಶಾಸ್ತ್ರಾಧ್ಯಯನವೇ ಪ್ರಬಲವಾಗಿತ್ತು. ನ್ಯಾಯ

ಶಾಸ್ತ್ರದ ವಾಚಾಳತೆಯು ಹೆಚ್ಚು ಹುಟ್ಟಿರಲಿಲ್ಲ. ಆದುಕಾರಣ ಶಾಸ್ತ್ರಲಾಪದ ಚಾತ್ಕಾರವು ಅಧಿಕವಾಗಿ ಕೇಳಿಸುತ್ತಿರಲಿಲ್ಲ. ವಿಶೇಷತಃ ರಾಜನು ಆಗ ಸಭೆಗೆ ಬಂದಿರಲಿಲ್ಲ.

ಮತ್ತೊಂದುಕಡೆಯಲ್ಲಿ ನಗಾರುಸಂದಿ ಹೊಗಳುವ ಭಟ್ಟರಾಜುಗಳು, ಶಿರಸ್ತೆದಾರು ಪೇಷ್ಕಾರರಹಾಗೆ ಪಗಡಿಗಳನ್ನು ಧರಿಸಿ, ತಮ್ಮತಮ್ಮ ಪ್ರಾಪ್ತಿಯನ್ನು ಕುರಿತು, ಮಾತನಾಡುತ್ತ ಮಧ್ಯೆ ಮಧ್ಯೆ ರಾಗವನ್ನೆತ್ತಿ ಬಾದೇ ತಡವೆ ರಾಜನ ಸ್ತುತಿಪಾಠನನ್ನು ಹೇಳಿಬಿಟ್ಟು ಉತ್ತರಕ್ಷಣದಲ್ಲಿ ತಮ್ಮ ತಮ್ಮ ಮನೆಯ ಸಮಾಚಾರಗಳನ್ನು ಪರಸ್ಪರ ಹೇಳಿಕೊಳ್ಳುವರು.

ರಾಜಭೃತ್ಯರೆಲ್ಲರೂ ನಬಾಬೀ ಕಾಯಿದೇಪ್ರಕಾರ ಉಡುಪ್ರಟ್ಟು ನಾಲ್ಕುಕಡೆಗಳಲ್ಲಿಯೂ ತಿರುಗಾಡುವರು. ಅವರೆಲ್ಲರೂ ನಮ್ರಭಾವದಿಂದ ಕೈಕಟ್ಟಿಕೊಂಡು, ಬಾಯಿಯಲ್ಲಿ ಸನ್ಮಾನಸೂಚಕವಾದ ಮಾತುಗಳನ್ನು ಹೇಳುತ್ತಿದ್ದರು. ಈ ಕಾಲದ ಭೃತ್ಯರಿಗೆ ಸ್ವತಂತ್ರಇಚ್ಛೆ. ಅವರ ತಲೆಯಮೇಲೆ ರುಮಾಲು ನಿಲ್ಲುವುದಿಲ್ಲ. ಕೈಕಟ್ಟಿಕೊಂಡಿರುವ ಮಾತೇಹೋಯಿತು. ಆಗಿನಕಾಲದಲ್ಲಿ ಚಿಕ್ಕತನದಿಂದಲೂ ಎಲ್ಲರಿಗೂ ಮರ್ಯಾದೆ ಅಥವಾ ಪ್ರಣಾಮಮಾಡುವ ಪದ್ಧತಿಯಿತ್ತು.

ಈ ಕಾಲದಲ್ಲಿ ಪ್ರಭುಗಳೂ ಸ್ವಾಧೀನತೆಯನ್ನು ಹೊಂದಿದ್ದಾರೆ. ಅವರು ತಮ್ಮ ಇಷ್ಟಬಂದಹಾಗೆ ಉಡುಪುಡುತ್ತಾರೆ. ಇಂದು ಧೋತ್ರ, ನಾಳೆ ಪಾಜಾಮಾ ಅಥವಾ ನಿಮತಕ, ಅಂದರೆ ಪೇಟಲೂನ, ಇಂದು ಕರೆಬಟ್ಟು, ನಾಳೆ ಬರೆಹಣೆ, ಹೀಗೆಲ್ಲಾ ಇರುವದರಿಂದ ಅವರನ್ನು ಕುರಿತು ಕ್ರಮವಾದ ಕೈಫಿಯತನ್ನು ಕೊಡುವುದಕ್ಕೆ ಆಗುವುದಿಲ್ಲ. ಆಹಾರವು ಇಚ್ಛಾನುಸಾರ. ಜನರ ಭಯಕ್ಕೋಸ್ಕರ ಕೂಡ ಯಾವುದನ್ನೂ ಬಿಡರು. ವ್ಯವಹಾರವೂ ಹಾಗೆಯೇ. ಬಡವರಾಗಿರುವುದಕ್ಕೆ ಅವಮರ್ಯಾದೆ. ಈಗಿನ ಸಂಪ್ರದಾಯದ ಭಯಕ್ಕೋಸ್ಕರ ಪಿತ್ರಾಚಾರವನ್ನು ರಕ್ಷಿಸಲಾರದವ

ರಾಗಿದ್ದಾರೆ. ಈ ಕಾಲದಲ್ಲಿ ಪರರಿಗೋಸ್ಕರ ಪ್ರೋಳಂಕಿಸುವುದು ತಪ್ಪು. ತಾನುಂಟು, ಮೂರುಲೋಕವುಂಟು. ಆದರೂ ಈಗಿನವರು ನಾವೇ ಪರೋಪಕಾರಿಗಳೆಂದು ಊಟಲೆಕೊಚ್ಚುತಲಿರುವರು.

ಪಿತಮನು ಮೆಲ್ಲಮೆಲ್ಲಗೆ ರಾಜಸಭೆಯೊಳಗೆ ಪ್ರವೇಶಮಾಡಿದನು. ಅತಿ ಕುಂಠಿತಭಾವದಿಂದ ಹೋಗಿ ಬಂದು ಕಡೆಯಲ್ಲಿ ಕುಳಿತುಕೊಂಡನು. ಬಹಳಹೊತ್ತು ನತಶಿರನಾಗಿದ್ದು ಅನಂತರ ತಲೆಯನ್ನೆತ್ತಿದನು. ಈ ಸಮಯದಲ್ಲಿ ರಾಜಭಗಿನಿಯು ಅವನ ಮಲಿನವಾದ ವಸ್ತ್ರಗಳನ್ನು ಕಿಟಕಿಯ ಕಂಡಿಯಿಂದ ನೋಡುತಲಿದ್ದಳು. ಜೋತ್ಸ್ನಾವತಿಯು ಬಹಳ ಹೊತ್ತಿನ ಮೇಲೆ ಒಬ್ಬ ಪರಿಚಾರಕಳನ್ನು ಕುರಿತು, ಮಾತಂಗಿನಿ! ನೀನು ಈ ಬಡಪಾಪಿಯಾದ ದರಿದ್ರನನ್ನು ನೋಡಿದ್ದಿಯಾ? ಎಂದು ಕೇಳಿದಳು.

ಮಾತಂಗಿನಿ—ಬಲ್ಲೆ, ತಾಯಿ—ಆತನು ಹುಚ್ಚ, ಆತನು ಹುಟ್ಟಿದ ಮೊದಲು ಹುಚ್ಚ, ಬೀದಿಬೀದಿಯಲ್ಲಿ ಅಲಿಯುತ್ತಾನೆ. ಭಿಕ್ಷವನ್ನು ಬೇಡಿ ತಿನ್ನುತ್ತಾನೆ. ರಾತ್ರಿ ಮರದಬುಡದಲ್ಲಿ ಬಿದ್ದಿರುತ್ತಾನೆ. ಅವನ ಹೆಸರು ಹುಚ್ಚಪಿತಮ. ಇಷ್ಟುಬಲ್ಲೆ. ಈಗ ಎಲ್ಲಿಂದಲೋ ಒಳಗೆ ಹೊಕ್ಕುಬಂದ ಹಾಗಿದೆ.

ಜ್ಯೋತ್ಸ್ನಾ—(ಸ್ವಗತ) ಪಿತಮ!

ಈ ಸಮಯದಲ್ಲಿ ಅನೇಕ ವಾದ್ಯಗಳಾದವು. ರಾಜನು ಬರುವನೆಂದು ಸಭಾಸದರೆಲ್ಲರೂ ಎದ್ದುನಿಂತರು. ಪಿತಮನೂ ಎದ್ದನು. ರಾಜನು ಬಂದು ಮುಖ್ಯಾಧಿಕಾರಿಗಳಾದವರೊಂದಿಗೆ ಒಂದೆರಡು ಮಾತುಗಳನ್ನಾಡಿ ಆಸನಗ್ರಹಣಮಾಡಿದನು. ಕುಳಿತ ಕೂಡಲೆ ಸ್ತುತಿಪಾಠಕರು ಮನೋಹರವಾದ ಸ್ವರದಿಂದ ಹೊಗಳಿದರು. ಈ ಅವಕಾಶದಲ್ಲಿ ರಾಜನು ಅತ್ತಿತ್ತ ನೋಡಲಾರಂಭಿಸಿದನು. ಅವನ ದೃಷ್ಟಿಯು ಪಿತಮನಮೇಲೆ ಬಿತ್ತು. ಆದರೆ ಏನೊಂದು ಮಾತನ್ನೂ ಹೇಳಲಿಲ್ಲ.

ಜ್ಯೋತ್ಸ್ನ—ಇವನು ಇಲ್ಲಿಗೆಬಂದು ಎಷ್ಟುದಿನವಾಯಿತು ?

ಮಾತಂ—ಬಹಳಕಾಲವಾಯಿತು. ನನಗೆ ಬುದ್ಧಿಬಂದ ಮೊದಲ್ಗೊಂಡು ನೋಡುತ್ತೇನೆ. ಆದರೆ ನನಗೇನೂ ಅಷ್ಟು ವಯಸ್ಸಾಗಿಲ್ಲ. ಆದರೆ ಎಲ್ಲರೂ ಪಿತಮನು ಇಲ್ಲಿ ಬಹಳ ಕಾಲದಿಂದಿದ್ದಾನೆಂದು ಹೇಳುತ್ತಾರೆ.

ಜ್ಯೋತ್ಸ್ನ—ನೀನು ಈ ಬಡ ಪಾಪಿಯೊಂದಿಗೆ ಯಾವಾಗಲಾದರೂ ಮಾತನಾಡಿದ್ದೀಯಾ?

ಮಾತಂ—ಇಲ್ಲ, ತಾಯಿ. ನನಗೆ ಭಯವಾಗುತ್ತದೆ. ಯಾರು ಬಲ್ಲರು ! ಅವನು ಹುಚ್ಚ. ಏನು ಹೇಳಿಬಿಡುವನೊ ?

ಈ ಸಮಯದಲ್ಲಿ ಮತ್ತೊಬ್ಬ ಪರಿಚಾರಕಳು ಬಂದು, ರಾಜಕುಮಾರನಿಗೆ ಆಶೀರ್ವಾದಮಾಡುವುದಕ್ಕೆ ಮಹಾರಾಣಿಯವರು ತಮ್ಮನ್ನು ಬರಹೇಳುತ್ತಾರೆ, ಎಂದಳು. ಜ್ಯೋತ್ಸ್ನವತಿಯು ಮೆಲ್ಲಗೆ ಎದ್ದು ಹೊರಟು ಹೋದಳು.

ರಾಣಿಯುಮಹಲಿನಲ್ಲಿ ಒಂದು ದೊಡ್ಡದಾದ ಗದ್ದಿಗೆಯಮೇಲೆ ರಾಣಿಯು ನಾನಾಲಂಕೃತನಾದ ಮಗನನ್ನು ಎತ್ತಿಕೊಂಡು ಕುಳಿತಿದ್ದಳು. ನಾಲ್ಕುಕಡೆಯಲ್ಲಿಯೂ ಆತ್ಮೀಯರೂ, ಇತರರೂ ಕೂತು ರಾಜಕುಮಾರನ ಗುಣಕೀರ್ತನೆಯನ್ನು ಮಾಡುತ್ತ ಹಾಡುಹೇಳುತ್ತಿದ್ದರು. ಇದುರಿಗೆ ಒಂದು ಸ್ವರ್ಣಪಾತ್ರದಲ್ಲಿ ಅಕ್ಷತೆ ಆರತಿ ಮುಂತಾದ ಆಶೀರ್ವಾದದ ಉಪಕರಣಗಳು ಸಿದ್ಧವಾಗಿದ್ದವು. ಜ್ಯೋತ್ಸ್ನವತಿಯು ಬರುತಲೇ, ನೀವು ಮೊದಲು ಆಶೀರ್ವಾದಮಾಡದೆ ಮತ್ತಾರೂ ಮಾಡುವುದಕ್ಕಿಲ್ಲ. ಇಲ್ಲಿ ಎಲ್ಲರೂ ಆಶೀರ್ವಾದಮಾಡಿದಮೇಲೆ ಹೊರಗೆ ಬ್ರಾಹ್ಮಣರು ಆಶೀರ್ವಾದವನ್ನು ಮಾಡುವರು. ಮಹಾರಾಜರು ಆಗಲೇ ಸಭೆಗೆ ದಯಮಾಡಿದ್ದಾರೆಂದು ಹೇಳಿದಳು.

ಈವೇಳೆಗೆ ಸರಿಯಾಗಿ ಚೂಡಾಧನನ ಹೆಂಡತಿಯು, ಅದೇನು ! ಇಂತಹ ಕಾಲದಲ್ಲಿ ನಿಮ್ಮ ಕಣ್ಣಿನಲ್ಲಿ ನೀರುಸುರಿಯುತ್ತದೆ? ಎಂದಳು. ರಾಣಿಯು

ಹಾಗೆಯೇ ಮುಖವನ್ನೆತ್ತಿ, ಜ್ಯೋತ್ಸ್ನಾವತಿಯ ಮುಖವನ್ನು ನೋಡಿದಳು. ರಾಜಭಗಿನಿಯು ಅಪ್ರತಿಭಳಾಗಿ, ಸ್ವರ್ಣಪಾತ್ರದಿಂದ ಕಳಸದಲ್ಲಿದ್ದ ದೂರ್ವಾ ಅಕ್ಷತೆಗಳು ತೆಗೆದುಕೊಂಡು ರಾಜಕುಮಾರನಕಡೆಗೆ ಮುಂದಾದಳು. ರಾಜಕುಮಾರನು ಆವಳ ಅಭಿಸಂಧಿಯನ್ನನುಭವಮಾಡಿ ತಲೆಯನ್ನು ಅಲ್ಲಾಡಿಸಿದನು. ಹತ್ತಿರ ಬರುತಲೇ ತಲೆಯನ್ನು ಓರೆಮಾಡಿಕೊಂಡನು. ಪುಟ್ಟತಾಯಿಯು ಪಕ್ಕದಲ್ಲಿದ್ದವಳ ಕಿವಿಯಲ್ಲಿ ರಾಜಕುಮಾರನು, ಅರಿಸಿನೆಣ್ಣೆಯಾಗುವಾಗ ಮೈಗೆ ಮದುವೆಹೆಣ್ಣು ಅರಸಿನವನ್ನು ಹಚ್ಚುವದಕ್ಕೆ ಬಂದಾಗ ಮದುವೆಗಂಡು ಮಾಡುವಹಾಗೆ ಮಾಡುತ್ತಾನೆಂದು ಹೇಳಿದಳು.

ಜ್ಯೋತ್ಸ್ನಾವತಿಯು ಆಶೀರ್ವಾದಮಾಡಿದಮೇಲೆ ಮಿಕ್ಕವರೆಲ್ಲರೂ ಒಬ್ಬೊಬ್ಬರಾಗಿ ಆಶೀರ್ವಾದಮಾಡುವದಕ್ಕೆ ಬರುವುದನ್ನು ಕಂಡು ರಾಜಕುಮಾರನು ಅಳುವುದಕ್ಕಾರಂಭಿಸಿದನು. ಆದರೆ ಯಾರೂ ಅವನನ್ನು ಬಿಡಲಿಲ್ಲ. ಎಲ್ಲರೂ ತಲೆಯಮೇಲೆ ಅಕ್ಷತೆಗಳನ್ನು ತಳಿದು ಆಶೀರ್ವದಿಸಿದರು. ಮಾಧವೀಲತೆಯು ತಾಯಿಯ ತೊಡೆಯಿಂದಿಳಿದು ಮೆಲ್ಲಮೆಲ್ಲಗೆ ಮುಂದಾಗಿ ರಾಣಿಯ ಹತ್ತಿರ ಬಂದಳು. ಒಂದುಸಲ ಸ್ವರ್ಣಪಾತ್ರವನ್ನು ನೋಡಿ ಪುನಃ ರಾಣಿಯ ಮುಖವನ್ನು ನೋಡಿದಳು. ಅನಂತರ ಒಂದು ಹೂವು ತೆಗೆದುಕೊಂಡು ರಾಜಕುಮಾರನ ಹತ್ತಿರ ಕೂತಹಾಗೆ ತೆವಳಿಕೊಂಡು ಹೋದಳು. ಹತ್ತಿರಹೋಗಿ ಚಿಕ್ಕಕೈಯನ್ನೆತ್ತಿ ಹೂವನ್ನು ಕೈಬಿಟ್ಟಳು. ಹೂವು ರಾಜಕುಮಾರನ ಮೈಗೆಕೂಡ ತಾಕಲಿಲ್ಲ. ಹಸೆಗೆ ಹಾಸಿದ್ದ ರತ್ನಕಂಬಳಿಯ ಮೇಲೆ ಬಿತ್ತು. ಮಾಧವಿಯು ಪುನಃ ಆ ಹೂವನ್ನು ತೆಗೆದುಕೊಂಡು ಪುಟ್ಟದ ಕೈಯೆತ್ತಿದಳು. ರಾಜಕುಮಾರನ ಕಿವಿಯವರೆಗೆ ಕೈಯೆಟಕಿತು. ಹೂವನ್ನು ಅಲ್ಲಿ ಕೈಬಿಟ್ಟು ರಾಜಕುಮಾರನ ತಲೆಯಕೂದಲನ್ನು ಮುಟ್ಟಿ ಹಿಂದಿರಿಗಿ ರಾಣಿಯ ಮುಖವನ್ನು ನೋಡಿದಳು. ರಾಣಿಯು ಮತ್ತೊಂದು ಚೆಲುವಾದ ಹೂವನ್ನು ಮಾಧವಿಯ ಕೈಯಲ್ಲಿಕೊಟ್ಟು, ಮಾಡು, ನೀನೂ

ಆಶೀರ್ವಾದಮಾಡು, ನೀನು ಮಾಡುವ ಆಶೀರ್ವಾದವೇ ಫಲಿಸುವದೆಂದು ಹೇಳಿದಳು. ಈ ಮಾತನ್ನು ಕೇಳಿ ರಾಜಭಗಿನಿಯು ರಾಣಿಯ ಮುಖವನ್ನು ನೋಡಿದಳು. ರಾಣಿಯ ದೃಷ್ಟಿಯೂ ಅತ್ತಕಡೆ ಬಿದ್ದು ಆವಳು ಅಪ್ರತಿಭಳಾದಳು. ಮಾಧವೀಲತೆಯು ಹೂವನ್ನು ಹಿಡಿದುಕೊಂಡು ಬಂದೇ ದೃಷ್ಟಿಯಿಂದ ನೋಡಿದಳು. ಎಡಗೈಯಿಂದ ಹೂವಿನ ಒಂದು ದಳವನ್ನು ಕಿತ್ತಳು. ಅನಂತರ ರಾಜಕುಮಾರನ ಕಡೆಗೆ ಕೈನೀಡಿದಳು. ಅವನ ತಲೆ ಎಟಕಲಿಲ್ಲ, ಮತ್ತಷ್ಟು ಮುಂದಾಗಿ ಸರಿದುಹೋದಳು, ಕೈಯೆತ್ತಿ ನೋಡಿದಳು. ಇನ್ನೂ ಮುಂದೆ ಸರಿದಳು. ಕಡೆಗೆ ತಲೆಯಮೇಲೆ ಹುವ್ವಹಾಕಿದಳು. ಅನಂತರ ಅವಳು ತಾನು ಕೃತಕಾರ್ಯಳಾದೆನೆಂದು ತಿಳಿದು ಆನಂದದಿಂದ ಬೇಗಬೇಗನೆ ಹೋಗಿ ತಾಯಿಯ ತೊಡೆಯಮೇಲೆ ಕೂತಳು. ತಾಯಿಯು ಪುನಃ ಪುನಃ ಮುಖಚುಂಬನ ಮಾಡಿದಳು.

ಈಮಧ್ಯೆ ಚೂಡಾಧನಬಾಬುವಿನ ಹೆಂಡತಿಯು, ಇದೇನು! ಇಷ್ಟರೊಳಗೆ ರಾಜಭಗಿನಿಯರು ಎಲ್ಲಿಯೋ ಹೊರಟುಹೋದರೆಂದಳು. ರಾಣಿಯು ಸ್ವಲ್ಪ ತೀವ್ರದೃಷ್ಟಿಯಿಂದ ನೋಡಿದಳು. ಅನಂತರ ಪರಿಚಾರಕರನ್ನು ಕುರಿತು, ನಿಮ್ಮಲ್ಲಿ ಯಾರಾದರೂ ಒಬ್ಬರು ರಾಜಕುಮಾರನನ್ನು ರಾಜಸಭೆಗೆ ಕರೆದುಕೊಂಡುಹೋಗಿ ಅಲ್ಲಿಬಿಟ್ಟು ಬನ್ನಿ, ಎಂದಳು. ಆ ಕೂಡಲೆ ಒಬ್ಬ ಪರಿಚಾರಕಳು ಬಂದು ರಾಜಕುಮಾರನನ್ನು ಎತ್ತಿಕೊಂಡಳು. ಎಲ್ಲರೂಎದ್ದು ಅಂತಃಪುರದ ಬಾಗಲಿನವರೆಗೂ ಬಂದರು. ರಾಣಿಯು ಮತ್ತಷ್ಟುದೂರಹೋಗಿ ಹಿಂದಿರಿಗಿದಳು. ಎಲ್ಲರೂ ಹಿಂದೆಹಿಂದೆಬಂದು ರಾಜಸಭೆಯನ್ನು ನೋಡುವುದಕ್ಕೋಸ್ಕರ ರಾಣಿಯ ಹಿಂದುಗಡೆ ಹೋದರು.

ರಾಜಕುಮಾರನು ಸಭೆಗೆ ಬರೋಣ ಬ್ರಾಹ್ಮಣರೆಲ್ಲರೂ ಎದ್ದು ಆಶೀರ್ವಾದ ಮಾಡಲಾರಂಭಿಸಿದರು. ನವಬತ್ತುನಗಾರಿ ಮುಂತಾದ ವಾದ್ಯಗಳಾದವು. ಆಶೀರ್ವಾದವಾದಮೇಲೆ ರಾಜನೇ ಸ್ವಂತವಾಗಿ ರಾಜಕುಮಾರನನ್ನು

ಎತ್ತಿಕೊಂಡು ಹೊರಟನು. ರಾಜದ್ವಾರದಲ್ಲಿ ಎಲ್ಲರಿಗೂ ದಕ್ಷಿಣೆಕೊಡುವ ಹಾಗೆ ಅಪ್ಪಣೆಮಾಡಿದನು. ಮಹಾಕೋಲಾಹಲಕ್ಕೆ ಪ್ರಾರಂಭವಾಯಿತು. ಕೋಲಾಹಲಶಬ್ದವೂ ಚೀತ್ಕಾರವೂ ವಾದ್ಯಗಳ ಘೋಷವನ್ನೆಲ್ಲಾ ಅಡಿಗಿಸಿ ಮೇಲಕ್ಕೆದ್ದಿತು.

ರಾಜಸಭೆಯಲ್ಲಿದ್ದ ದರಿದ್ರರೆಲ್ಲರೂ ಹೊರಗೆಹೊರಟರು. ಹತ್ತು ಹನ್ನೆರಡು ಅಧ್ಯಾಪಕರುಮಾತ್ರ ಬಂದು ಸ್ಥಳದಲ್ಲಿ ಗುಂಪಾಗಿ ಕುಳಿತುಕೊಂಡು ಏನೋ ಆಲೋಚಿಸುತಲಿದ್ದರು. ಅವರಿಗೆ ಸ್ವಲ್ಪದೂರದಲ್ಲಿ ಹುಚ್ಚ ಪಿತವನು ಕುಳಿತಿದ್ದನು. ಅವನು ಮೊದಲಿನಹಾಗೆಯೇ ಮ್ಲಾನವದನನಾಗಿ ಅನ್ಯಮನಸ್ಕನಾಗಿದ್ದನು.

ಒಬ್ಬ ಹರಿಕಾರನು ಬಂದು, ನೀವು ಏತಕ್ಕೆ ಇಲ್ಲಿಯೇ ಇದ್ದೀರಿ? ಹೊರಗೆ ದಕ್ಷಿಣೆಕೊಡುತ್ತಾರೆ. ಇಲ್ಲಿದ್ದು ಹೊತ್ತುಕಳೆದರೆ ಪ್ರಯೋಜನವಿಲ್ಲವೆಂದನು. ಪಿತಮನು ಅವನನ್ನು ಸುಮ್ಮನೆ ನೋಡಿದನು. ಏನೂ ಹೇಳಲಿಲ್ಲ. ಸ್ವಲ್ಪಹೊತ್ತಿನಮೇಲೆ ನವಕುಮಾರನು ಬಂದು, ಪಿತನು! ವಾದ್ಯಘೋಷಕ್ಕಿಂತ ಹೆಚ್ಚು ಶಬ್ದವು ಯಾವದು? ಹೇಳು ನೋಡೋಣವೆಂದನು.

ಪಿತಮ–ದರಿದ್ರರಶಬ್ದವು ಹೆಚ್ಚೆಂದು ತೋರುತ್ತದೆ,

ನವಕುಮಾರ–ಒಳ್ಳೇದು, ದರಿದ್ರರ ಚೀತ್ಕಾರಕ್ಕಿಂತಲೂ ಮತ್ತಾವದು ಹೆಚ್ಚಾದುದು?

ಪಿತಮ–ಪುತ್ರಶೋಕವುಳ್ಳವನದೆಂದು ತೋರುತ್ತದೆ.

ಒಬ್ಬ ಭಟ್ಟಾಚಾರ್ಯನು, ಕೇಳಿದರೊ! ಹುಚ್ಚನು ಏನು ಹೇಳುತ್ತಾನೆ? ಹುಚ್ಚನಿಗೆ ಇರುವ ಜ್ಞಾನವು ತಮಗೆ ಇಲ್ಲವಾಗಿದೆ. ತಾವೆಲ್ಲ ಯಾವ ಬುದ್ಧಿಯಿಂದ ನಾನು ತಾಳ್ಮೆತೆಗೆದುಕೊಳ್ಳಬೇಕೆನ್ನುತ್ತೀರಿ? ನಾನು ಬಹಳ ಸಹಿಸಿದೆನು. ಇನ್ನೂ ಹೇಗೆ ಸಹಿಸಿಕೊಂಡಿರಲಿ? ಇಷ್ಟುಕಾಲದ ಕಷ್ಟವೂ ಇಂದು ನೀಗಿಹೋಗಲಿ ಎಂದನು.

ಈ ಸಮಯದಲ್ಲಿ ರಾಜನು ಪುತ್ರನನ್ನೆತ್ತಿಕೊಂಡು ಅಲ್ಲಿಗೆ ಬಂದನು, ಅವನ ಹಿಂದೆ ಇನ್ನೂ ಅನೇಕರು ಬಂದರು. ರಾಜನು ಬರುತ್ತಲೆ ಆ ತಾಳ್ಮೆ ತಪ್ಪಿದ ಭಟ್ಟಾಚಾರ್ಯನು ಮುಂದಾಗಿಹೋಗಿ ರಾಜನನ್ನು ಕುರಿತು, ಪುತ್ರ ನನ್ನು ನನಗೆ ಸಮರ್ಪಿಸಬೇಕಾಗಲಿ, ಈ ಸಂತಾನವು ನನ್ನದು ಎಂದನು.

ರಾಜಾ—ತಾವು ಕೇಳುವದೇನು ?

ಅಧ್ಯಾಪಕ—ನನ್ನ ಪುತ್ರನನ್ನು ಕೇಳುತ್ತೇನೆ.

ರಾಜಾ—ತಮ್ಮ ಪುತ್ರನೆಲ್ಲಿ ?

ಅಧ್ಯಾಪಕ—ತಾವು ಎತ್ತಿಕೊಂಡಿರಬೇಕಾಗಿದೆ. ರಾಜರ ಕಂಕುಳಲ್ಲಿ ನನ್ನ ಮುದ್ದಾದ ಕಂದ! ಕೊಟ್ಟರೆ ಬಂದುಸಲ ಎತ್ತಿ ಮುದ್ದಾಡುವೆನು. ನಾನು ಆಡುವಮಾತು ತಮಗೆ ಅರ್ಥವಾಗುವುದಿಲ್ಲವೆಂದು ತೋರುತ್ತದೆ ನಾನು ಹುಚ್ಚನೆಂದು ತಿಳಿಯಬೇಕಾಗಿರಬಹುದು. ನಾನು ಹುಚ್ಚನಾಗಿರು ವುದು ನಿಜ. ಯಾರುತಾನೇ ಹುಚ್ಚರಾಗದಿರುವರು ? ನಮ್ಮ ಮನೆಯಲ್ಲಿ ಮಗು ಮಲಗಿತ್ತು. ಬೆಳಗ್ಗೆ ಎದ್ದು ನೋಡುವಾಗ ಮಗುವಿಲ್ಲ. ಆಲಸ್ಯ ಮುಂತಾದುದೇನೂ ಇಲ್ಲ. ತಾಯಿಯಪಕ್ಕದಲ್ಲಿದ್ದ ಮಗುವು ಹೋಗಿತ್ತು. ಹೀಗಾದರೆ ಯಾರುತಾನೇ ಹುಚ್ಚರಾಗದಿರರು ? ಜನರು ಭೌತಿಕವ್ಯಾಪಾರ ವಿರಬಹುದೆಂದರು. ಮತ್ತೆ ಕೆಲವರು ಶೂನ್ಯಗಾರ್ತಿಯ ಕೆಲಸವೆಂದು ಹೇಳಿ ದರು. ಆಗ ನಾನು ಇದು ರಾಜನ ಕಾರ್ಯವೆಂದು ಅರಿತಿರಲಿಲ್ಲ. ಈಗ ಗೊ ತ್ತಾದುದರಲ್ಲಿ ನನ್ನ ಮನೆಯಲ್ಲಿ ಹುಟ್ಟಿದುದೆಂಬ ಮೃತವಾದ ಹೆಣ್ಣುಶಿಶುವು ತಮ್ಮ ಪಟ್ಟದರಾಣಿಯರು ಹಡೆದುದು, ಎಂಬು ಗೊತ್ತಾಗಿದೆ. ಅದು ಈ ದುರ್ಭಾಗ್ಯನ ಕೊರಳಿಗೆ ಕಟ್ಟಲ್ಪಟ್ಟಿತ್ತು. ಅದು ಹೇಗಾದರೂ ಆಗಲಿ, ಆ ದುಃಖಗಳನ್ನೆಲ್ಲಾ ಈಗ ಮರೆತೆನು. ಈಗ ನನ್ನ ಹೋಗಿದ್ದಧನವನ್ನು ನನಗೆ ಕೊಡಬೇಕಾಗಲಿ ಎಂದನು.

ಇದೇನು ವ್ಯಾಪಾರ! ಎಂದಂದುಕೊಂಡು ರಾಜನು ಮಗುವನ್ನು

ಎದೆಗೆ ಮತ್ತಷ್ಟು ಹೆಚ್ಚಾಗಿ ತಳ್ಳೈಸಿಕೊಂಡು ಬಳಕ್ಕೆ ಹೊರಟುಹೋದನು. ಅಧ್ಯಾಪಕನು ರಾಜನ ಹಿಂದಟ್ಟಿಹೋಗಲು ಯತ್ನಿಸಿದನು. ಎಲ್ಲರೂ ಬೇಡವೆಂದರು. ಕೆಲವರು ಅವನ ಕೈಯನ್ನು ಹಿಡಿದು ನಿಲ್ಲಿಸಿದರು. ಬ್ರಾಹ್ಮಣನು ಚೀತ್ಕಾರಮಾಡುತ್ತ, ಎಲ್ಲಾ ಅಧರ್ಮಗಳಗಿಂತಲೂ ಪುತ್ರಹರಣವು ಗುರುತರವಾದುದು. ಅತಏವ, ಸ್ವಲ್ಪ ಸಾವಧಾನವಾಗಿರಬೇಕೆಂದನು.

ಈ ಸಮಯದಲ್ಲಿ ದಿವಾನನು ಮುಂದಾಗಿ ಬಂದು ಬ್ರಾಹ್ಮಣನನ್ನು ಕುರಿತು, ತಾವು ಪುತ್ರಶೋಕಾಕುಲರಾಗಿರುವಹಾಗೆ ಕಾಣುತ್ತದೆ. ತಾವು ನನ್ನೊಡನೆ ಬರೋಣಾಗಲಿ, ಯಾರೋ ಈಗ ತಮ್ಮ ವ್ಯಸನವನ್ನು ಹೆಚ್ಚುಗೊಳಸಿದಹಾಗೆ ತೋರುತ್ತದೆ. ಯಾರು ಯಾವ ಪ್ರಮಾಣಗಳಂದ ತಮಗೆ ಈ ಭ್ರಮೆಯನ್ನುಂಟುಮಾಡಿದರೊ? ಅದನ್ನು ಹೇಳೋಣಾಗಲಿ, ದಯಮಾಡಿ ಬನ್ನಿ ಎಂದನು.

---

## ಹದಿನಾರನೆಯ ಪರಿಚ್ಛೇದ.

---

ಬ್ರಾಹ್ಮಣನು ಕೂಗಿಕೊಳ್ಳುತ್ತ ತನ್ನ ಪರಿಚಯವನ್ನು ಹೇಳುತ್ತ ದಿವಾನನ ಹಿಂದೆಹಿಂದೆ ದಿವಾನಖಾನೆಗೆ ಹೋದನು. ಸಂಗಡ ಮೂರು ನಾಲ್ಕು ಮಂದಿ ಭಟ್ಟಾಚಾರ್ಯರೂ ಹೋದರು. ನವಕುಮಾರನೂ ಪಿತಮನೂ ಸಹ ಅಲ್ಲಿಗೆ ಹೋಗಿ ಕುಳಿತರು. ದಿವಾನನು, ತಮ್ಮ ಹೆಸರೇನು? ಎಂದು ಕೇಳದನು.

ಬ್ರಾಹ್ಮಣ—ದಶರಥಶರ್ಮ—ನಾನು ಇರುವುದು ಇದೇ ಊರು. ಈಗ ನನ್ನ ಪರಿಚಯಪರಂಪರೆಯಿಂದ ಪ್ರಯೋಜನವಿಲ್ಲ. ನನ್ನ ಮಗು ಕಳವಾಗಿದೆ. ಅದರ ವಿಚಾರವಾಗಬೇಕು. ನನಗೆ ಮನೆಯೆಲ್ಲಿ? ಯಾವಶಾ

ದಿವಾನ–ಒಳ್ಳೇದು, ವೃತ್ತಾಂತವೇನು ? ತಾವು ಹೇಳೋಣಾಗಲಿ.

ಅಧ್ಯಾಪಕ–ಅಪ್ಪಣೆ ಪ್ರಕಾರ. ವೃತ್ತಾಂತವೇನೆಂದರೆ;–ವಾಚಸ್ಪತಿಮಹಾಶಯರ ಸಂತಾನವು ಹರಣವಾದುದು ನಿಜ. ಮೊದಲು ನಾವು ಸಂತಾನವನ್ನು ಸೂತಿಕಾಗೃಹದಿಂದ ಸೃಗಾಲವು ತೆಗೆದುಕೊಂಡು ಹೋಯಿತೆಂದು ಸಿದ್ಧಾಂತಮಾಡಿದೆವು. ಅದೂಅಲ್ಲದೆ, ಅಂದು ಗ್ರಾಮದ ಹತ್ತಿರ ಒಂದು ಸದ್ಯಃ ಪ್ರಸೂತವಾದ ಅರ್ಧ ಭುಕ್ತವಾದ ಮಗುವಿನ ದೇಹಾವಶಿಷ್ಟವು ಸಿಕ್ಕಿತು.

ದಶರಥ–ಸುಳ್ಳುಮಾತು. ಯಾವಾಗ ಎಲ್ಲಿ ಯಾರ ದೇಹಾವಶಿಷ್ಟವನ್ನು ಕಂಡಿರಿ? ನನಗೆ ಮೊದಲೇ ಗೊತ್ತು, ಜ್ಞಾತಿಶತ್ರುವು ಸಂಗಡ ಇದ್ದರೆ ಸಕಲ ಪ್ರಯತ್ನವೂ ವ್ಯರ್ಥವೆಂದು ಮೊದಲೆ ಗೊತ್ತಿತ್ತು.

ಅಧ್ಯಾಪಕ–ವಾಚಸ್ಪತಿಮಹಾಶಯರೆ ! ಸ್ವಲ್ಪ ಶಾಂತರಾಗಿರಿ. ನಾನು ತಮ್ಮ ಜ್ಞಾತಿಯೇ ಹೌದು, ಆದರೆ ಶತ್ರುವಲ್ಲ. ತಮ್ಮ ವಂಶ ನಡೆದು ಬಂದರೆ ನನಗೂ ಒಂದು ಗಂಡೂಷ ತಿಲೋದಕವು ಸಿಕ್ಕುವುದು. ನಾನು ತಮ್ಮ ಪಕ್ಷವಾಗಿಯೇ ಮಾತನಾಡುತ್ತೇನೆ. ತಾವು ತಮ್ಮ ಸ್ವಂತ ವಿಚಾರವನ್ನು ಹೇಳಕೊಳ್ಳಲಾರಿರಿ. ಆದುಕಾರಣ ಅದನ್ನು ತಿಳಿಸುವ ಭಾರವನ್ನು ನಾನು ಗ್ರಹಣಮಾಡಿದ್ದೇನೆ.

ದಶರಥ–ಅದೇನು? ನನ್ನ ವಿಚಾರವನ್ನು ಕುರಿತು ನಾನು ಹೇಳಕೊಳ್ಳಲಸಮರ್ಥನೆ? ನೀನು ಹೊಸದಾಗಿ ಪಾಠಶಾಲೆಯನ್ನಿಟ್ಟಮಾತ್ರಕ್ಕೆ ನೀನು ನನಗಿಂತಲೂ ದೊಡ್ಡ ಪಂಡಿತನಾದೆಯೊ? ಈ ಅಹಂಕಾರವು ಸರಿಯಾದುದಲ್ಲ. ಇದು ಬಹಳ ದಿನಸಹಿಸಲಾರದು. 'ನಾಹಂಕಾರಾತ್ ಪರೋ ರಿಪುಃ',

ಅಧ್ಯಾಪಕನು ದಶರಥನಿಗೆ ಏನೂ ಉತ್ತರವನ್ನು ಹೇಳದೆ, ದಿವಾನನನ್ನು ಕುರಿತು, ಒಟ್ಟುಮಾತು ಏನೆಂದರೆ, ಬಾಲಾವೇದಿಸಿಯು ಸಂತಾನ

ವನ್ನು ದಾದೀ ರಾಮಿಗೆ ಕೊಟ್ಟಳು. ಅವಳು ತೆಗೆದುಕೊಂಡು ಹೋಗಿ ರಾಣಿಯ ಸೂತಿಕಾಗಾರದಲ್ಲಿಟ್ಟಳು. ಆ ರಾತ್ರಿಯು ರಾಣಿಯು ಬಂದು ಮೃತಕನ್ಯೆಯನ್ನು ಪ್ರಸವಿಸಿದ್ದಳು. ಅರ್ಥಲೋಭದಿಂದ ರಾಮಿಯೂ ಒಬ್ಬ ಪರಿಚಾರಕಳೂ ಇಬ್ಬರೂ ಸೇರಿ ಆಲೋಚಿಸಿ ಈ ಕಾರ್ಯವನ್ನು ಮಾಡಿದರು. ರಾಜನಾಗಲಿ ರಾಣಿಯಾಗಲಿ ಇದನ್ನು ತಿಲಾಂಶಮಾತ್ರವೂ ತಿಳಿಯರು. ಈಗ ಪಕ್ಷಪಾತವಿಲ್ಲದೆ ವಿಚಾರಮಾಡಿದರೆ ಎಲ್ಲಾ ಸಂಗತಿಯೂ ಪ್ರಕಾಶವಾಗುವುದು ಎಂದು ಹೇಳಿದನು.

ದಿವಾನ—ರಾಣಿಯಾಗಲಿ ರಾಜರಾಗಲಿ ತಿಳಿಯದ ಅಂಶವು ಈಗ ನಿಮಗೆ ತಿಳಿದಿದೆ. ಇದು ಬಹಳ ಆಶ್ಚರ್ಯ! ತಾವು ಯಾರಿಂದ ಕೇಳೋಣಾಯಿತು?

ಅಧ್ಯಾಪಕ—ನನಗೆ ಹೇಳಿದವರ ಹೆಸರನ್ನು ಈಗ ಬಹಿರಂಗವಾಗಿ ಹೇಳಲಾರೆನು. ತಾವು ಬ್ರಾಹ್ಮಣಪ್ರಭುವಾಗಿ ಇದನ್ನೆಲ್ಲಾ ಚನ್ನಾಗಿ ವಿಚಾರಿಸುವದಾದರೆ, ಪುನಃ ನನ್ನನ್ನು ಕರೆಯಿಸಿದರೆ ಆಗ ನನಗೆ ಹೇಳಿದವರ ಹೆಸರನ್ನು ಹೇಳುತ್ತೇನೆ. ಈಗಲೇ ಹೇಳಿಬಿಟ್ಟರೆ ರಾಜರ ಪರಿಚಾರಕರು ಆ ಮನುಷ್ಯನನ್ನು ವಶಮಾಡಿಕೊಳ್ಳುವರು.

ದಿವಾನ—ಈಗತಾನೇ ದಾದಿ ರಾಮಿಯ ಹೆಸರನ್ನೂ ಬಾಲಾವೇದಿನಿಯ ಹೆಸರನ್ನೂ ಹೇಳಿದಿರಿ. ಉಳಿದ ಜನರ ಹೆಸರುಗಳನ್ನು ಹೇಳಲು ಆಕ್ಷೇಪಣೆ ಏನು?

ಅಧ್ಯಾಪಕ—ಬಾಲಾವೇದಿನಿಯು ಈಗ ಕೆಲವು ತಿಂಗಳ ಹಿಂದೆ ಲೋಕಾಂತರವನ್ನು ಹೊಂದಿದಳು. ರಾಮಿಯ ಮಾತು ಬೇರೆ. ಅವಳಿಂದಲೇ ಈ ಕೆಲಸವಾದುದು. ಇನ್ನು ಅವಳು ಬಪ್ಪುವಳೇನು? ಇನ್ನೇನೂ ಅವಳನ್ನು ವಶಮಾಡಿಕೊಳ್ಳಬೇಕಾದುದು ಉಳಿದಿಲ್ಲ. ಅವಳು ಎಂದಿಗೂ

ಒಪ್ಪಳು. ಅವಳ ಅರ್ಥಲಾಲಸತೆಯಿಂದ ಈ ಬ್ರಾಹ್ಮಣನ ವಂಶವು ನಿಸ್ಸಂತಾನವಾಯಿತೆಂದು ಅವಳು ಒಪ್ಪಳು.

ದಿವಾನ—ಒಳ್ಳೇದು, ಸಮಯಬಂದಾಗ ತಮ್ಮನ್ನು ಕರೆಸುವೆನು. ಈಗ ಸಭೆಗೆ ಹೋಗಬಹುದು.

ಈ ಸಮಯದಲ್ಲಿ ಚೂಡಾಧನಬಾಬುವು ಪ್ರವೇಶಮಾಡಿದನು. ದಶರಥನು ಅವನನ್ನು ಕುರಿತು, ತಾವು ಇಲ್ಲದ ವೇಳೆಯಲ್ಲಿಯೆ ಎಲ್ಲಾ ವಿಚಾರವನ್ನೂ ದಿವಾನರಿಗೆ ಅರಿಕೆಮಾಡಿಬಿಟ್ಟೆನು. ಇನ್ನು ತಾವು ನೋಡಿಕೊಳ್ಳಬೇಕು ಎಂದನು. ಅಲ್ಲಿದ್ದ ಪಿತಮನು, ತಾವು ಎಲ್ಲಾ ವಿಚಾರವನ್ನೂ ದಿವಾನರಿಗೆ ಹೇಳಲ್ಲ. ಮುಖ್ಯವಾದ ಮಾತನ್ನೇ ಬಿಟ್ಟಿದ್ದೀರಿ ಎಂದನು.

ದಶರಥ-ಯಾವ ಮಾತು?

ಪಿತಮ—ಜ್ಞಾಪಿಸಿಕೊಳ್ಳಿರಿ.

ದಶರಥ-ಇನ್ನಾವ ಮಾತು? ಜ್ಞಾಪಕವಿಲ್ಲವಲ್ಲ.

ಈ ಮಾತನ್ನು ಕೇಳಿ ಚೂಡಾಧನನು ಭಯಪಟ್ಟು ಪಿತಮನ ಕಡೆ ನೋಡಿದನು. ಅನಂತರ, ಯಾವಮಾತು? ಪಿತಮ! ಎಂದು ಕೇಳಿದನು.

ಪಿತಮ-ನನಗೆ ಜ್ಞಾಪಕವಿಲ್ಲ. ರಾತ್ರಿ ಹೊತ್ತಿನ ಮಾತು. ನನಗೆ ಜ್ಞಾಪಕವಿರುವುದಿಲ್ಲ. ಬೆಳಕಿನಲ್ಲಿ ಮಾತನಾಡಿದರೆ ಜ್ಞಾಪಕವಿರುತ್ತದೆ

ಚೂಡಾಧನಬಾಬುವು ಬಹಳ ತೀವ್ರವಾದ ದೃಷ್ಟಿಯಿಂದ ಒಂದು ಸಲ ದಶರಥನನ್ನೂ ನೋಡಿ, ಅನಂತರ ನಕ್ಕು, ಹುಚ್ಚನ ಮಾತು ಹೋಗಲಿ, ಮುಖ್ಯವಾಗಿ, ರಾಜಕುಮಾರನು ನಿಮ್ಮ ಮಗನೆಂಬುದಕ್ಕೆ ಏನು ಪ್ರಮಾಣವನ್ನು ಕೊಟ್ಟಿದ್ದೀರಿ? ಎಂದನು.

ದಶರಥ—ಅನಂತರ ಕೊಡುವೆನು.

ಚೂಡಾಧನ—ಅನಂತರ ವಿಚಾರಣೆಯಾಗುವುದು.

# ಹದಿನೇಳನೆಯ ಪರಿಚ್ಛೇದ.

ಈ ಮಾತಿನಮೇಲೆ ದಿವಾನನು, ಪಿತಮ! ಮೊದಲು ಯಾವಾಗಲೂ ನಿನ್ನನ್ನು ಅರಮನೆಯೊಳಗೆ ನೋಡಿಲ್ಲವಲ್ಲವೆ? ಎಂದನು.

ವಾಸ್ತವಿಕವಾಗಿ ದಿವಾನನು ಹೇಳಿದಮಾತು ನಿಜ. ಪಿತಮನು ಯಾವಾಗಲೂ ಗೃಹದೊಳಕ್ಕೆ ಪ್ರವೇಶಮಾಡಿದುದಿಲ್ಲ. ರಾಜನು ಎಷ್ಟೋ ತಡವೆ ಕರೆದನು. ಪಿತಮನು ಯಾವಾಗಲೂ ಬರಲಿಲ್ಲ. ರಾಜನೊಂದಿಗೆ ರಾಜದ್ವಾರದವರೆಗೆ ಬಂದು, ಅಲ್ಲಿ ನಕ್ಕು ಹಿಂದಕ್ಕೆ ಹೊರಟುಹೋಗುವನು. ಪಿತಮನನ್ನು ಆದರಿಸತಕ್ಕ ಇತರ ಜನರು ಆಗಿಂದಾಗ ಅವನನ್ನು ಮನೆಗೆ ಊಟಕ್ಕೆ ಕರೆಯುವರು. ಆದರೆ ಪಿತಮನು ಒಳಕ್ಕೆಹೋಗದೆ ಮನೆಯ ಮುಂದುಗಡೆ ಒಂದುಮರದ ನೆರಳಿನಲ್ಲಿ ಕೂತು ಊಟಮಾಡುವನು. ಮನೆಯೊಳಗೆ ಹೋಗನು. ಮನೆಯೊಳಗೆ ಬರುವುದಿಲ್ಲವೇತಕ್ಕೆಂದು ಕೇಳಿದರೆ, ಪಿತಮನು ಮನೆಯೊಳಗೆ ಕಾಗೆಗಳು ಬರುವುದಿಲ್ಲವೆಂದು ಹೇಳುವನು. ಪಿತಮನು ಊಟಮಾಡುವುದಕ್ಕೆ ಕೂತರೆ ಆ ಸ್ಥಳದಲ್ಲಿ ಅನೇಕ ಕಾಗೆಗಳ ಗುಂಪು ಸೇರುವುದು. ಅವನಿಗೆ ಬಡಿಸಿದ ಅನ್ನದಲ್ಲಿ ಅರ್ಧವನ್ನು ಕಾಗೆಗಳಿಗೆ ಹಾಕಿಬಿಟ್ಟು ಉಳಿದುದನ್ನು ಊಟಮಾಡುವನು ಕಾಗೆಗಳು ಬಹಳ ತಂಟೆ ಮಾಡುವುವು. ಅದಕ್ಕೋಸ್ಕರ ಕಾಗೆಗಳು ಒಂದಕ್ಕೊಂದು ಕಿತ್ತಾಡುವುವು. ಪಿತಮನು ಒಂದೊಂದುಸಲ ವ್ಯಾಕುಲಹೃದಯನಾಗಿಯೂ ಒಂದೊಂದುಸಲ ಆನಂದಿತಹೃದಯನಾಗಿಯೂ ಅವುಗಳ ವಿರೋಧವನ್ನು ನೋಡುತ್ತಿರುವನು.

ಅನೇಕರು, ಪಿತಮನು ಕಾಗೆಗಳ ಅನುರೋಧದಿಂದ ಮನೆಯೊಳಗೆ ಬಂದು ಊಟಮಾಡುವುದಿಲ್ಲವೆಂದು ಹೇಳುವರು. ಆದರೆ ಬೇರೆ ಸಮಯಗಳಲ್ಲಿ ಪಿತಮನು ಮನೆಯೊಳಗೆ ಹೋಗುತ್ತಿದ್ದನೋ ಇಲ್ಲವೋ ಅದನ್ನು

ಯಾರೂ ವಿಚಾರಿಸಿ ತಿಳಿದುಕೊಂಡಿರಲಿಲ್ಲ. ಆದುದರಿಂದ ದಿವಾನನು, ನೀನು ಯಾವಾಗಲೂ ಗೃಹದೊಳಗೆ ಪ್ರವೇಶಮಾಡಿದವನಲ್ಲವೆಂದು ಹೇಳಿದನು ಈ ಮಾತನ್ನು ಕೇಳಿ, ಪಿತಮನು ಸ್ವಲ್ಪ ಪ್ರತಿಭಾರಹಿತನಾಗಿ, ಹಠಾತ್ತಾಗಿ, ತಪ್ಪಾಯಿತು; ಈಗ ಹೊರಟೆ ಎಂದು ಹೇಳಿ, ಹೊರಟುಹೋಗದೆ ಅಲ್ಲಿಯೇ ನಿಂತಿದ್ದನು,

ಈ ಸಮಯದಲ್ಲಿ ಚೂಡಾಧನನು ದಶರಥವಾಚಸ್ಪತಿಯನ್ನು ಕುರಿತು, ರಾಜಕುಮಾರನು ತಮ್ಮ ಸಂತಾನವೆಂದು ತಮಗೆ ಸ್ಥಿರವಾದ ನಂಬುಗೆಯಿದ್ದರೂ ತಾವು ಅದನ್ನು ಹೊರಪಡಿಸಕೂಡದು. ಹಾಗೆ ಪ್ರಕಾಶಮಾಡುವುದು ಚಿತವಲ್ಲ. ತಾವು ಎಷ್ಟು ಪ್ರಯತ್ನಪಟ್ಟರೂ ತಮ್ಮ ಮಗನಿಗೆ ಬಂದು ಪಾಠಶಾಲೆಯ ಅಧ್ಯಕ್ಷನಾಗಿ ಮಾಡುವುದಕ್ಕಿಂತಲೂ ಹೆಚ್ಚು ಪಕಾರಮಾಡಲಾರಿರಿ. ಈಗಲಾದರೋ ತಮ್ಮ ಮಗನು ನಿಶ್ಚಯವಾಗಿ ರಾಜನಾಗುವನು. ತಾವು ಏತಕ್ಕೆ ಅಡ್ಡಿಯಾಗಿ ನಿಂತು ವ್ಯಾಘಾತವುಂಟುಮಾಡುತ್ತೀರಿ? ಇಷ್ಟು ಹೇಳಿ ಚೂಡಾಧನನು ಯಾರಿಗೂ ಕಾಣಿಸದೆ ಬಂದುಸಲ ದಿವಾನನಕಡೆ ನೋಡಿದನು. ದಿವಾನನು ಅದನ್ನು ನೋಡಿದವನಾಗಿ ಚಕಿತನಾದವನಹಾಗೆ ಓಷ್ಠಪ್ರಾಂತದಲ್ಲಿ ಸ್ವಲ್ಪಮುಗುಳುನಗುವನ್ನು ತೋರ್ಪಡಿಸಿ ಅದರಿಂದ, ತನಗೆ ಎಲ್ಲಾ ತಿಳದಿದೆಯೆಂಬ ಅರ್ಥವನ್ನು ದ್ಯೋತಕಮಾಡಿದನು.

ದಶರಥವಾಚಸ್ಪತಿಯು ಚೂಡಾಧನನನ್ನು ಕುರಿತು, ತಾವು ಅಪ್ಪಣೆ ಕೊಡುವುದೆಲ್ಲಾ ಅರ್ಥವಾಯಿತು. ಆದರೆ ಬ್ರಾಹ್ಮಣಿಯು ಅದನ್ನು ತಿಳಿಯಲಾರಳು—ಅವಳು, ನನ್ನ ಸಂತಾನವನ್ನು ನಾನು ಲಾಲನಪಾಲನಮಾಡುವೆನು—ನಾನು ಹೊಟ್ಟೆಗೆಕೊಟ್ಟು ಮುಂದಕ್ಕೆ ತಾರದ ಮಗುವು ನನ್ನ ಸಂತಾನವಾಗುವ ಬಗೆ ಹೇಗೆ? ಆ ಸಂತಾನವು ರಾಜನಾದರೂ ಆಗಲಿ ದರಿದ್ರನಾದರೂ ಆಗಲಿ, ಅದರಿಂದ ನನಗಾಗುವುದೇನು? ನಾನು ಎತ್ತಿಕೊಂಡು ಹೊಟ್ಟೆಗೆಕೊಟ್ಟು ಪೋಷಿಸಿದರೆ ಆಗದು ನನ್ನ ಮಗುವಾಗುವುದು. ನನ್ನಹೊಟ್ಟೆ

ಯುರಿಯುತ್ತ ಬಾಯಿಯಲ್ಲಿ ಮಾತ್ರ ನನ್ನ ಮಗ ರಾಜನಾಗಿದ್ದಾನೆಂದು ಹೇಳಿದಮಾತ್ರಕ್ಕೆ ಆಗುವುದೇನೆಂದು ಹೇಳುವಳು ಎಂದನು.

ಚೂಡಾಧನ—ತಮ್ಮ ಬ್ರಾಹ್ಮಣಿಯು ಬಹಳ ಸ್ವಾರ್ಥಪರಳು. ಆಕೆಯು ತನ್ನ ಸುಖ, ತನ್ನ ತೃಪ್ತಿ ಸಂತೋಷಗಳನ್ನೇ ತಿಳಿದಿದ್ದಾಳೆಯೇ ಹೊರತು ಮಗುವಿನ ಭವಿಷ್ಯತ್ತನ್ನು ಯೋಚಿಸಲಿಲ್ಲ. ಈಗಿನ ಕಾಲವೇ ಕೆಟ್ಟುಹೋಯಿತು. ಎಲ್ಲರೂ ಸ್ವಾರ್ಥಪರರಾಗಿ ಬಿಟ್ಟರು.

ದಶರಥ—ತಮ್ಮ ತಮ್ಮ ಮಕ್ಕಳನ್ನ ತಂದೆತಾಯಿಗಳು ಎತ್ತಿಕೊಂಡರೆ ಅಥವಾ ತಮ್ಮ ಸಂಪತ್ತನ್ನು ತಾವು ಅನುಭೋಗಿಸಿದರೆ ಅಂತಹವರೆಲ್ಲರೂ ಸ್ವಾರ್ಥಪರರಾದರೆ ನಾನು ಹೇಳುವುದೇನು ಉಳಿಯಿತು. ಈಗ ತಾವು ಇದ್ದೀರಿ. ದಿವಾನರೂ ಇದ್ದಾರೆ. ಇಬ್ಬರೂ ಆಲೋಚಿಸಿ ಬ್ರಾಹ್ಮಣನ ಸಂತಾನವು ಬ್ರಾಹ್ಮಣನಿಗೆ ಸೇರುವಂತೆ ಮಾಡಿಸೋಣಾಗಬೇಕು. ನನ್ನನ್ನು ಬರೆಕೈಯಿಂದ ಕಳುಹಿಸಬೇಡಿರಿ. ನಾನು ಇಲ್ಲಿಗೆ ಬರುವಾಗ ಬ್ರಾಹ್ಮಣಿಗೆ ಅವಳ ಕಳೆದುಹೋಗಿದ್ದ ಧನವನ್ನು ಇಂದೇ ತಂದುಕೊಡುವೆನೆಂದು ಹೇಳಿ ಬಂದಿದ್ದೇನೆ. ಅವಳು ಇಷ್ಟುಹೊತ್ತಿಗೆ ಆರ್ಧಹಾದಿಗೆ ಬಂದಿದ್ದರೂ ಬಂದಿರಬಹುದು. ನಾನು ಬರೆಕೈಲಿಹೋದರೆ, ಅವಳ ದುಃಖವು ಎಷ್ಟುಇರಬಹುದೋ ಅದನ್ನು ತಾವೇ ಊಹಿಸಿಕೊಳ್ಳಬಹುದು. ತಾವು ಎಲ್ಲಾ ತಿಳಿದವರೇ ಹೌದು. ಇನ್ನು ಹೆಚ್ಚು ಹೇಳಲಾರೆನು.

ಚೂಡಾಧನ—ತಮ್ಮ ಬ್ರಾಹ್ಮಣಿಯೊಬ್ಬಳೇ ಸ್ವಾರ್ಥಪರಳಲ್ಲ. ತಾವೂ ಸಹ ತಮ್ಮ ಬ್ರಾಹ್ಮಣಿಯ ಸಂತೋಷವನ್ನೇ ಯೋಚಿಸುತ್ತೀರಿ. ರಾಜ ಅಥವಾ ರಾಣಿಯ ಕಷ್ಟವನ್ನು ಕುರಿತು ಸ್ವಲ್ಪವೂ ಯೋಚಿಸುವ ಹಾಗಿಲ್ಲ. ಅವರು ಸಂತಾನವನ್ನು ತ್ಯಾಗಮಾಡುವುದು ಸುಲಭವಾದ ಕೆಲಸವಲ್ಲವೆ ? ಅವರು ತಮ್ಮ ಸಂತಾನವನ್ನು ಹೇಗೆ ತ್ಯಾಗಮಾಡುವರು ? ತಾವು ಯಾವ ಪ್ರಮಾಣಗಳನ್ನೊದಗಿಸಿದ್ದೀರಿ ? ತಾವು ರಾಜಕುಮಾರನು ನನ್ನ

ಕುಮಾರನೆಂದು ಹೇಳಿದಮಾತ್ರಕ್ಕೆ ರಾಜಕುಮಾರನು ತಮ್ಮವನಾದಾನೇನು? ರಾಜರು ಕುಮಾರನನ್ನು ತಂದು ಒಪ್ಪಿಸಿಬಿಡುವರೆ ? ತಮ್ಮ ಪ್ರಮಾಣಗಳೇನುಂಟು, ಹೇಳಿರೋಣಾಗಲಿ.

ದಿವಾನನು ಮೊದಲಿನಹಾಗೆ ನಕ್ಕು, ಅದೆಲ್ಲಾ ಆಗಿದೆ. ಈಗ ಎಲ್ಲರೂ ನಡೆಯಿರಿ. ಬ್ರಾಹ್ಮಣಭೋಜನವಾಗುವುದನ್ನು ನೋಡಬೇಕು ಎಂದನು. ಎಲ್ಲರೂ ದಿವಾನನಹಿಂದೆ ಎದ್ದುಹೋದರು. ಪಿತಮನೊಬ್ಬನೇ ಅಲ್ಲಿ ನಿಂತಿದ್ದನು. ಸ್ವಲ್ಪಹೊತ್ತಿನಮೇಲೆ ಕುತ್ತಿಗೆಯಿಂದ ರುದ್ರಾಕ್ಷಮಾಲೆಯನ್ನು ತೆಗೆದು ಒಂದೆರಡು ತಡವೆ ತಿರುಗಿಸಿನೋಡಿದನು. ಅನಂತರ ಕುಳಿತುಕೊಂಡು ಆ ಮಾಲೆಯನ್ನು ಕಿತ್ತನು. ರುದ್ರಾಕ್ಷಿಗಳನ್ನು ಒಂದೊಂದಾಗಿ ಎಣಿಸಿದನು. ಎಣಿಕೆ ಪೂರೈಸಿದಮೇಲೆ ಪೋಣಿಸುವುದಕ್ಕೆ ಪ್ರಾರಂಭಿಸಿದನು. ಸ್ವಲ್ಪಹೊತ್ತಿನಮೇಲೆ ನವಕುಮಾರನು ದಿವಾನಖಾನೆಗೆ ಬಂದು, ಪಿತಮ ! ಏನಾಗುತ್ತದೆ? ಎಂದು ಕೇಳಿದನು.

ಪಿತಮ–ಮಾಲೆಯನ್ನು ಪೋಣಿಸುತ್ತೇನೆ.

ನವಕುಮಾರ–ಯಾರಿಗೋಸ್ಕರ? ರಾಧೆಯೊಬ್ಬಳೇ ಮಾಲೆಯನ್ನು ಪೋಣಿಸುವವಳೆಂದು ತಿಳಿದಿದ್ದೆ. ಕೃಷ್ಣನೂ ಮಾಲೆಯನ್ನು ಪೋಣಿಸುವಹಾಗಿದೆ.

ಪಿತಮ–ಮಾಲೆಯನ್ನು ಪೋಣಿಸುವುದು ಒಳ್ಳೆಯದು. ಮನಸ್ಸನ್ನು ಸ್ಥಿರಮಾಡುವುದಕ್ಕೆ ಇದಕ್ಕಿಂತಲೂ ಬೇರೆ ಒಳ್ಳೆಯುಪಾಯವಿಲ್ಲ. ತಲೆಯನ್ನು ಬಗ್ಗಿಸಿಬಿಟ್ಟರೆ ಜಗತ್ತಿನ ವ್ಯಾಪಾರವೇ ಗೋಚರವಾಗುವುದಿಲ್ಲ. ಆಗ ಪಕ್ಷಿಗಳ ಕೂಗುಹೊರತು ಮತ್ತಾವಶಬ್ದವೂ ಕೇಳಿಸುವುದಿಲ್ಲ. ಪುಷ್ಪಗಂಧವನ್ನು ಹೊರತು ಮತ್ತಾವದೂ ಘ್ರಾಣಕ್ಕೆ ಬರುವುದಿಲ್ಲ. ಆಗ ದೇಹದ ಎಲ್ಲಾ ಕವಾಟಗಳೂ ಬಂಧವಾಗಿ ಮನಸ್ಸುಮಾತ್ರ ಬಿಚ್ಚಿರುತ್ತದೆ. ಆಗ ಮನಸ್ಸನ್ನು ಒಂಟಿಯಾಗಿ ಕಂಡುಹಿಡಿಯಬಹುದು. ಆದುದರಿಂದಲೇ ಯುವತಿಯರು ಮಾಲೆಯನ್ನು ಪೋಣಿಸುತ್ತಾರೆ. ಯೋಗಿಗಳ ಧ್ಯಾನವೂ

ಯುವತಿಯರ ಮಾಲಾಗ್ರಂಥನವೂ ಸಮಾನವಾದ ಕೆಲಸ–ವೊಕದ್ದವೆ ಯು ಅಲ್ಲಿಗೆ ನಿಂತುಹೋಯಿತೇನು ?

ನವಕುಮಾರ–ಇಲ್ಲ. ಅವರು ಇನ್ನೂ ಕುಳತಿದ್ದಾರೆ. ಇದೇನು, ಪಿತಮ! ನೀನು ಇನ್ನೂ ಊಟಮಾಡಲಿಲ್ಲವೇನು ?

ಪಿತಮ–ನಿಜ–ಹೊರಟೆ. ಯಾವದಾದರೂ ಮನೆಗೆ ಬೀಗವನ್ನು ಹಾಕಿದೆಯೆ, ಏನು ?

ನವಕುಮಾರ–ಖಾಸಮನೆಗೆ ಹಾಕಿದೆ–ಏತಕ್ಕೆ ? ಬೀಗವನ್ನು ತಿನ್ನು ವಿಯೊ ?

ಪಿತಮ–ಇಲ್ಲ–ನೋಡುವೆನು. ನಿನಗೆ ಎಲ್ಲದರ ಬೀಗದಕ್ಕೈ ಗೊ ತ್ತುಂಟೆ ?

ನವಕು–ಗೊತ್ತಿದೆ–ಆದರೆ ನಿನ್ನನ್ನು ಆಮನೆಯೊಳಕ್ಕೆ ಬಿಡುವು ದಿಲ್ಲ. ಅಲ್ಲಿಗೆ ನಮ್ಮ ಸ್ವಂತಜನರು ಮಾತ್ರ ಹೋಗಬಹುದು.

ಈ ಸಮಯದಲ್ಲಿ ದಿವಾನನು ಹಿಂದಿರಿಗಿ ಬಂದನು. ಆತನ ಸಂಗಡ ಭಟ್ಟಾಚಾರ್ಯರೂ ಬಂದರು. ದಿವಾನನು ಸ್ವಲ್ಪ ವಿರಕ್ತನಾಗಿ ಹೇಳತೊಡಗಿ ದನೇನೆಂದರೆ ;--ತಾವು ವ್ಯರ್ಥವಾಗಿ ಮುಷ್ಕರ ಮಾಡುವಿರಿ–ತಮ್ಮ ಸಾಕ್ಷಿ ಗಳ ಹೆಸರನ್ನು ಹೇಳದ್ದೀರಿ, ಈಗಲೇ ಇತ್ಯರ್ಥವನ್ನು ಹೇಳುವೆನು. ಇತ್ಯರ್ಥವನ್ನು ಹೇಳದನಂತರ ತಾವು ಪುನಃ ಬಂದರೆ ಆಗ ಮಹಾರಾಜರು ಹೇಳುವುದನ್ನು ಹೇಳುವೆನು. ಈಗ ನೀವು ಅನರ್ಥಕವಾಗಿ ತೊಂದರೆ ತೆಗದುಕೊಳ್ಳುವಿರಿ. ಇಲ್ಲಿ ಈಗ ನೆರದಿರುವರೆಲ್ಲರು ಮಗುವು ನಿಮ್ಮ ದೆಂದು ಹೇಳದರೂ ತಮಗೆ ಮಗುವು ಬಂದುಬಿಡುವುದೆ ? ಇಬ್ಬರು ದಾಸಿ ಯರ ಮಾತಿನಮೇಲೆ ಒಬ್ಬ ರಾಜರ ವಂಶವು ಲೋಪವಾಗುವುದಾದರೆ ರಾತ್ರಿ ಹಗಲು ಆಗುವದೇ ಕಷ್ಟವಾದೀತು–ತಾವು ಅಂದೇ ತಮ್ಮ ಸ್ವಜನರಸಂಗಡ ಇನ್ನುಮೇಲೆ ಸೂತಿಕಾಗೃಹವನ್ನು ಮುಚ್ಚೆಹಾಳೆಯಿಂದ ಕಟ್ಟುವುದಿಲ್ಲವೆಂ

ದು ಹೇಳಿರುವಿರಿ—ಮನೆಯನ್ನು ಸರಿಯಾಗಿ ಗಾಳಿಮಳೆ ಒಳಗೆ ಬಾರದಹಾಗೆ ಭದ್ರವಾಗಿ ಕಟ್ಟಿರಲಿಲ್ಲವಾಗಿ ಮಗುವು ಸತ್ತು ಹೋಯಿತೆಂಬುದು ತಮಗೆ ಚನ್ನಾಗಿ ಗೊತ್ತಿತ್ತು. ಸೂತಿಕಾಗೃಹದ ಪಾರ್ಶ್ವದಲ್ಲಿರುವ ಅಡವಿಯಲ್ಲಿ ಬಂದು ಮಗುವಿನ ದೇಹಾವಶಿಷ್ಟವನ್ನು ನೀವು ಕಣ್ಣಾರೆ ನೋಡಿ ಅದಕ್ಕೆ ಸತ್ಕಾರವನ್ನು ಸಹ ಮಾಡಿರುವಿರಿ. ಅದನ್ನೆಲ್ಲಾ ಮರೆತುಕೊಂಡು ಈಗ ತಿರುಗಿಕೊಂಡು ಕುಳಿತಿರುವಿರಿ. ನಿಮ್ಮನ್ನು ಮುಂದುಬಿಟ್ಟು ಕುಣಿಸುವವರು ಕೇವಲ ರಾಜರಿಗೆ ಶತ್ರುಗಳಲ್ಲ, ನಿಮ್ಮ ಶತ್ರುಗಳೂ ಆಗಿರುವರು. ನಿಮಗೆ ಅನರ್ಥವಾಗಿ ಬಂದು ಆಶೆಯನ್ನು ಹುಟ್ಟಿಸಿ ಈ ಮನಸ್ತಾಪಕ್ಕೆ ಕಾರಣವನ್ನುಂಟುಮಾಡಿರುವರು. ಆದುದರಿಂದ ಮನೆಗೆ ಹೋಗಿರಿ. ಇದಕ್ಕೆಲ್ಲಾ ಪುನಃ ನಿಮ್ಮ ಮನಸ್ಸಿನಲ್ಲಿ ಸ್ಥಾನವನ್ನು ಕೊಡಬೇಡಿರಿ ಎಂದು ಹೇಳಿದನು.

ದಿವಾನನು ಇಷ್ಟು ಹೇಳಿ ಪುನಃ ಹೊರಟುಹೋದನು. ಬ್ರಾಹ್ಮಣರು ನಿಂತು ಆಲೋಚನೆಗೆ ಪ್ರಾರಂಭಿಸಿದರು. ಅವರಲ್ಲೊಬ್ಬನು, ನಡೆಯಿರಿ, ಯಜಮಾನರಾದವರಲ್ಲಿ ಹೋಗಿ ಆಲೋಚಿಸೋಣ—ಇನ್ನು ಮಾತಿನಿಂದ ಪ್ರಯೋಜನವಿಲ್ಲ. ಎಲ್ಲಾ ಕೇಳಿದ್ದಾಯಿತೆಂದನು.

ಸಾಯಂಕಾಲದವರೆಗೂ ಪಿತಮನು ದಿವಾನಖಾನೆಯಲ್ಲಿಯೇ ಕುಳಿತಿದ್ದನು. ಅನಂತರ ಅತಿಸಂಕೋಚದಿಂದ ನತಶಿರನಾಗಿ ಹೊರಗೆ ಹೊರಟನು. ಯಾರಾದರೂ ಕಂಡಾರೆಂದು ಪ್ರತಿಹೆಜ್ಜೆಗೂ ಶಂಕಿತನಾಗಿ ಹೋಗುತ್ತಿದ್ದನು. ಕಂಡರೆ ಊಟಕ್ಕೆ ಕರೆದಾರೆಂದು ಅವನು ಶಂಕಿತನಾಗಲಿಲ್ಲ. ಧನವಂತನ ಮನೆಯಲ್ಲಿ ಹೋಗಿ, 'ದೀಯತಾಂ' ಎಂದು ಹೇಳದಿದ್ದರೆ 'ಭುಜ್ಯತಾಂ' ಎಂದು ಹೇಳುವುದಿಲ್ಲವೆಂದು ಪಿತಮನು ಚನ್ನಾಗಿ ತಿಳಿದಿದ್ದನು. ಆದರೂ ಪಿತಮನು ಏತಕ್ಕೆ ಕುಂಠಿತಭಾವದಿಂದ ಹೋಗುತಲಿದ್ದನೋ ಅದನ್ನು ಆಮೂಲತಃ ಹೇಳುವುದು ಕಷ್ಟ.

ಪಿತಮನು ಅರಮನೆಯಿಂದ ಹೊರಟು ಬೇಗಬೇಗನೆ ಕಾಲುಹಾಕುತ್ತ ಹೋದನು. ಬಡವರ ಹುಡುಗರು, ಪಿತು, ಪಿತು, ಪಿತಮಣಿ ಎಂದು ಬಹಳ ಆಹ್ಲಾದದಿಂದ ಕೂಗಿಕೊಂಡರು. ಪಿತಮನು ಅದಕ್ಕೆ ಕಿವಿಗೊಡಲಿಲ್ಲ. ನಾಯಿಗಳು ಎಂಜಲು ಪತ್ರಾವಳಿಗಳನ್ನು ಬಿಟ್ಟು ಅವನ ಹಿಂದೆ ಹಿಂದೆ ಹೋದವು. ಪಿತಮನು ಅವುಗಳನ್ನು ತಿರಿಗಿಕೂಡ ನೋಡಲಿಲ್ಲ. ಕಡೆಗೆ ಹೋಗಿ ಒಂದು ದೊಡ್ಡಕೆರೆಯ ಹತ್ತಿರ ನಿಂತು, ವ್ಯಾಕುಲಚಿತ್ತನಾಗಿ ನೀರಿನಲ್ಲಿ ಧುಮುಕಿಬಿಟ್ಟನು. ನೀರಿನಲ್ಲಿ ಮುಣಿಗೆದ್ದು ದೀರ್ಘನಿಶ್ವಾಸವನ್ನು ಬಿಟ್ಟು, ಆಃ! ಎಂದು ಕೂಗಿದನು. ಅನಂತರ, ಜ್ಯೋತ್ಸ್ನೆಯು ಪಿತಮನ ಕಣ್ಣಿಗೆ ಬಿದ್ದಹಾಗಾಯಿತು. ಆಗ ಅರ್ಧನಿಮಜ್ಜಿತ ಶರೀರವುಳ್ಳವನಾಗಿ ಅವನು ಚಂದ್ರನನ್ನು ಸ್ಥಿರಭಾವದಿಂದ ನೋಡುತ್ತ ಏನೇನೋ ಭಾವಿಸಿಕೊಂಡನು. ಒಂದುಸಲ ತನ್ನ ಸ್ವಂತ ವಿಚಾರವು ಮನಸ್ಸಿಗೆ ಜ್ಞಾಪಕಕ್ಕೆ ಬಂತು. ಆಗವನು ಅಸ್ಫುಟಸ್ವರದಿಂದ ತನಗೆತಾನೇ, ಭಗವಂತನೆ! ಪುನಃ ಈ ವಿಡಂಬನವೇತಕ್ಕೆ ? ಅಂಧಕಾರದಲ್ಲಿ ಪುನಃ ಬೆಳಕು ಎಲ್ಲೀದು ? ಎಂದಂದುಕೊಂಡನು.



## ಹದಿನೆಂಟನೆಯ ಪರಿಚ್ಛೇದ.

ಸಾಯಂಕಾಲವು ಕಳೆದುಹೋದಮೇಲೆ ರಾಜನು ಪುನಃ ಹೊರಗಿನ ದಿವಾನಖಾನೆಗೆ ಬಂದನು. ದಿವಾನನ ಸಂಗಡ ಇತರ ಸಮಾಚಾರಗಳನ್ನು ಕುರಿತು ಮಾತನಾಡಿದನಂತರ, ಕೇಲವುಮೆಂದಿ ಭಟ್ಟಾಚಾರ್ಯರು ಏತಕ್ಕೆ

ನನ್ನ ಮಗನನ್ನು ತೆಗೆದುಕೊಂಡು ಹೋಗುವುದಕ್ಕೆ ಬಂದಿದ್ದರು? ಅವರ ಅಭಿಪ್ರಾಯವು ನನಗೆ ಚೆನ್ನಾಗಿ ಗೊತ್ತಾಗಲಿಲ್ಲ. ಇದೇನು ವ್ಯಾಪಾರವಿದ್ದೀತು? ನಿಜವಾಗಿಯೂ ಅವರು ನನ್ನ ಮಗನನ್ನು ನನ್ನ ಕಂಕುಳಿಂದ ತೆಗೆದುಕೊಂಡು ಹೋಗಲಾಪರೆ? ಎಂದು ಹೇಳಿದನು.

ದಿವಾನ—ಹೌದು. ಕೇಳಿದೆನು. ದಶರಥನೆಂಬೊಬ್ಬ ಭಟ್ಟಾಚಾರ್ಯನು ರಾಜಕುಮಾರನು ತನ್ನ ಮಗನೆಂದು ಕೇಳಿ, ಅವನು ತಮ್ಮ ಬಳಿಗೆ ಬಂದು ರಾಜಕುಮಾರನನ್ನು ಬೇಡಿದನು.

ರಾಜಾ—ಭಟ್ಟಾಚಾರ್ಯನು ದಿನವೆಲ್ಲಾ ಡಂಗೆ ಕೂತಿದ್ದಹಾಗೆ ತಿಳಿಯ ಬರುತ್ತದೆ. ಅನಂತರ ಅವನು ಶ್ರಾಂತನಾದುದು ಹೇಗೆ?

ದಿವಾನ—ಇನ್ನೂ ಸಂಪೂರ್ಣವಾಗಿ ಕ್ಷಾಂತನಾಗಿಲ್ಲ. ಪುನಃಪುನಃ ಬಂದು ಕೇಳುವುನೆಂದು ತೋರುತ್ತದೆ. ಆದರೆ ನಾನು ಅವನಿಗೆ ನಿಷೇಧ ಮಾಡಿ ಕಳುಹಿಸಿರುವೆನು.

ರಾಜಾ—ಹಾಗಾದರೆ ಆ ಬ್ರಾಹ್ಮಣನಿಗೆ ಇದು ನಿಜವಾದ ನಂಬುಗೆಯೆ?

ದಿವಾನನು ಸಂಕ್ಷೇಪವಾಗಿ ಆ ಬ್ರಾಹ್ಮಣನ ವಿಚಾರವನ್ನೆಲ್ಲಾ ತಿಳಿಸಿದನು. ರಾಜನು ಒಂದೆರಡು ತಡವೆ ಬಲವಾಗಿ ನಸ್ಯವನ್ನು ಸೇದಿದನು. ರಾಜನಿಗೆ ಯಾವದನ್ನೂ ಬಾಯಿಯಲ್ಲಿ ಹೇಳಿಕೊಂಡು ಪ್ರಕಾಶ್ಯವಾಗಿಯೇ ಆಲೋಚಿಸುವ ಅಭ್ಯಾಸ. ಅವನು ಮೃದುವಾದ ಸ್ವರದಿಂದ ಆಲೋಚಿಸಲಾರಂಭಿಸಿದನು. ಹೇಗೆಂದರೆ;—ಬ್ರಾಹ್ಮಣ—ಅಧ್ಯಾಪಕ— ಶಾಸ್ತ್ರವ್ಯವಸಾಯಿ—ಒಬ್ಬನಲ್ಲ—ಇಬ್ಬರಲ್ಲ—ಅನೇಕರು—ಎಲ್ಲರೂ ಹುಚ್ಚರಲ್ಲ—ನನ್ನ ಮೇಲೆ ಅವರಿಗೆ ಶತ್ರುತ್ವವಿಲ್ಲ. ಅವರು ಸುಳ್ಳು ಏತಕ್ಕೆ ಹೇಳಬೇಕು? ಅವರು ಹಾಗೆ ಹೇಳುವುದಕ್ಕೆ ಏನೋ ವಿಶೇಷಕಾರಣವಿರಬೇಕು—ಅವರು, ರಾಣಿಯು ಇಬ್ಬರು ದಾಸಿಯರು ಈ ಮಾತನ್ನು ಬಲ್ಲರೆಂದು ಹೇಳುತ್ತಾರೆ. ಆ ದಾಸಿ

ಯರು ನಮ್ಮ ಕಡೆ ಜನರು. ಬ್ರಾಹ್ಮಣರು ಆ ದಾಸಿಯರ ಮಾತಿನ ಮೇಲೆ ನಿರ್ಭರರಾಗಿರುವಾಗ, ಇದರಲ್ಲಿ ಏನೋ ಸ್ವಲ್ಪ ನಿಜವಿರಬೇಕೆಂದು ತೋರುವುದು. ಹೇಗಾದರೂ ಆಗಲಿ, ನನ್ನ ತಂಗಿಯೂ ಇದನ್ನು ಸ್ವಲ್ಪ ಬಲ್ಲವಳಾಗಿರಬೇಕು. ನನ್ನ ಭಗಿನಿ, ರಾಜಭಗಿನಿ, ಅವಳು ಯಾವಾಗಲೂ ಸುಳ್ಳುಹೇಳಲಾರಳು. ಅವಳ ಗಂಡ ಬದುಕಿದ್ದರೆ ಅವಳೂ ಮಹಾರಾಣಿ. ಈಗ ಕಂಗಾಲಿನೀ, ಅವಳಿಗೇನೂ ಬೇಕಿಲ್ಲ, ಯಾವಾಗಲೂ ಹಸನ್ಮುಖಿ, ಆದರೆ ಮ್ಲಾನವದನಳಾಗಿರುವುಳು. ಜ್ಯೋತ್ಸ್ನಾವತಿ ಅವಳ ಹೆಸರು, ಸರಿಯಾದ ಹೆಸರು, ಗಂಭೀರಳು ಮತ್ತು ಅಲೋಕಮಯಳು, ಆದರೆ ಸ್ವಲ್ಪ ಮ್ಲಾನ, ಅವಳಾಮ್ಲಾನತೆಯು ಹೋಗತಕ್ಕದ್ದಲ್ಲ. ಇಂದು ಜ್ಯೋತ್ಸ್ನಾವತಿಯು ಕಣ್ಣೀರುಬಿಟ್ಟಳು. ಮನಸ್ಸಿನಲ್ಲಿ ಏನೋ ವ್ಯಥೆಯುಂಟಾಗಿರಬಹುದು. ರಾಣಿಯು, ಜ್ಯೋತ್ಸ್ನಾವತಿಯು ಇಂದು ಕಣ್ಣೀರುಬಿಟ್ಟ ಅಮಂಗಳವನ್ನುಂಟುಮಾಡಿದಳೆಂದು ಹೇಳಿದಳು. ಸ್ತ್ರೀಜಾತಿಯ ಮನಸ್ಸು—

ರಾಜನು ಹೀಗೆಂದು ಹೇಳಿಕೊಂಡು ಸಶಬ್ದವಾಗಿ ನಸ್ಯವನ್ನು ಸೇದಿದನು.

ದಿವಾನ—ಇದರ ಇತ್ಯರ್ಥವೇನೂ ಅವಶ್ಯಕವಿಲ್ಲವೆಂದು ತೋರುತ್ತದೆ. ಯಾರೋ ರಾಜರಿಗೆ ಶತ್ರುಗಳಾದವರೇ ಈ ಮಾತನ್ನು ಹುಟ್ಟಿಸಿರುವುರು. ದಶರಥಭಟ್ಟಾಚಾರ್ಯನು ಏನೂ ಅರಿಯದ ಮನುಷ್ಯ. ಈ ಪ್ರವಾದವನ್ನು ಹುಟ್ಟಿಸಿದವರ ಅಭಿಪ್ರಾಯವನ್ನರಿಯಲಾರದೆ ರಾಜರ ಸನ್ನಿಧಾನಕ್ಕೆ ಬರಲು ಸಾಹಸವುಳ್ಳವನಾದನು.

ರಾಜಾ—ಅದು ನಿಜ, ಆದರೆ ಇದಕ್ಕೆ ರಾಜಭಗಿನಿಯೂ ಸಾಕ್ಷಿಯಾಗಿರುವುಳು. ಅವಳೇನೂ ರಾಜಶತ್ರುಗಳ ದಳಕ್ಕೆ ಸೇರಿದವಳಲ್ಲ. ಅವಳ ಮಾತನ್ನು ನಾನು ಎಂದಿಗೂ ನಂಬದಿರೆನು.

ದಿವಾನ—ರಾಜಭಗಿನಿಯು ಇದಕ್ಕೆ ಸಾಕ್ಷಿಯಲ್ಲ. ಬ್ರಾಹ್ಮಣರು ಅವರ ಹೆಸರನ್ನು ಹೇಳಲ್ಲ. ರಾಜಭಗಿನಿಯು ಇದನ್ನು ತಿಳಿದಿರಬಹುದೆಂದು ಹೇಳುವುದು ಕೇವಲ ತಮ್ಮ ಅಭಿಪ್ರಾಯವಾಗಿರುವುದು.

ರಾಜಾ—ಅದು ನಿಜ, ಆದರೂ ಆಕೆಯನ್ನು ಇದನ್ನು ಕುರಿತು ವಿಚಾರಿಸುವುದು ಅವಶ್ಯಕ. ಮುಖ್ಯಾಂಶವೇನೆಂದರೆ :— ಪರರ ಸಂತಾನವು ಪಿಂಡಹಾಕಿದರೆ ನಮ್ಮ ಪಿತೃಗಳು ಗ್ರಹಣಮಾಡಲಾರರು. ಆದುದರಿಂದ ಇಂತಹ ಸಂತಾನದಿಂದ ಫಲವೇನು?

ದಿವಾನ—ಇನ್ನೂ ರಾಜಕುಮಾರನು ದಶರಥನ ಪುತ್ರನೆಂದು ಸ್ಥಿರವಾಗಿಲ್ಲ. ಹಾಗೆ ಸ್ಥಿರವಾದರೆ ಕರ್ತವ್ಯವನ್ನು ಕುರಿತು ವಿಚಾರಮಾಡಬಹುದು. ಈಗಲೇ ಮಾಡಿದರೆ ಮುಂದೆ ನಾನಾ ವ್ಯಾಘಾತಗಳುಂಟಾಗುವುವು.

ರಾಜಾ—ಇಲ್ಲ, ಈಗ ನಾನು ಯಾವ ಮಾತನ್ನೂ ಹೇಳುವುದಿಲ್ಲ. ರಾಜಭಗಿನಿಯನ್ನು ಕೇಳದೆ ಯಾವದನ್ನೂ ಸ್ಥಿರಮಾಡಲಾರೆನು. ಆಕೆಯನ್ನೂ ಈಗ ಯಾವ ಸಮಾಚಾರವನ್ನೂ ಕೇಳುವುದಿಲ್ಲ. ಆಕೆಗೆ ಏನೋ ಮನಸ್ಸಿಗೆ ಕೊರತೆಯುಂಟಾಗಿರುವುದು.

ಜ್ಯೋತ್ಸ್ನಾವತಿಯು ವಾಸ್ತವವಾಗಿ ಅಂದು ಬಹಳ ವ್ಯಾಕುಲಚಿತ್ತವುಳ್ಳವಳಾಗಿದ್ದಳು. ಅವಳಮೇಲೆ ರಾಣಿಯ ಮನಸ್ಸು ಒಡೆದಿತ್ತೆಂದು ತಿಳಿದಿದ್ದಳು. ಉತ್ಸವದ ದಿನ ಅವಳು ಕಣ್ಣೀರುಬಿಟ್ಟಳೆಂದು ರಾಣಿಯು ಮೊದಲು ವಿರಕ್ತಳಾದಳು. ಅನಂತರ ರಾಜಕುಮಾರನಿಗೆ ಆಶೀರ್ವಾದ ಮಾಡುವುದಕ್ಕೆ ಜ್ಯೋತ್ಸ್ನಾವತಿಯನ್ನು ಹುಡುಕಿ ಕರೆಯಿಸಬೇಕಾಯಿತೆಂದು ರಾಣಿಯ ಚಿತ್ತವಿಕಾರವು ಮತ್ತಷ್ಟು ಹೆಚ್ಚಿತು. ರಾಣಿಯು ರಾಜಸಭೆಯನ್ನು ನೋಡುವುದಕ್ಕೆ ಹೋದಾಗ ಎಲ್ಲಾ ಹೆಂಗಸರೂ ಎದ್ದು ನಿಂತುಕೊಂಡರು. ಜ್ಯೋತ್ಸ್ನಾವತಿಯು ಮಾತ್ರ ಏಳಲಿಲ್ಲ. ರಾಣಿಗೆ ಮರ್ಯಾದೆಮಾಡುವ ಮಾತು ಹಾಗಿರಲಿ, ಅವಳು ಅತ್ತಕಡೆ ಒಂದು ಸಲ ತಿರಿಗಿಕೂಡ ನೋ

ಡಲಿಲ್ಲ. ಈ ತಾತ್ಸಾರವು ರಾಣಿಗೆ ಅಸಹ್ಯವಾಗಿ ಕಂಡುಬಂತು. ಜ್ಯೋತ್ಸ್ನಾವತಿಯು ಅಲ್ಲಿ ಸ್ವಲ್ಪವೂ ನಿಲ್ಲದೆ ಹೊರಟುಹೋದಳು.

ದಶರಥದೇವಶರ್ಮನು ಏಕಾಂತವಾಗಿ ಯಾರ ಹೆಸರನ್ನು ಹೇಳಿದ್ದನೋ ಆ ದಾಸಿಯರಿಬ್ಬರೂ ಸರ್ವದಾ ರಾಣಿಯ ಸಂಗಡಲೇ ಇರುವರು. ಅವರಿಬ್ಬರೂ ರಾಣಿಯ ಮನಸ್ಸನ್ನು ಚನ್ನಾಗಿ ತಿಳಿದಿದ್ದರು. ರಾಣಿಯು ಅವಮಾನಿತಳಾಗಿ ಹಿಂದಿರಿಗಿ ಬರುತಲೇ, ಅವರಿಬ್ಬರೂ ಅವಳೊಂದಿಗೆ ಶಯನಾಗಾರಕ್ಕೆ ಹೋಗಿ ವ್ಯಜನಹಸ್ತರಾಗಿ ಹಾಗೆಯೇ ಜ್ಯೋತ್ಸ್ನಾವತಿಯ ಪರವಾಗಿ ಬಂದೆರಡು ಮಾತನ್ನೆತ್ತಿದರು. ಅದರಿಂದ ರಾಣಿಯ ಕೋಪವು ಹೆಚ್ಚಾಯಿತು. ಅದನ್ನು ಕಂಡು ದಾಸಿಗಳಿಬ್ಬರೂ ರಾಗವನ್ನು ವ್ಯತ್ಯಸ್ತಮಾಡಿ ಮೆಲ್ಲಮೆಲ್ಲಗೆ ಜ್ಯೋತ್ಸ್ನಾವತಿಯನ್ನು ನಿಂದಿಸುವುದಕ್ಕಾರಂಭಿಸಿದರು. ಈ ಸಮಯದಲ್ಲಿ ಮತ್ತೊಬ್ಬ ದಾಸಿಯು ಪ್ರವೇಶಮಾಡಿದಳು. ಪ್ರವೇಶಿಸಿ, ರಾಣಿಯು ಎಲ್ಲಿ? ಬಹಳ ವಿಪತ್ತುಂಟಾಗಿದೆ. ಯಾರೋ ಕೆಲವು ಜನರು ಬಂದು ರಾಜಕುಮಾರನನ್ನು ಕರೆದುಕೊಂಡು ಹೋದರೆಂದಳು. ರಾಜರು ಎಲ್ಲಿ? ಎಂದು ರಾಣಿಯು ಹುಲಿಯಹಾಗೆ ದರ್ಪದಿಂದೆದ್ದಳು. ಪರಿಚಾರಕಳು, ರಾಜಕುಮಾರನನ್ನು ಕಂಕುಳಲ್ಲೆತ್ತಿಕೊಂಡು ಅಂತಃಪುರಕ್ಕೆ ಬರುವರೆಂದಳು. ರಾಣಿಯು ಶಿಥಿಲೋದ್ಯಮಳಾಗಿ ಪುನಃ ಪರ್ಯಂಕದ ಮೇಲೆ ಕುಳಿತಳು. ದಾಸಿಯು ಹೊರಟುಹೋದಳು. ಬೀಸಣಿಕೆಯನ್ನು ಹಾಕುತ್ತಿದ್ದ ದಾಸಿಯರಿಬ್ಬರಲ್ಲೊಬ್ಬಳು, ನಮಗೆ ಮೊದಲೇ ಗೊತ್ತು. ರಾಜಭಗಿನಿಯ ಮಹಲಿನಲ್ಲಿ ರಾಮನಿಲ್ಲದಿದ್ದರೂ ರಾಮಾಯಣವೇನೋ ಆಗುತಲೇ ಇದೆ. ಇಂದು ಮಗುವನ್ನು ತೆಗೆದುಕೊಂಡು ಹೋದ ಮಸಲತ್ತಾಯಿತು. ಇದನ್ನು ಮೊದಲೇ ನಾವು ಕೇಳಿದ್ದೆವು ಎಂದಳು.

ರಾಣಿ—ಏನುಕೇಳಿದ್ದಿರಿ?

ಪ್ರಥಮದಾಸಿ—ಆ ಮಾತುಗಳನ್ನೆಲ್ಲಾ ಹೇಳುವುದಕ್ಕೆ ನಮಗೆ ಧೈರ್ಯವಿಲ್ಲ.

ದ್ವಿತೀಯದಾಸಿ—ನಾವು ಹೇಳುವುದು ಚನ್ನಾಗಿಲ್ಲ. ಬಡವಾ ನೀನು ಮಡಗಿದಹಾಗಿರೆಂದು ಹೇಳುವಹಾಗೆ ನಮ್ಮ ಯೋಗ್ಯತೆಗೆ ತಕ್ಕಂತೆ ನಾವು ಇರಬೇಕು. ನಮ್ಮ ಮಾತಿನಮೇಲೆ ಅರಮನೆಯಲ್ಲಿ ಒಬ್ಬರಿಗೊಬ್ಬರು ವೈಮನಸ್ಸುಳ್ಳವರಾದರೆ ಈ ಕಳಂಕಕ್ಕೆ ಗುರಿಯಾಗಿ ನಾವು ಎಲ್ಲಿ ಬದುಕಿ ಬಾಳುವುದಕ್ಕಾದೀತು ?

ರಾಣಿ—ಎಲ್ಲಾ ಸಮಾಚಾರವನ್ನೂ ನನಗೆ ಹೇಳಬೇಕು. ನಮ್ಮ ಜನರಾಗಿ ನಮಗೆ ವಿರುದ್ಧವಾದ ಮಾತನ್ನು ಮುಚ್ಚಿಟ್ಟುಕೊಂಡರೆ, ಅಂತಹವರು ನಮ್ಮ ಅರಮನೆಯಲ್ಲಿರುವುದೇ ಸರಿಯಲ್ಲ.

ಪ್ರಥಮದಾಸಿ—ನಮಗೆ ಉಭಯಸಂಕಟ. ನಾವು ಅಂಜಿ ಏನಾದೀತು ? ತಾವು ಕೋಪಮಾಡಲಾಗದು. ನಾವಿಬ್ಬರೂ ರಾಜಭಗಿನಿಯ ಮಹಲಿಗೆ ಹೋಗಿದ್ದೆವು. ಅಲ್ಲಿ, ಇನ್ನು ಕೆಲವು ದಿನದಲ್ಲಿಯೇ ರಾಜವಂಶವು ಲೋಪವಾಗುವುದೆಂದಂದುಕೊಂಡರು. ನಾವು ಎತ್ತಿ ಆಡಿಸುವ ಮಗುವು ಯಾರೋ ಬ್ರಾಹ್ಮಣರ ಮಗುವೆಂದು ಹೇಳಿದರು. ಪ್ರಸವಕಾಲದಲ್ಲಿ ತಾವು ಜ್ಞಾನವಿಲ್ಲದೆ ಮೂರ್ಛೆ ಹೋಗಿದ್ದಾಗ ರಾಜಭಗಿನಿಯು ಮೃತವಾದ ಕನ್ಯೆಯು ಭೂಮಿಷ್ಠವಾದುದನ್ನು ಕಂಡು ಅಳುತಳುತ, ತಮ್ಮ ಮಹಲಿಗೆ ಹೋದರಂತೆ. ಅಷ್ಟರಮೇಲೆ ನಾವು ಆ ಸತ್ತ ಹೆಣ್ಣುಶಿಶುವನ್ನು ತೆಗದುಕೊಂಡು ಹೋಗಿ ಯಾವದೋ ಬ್ರಾಹ್ಮಣರ ಸೂತಿಕಾಗೃಹದಲ್ಲಿಟ್ಟು ಅಲ್ಲಿದ್ದ ಮಗುವನ್ನು ತಂದು ನಿಮ್ಮ ಸೂತಿಕಾಗೃಹದಲ್ಲಿಟ್ಟೆವೆಂದು ಹೇಳುವರು. ಮತ್ತು ದುಡ್ಡಿನ ಆಶೆಗೆ ನಾವು ಈ ಕೆಲಸವನ್ನು ಮಾಡಿದೆವು ಎಂದಂದುಕೊಳ್ಳುವರು. ಕಣ್ಣು ಇಲ್ಲದ ರಂಡೆಗಳು, ರಾಜಪುತ್ರ ಹುಟ್ಟಿದನೆಂದು ಮಾಡಿದರೆ ಅನೇಕ ದಾನಧರ್ಮಗಳಾಗುತ್ತಿಂಬವರಮೇಲೆ, ನಾವಿಬ್ಬರೂ ಸೇರಿ ಆಲೋಚಿಸಿ ಹೀಗೆ ಮಕ್ಕಳನ್ನು ವಿನಿಮಯಿಸಿದೆವು ಎಂದು ಹೇಳಿಕೊಳ್ಳುವರು.

ರಾಣಿ—ನೀವು ರಾಜಭಗಿನಿಯ ಬಾಯಿಯಿಂದ ಈ ಮಾತನ್ನು ಕೇಳಿ ದಿರಾ ?

ಪ್ರಥಮದಾಸಿ—ಇಲ್ಲ. ಅವರ ಬಾಯಿಯಿಂದ ಏತಕ್ಕೆ ಕೇಳಬೇಕು ? ನಾವು ಇಂತಹ ಮಾತನ್ನು ಹೇಳುವುದಕ್ಕೆ ನಮಗೆ ಎಷ್ಟು ಧೈರ್ಯ ! ಐದಾರು ಮಂದಿ ಈ ಮಾತನ್ನು ಹೇಳುತ್ತಿದ್ದರು. ಅವರೆಲ್ಲರೂ ಅವರ ಕಡೆಯವರೇ ಆಗಿದ್ದಾರೆ. ಅವರ ಬಾಯಿಯಿಂದ ಕೇಳದೆ ಅವರೆಲ್ಲಾ ಹೇಳುವರೇನು ?

ರಾಣಿಯು ಆಕ್ಷಣದಲ್ಲಿ ಸಿಂಹಿಯಂತಾಗೆ ಉಬ್ಬಿದಳು. ತಲೆಯನ್ನು ಓರೆಮಾಡಿಕೊಂಡು ಪ್ರಥಮದಾಸಿಯನ್ನು ದೃಷ್ಟಿಸಿನೋಡಿದಳು. ದುರ್ದಮವಾದ ಕೋಪದದೆಸೆಯಿಂದ ಸ್ವಲ್ಪಹೊತ್ತು ಮಾತನಾಡಲಾರದವಳಾಗಿದ್ದಳು. ಅನಂತರ ಸ್ವಲ್ಪ ತಾಳ್ಮೆಯನ್ನು ವಹಿಸಿ, ನಿಮ್ಮಿಬ್ಬರಲ್ಲಿ ಒಬ್ಬಳು ಹೋಗಿ ಜ್ಯೋತ್ಸ್ನಾವತಿಗೆ ಅವಳು ನನ್ನ ಕ್ಷೇಮಚಿಂತಕಳಾಗಿದ್ದವರೆಗೂ ನಮ್ಮ ವಿಶ್ವಾಸಕ್ಕೆ ಪಾತ್ರಳಾಗಿದ್ದಳೆಂದು ಹೇಳೆಂದಳು.

ಪ್ರಥಮದಾಸಿಯು ಎದ್ದು ಹೊರಟುಹೋದಳು. ಅವಳು ನಾಲ್ಕಾರು ಹೆಜ್ಜೆ ಹೋದಮೇಲೆ ರಾಣಿಯು ಪುನಃ ಅವಳನ್ನು ಕರೆದು, ಜ್ಯೋತ್ಸ್ನಾವತಿಯನ್ನು ಅವಳ ಸ್ವಂತಮಹಲಿಗೆ ಕರೆದುಕೊಂಡುಹೋಗಿ ಅಲ್ಲಿ ಈ ಮಾತನ್ನು ಅವಳಿಗೆ ತಿಳಿಸು. ನಮ್ಮ ಮಹಲಿನಲ್ಲಿ ಹೇಳಬೇಡವೆಂದಳು.

ದಾಸಿಯು ವಿನೀತಭಾವದಿಂದ ಜ್ಯೋತ್ಸ್ನಾವತಿಯನ್ನು ಅವಳ ಮಹಲಿಗೆ ಕರೆದುಕೊಂಡುಹೋದಳು. ಅವಳ ಪಾದದಲ್ಲಿ ಕುಳಿತುಕೊಂಡು ಒಂದೆರಡುತಡವೆ ಕಣ್ಣೀರೊರಸಿಕೊಂಡಳು. ಅನಂತರ, ರಾಣಿಯವರು ಏನೋ ಆಗಿಹೋಗಿದ್ದಾರೆ ; ಯಾರನ್ನು ಕಂಡರೂ ಸಿಡಿಸಿಡಿಯೆಂದು ಮನಸ್ಸಿಗೆ ಕಟೂಕ್ತಿಗಳನ್ನಾಡಲಾರಂಭಿಸಿದ್ದಾರೆ. ಅವರು ನಮ್ಮನ್ನು ಅನ್ಯಾಯವಾಗಿ ತಿರಸ್ಕಾರಮಾಡದ ದಿನವೇ ಇಲ್ಲ. ಸುಮ್ಮನೆ ಇದ್ದಕಿದ್ದಹಾಗೆ ಬೈಗಳು ತಿನ್ನಬೇಕಾಗಿದೆ.

ಜ್ಯೋತ್ಸ್ನಾವತಿ—ಆದುದರಿಂದಲೇ, ನೀವು ಅದನ್ನು ಮನಸ್ಸಿನಮೇಲೆ ತಂದುಕೊಳ್ಳಕೂಡದು. ಅವಳು ಸ್ವಾಭಾವಿಕವಾಗಿ ಸ್ವಲ್ಪ ಕೋಪಿಷ್ಠಳು. ಕೋಪವೂ ಒಂದುವಿಧವಾದ ರೋಗ. ಕೋಪಿಷ್ಠರಮೇಲೆ ನಾವು ದಯೆಯುಳ್ಳವರಾಗಿರಬೇಕು. ಕೋಪವೆಂದರೆ ನನಗೆ ಲಜ್ಜೆಯಾಗುವುದು.

ದಾಸಿ—ಅದು ಹೇಗಾದರೂ ಆಗಲಿ. ನಮ್ಮಮೇಲೆ ಕೋಪಗೊಂಡರೆ ಚಿಂತೆಯಿಲ್ಲ. ನಾವು ಹೇಗಾದರೂ ಸಹಿಸಿಕೊಳ್ಳುವೆವು. ಈಗಲಾದರೋ, ದೊಡ್ಡದೊಡ್ಡವರಮೇಲೆ ಪ್ರಾರಂಭವಾಗಿದೆ.

ಜ್ಯೋತ್ಸ್ನಾವತಿ—ಇನ್ನಾರಮೇಲೆ ಕೋಪ? ಮತ್ತೇನು ಹೇಳಿದಳು?

ಈ ಮಾತನ್ನು ಜ್ಯೋತ್ಸ್ನಾವತಿಯು ಕುಂಠಿತಭಾವದಿಂದ ಹೇಳಿದಳು. ಅದರೊಂದಿಗೆ ಅವಳ ಮುಖವೂ ಮ್ಲಾನವಾಯಿತು.

ದಾಸಿ—ಅದು ತಮಗೆ ಗೊತ್ತೇ ಇದೆ.

ಜ್ಯೋತ್ಸ್ನಾವತಿ—ಅದು ಆಗಬಹುದು. ರಾಣಿಯು ನನ್ನಮೇಲೆ ಜನ್ಮಜನ್ಮಕ್ಕೂ ಕೋಪಗೊಂಡಿರಲಿ.

ದಾಸಿ—ಅವಳು ಕೋಪಗೊಂಡು ಹೇಳಿದಳೇನೆಂದರೆ—

ಜ್ಯೋತ್ಸ್ನಾವತಿ—ಏನಾದರೂ ಹೇಳಲಿ. ನನಗೆ ಆ ಮಾತನ್ನು ತಿಳಿಸಬೇಕಾದ ಆವಶ್ಯಕವೇನು ?

ದಾಸಿ—ಅವಶ್ಯಕವಿಲ್ಲದೆ ಉಂಟೆ ? ತಮಗೆ ತಿಳಿಸುವುದಕ್ಕೇನೇ ನನ್ನನ್ನು ಕಳುಹಿಸಿರುವುದು.

ಜ್ಯೋತ್ಸ್ನಾವತಿ—ನೀನು ಹೋಗಿ, ತಿಳಿಸಿಬಂದೆನೆಂದು ಹೇಳಿಬಿಡು.

ದಾಸಿ—ಅದನ್ನು ಹೇಳದಿದ್ದರೆ ನಿರ್ವಾಹವಿಲ್ಲ. ತಾವು ಕೆಲವು ಕಾಲದವುಟ್ಟಿಗೆ ಅತ್ತೆಯಮನೆಗೆ ಹೋಗಿದ್ದರೆ ಒಳ್ಳೇದೆಂದು ನಿಮಗೆ ಹೇಳಬರುವಂತೆ ಹೇಳಿದ್ದಾರೆ. ಹೇಳಿದಪ್ರಕಾರ ಕೂಡಲೆ ತಾವು ಹೋಗದಿದ್ದರೆ, ಅವರು ಬಲವಂತದಿಂದ ಕಳುಹಿಸುತ್ತಾರಂತೆ. ಈ ಅರಮನೆಯಲ್ಲಿ ಇನ್ನುಮೇಲೆ

ತಮಗೆ ಸ್ಥಳವನ್ನು ಕೊಡುವುದಿಲ್ಲವೆಂದು ಹೇಳಿದರು.

ದಾಸಿಯು ಇಷ್ಟು ಹೇಳಿ ಹೊರಟುಹೋದಳು.

---

## ಹತ್ತೊಂಭತ್ತನೆಯ ಪರಿಚ್ಛೇದ.

ಆದಿನ ರಾತ್ರಿ ಎರಡನೆಯ ಪ್ರಹರದ ಸಮಯದಲ್ಲಿ ಜ್ಯೋತ್ಸ್ನಾವತಿಯು ಬಿಸಿಲು ಮಹಡಿಯಮೇಲೆ ಶಯನಮಾಡಿಕೊಂಡು ಚಂದ್ರನನ್ನು ನೋಡುತ್ತಿದ್ದಳು. ಅವಳ ಹತ್ತಿರ ಅವಳ ದಾಸಿಯಾದ ಮಾತಂಗಿನಿಯು ಕೂತು, ಮಧ್ಯೆಮಧ್ಯೆ, ರಾತ್ರಿ ಬಹಳ ಹೊತ್ತಾಯಿತು. ಒಳಗೆ ಹೋಗೋಣವೆಂದು ಹೇಳುವುಳು. ಜ್ಯೋತ್ಸ್ನಾವತಿಯು ಮಾತಿನಿಂದ ಏನೊಂದುತ್ತರವನ್ನೂ ಕೊಡದೆ ದೀರ್ಘವಾದ ನಿಶ್ವಾಸವನ್ನು ಬಿಡುವುಳು. ಮಾತಂಗಿನಿಯು ಏನೆಂದು ಹೇಳಿದಾಗೆಲ್ಲಾ ಜ್ಯೋತ್ಸ್ನಾವತಿಯು ನಿಟ್ಟುಸುರನ್ನು ಬಿಡುವುಳು. ಬಾಯಿಯಲ್ಲಿ ಮಾತಿಲ್ಲ. ಕಣ್ಣುಗಳಲ್ಲಿ ನೀರು ಇಲ್ಲ, ವರ್ಷಣೋನ್ಮುಖವಾದ ಮೇಘದಹಾಗೆ ಸ್ಥಿರಭಾವದಿಂದ ಇರುತ್ತಿದ್ದಳು.

ಮಾತಂಗಿನಿಯು ಮಾತೃಹೀನಳು, ಅಲ್ಪವಯಸ್ಕಳು. ಆಶ್ರಯಹೀನಳು. ಅದುಕಾರಣ ಇದ್ದ ಆಶ್ರಯ ತಪ್ಪಿದರೆ ಅವಳ ಪ್ರಾಣವೇ ಹೋಗುವುದು. ಅವಳು ಜ್ಯೋತ್ಸ್ನಾವತಿಯನ್ನು ತನ್ನ ತಾಯಿಯಹಾಗೆ ನೋಡುತ್ತಿರುವುಳು. ಜ್ಯೋತ್ಸ್ನಾವತಿಯು ಆಶ್ರಯವು ತಪ್ಪುವುದೆಂದು ಮೊದಲೇ ಅಳುತ್ತಿದ್ದಳು. ಈಗ ಜ್ಯೋತ್ಸ್ನಾವತಿಯ ಮ್ಲಾನವಾದ ಮುಖವನ್ನು ನೋಡಿ ಪುನಃ ಕಣ್ಣೀರು ಬಿಟ್ಟಳು. ಪೂರ್ಣಿಮಾರಾತ್ರಿ ಮೇಘಾವೃತವಾಗಿ ತದ್ವಾರಾ ಉಂಟಾಗುವ ಮ್ಲಾನತೆಯುಳ್ಳ ಜ್ಯೋತ್ಸ್ನೆಯ

ನ್ನು ನೋಡಿದರೆ ಒಂದೊಂದು ತಡವೆ ಹೇಗೆ ಪ್ರಾಣವೇ ಅಳುವಹಾಗಾಗುವುದೋ ಹಾಗೆ ಜ್ಯೋತ್ಸ್ನಾವತಿಯ ಮ್ಲಾನವಾದ ಮುಖವನ್ನು ನೋಡಿ ಮಾತಂಗಿನಿಯ ಪ್ರಾಣವೇ ಅತ್ತಿತು. ಮಾತಂಗಿನಿಯು ಅಳುತ್ತಲೇ ಜ್ಯೋತ್ಸ್ನಾವತಿಯ ಕಣ್ಣೀರು ನಿವಾರ್ಯವಾಗದೆ ಹೋಗಿ ಒಂದೇ ತಡವೆಗೆ ಉಛಳಿಸುತ್ತ ಹೊರಟಿತು, ಮಾತಂಗಿನಿಯು ಜ್ಯೋತ್ಸ್ನಾವತಿಯ ಮನೋವೇದನೆಯು ಮತ್ತಷ್ಟು ಹೆಚ್ಚಿತೆಂದು ತಿಳಿದಳು. ಮಾತಂಗಿನಿಯು ಅಲ್ಪವಯಸ್ಕಳು. ಅದುಕಾರಣ ವಿಷಮವಾದ ಚಂಡಮಾರುತವು ಬೀಸುತಲಿದ್ದರೆ ಒಂದು ಹನಿಕಲು ಕೂಡ ಬೀಳುವುದಿಲ್ಲವೆಂನೂ ಬಿರುಗಾಳಿ ನಿಂತರೆ ಮಳೆಗೆ ಪ್ರಾರಂಭವಾಗುವುದೆಂದೂ ಅರಿಯಳು. ಜ್ಯೋತ್ಸ್ನಾವತಿಯ ಹೃದಯದಲ್ಲಿ ಬಿರುಗಾಳಿಯು ಬೀಸುತಲಿರುವವರೆಗೂ ಅವಳ ಕಣ್ಣುಗಳಿಂದ ನೀರುಬೀಳಲಿಲ್ಲ. ಬಿರುಗಾಳಿಯು ನಿಂತಮೇಲೆ ನೀರು ಬೀಳುವುದಕ್ಕಾರಂಭವಾಯಿತು.

ಜ್ಯೋತ್ಸ್ನಾವತಿಯು ಕಡೆಗೆ ಎದ್ದು ಮಾತಂಗಿನಿಯ ಕಣ್ಣೀರೊರಿಸಿದಳು. ಮಾತಂಗಿನಿಯು ಮಾತೃಹೀನಳು, ಪಿತೃಹೀನಳು, ಪತಿಹೀನಳು. ಅವಳು ಜ್ಯೋತ್ಸ್ನಾವತಿಯನ್ನು ತಾಯಿಯೆಂದು ಕರೆಯುತ್ತಳಿದ್ದುದರಿಂದ ಜ್ಯೋತ್ಸ್ನಾವತಿಯು ಅವಳನ್ನು ವಿಶೇಷವಾಗಿ ಪ್ರೀತಿಸುತಲಿದ್ದಳು.

ಮಾತಂಗಿನಿಯ ಕಣ್ಣೀರೊರಿಸಿ ಜ್ಯೋತ್ಸ್ನಾವತಿಯು, ಮಾತಿ! ನೀನು ಅಳುವುದೇತಕ್ಕೆಂದು ಕೇಳಿದಳು.

ಮಾತಂಗಿನೀ—ತಾವು ಇಲ್ಲಿಂದ ಬೇರೆಕಡೆಗೆ ಹೋಗುವುದು ಒಳ್ಳೇದು.

ಜ್ಯೋತ್ಸ್ನಾವತಿ—ನನಗೆ ಇಲ್ಲಿ ಬಿಟ್ಟರೆ, ಈ ಪ್ರಪಂಚದಲ್ಲಿ ಬೇರೆ ಸ್ಥಳವೆಲ್ಲಿದೆ? ನಾನು ಇಲ್ಲಿಯೇ ಇರುವೆನು.

ಮಾತಂಗಿನೀ—ಅದೇತಕ್ಕೆ? ತಮ್ಮ ಅತ್ತೇಮನೆ? ತಮ್ಮ ಮಾವಂದಿರು ರಾಜರಾಗಿದ್ದಂತೆ ತಾವು ಅಲ್ಲಿಗೆ ಏತಕ್ಕೆ ಹೋಗಕೂಡದು?

ಜ್ಯೋತ್ಸ್ನಾವತಿ—ಅತ್ತೆಯಮನೆ ಜ್ಞಾಪಿಸಿಕೊಂಡರೆ ಬಹಳ ದುಃಖ ವಾಗುತ್ತದೆ.

ಹೀಗೆಂದು ಹೇಳಿ ಜ್ಯೋತ್ಸ್ನಾವತಿಯು ಬಹಳಹೊತ್ತು ಸುಮ್ಮನಿದ್ದಳು. ಮಾತಂಗಿನಿಯು ಮತ್ತಾವ ಮಾತನ್ನು ಕೇಳುವುದಕ್ಕೂ ಸಾಹಸವುಳ್ಳವಳಾಗಲಿಲ್ಲ. ಕಡೆಗೆ ಜ್ಯೋತ್ಸ್ನಾ ದೀರ್ಘನಿಶ್ವಾಸವನ್ನು ಬಿಟ್ಟು, ಆ ಅತ್ತೆಯ ಮನೆಯನ್ನು ಜ್ಞಾಪಿಸಿಕೊಳ್ಳದಿರುವುದು ತಾನೇ ಹೇಗೆ? ಹಗಲೂ ರಾತ್ರಿ ನನಗೆ ಅದೇ ಜಪವಾಗಿದೆ. ಆ ಜ್ಞಾಪಕದಿಂದಲೇ ನನಗೆ ಏನಾದರೂ ಸ್ವಲ್ಪ ಸುಖವುಂಟಾಗಬೇಕು. ಅದರಿಂದಲೇ ನನಗೆ ದುಃಖವುಂಟಾಗಬೇಕು. ಸುಖದುಃಖವೆರಡೂ ಅದರಿಂದಲೇ ಎಂದಳು.

ಮಾತಂಗಿನೀ—ಅಮ್ಮ! ತಮ್ಮ ಅತ್ತೆಯಮನೆಯೆಲ್ಲಿ? ನಾನು ಅವರ ಸಮಾಚಾರವನ್ನು ಯಾವಾಗಲೂ ಕೇಳಲಿಲ್ಲ.

ಜ್ಯೋತ್ಸ್ನಾವತಿ—ಹಳದಿಪುರದ ಕಾಡನ್ನು ನೋಡಿರುವೆಯಾ?

ಮಾತಂಗಿನೀ—ನೋಡಿದ್ದೇನೆ, ಆ ಕಾಡಿನಲ್ಲಿ ಒಂದು ಹಾದಿ. ಆ ಹಾದಿಯಿಂದಲೇ ಒಂದುಸಲ ನಮ್ಮ ಸೋದರಮಾವನ ಮನೆಗೆ ಹೋಗಿದ್ದೆ.

ಜ್ಯೋತ್ಸ್ನಾವತಿ—ಈಗ ಆ ಕಾಡಿನಲ್ಲಿ ಜನರು ತಿರುಗಾಡುವರೆ?

ಮಾತಂಗಿನೀ—ಬಹಳವಿಲ್ಲ. ಆ ಹಾದಿಯಲ್ಲಿ ಯಾರೂ ತಿರುಗಾಡುವುದಿಲ್ಲವಾಗಿ ಅಲ್ಲಿ ಕಾಡು ಬಹಳವಾಗಿ ಬೆಳದುಹೋಗಿದೆ.

ಜ್ಯೋತ್ಸ್ನಾವತಿ—ಹಾಗಾದರೆ, ನನ್ನ ಅದೃಷ್ಟದಹಾಗೆಯೇ ಆಗಿ ಹೋಯಿತು.

ಮಾತಂಗಿನೀ—ಏತಕ್ಕೆ, ತಾಯಿ!

ಜ್ಯೋತ್ಸ್ನಾವತಿ—ನನ್ನ ಮದುವೆಯಕಾಲದಲ್ಲಿ ಆ ಕಾಡು ಇತ್ತು. ಆ ಕಾಡುಹಾದಿಯಿಂದಲೇ ನಮ್ಮ ಮಾವಂದಿರು ಮದುವೆಗೆ ಬಂದಿದ್ದರು.

ಮಾತಂಗಿನಿ—ಮದುವೆಯಾದಮೇಲೆ ತಾವು ಅತ್ತ ಯಮುನೆಗೆ ಹೋಗಿದ್ದಿರಾ ?

ಜ್ಯೋತ್ಸ್ನಾವತಿ—ಹೋಗಿದ್ದೆ. ಅಲ್ಲಿ ಹದಿನಾರುವರುಷಗಳಿದ್ದೆ. ಅದರಮೇಲೆ ಇಲ್ಲಿಗೆ ಸಾಯುವವರೆಗೂ ಇಲ್ಲಿರುವುದಕ್ಕೆ ಬಂದುಬಿಟ್ಟೆ.

ಇಷ್ಟುಹೇಳಿ ಜ್ಯೋತ್ಸ್ನಾವತಿಯು ಕಣ್ಣೀರೊರಿಸಿಕೊಂಡಳು.

ಮಾತಂಗಿನಿ—ಆ ಹದಿನಾರು ವರುಷಗಳಲ್ಲಿ ಮಧ್ಯೆಮಧ್ಯೆ ಇವರೇತಕ್ಕೆ ಕರೆಯಿಸಲಿಲ್ಲ ?

ಜ್ಯೋತ್ಸ್ನಾವತಿ—ಅದೆಲ್ಲಾ ರಾಜರಮರ್ಯಾದೆ. ಅಂತಹ ವಿಪತ್ತುಂಟಾಗಿದ್ದರೆ ಇಲ್ಲಿಗೆ ಬಂದು ಗೋಳಾಡುತ್ತಿದ್ದೆನು. ನನಗೆ ಆಗ ಹದಿನೇಳುವರುಷ. ವಿಪತ್ತೆಂದರೆ ಏನೋ, ಸಂಸಾರವೆಂದರೆ ಏನೋ, ಅದೃಷ್ಟವೇನಾಗಿತ್ತೊ ಯಾವದನ್ನೂ ಅರಿಯೆನು.

ಮಾತಂಗಿನಿ—ಏನಾಯಿತು, ತಾಯಿ ?

ಜ್ಯೋತ್ಸ್ನಾವತಿ—ಏನಾಯಿತೆಂದು ಯಾವದನ್ನು ಹೇಳಲಿ ? ಅವರಿಗೆ ಇಪ್ಪತ್ತೆರಡನೆಯವರುಷ. ಆಗ ಆ ಸರ್ವನಾಶವೆಲ್ಲಾ ಉಂಟಾಯಿತು. ಅದಕ್ಕೆ ಮೊದಲು ನಾನು ಎಷ್ಟೋಸುಖದಲ್ಲಿದ್ದೆನು. ಪ್ರಪಂಚವೆಲ್ಲಾ ಹಾಗೆಯೇ ಸುಖಮಯವಾದುದೆಂದು ಭಾವಿಸಿಕೊಂಡಿದ್ದೆನು. ಇತರರಿಗೆ ಅಂತಹ ಸುಖವು ಘಟಿಸಬಹುದೇ ಇಲ್ಲವೇ ಎಂಬದನ್ನು ಒಂದು ನಿಮಿಷವಾದರೂ ಯೋಚಿಸಿದವಳಲ್ಲ. ಆ ಸುಖದಲ್ಲಿ ಮುಣುಗಿಹೋಗಿದ್ದೆನು. ಅವರು ಮಾಡುತ್ತಿದ್ದ ಆದರದಿಂದ ಅಂಧಳಾಗಿಹೋಗಿದ್ದೆನು. ಈ ಪ್ರಪಂಚದಲ್ಲಿ ಜನರಿಗೆ ಕಷ್ಟವಿದೆಯೆಂದು ತಿಳಿದವಳಾಗಿರಲಿಲ್ಲ. ಅವರನ್ನು ಆದರಿಸುವುದು ಸುಖವಾಗಿತ್ತು. ಅವರ ಸಂಗಡ ಕಾದಾಡುವುದೂ ಸುಖವಾಗಿತ್ತು. ಅವರ ಸುಖಕ್ಕೂ ಪಾರವೇ ಇರಲಿಲ್ಲ. ಆದರೆ ಇದ್ದಕಿದ್ದಹಾಗೆ ಅವರಿಗೆ ಒಂದು ದುರ್ಬುದ್ಧಿಯು ಹುಟ್ಟಿತು. ಅವರು ನನಗೆ ಓದುಬರಹ ಕಲಿಸುವುದಕ್ಕಾ

ರಂಭಿಸಿದರು. ನಾನು ಕಲಿತುಕೊಳ್ಳುವುದಕ್ಕೆ ಎಷ್ಟೋ ಆಕ್ಷೇಪಣೆಮಾಡಿದೆನು. ಅವರ ಕಾಲುಹಿಡಿದುಕೊಂಡು, ನನಗೆ ಓದುಬರಹಬೇಡ, ಓದುಬರಹದಿಂದ ಅದೃಷ್ಟವು ಕಡಮೆಯಾಗುವುದೆಂದು ಎಷ್ಟೋವಿಧವಾಗಿ ಹೇಳಿಕೊಂಡೆನು. ಅವರು ಯಾವದನ್ನೂ ಕಿವಿಯಮೇಲೆ ಹಾಕಿಕೊಳ್ಳರು. ನಾನು ಹೇಳುವುದಕ್ಕೆಲ್ಲಾ ನಕ್ಕು ಹಾಸ್ಯಮಾಡಿಬಿಡುವರು. ಅವರು, ಹೆಂಡತಿಯು ರಾಮಾಯಣವನ್ನು ಓದಿದರೆ ಗಂಡನು ಸಾಯುವುದಾದರೆ ಅಂತಹ ಗಂಡನು ಸಾಯುವುದೇ ಲೇಸೆಂದು ಹೇಳುವರು. ಹೀಗೆ ಹೇಳಿದರೆ ನನಗೆ ಮನಸ್ಸಿಗೆ ಬಹಳ ವ್ಯಥೆಯಾಗುವುದು. ಕಣ್ಣೀರಿಡುತ್ತಾ ಕೊಂಡು ಕಲಿತುಕೊಳ್ಳುವೆನೆಂದು ಹೇಳುವೆನು. ಅವರು ನನಗೆ ಹೇಳಿಕೊಟ್ಟುಬಿಟ್ಟು ಅನಂತರ ಬಂದು ಪಕ್ಷಿಗೆ ಕಲಿಸುವುದಕ್ಕೆ ಹೋಗುವರು. ಅದಕ್ಕೆ ಹೇಳಿಕೊಡುವಾಗ ನಕ್ಕು, ಇದೂ ನಿನ್ನಹಾಗೆ—ಪಂಜರದಲ್ಲಿದೆ, ಈ ಪಂಜರವೇತಕ್ಕೆಂಬುದು ಗೊತ್ತಿಲ್ಲ. ತನಗೆ ಏತಕ್ಕೆ ಇಂತಹರೂಪ, ಏತಕ್ಕೆ ಇಂತಹ ಮಾಧುರ್ಯವಾದ ಕಂಠ, ಈ ಸೂರ್ಯನೇತಕ್ಕೆ ? ಈ ಚಂದ್ರನೇತಕ್ಕೆ ? ಈ ಭೂಮಿಯೇತಕ್ಕೆ ? ಇದಾವದನ್ನೂ ಅರಿಯದು ಎಂದು ಹೀಗೆಲ್ಲಾ ಹೇಳುವರು. ನಾನು ನಕ್ಕು, ನಮ್ಮಿಬ್ಬರಲ್ಲಿ ಯಾರನ್ನು ಹೆಚ್ಚಾಗಿ ಪ್ರೀತಿಸುವಿರೆಂದು ಕೇಳಿದರೆ ಆ ಕೂಡಲೆ ಅವರು ನಕ್ಕು ಓಡಿಹೋಗುವರು. ಆ ನಗುವನ್ನು ಈಗಲೂ ಮರೆಯಲಾರೆ. ಹಕ್ಕಿಗೂ ಅವರ ನಗುವು ಗೊತ್ತು. ಅವರ ನಗುವನ್ನು ಕೇಳುತ್ತಲೇ ಅದು ಏನೇನೋ ಮಾತುಗಳನ್ನು ಹೇಳಿಕೊಳ್ಳುವುದು. ಅದನ್ನು ಕೇಳಿ, ಪಕ್ಷಿಯು ನನಗಿಂತಲೂ ಅವರನ್ನು ಹೆಚ್ಚು ಆದರಿಸುವುದೆಂದು ತಿಳಿಯುವೆನು. ಒಂದೊಂದು ಸಲ ನನಗೆ ಏನೋ ಹಿಂಸೆಯಾಗುವುದು. ನಾನು, ಮತ್ತಾರಿಗೆಹಾಗೆ ಹಿಂಸೆಯಾಗುವುದು, ನಾನು ಮತ್ತಾರಿಗೆ ಹಾಗೆ ಹಿಂಸೆಯುಂಟುಮಾಡಲೆಂದು ಯೋಚಿಸುವೆನು. ಅವರು ಹೊರಟುಹೋಗಿ ಅವರಮಾತು ಅಥವಾ ನಗುವು ಕೇಳಿಸದಿದ್ದರೆ ಪಕ್ಷಿಯು ಮೌನವಾಗಿರುವುದು. ನಾನು ಕೋಪ

ಗೊಂಡು ಅದರ ಪಂಜರವನ್ನು ಹಿಡಿದೆಳೆದು ಅದನ್ನು ಬೈಯುತಲಿರುವೆನು. ಆಗದು ಒಂದುಸಲ ಇತ್ತಕಡೆ ಕಿವಿಯಿಂದಲೂ ಒಂದುಸಲ ಅತ್ತಕಡೆ ಕಿವಿಯಿಂದಲೂ ತಿರಿಗಿಸಿ ತಿರಿಗಿಸಿ ಕಿವಿಕೊಟ್ಟು ಕೇಳುವುದು. ಏನೊಂದುತ್ತರವನ್ನೂ ಹೇಳದು. ಒಂದೊಂದುಸಲ ಹಾರಿ ನನ್ನ ಬೆರಳನ್ನು ಕಚ್ಚುವುದು. ನಾನು ಪುನಃ ಬೈಯುವೆನು ಅವರು ಮನೆಗೆಬಂದರೆ ಅವರ ಇದಿರಿಗೂ ಅದನ್ನು ಬೈದು ಅದು ನನ್ನ ಸವತಿಯೆಂದು ಹೇಳುವೆನು. ಅವರು ನಗುವರು. ಆ ಕೆಟ್ಟಮೋರೆಹಕ್ಕಿಯು ಆ ನಗುವನ್ನು ಕೇಳಿದಕೂಡಲೆ ಪುನಃ ತನ್ನ ಸ್ವರವನ್ನೆತ್ತುವುದು. ಏನೇನೋ ಮಾತುಗಳನ್ನು ಹೇಳುವದು. ಅದರ ಸ್ವರ ಅದರ ಮಾತು ಅವರಿಗೆ ಗೊತ್ತುಂಟೋ ಏನೋ; ಗೊತ್ತಿರುವವರ ಹಾಗೆ ಅದರ ಸಂಗಡ ವಿನೋದಮಾಡುವರು. ನಾನು ಮತ್ತಷ್ಟು ಕೋಪಗೊಂಡು ಕುಳಿತಿರುವೆನು. ಆಗ ಹಕ್ಕಿಯು ಕೂಡ ಅವರನ್ನು ಪ್ರೀತಿಸುತಲಿತ್ತೆಂದು ನಾನು ಅರಿಯೆ. ಹೊರಗೆ ಅಂಗಳಕ್ಕೆ ಹೋದರೆ ಪಾರಿವಾಳ ಹಕ್ಕಿಗಳು ಬಂದು ಅವರನ್ನು ಸುತ್ತಿಕೊಳ್ಳುವುವು. ಅವು ಅವರ ಮೈಮೇಲೆ ಕೂಡುತ್ತಿರಲಿಲ್ಲ. ಅವರ ಸುತ್ತುಮುತ್ತಲೂ ಹಾರಾಡುತಲಿರುವುವು. ಅವರು ಮುಖವನ್ನೆತ್ತಿಕೊಂಡು ಅವುಗಳ ಸಂಗಡ ಮಾತನಾಡುವರು. ಮೇಲಕ್ಕೆ ಎತ್ತಿದಾಗ ಅವರ ಮುಖವು ಎಷ್ಟೋ ಸುಂದರವಾಗಿ ಕಾಣಿಸುವುದು.

ಅರಮನೆಯಲ್ಲಿದ್ದ ಆನೆಗಳೆಲ್ಲಾ ಅವರ ಗುರತನ್ನು ಚನ್ನಾಗಿ ಅರಿತಿದ್ದವು. ಅವರನ್ನು ಪ್ರೀತಿಸುವುವು. ಅವರು ಸ್ನಾನಮಾಡುವುದಕ್ಕೆ ಹೋದಾಗ ಅವೆಲ್ಲವೂ ಪುಷ್ಕರಿಣಿಗೆ ಹೋಗುವುವು. ಅದೆ ನೀರಿನಲ್ಲಿ ಅವರ ಸಂಗಡ ಕ್ರೀಡಿಸುವುವು. ಸೊಂಡಿಲದಮೇಲೆ ಅವರನ್ನು ಕುಳ್ಳಿರಿಸಿಕೊಂಡು ನೀರಿನಲ್ಲಿಳಿಸುವುವು. ಇಳಿಸಿ ಎಲ್ಲವೂ ಸೊಂಡಿಲದಲ್ಲಿ ನೀರುತುಂಬಿಕೊಂಡು ಅವರಮೇಲೆ ಎರಚುವುವು. ಒಂದೊಂದು ದಿನ ಅವರು ನೀರಿನಲ್ಲಿ ಚಾಕಿ

ಯನ್ನು ಹಾಕಿ ಅದರಮೇಲೆ ಕೂತು ಎಣ್ಣೆ ಹಚ್ಚಿಕೊಳ್ಳುವಾಗ ಬಂದು ಆನೆಯು ನೀರಿನಿಂದ ಸೊಂಡಲನ್ನು ನೀಡಿ ಅವರ ಶರೀರವನ್ನು ಸ್ಪರ್ಶ ಮಾಡುವುದು. ಅವರ ಅಂಗಸ್ಪರ್ಶ ಮಾಡದಿದ್ದರೆ ಅದಕ್ಕೆ ತೃಪ್ತಿಯಿಲ್ಲ. ಅವರು ನೀರಿಗೆ ಇಳಿಯುವುದಕ್ಕೆ ಸಾವಕಾಶವಾದರೆ ಆನೆಗಳಲ್ಲಿ ದುರಂತವಾದುದೊಂದು ಅವರು ಕುಳಿತಿದ್ದ ಚೌಕಿಯನ್ನು ಹಿಡಿದೆಳೆಯುವುದು. ಅವರದನ್ನು ಬೈದು ನೀರಿನಲ್ಲಿ ಧುಮುಕುವುರು. ನೀರಿನಲ್ಲಿ ಔತುಕೊಳ್ಳುವುರು. ಆನೆಗಳೆಲ್ಲಾ ಅವರನ್ನು ಹುಡುಕುತ್ತ ಓಡಾಡುವುವು. ನಾನು ಭಯದಿಂದ ಕಳವಳಿಸುತ್ತ ಕಿಟಕಿಯಲ್ಲಿ ಕೂತುಕೊಂಡು ನೋಡುತಲಿರುವೆನು. ಅನಂತರ ಅವರು ನೀರಿನಲ್ಲಿ ಒಂದುಕಡೆ ಎದ್ದು ತೇಲುವುರು. ಅದನ್ನು ಕಂಡು ಆನೆಗಳೆಲ್ಲಾ ಅತ್ತಕಡೆ ಓಡುವುವು. ಕಡೆಗೆ ಅವರು ಎಲ್ಲಾ ಆನೆಗಳ ಸೊಂಡಲಮೇಲೆ ನಿಂತುಕೊಂಡರೆ ಅವುಗಳಿಗೆಲ್ಲಾ ತೃಪ್ತಿಯಾದಹಾಗಾಗುವುದು. ಸ್ನಾನವಾದಮೇಲೆ ಬಂದಾನೆಯು ಅವರನ್ನು ಸೊಂಡಲಮೇಲೆ ಕುಳ್ಳಿರಿಸಿಕೊಂಡು ಮನೆಯುವರೆಗೂ ಕರೆತಂದುಬಿಡುವುದು.

ಸ್ನಾನಾನಂತರ ಪೂಜೆಗೆ ಕೂಡುವುರು. ಆಗವರು ಅತ್ಯಂತ ಆಶ್ಚರ್ಯಕರವಾದ ಮೂರ್ತಿಯನ್ನು ಧಾರಣೆಮಾಡುವುರು. ಆಗವರನ್ನು ನೋಡಿದರೆ ಅವರಿಗೆ ಈ ಪೃಥಿವಿಯ ಸಂಸ್ಪರ್ಶವೇ ಇಲ್ಲವೆಂದು ತೋರುವುದು. ನಯನಮುದಿತರಾಗಿ ಧ್ಯಾನಮಾಡುತಲಿದ್ದರೆ ಅವರ ಕಣ್ಣೆದುರಿಗೆ ದೇವರು ಪ್ರತ್ಯಕ್ಷವಾಗಿದ್ದಹಾಗೆ ತೋರುವುದು. ಜನರು, ದೇವರೇ ಅವರ ಸಂಗಡ ಪ್ರತ್ಯಕ್ಷವಾಗಿ ಮಾತನಾಡುತ್ತಾನೆಂದು ಹೇಳುತ್ತಿದ್ದರು. ಇನ್ನು ಹಾಗಾಗುವುದೇನು ಆಶ್ಚರ್ಯ! ಅವರ ಸಂಗಡ ದೇವತೆಗಳೇ ಮಾತನಾಡುವುದಕ್ಕೆ ಇಷ್ಟವುಳ್ಳವುರಾಗಿದ್ದರು. ಮನುಷ್ಯರಲ್ಲಿ ಅಂತಹ ಪವಿತ್ರರಾದವರು ಯಾರೂ ಇಲ್ಲ. ತಾಯಿಯ ಹತ್ತಿರ ಕೂತು ಆಹಾರ ಮಾಡುವುರು ಒಂದೊಂದುದಿನ ಊಟವಾದಮೇಲೆ ತಾಯಿಯ ತೊಡೆಯಮೇಲೆ ತಲೆಯಿ

ಟ್ಟುಕೊಂಡು ಶಯನಮಾಡುವುರು. ಆಗವರ ಮುಖವು ಮಗುವಿನ ಮುಖದಹಾಗೆ ಮುದ್ದಾಗಿರುವುದು.

ಅನಂತರ ಎದ್ದು ಕೆಲಸಕಾರ್ಯವನ್ನು ನೋಡುವುದಕ್ಕೆ ಹೋಗುವುರು. ಅವರು ಕಚ್ಚೇರಿಯಲ್ಲಿರುವ ಪರ್ಯಂತವೂ ದಿವಾನನು ಬಹಳ ಭಯದಿಂದಿರುವುನು. ಎಲ್ಲರೂ ಅವರನ್ನು ಬಹಳ ಪ್ರೀತಿಸುತಲಿದ್ದರು. ದಿವಾನನು ಮಟ್ಟಿಗೆ ವಿಷವನ್ನು ಕಾರುತ್ತಿದ್ದನು. ಆ ದಿವಾನನೇ ಕಡೆಗೆ ನನಗೆ ಮೃತ್ಯುವಾದನು. ಆದರೆ ಅವರು ಇದ್ದರೆ ದಿವಾನನು ಏನೂ ಮಾಡಲಾರದವನಾಗಿದ್ದನು.

ಅವರಲ್ಲಿ ಇದ್ದುದೆಲ್ಲಾ ಗುಣವೇ ಹೊರತು ಬೇರೆ ಅಲ್ಲ. ಆದರೆ ಕೇವಲ ಒಂದವಗುಣಕ್ಕೋಸ್ಕರ ಅವರನ್ನು ಎಲ್ಲರೂ ನಿಂದಿಸುತಲಿದ್ದರು. ಅವರು ಪ್ರಯತ್ನಪಟ್ಟು ಏನಾದರೂ ವಿಪತ್ತನ್ನು ಮೈಮೇಲೆ ತಂದುಹಾಕಿಕೊಳ್ಳುವುರು. ಎಲ್ಲರೂ ವಿಪತ್ತು ಬಾರದಹಾಗೆ ಪ್ರಯತ್ನಪಟ್ಟರೆ, ಅವರು ಯಾತರಿಂದ ವಿಪತ್ತುಂಟಾಗಬೇಕೋ ಅದರ ಪ್ರಯತ್ನ ಮಾಡುವುರು. ನಾನು ಅವರಿಗೆ ಎಷ್ಟೋ ಹೇಳಿಕೊಳ್ಳುತ್ತಿದ್ದೆ. ಅವರದಕ್ಕೆ ಕಿವಿಕೊಡುತ್ತಿರಲಿಲ್ಲ. ಅವರು ನಕ್ಕು, ಎಲ್ಲರೂ ಹೊರಗೆ ಕಾಲಿಡದೆ ವಿಪತ್ತಿಗೆ ಗುರಿಯಾಗುವುರು. ನನಗೆ ಮಧ್ಯೆ ಮಧ್ಯೆ ವಿಪತ್ತುಂಟಾಗದಿದ್ದರೆ ಕಷ್ಟಬೋಧೆಯಾಗುವುದೆಂದು ಹೇಳುವುರು. ನನ್ನ ಬಾಯಿ ಮುಚ್ಚಿಹೋಗುವುದು. ಒಂದುಸಲ ಯಾವದೋ ಒಂದು ಜಮೀನದಾರಿಯನ್ನು ನೋಡುವುದಕ್ಕೆ ಹೋಗಿದ್ದರು. ಮನೆಗೆ ಹಿಂದಿರಿಗಿ ಬರುವಾಗ ದಾರಿಯಲ್ಲಿ, ಒಂದು ಪುಷ್ಕರಿಣಿಯಹತ್ತಿರ, ಕಳ್ಳರು ಬಿದ್ದು ಅತ್ತೆಯಮನೆಗೆ ಹೋಗುತ್ತಿದ್ದ ಒಬ್ಬ ಯುವತಿಯನ್ನು ಪಲ್ಲಕ್ಕಿ ಸಮೇತವಾಗಿ ಹೊತ್ತುಕೊಂಡು ಹೋದರೆಂದು ಕೇಳಿದರು. ಇದ್ದವರನ್ನೆಲ್ಲಾ ಕೊಂದುಹಾಕಿದ್ದರಂತೆ. ಇದನ್ನು ಕೇಳಿ ಜತೆಲಿದ್ದವರು ಆ ಹಾದಿಯಲ್ಲಿ ಹೋಗಕೂಡದೆಂದು ಹೇಳಿ

ದರು. ಇವರು ಅದೇಮಾರ್ಗವಾಗಿ ಹೋಗಿ, ಆ ಕಳವಾದವಳನ್ನು ಅಂದ ಣದಲ್ಲಿ ಕುಳ್ಳಿರಿಸಿ, ಏಳೆಂಟು ಕಳ್ಳರ ಕೈಯಿಂದ ಹೊರಿಸಿಕೊಂಡು ಮನೆಗೆ ಬಂದರು. ಅವರಸಂಗಡ ಯುದ್ಧಮಾಡುವಾಗ ಒಬ್ಬ ಕಳ್ಳನು ಖೂನಾಗಿ ಹೋದನು. ಅದು ಮೊದಲ್ಗೊಂಡು ನನಗೆ ಎದೆ ಬಿಚ್ಚಿಹೋಯಿತು. ಆ ವೇಳೆಯಲ್ಲಿ ಅವರ ಕೈಯಲ್ಲಿ ದೊಣ್ಣೆಯಿಲ್ಲದಿದ್ದರೂ ಅಥವಾ ಕಳ್ಳನ ಕೈ ಲಿದ್ದ ದೊಣ್ಣೆ ಪೆಟ್ಟು ಇವರಿಗೆ ಅಪಾಯಸ್ಥಲಕ್ಕೆ ತಗಲಿದ್ದರೂ ಏನಾಗುತಲಿ ತ್ತು ? ಹೇಳು.

ಮೊದಲು ಮೊದಲು ಪೂಜೆಮಾಡುವುದನ್ನು ಬಿಟ್ಟರು. ಕಾರಣವ ನ್ನು ಕೇಳದರೆ, ನಾನು ಅಶುಚಿ—ದೇವರು ನಾನು ಮಾಡುವ ಪೂಜೆಯನ್ನು ಗ್ರಹಣಮಾಡುವುದಿಲ್ಲವೆಂದು ಹೇಳುವರು. ಅನಂತರ, ಕ್ರಮಕ್ರಮವಾಗಿ ಅನ್ಯಮನಸ್ಕರಾಗುತ್ತ ಬಂದರು. ಒಂದೊಂದುಸಲ, ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವೆನು ; ಇತರರಿಗೋಸ್ಕರ ಪ್ರಾಣವನ್ನು ಕೊಟ್ಟರೆ ಪಾಪ ಕ್ಕೆ ಸರಿಯಾದ ಪ್ರಾಯಶ್ಚಿತ್ತವಾಗುವುದೆಂದು ಹೇಳುವರು—ನನಗೆ ಯಾವ ದೂ ಗೊತ್ತಾಗದು. ಅವರ ಮುಖದಲ್ಲಿ ಆ ನಗುವೇನೋ ಇರಲಿಲ್ಲ. ಅಷ್ಟುಮಾತ್ರ ತಿಳಿದುಕೊಂಡೆನು. ಒಂದುದಿನ ಅವರು ಬೀದಿಯಲ್ಲಿ ತಿರು ಗಾಡುತ್ತಿರುವಾಗ ಬೀದಿಯಲ್ಲಿ ಒಬ್ಬ ದುಷ್ಟನಾದ ಹುಡುಗನು ಬಂದು ಇಟ್ಟಿಗೆಯನ್ನು ಕೈಲಿ ಹಿಡಿದುಕೊಂಡು ಒಬ್ಬ ವೃದ್ಧನಾದ ಹುಚ್ಚನನ್ನು ಕುರಿತು, ನಾನು ನಿನ್ನನ್ನು ಇದರಿಂದ ಹೊಡೆಯುವೆನೆಂದು ಹೇಳದುದನ್ನು ಕೇಳದರು. ವೃದ್ಧನಾದ ಹುಚ್ಚನು ಭಯದಿಂದ “ ಹೊ ” ಎಂದು ಅತ್ತನು. ಹುಡುಗನು, ಇಗೋ ! ಹೊಡೆದೆ, ಎಂದನು. ಹುಚ್ಚನು ಮತ್ತಷ್ಟು ಗಟ್ಟಿಯಾಗಿ ಅತ್ತನು. ಇದನ್ನೆಲ್ಲಾ ನೋಡಿ ಕೇಳಿ, ತಾವೂ ಭಯದಿಂದ ಅಳುವವರಹಾಗೆ ತಿಳಿದುಕೊಂಡರು. ಅನಂತರ ಅವರು ಮನೆಗೆ ಬಂದು ಇದನ್ನೆಲ್ಲಾ ಹೇಳಹೇಳುತ್ತ ಭಯವಿಹ್ವಲರಾದರು. ನಾನು, ಹು

ಚ್ಚನ ಅಳುವನ್ನು ನೋಡಿ ತಮಗೆ ಭಯವೇತಕ್ಕೆ ? ತಮಗೆ ಹುಚ್ಚೇನು ? ಎಂದು ಕೇಳಿದೆನು. ಅದರಮೇಲೆ ಅವರು ತಮ್ಮ ಕೈಯಿಂದ ನನ್ನ ಬಯನ್ನು ಮುಚ್ಚಿಕೊಂಡು, ಆ ಮಾತನ್ನು ಏತಕ್ಕೆ ಹೇಳಿದೆ? ಹಾಗಾದರೆ ಅದು ನಿಜವೇ ಹೌದೆಂದು ಹೇಳಿ, ನನ್ನ ಕೈಮೇಲೆ ಬಂದು ಪೆಟ್ಟನ್ನು ಹೊಡೆದು ಓಡಿಹೋದರು. ನನ್ನ ಪತ್ತಿರದಿಂದ ಓಡಿಹೋಗಿ ತಾಯಿಯಹತ್ತಿರ ಹೋದರು. ಅಲ್ಲಿ ಎರಡು ಕೈಗಳಿಂದಲೂ ತಾಯಿಯ ಪಾದಧೂಳಿಯನ್ನು ತೆಗೆದುಕೊಂಡು ಮೈಗೆಲ್ಲಾ ಹಚ್ಚಿಕೊಳ್ಳುತ್ತ, ಅಮ್ಮ ! ನನಗೆ ಆಲಸ್ಯವಾಗಿದೆ. ನಿನ್ನ ಚರಣರೇಣುವನ್ನು ಹಚ್ಚಿಕೊಂಡರೆ ಆರೋಗ್ಯವಾಗುವುದೆಂದು ಹೇಳಿದರು. ತಾಯಿಯು ಈ ಮಾತನ್ನು ಕೇಳಿ ಅತ್ತಳು. ಆ ಅಳುವನ್ನು ನೋಡಿ ಪುನಃ, ಭಯಪಟ್ಟವರಾಗಿ, ಹಾಗಾದರೆ, ಇದು ನಿಜವೇ ಹೌದು ಎಂದಂದುಕೊಂಡು ಅಲ್ಲಿಂದ ಓಡಿಹೋದರು. ಓಡಿಬಂದು ತಂದೆಗೆ ಪ್ರಣಾಮವನ್ನು ಮಾಡಿದರು. ತಂದೆಯು, ಆಸಮಯದಲ್ಲಿ ಈ ಪ್ರಣಾಮವೇತಕ್ಕೆ ? ಎಂದರು. ಆದರೆ ಅವರು ಯಾವ ಮಾತನ್ನೂ ಹೇಳದೆ ಹೊರಟುಹೋದರು.

ರಾತ್ರಿ ಅವರನ್ನು ಎಲ್ಲೆಲ್ಲಿ ಹುಡುಕಿದರೂ ಅವರು ಯಾರಿಗೂ ಸಿಕ್ಕಲಿಲ್ಲ. ಅಂದಿನಿಂದ ಅರಮನೆಯು ಶೂನ್ಯವಾಯಿತು.

ನಾಲ್ಕು ದಿನಗಳ ಮೇಲೆ ಒಬ್ಬ ಜಿಲೇಬುದಾರನು ಬಂದು ರಾಜಪುತ್ರರು ಸಿಕ್ಕಿದರೆಂಬ ವರ್ತಮಾನವನ್ನು ಕೊಟ್ಟನು. ವರ್ತಮಾನವನ್ನು ಕೇಳಿದ ಕೂಡಲೆ ಅರಮನೆಯೇ ಅವನ ಹಿಂದೆ ಹೊರಟಿತು. ಊರಿನವರೆಲ್ಲರೂ ದಳದಳವಾಗಿ ಹೊರಟರು. ನಾನೊಬ್ಬಳೇ ಕುಳಿತುಕೊಂಡು ಮನಸ್ಸಿನಲ್ಲಿ, ಅವರು ಈ ಸಲ ಸಿಕ್ಕಿದರೆ ಇನ್ನುಮೇಲೆ ತಿಲಾರ್ಧಕಾಲವಾದರೂ ಅವರನ್ನು ಬಿಟ್ಟಿರುವುದಿಲ್ಲವೆಂದು ಯೋಚಿಸಿಕೊಂಡೆನು. ಸ್ವಲ್ಪ ಹೊತ್ತಿನಲ್ಲಿಯೇ ಜನರು ತಂಡತಂಡವಾಗಿ ಹಿಂದಿರುಗಲಾರಂಭವಾಯಿತು. ಅರಮ

ನೆಯ ಜನರೂ ಬಂದರು. ಆದರೆ ಅವರು ಬಂದ ಸಮಾಚಾರವೇ ಇಲ್ಲ. ನಾನು ತಲ್ಲಣಿಸುತಲಿದ್ದೆನು. ಕಡೆಗೆ ಅರಮನೆಯಲ್ಲಿ ಅಳುವ ಶಬ್ದವೆದ್ದಿತು. ನನಗೆ ಆಗಲೂ ಏನೊಂದೂ ಗೊತ್ತಾಗಲಿಲ್ಲ. ಆದರೆ ಮನಸ್ಸಿಗೆ ಏನೋ ಒಂದು ಅನುಮಾನವು ತಟ್ಟಿತು. ನಾನು ಹೋಗಿ ಒಂದುಕಡೆ ಬೌತುಕೊಂಡೆ. ನಾವು ಬೌತುಕೊಂಡರೂ ಕೆಟ್ಟ ಸಮಾಚಾರ ಬೌತುಕೊಳ್ಳುವುದಿಲ್ಲ. ಕ್ರಮವಾಗಿ ನದಿಯ ತೀರದಲ್ಲಿ ಅವರ ದೇಹಸತ್ಕಾರವು ಆರಂಭವಾಯಿತೆಂದು ಕೇಳಿದೆ. ಜಲೇಬುದಾರನು ಮೀನು ಹಿಡಿಯುವುದಕ್ಕೆ ನದಿಯಲ್ಲಿ ಬಲೆಯನ್ನು ಹರಡಿದಾಗ ಅವರ ದೇಹವು ಸಿಕ್ಕಿ, ಆ ವರ್ತಮಾನವನ್ನು ಕೊಡುವುದಕ್ಕೆ ಅವನು ಓಡಿಬಂದಿದ್ದನಂತೆ. ಅದು ಯಾರಿಗೂ ಮೊದಲು ಗೊತ್ತಾಗಲಿಲ್ಲ. ಎಲ್ಲರೂ ನದಿಯತೀರಕ್ಕೆ ಹೋದಮೇಲೆ ಗೊತ್ತಾಯಿತು. ಅನಂತರ ನನ್ನ ಗತಿಯೇನೋ ಅದಾವುದೂ ನನಗೆ ನೆಲೆಯಾಗಿ ತಿಳಿಯಲಿಲ್ಲ. ನನಗೆ ಜ್ಞಾನವೇ ಇಲ್ಲ. ಎದ್ದು ಕೂಡುವಹಾಗೆ ಆದಮೇಲೆ ಒಂದು ದಿನ ಶ್ರಾದ್ಧದ ಮಾತು ನನ್ನ ಕಿವಿಗೆ ಬಿತ್ತು. ಆಗ ಸರ್ವನಾಶವಾಯಿತೆಂದು ಸ್ವಲ್ಪಸ್ವಲ್ಪ ಅರಿವು ಬಂತು. ಈ ಸರ್ವನಾಶದ ವೃತ್ತಾಂತವೆಲ್ಲಾ ಪಶುಪಕ್ಷಿ ಜನರೆಲ್ಲರಿಗೂ ಗೊತ್ತು. ಆದರೆ ಹಾಳಾದ ನಾನು ಆಗ ತಿಳಿದುಕೊಳ್ಳಲಾರದವಳಾಗಿದ್ದೆ. ಪಾರವಾಳದ ಹಕ್ಕಿಗಳೆಲ್ಲಾ ಮೊದಲಿನ ಹಾಗೆ ಗದ್ದಲವನ್ನು ಮಾಡುತ್ತಿರಲಿಲ್ಲ. ಅವೆಲ್ಲಾ ಗೋಡೆಯ ಕಾರ್ನೀಸಗಳ ಕೆಳಗೆ ಶಬ್ದಮಾಡದೆ ಕೂತವು. ಪುಷ್ಕರಿಣಿಯ ಹತ್ತಿರ ಅವರು ಸ್ನಾನಮಾಡುವ ಶ್ವೇತಶಿಲೆಯು ಚೌಕಿಯಿತ್ತು. ಅದನ್ನು ಸ್ನಾನಕಾಲದಲ್ಲಿ ನಾನು ಕಿಟಕಿಯಲ್ಲಿ ಕೂತು ನೋಡುತಲಿದ್ದೆನು! ಅಲ್ಲಿಗೆ ಒಂದು ಆನೆಯು ಓಡಿಬಂದು ಚೌಕಿಯ ಹತ್ತಿರ ನಿಂತಿತು. ಅದರೊಂದಿಗೆ ಅನೇಕಮಂದಿ ಮಾವಟಿಗರಿದ್ದರು. ಆದರೆ ಆನೆಯ ಹತ್ತಿರ ಹೋಗರು. ಆನೆಗೆ ಹುಚ್ಚು ಹತ್ತಿದೆಯೆಂದರು. ಆದರೆ ಆನೆಯು ಆ ಚೌಕಿಯ ಹತ್ತಿರ ನಿಂತಿತ್ತು. ಅವರು ಈ ಆನೆಯ

ನ್ನು ಬಹಳ ಪ್ರೀತಿಸುತಲಿದ್ದರು. ಈ ಆನೆಯೇ ಅವರ ಅಂಗಸ್ಪರ್ಶಮಾ ಡುತಲಿತ್ತು. ಇದೇ ಆನೆಯೇ ಒಂದೊಂದು ದಿನ ಮಲಗಿದ್ದಾಗ ಅವರು ಅದರಮೇಲೆ ಹತ್ತಿ ಕುಣಿದಾಡಿ ಕೂತು ವೇಣುವನ್ನು ಊದುವುರು. ಆನೆ ಯು ಬಹಳಹೊತ್ತು ಅಲ್ಲಿ ನಿಂತಿದ್ದು ಅತ್ತಿತ್ತ ಸುತ್ತಿಸುತ್ತಿ ನೋಡುತಲಿತ್ತು. ಆಗ ನನಗೆ ಅದು ಅವರನ್ನು ಹುಡುಕುವುದೆಂದು ಚನ್ನಾಗಿ ತಿಳಿಯಬಂತು. ಆನೆಯು ಅವರನ್ನು ಒಂದುಸಲ ಕೂಗಿ ನೀರಿನೊಳಗೆ ಹೋಗಿ ಅಲ್ಲಿ ಅವರು ಔತುಕೊಂಡಿರಬೇಕೆಂದು ಅಲ್ಲಲ್ಲಿ ಹುಡುಕಿತು. ಎಷ್ಟೋಸಲ ಮುಣುಗಿ ಮುಣುಗಿ ನೋಡಿ ಪುನಃ ತಲೆಯೆತ್ತಿ ನಾಲ್ಕು ದಿಕ್ಕುಗಳಲ್ಲಿಯೂ ನೋಡು ವುದು. ನೀರಿನಿಂದ ಎದ್ದುಬಂದು ಚೌಕಿಯ ಹತ್ತಿರ ನಿಂತಿತು. ಚೌಕಿ ಯನ್ನು ಸರಿಸಿನೋಡಿತು. ಆಗ ಮಾವತರೆಲ್ಲರಿಗೂ ಆನೆಯು ಯಾರನ್ನು ಹುಡುಕುವುದೆಂಬುದು ತಿಳಿಯಬಂತು. ಮಾವತಿಗನು ಇನ್ನೇತಕ್ಕೆ ಹುಡು ಕುತ್ತಿ? ಆ ಧನವು ಹೋಯಿತು, ಬಾ ಎಂದನು. ಆನೆಯು ಆ ಮಾತನ್ನು ತಿಳಿಯಲಿಲ್ಲ. ಒಬ್ಬನ ಕೈಯ್ಯಲ್ಲಿ ಒಂದು ಕೊಡೆ ಇತ್ತು. ಅದನ್ನು ಸೊಂಡಲಿಂದ ಕಿತ್ತುಕೊಂಡು ಆ ಚೌಕಿಯಮೇಲೆ ಸ್ವಲ್ಪಹೊತ್ತು ಇಟ್ಟದ್ದು ಅನಂತರ ಅವರನ್ನು ಸ್ನಾನವಾದಮೇಲೆ ಮನೆಗೆ ಕರತರುವಹಾಗೆ ಆ ಕೊಡೆ ಯನ್ನು ಸೊಂಡಲಮೇಲೆ ಇಟ್ಟುಕೊಂಡು ಮನೆಯವರೆಗೂ ಬಂತು. ಹೀಗೆ ಮಾಡಿದಮೇಲೆ ಆನೆಯವನು ಅದರಮೇಲೆ ಹತ್ತಿಕೊಂಡನು. ದಾಸಿ ಗಳು ಬಂದು ನನ್ನನ್ನು ಕಿಟಕಿಯಿಂದಿಳಿಸಿದರು.

ಅನಂತರ ಶ್ರಾದ್ಧ—ನನ್ನನ್ನು ಕರೆದುಕೊಂಡುಹೋದರು. ಅಲ್ಲಿ ಸಿದ ವಾಗಿದ್ದುದನ್ನೆಲ್ಲಾ ನೋಡಿ ನನಗೆ ಗೊತ್ತಾಯಿತು. ನಾನು ಮೊದಲು ಅಳುತಳುತ ಹಿಂದಿರುಗಿ ಬಂದೆ. ಆಗ ನಮ್ಮ ಮಾವಂದರೇ ಬಂದು ಅವರೂ ಅತ್ತರು. ಅನಂತರ ಸಮಾಧಾನಪಡಿಸಿದರು. ಇನ್ನು ನಾನು ಮಾಡುವು ದೇನು? ನಾನು, ಅವರೇನೂ ಸತ್ತಿಲ್ಲ. ಅವರು ಪುನಃ ಹಿಂದಿರುಗಿ ಬರು

ವರು. ಜೆಲೇಬುದಾರನಿಗೆ ಸಿಕ್ಕಿದ ದೇಹವು ಅವರ ದೇಹವಲ್ಲ. ಅದಕ್ಕೆ ಸತ್ಕಾರ ಮಾಡಿದ್ದೂ ಸರಿಯಲ್ಲ. ನೋಡುವುದಕ್ಕೆ ಹೋಗಿದ್ದವರು ಕೇವಲ ಅವರ ಬಟ್ಟೆಯನ್ನು ನೋಡಿ ಗುರ್ತಿಸಿದ್ದಾರೆ. ಆದರೆ ಬೇರೆಜನ ಅವರ ಬಟ್ಟೆಯನ್ನುಟ್ಟಿದ್ದರೆ? ಎಂದು ಹೇಳುವುದರೊಳಗೆ ಮಾವಂದಿರು ಮಾತಿಲ್ಲದೆ ನಿಂತುಕೊಂಡರು. ಸ್ವಲ್ಪಹೊತ್ತಿನಮೇಲೆ ಅವರು, ನಿಜವಾದ ಮಾತು—ನನಗೆ ಏತಕ್ಕೆ ಇದು ತಿಳಿಯದೆಹೋಯಿತು? ನನ್ನ ಕಂದ ಬದುಕಿರುವನು, ನನ್ನ ಕಂದ ಹಿಂದಿರುಗಿ ಬರುವನು. ಆವಶ್ಯಕವಾಗಿ ಬರುವನು. ನಾನು ಹೋಗಿ ದಿವಾನನಿಗೆ ಹೇಳುವೆನೆಂದರು.

ಆದರೆ ಪಾಷಂಡನಾದ ದಿವಾನನು ಅವರ ಮಾತನ್ನೆಲ್ಲಾ ತಿರಿಗಿಸಿಬಿಟ್ಟನು. ಮಾವಂದಿರು ಪುನಃ ಬಂದು ಮುಷ್ಕರ ಹಿಡಿದು, ಶ್ರಾದ್ಧವನ್ನು ಮಾಡಿ ತೀರಬೇಕು, ಇಲ್ಲದಿದ್ದರೆ ಅವರಿಗೆ ಗತಿಯಿಲ್ಲ. ಪ್ರೇತಾವಸ್ಥೆಯಲ್ಲಿ ಬಹಳ ಕಷ್ಟವಾಗುವುದೆಂದು ಮುಂತಾಗಿ ಹೇಳಿದರು. ನಾನು ಇನ್ನು ಮಾಡುವುದೇನು? ಶ್ರಾದ್ಧವನ್ನು ಮಾಡಿದೆ.

ಮಾತಂಗಿನೀ—ನಿಮ್ಮ ಮಾವಂದಿರು ಏನೂ ಹೇಳಲಿಲ್ಲವೆ? ತಾವು ಅವರ ಮಾತನ್ನು ಹೇಳಲೇ ಇಲ್ಲ.

ಜ್ಯೋತ್ಸ್ನಾವತಿ—ಅವರು ವ್ಯರ್ಥವಾದ ಮನುಷ್ಯರು. ಒಂದೊಂದು ತಡವೆ ಅವರಿಗೆ ಜ್ಞಾನವಿರದು. ನನ್ನ ವಿವಾಹವಾದಮೇಲೆ ಚೆನ್ನಾಗಿಯೇ ಇದ್ದರು. ಈ ಸರ್ವನಾಶಕರವಾದ ವಾರ್ತೆಯನ್ನು ಕೇಳುತ್ತಲೇ ಅವರು ಮಾತು ಬಿಟ್ಟರು. ಒಂದುದಿನವಾದರೂ ಕಣ್ಣೀರು ಬಿಡಲಿಲ್ಲ. ನಾನು ಅತ್ತರೆ, ಅದನ್ನು ನೋಡಿ, ಅವರು ನನ್ನ ಮಗನಿಗೆ ಮಂಗಳವಾಗುವುದಿಲ್ಲವೆಂದೂ ತಾವು ಇರುವವರೆಗೂ ನನ್ನನ್ನು ಹಣೆಗೆ ಕುಂಕುಮವನ್ನು ಹಚ್ಚಿಕೊಳ್ಳಬೇಕೆಂದೂ ಹೇಳುವರು. ಆದರೆ ಅವರು ಬಹಳದಿನ ಬದುಕ್ಕಿ

ರಲಿಲ್ಲ. ಅವರು ಕೆಲವುಕಾಲ ವ್ಯಸನಪಟ್ಟರು. ಅನಂತರ ಎಲ್ಲವನ್ನೂ ಮರೆತುಬಿಟ್ಟರು. ವೃದ್ಧರಾದವರ ವ್ಯಸನವು ಎಷ್ಟುದಿನತಾನೇ ಇದ್ದೀತು?

ಮಾತಂಗಿನೀ—ವೃದ್ಧರ ವ್ಯಸನಕ್ಕೂ, ಯುವಕರ ವ್ಯಸನಕ್ಕೂ ಭೇದವುಂಟೆ?

ಜ್ಯೋತ್ಸ್ನಾವತಿ—ಬಹಳ ಪ್ರಭೇದ. ನಮ್ಮ ಮಾವಂದಿರಲ್ಲಿಯೇ ಅದು ಗೊತ್ತಾಯಿತು. ಒಂದು ವರುಷದೊಳಗೇನೇ ಅವರು ಒಬ್ಬ ದತ್ತುಪುತ್ರನನ್ನು ಮಾಡಿಕೊಂಡರು.

ಮಾತಂಗಿನೀ—ಅವರೇನು ಮಾಡಿ ತೀರೀತು? ಅವರ ರಾಜ್ಯಕ್ಕೆ ಒಬ್ಬರುಬೇಕು.

ಜ್ಯೋತ್ಸ್ನಾವತಿ—ಅವರ ರಾಜ್ಯವನ್ನು ಯಾರು ಕಿತ್ತುಕೊಳ್ಳುತ್ತಿದ್ದರು? ಎರಡು ವರುಷ ನೋಡಿದ್ದರೆ ಏನು ನಷ್ಟವಾಗುತ್ತಿತ್ತು?

ಮಾತಂಗಿನೀ—ಲಾಭತಾನೇ ಏನಾಗುತಲಿತ್ತು? ಅವರ ಮನೆಗೇನೋ ಹಿಂದಿರುಗಿ ಬರುತ್ತಿರಲಿಲ್ಲ.

ಜ್ಯೋತ್ಸ್ನಾವತಿ—ಅವರು ಹಿಂದಿರುಗಿ ಬಂದಿದ್ದರು.

ಮಾತಂಗಿನೀ—ಅದರಮೇಲೆ?

ಜ್ಯೋತ್ಸ್ನಾವತಿ—ದಿವಾನನು ಮಾಡಿದ ಕೌಶಲದಿಂದ ತಂದೆ ಮಕ್ಕಳಿಗೆ ಸಂದರ್ಶನವಾಗಲಿಲ್ಲ. ಅವರು ಸ್ವಾಭಿಮಾನದಿಂದ ಹೊರಟುಹೋದರು. ಹಿಂದಿರುಗಿ ಬರಲಿಲ್ಲ. ಮಾತಂಗಿನಿಯು ಮುಂದೆ ಮತ್ತಾವ ಮಾತನ್ನೂ ಆಡಲಿಲ್ಲ.

# ಇಪ್ಪತ್ತ್ನನೆಯ ಪರಿಚ್ಛೇದ.

ಮಾರನೆಯದಿನ ಪ್ರಾತಃಕಾಲದಲ್ಲಿ, ಮಾತಂಗಿನಿಯು ಒಬ್ಬ ವೃದ್ಧಳಾದ ಪರಿಚಾರಕಳನ್ನು ಕುರಿತು, ಎಲೈ! ನನ್ನ ಚಾಕರಿಗೆ ಇಂದುಕೊನೆ–ಯಜಮಾನಿಯು ಕೇಳಿದರೆ ನಾನು ಹೊರಟುಹೋದೆನೆಂದು ಹೇಳಿಂದಳು. ವೃದ್ಧಳು, ಅದೇನೆ! ಎಲ್ಲಿಗೆ ಹೋಗುವೆ? ಎಂದು ಕೇಳಿದಳು.

ಮಾತಂಗಿನೀ– ಇಂತಹಕಡೆಗೆ ಹೋಗುವೆನೆಂದು ಹೇಳಲಾರೆನು.

ವೃದ್ಧಳು–ಏತಕ್ಕೆ ಹೋಗುವೆ?

ಮಾತಂಗಿನೀ–ಇನ್ನು ಚಾಕರಿಯನ್ನು ಮಾಡಲಾರೆನು.

ವೃದ್ಧಳು–ಏನುಮಾಡಿ ತಿನ್ನುವೆ?

ಮಾತಂಗಿನೀ–ಘಟಕಾಳ ಮಾಡುವೆನು.

ವೃದ್ಧಳು–ಇದೇನು ಮಾತು? ಸ್ವಲ್ಪ ಇದ್ದು ಹೋಗು. ಯಜಮಾನಿ ಎದ್ದಮೇಲೆ, ಅವಳಿಗೆ ಹೇಳಿಹೋಗು.

ಮಾತಂಗಿನೀ–ಅವಳಿಗೆ ಹೇಳಿ ಹೋಗುವುದಕ್ಕಾಗುವುದಿಲ್ಲ.

ವೃದ್ಧಳು–ಏತಕ್ಕೆ?

ಮಾತಂಗಿನೀ–ಅವಳು ಹೋಗುವುದಕ್ಕೆ ಅಪ್ಪಣೆ ಕೊಡಳು.

ವೃದ್ಧಳು–ಹಾಗಾದರೆ ಹೋಗಬೇಕಾದ ಕೆಲಸವೇನು?

ಮಾತಂಗಿನೀ–ನನಗೆ ಕೆಲಸವಿದೆ–ನಾನು ಹೊರಟೆ.

ಹೀಗೆ ಹೇಳಿ ಮಾತಂಗಿನಿಯು ಹೊರಟುಹೋದಳು. ವೃದ್ಧಳು ಅವಳನ್ನು ಕರೆದು, ನಿನಗೆ ಬರಬೇಕಾದ ಸಂಬಳ ಬಂತೆ? ಎಂದು ಕೇಳಿದಳು. ಮಾತಂಗಿನಿಯು ಏನೂ ಹೇಳಲಿಲ್ಲ–ವೃದ್ಧಳು ತನ್ನೊಳು ತಾನೇ, ಹೋಗಿ ಸಾಯಿ! ಹುಡುಗಿಗೆ ಹುಚ್ಚುಹಿಡಿಯಿತೆಂದಂದುಕೊಂಡಳು.

ಅಪರಾಹ್ಣದಲ್ಲಿ ಮಾತಂಗಿನಿಯು ಬ್ರಹ್ಮಚಾರಿಯನ್ನು ನೋಡುವುದಕ್ಕೆ ಅವನ ಮಂದಿರಾಭಿಮುಖವಾಗಿ ಹೊರಟಳು. ದಾರಿಯಲ್ಲಿ ಒಬ್ಬಿಬ್ಬರು ಗಂಡಸರು ಅವಳನ್ನು ನೋಡಿ ವಿಸ್ಮಿತಲೋಚನವುಳ್ಳವರಾದರು. ಆಗವಳಿಗೆ ತಾನು ಯುವತಿಯೆಂದು ಬೋಧೆಯಾಯಿತು. ಆದರೆ ಉತ್ತರಕ್ಷಣದಲ್ಲಿ ಮುಷ್ಟಿಯಿಂದ ಸೆರಗನ್ನು ಭದ್ರವಾಗಿ ಹಿಡಿದುಕೊಂಡು ತಲೆಯನ್ನು ಅಲ್ಲಾಡಿಸಿಕೊಂಡು ಸದರ್ಪದಿಂದ ಮುಂದೆ ಹೊರಟುಹೋದಳು. ಮಂದಿರದ ಮುಂದುಗಡೆ ಹೋಗಿ ಸ್ವಲ್ಪವೂ ಹಿಂದು ಮುಂದು ನೋಡದೆ ಒಳಕ್ಕೆ ಪ್ರವೇಶಮಾಡಿದಳು. ಒಳಗೆ ಯಾರೂ ಇರಲಿಲ್ಲ. ನೋಡಿ ಮಂದಿರದ ಹೊರಕ್ಕೆ ಬಂದಳು. ಬಂದವಳು ಕಾಳೀಸರೋವರದಲ್ಲಿ ಕುಳಿತುಕೊಂಡು ಬ್ರಹ್ಮಚಾರಿಯನ್ನು ಇದುರು ನೋಡುತಲಿದ್ದಳು—ಸಾಯಂಕಾಲವಾಯಿತು. ಬ್ರಹ್ಮಚಾರಿಯು ಬರಲಿಲ್ಲ—ಕ್ರಮವಾಗಿ ರಾತ್ರಿ ಬಂದು ಪ್ರಹರವಾಯಿತು. ಆದರೂ ಬ್ರಹ್ಮಚಾರಿಯು ಬರಲಿಲ್ಲ—ಮಾತಂಗಿನಿಯು ಅಂಧಕಾರವನ್ನು ಕಂಡು ಬಂದು ತಡವೆ ಮಾತ್ರ ಚಂಚಲಳಾದಳು—ಆದರೆ ಉತ್ತರಕ್ಷಣದಲ್ಲಿ ಆ ಚಾಂಚಲ್ಯವಿರಲಿಲ್ಲ. ಕಾಳೀಸರೋವರದಲ್ಲಿ ಕುಳಿತುಕೊಂಡು ಮಂದಿರಗಕಡೆ ಬ್ರಹ್ಮಚಾರಿಯನ್ನು ನಿರೀಕ್ಷಿಸಿಕೊಂಡಿದ್ದಳು. ರಾತ್ರಿ ಎರಡನೆಯ ಪ್ರಹರದಲ್ಲಿ ಬ್ರಹ್ಮಚಾರಿಯು ಮಂದಿರದಿಂದ ಹೊರಗೆ ಹೊರಟುಬಂದುದನ್ನು ಕಂಡು ಮಾತಂಗಿನಿಯು ಆಶ್ಚರ್ಯಪಟ್ಟಳು. ಆದರೆ ಅವಳು ಕೇವಲ ಆಶ್ಚರ್ಯದಿಂದಲೇ ಪರವಶಳಾಗದೆ ಕೂಡಲೆ ನಿರ್ಭಯಚಿತ್ತಳಾಗಿ ಬ್ರಹ್ಮಚಾರಿಯ ಇದುರಿಗೆ ಬಂದು ನಿಂತಳು. ಬ್ರಹ್ಮಚಾರಿಯು, ಯಾರು ? ಎಂದು ಕೇಳಿದನು. ಮಾತಂಗಿನಿಯು, ಭಿಕ್ಷುಕಳೆಂದು ಹೇಳಿದಳು.

ಬ್ರಹ್ಮಚಾರಿ—ಅಸಮಯದಲ್ಲಿ ಭಿಕ್ಷಕ್ಕೆ ಬಂದುದು ಹೇಗೆ? ನಾನೇ ಭಿಕ್ಷುಕ. ನನ್ನಲ್ಲಿ ಭಿಕ್ಷವೆಲ್ಲೀದು ?

ಮಾತಂಗಿನೀ—ತಮ್ಮಲ್ಲಿ ಭಿಕ್ಷಕ್ಕೆ ಬರಬೇಕಾದರೆ ಇದೇ ಸಮಯ.

ಬೇರೇ ಸಮಯದಲ್ಲಿ ತಾವು ಸಿಕ್ಕುವುದಿಲ್ಲ. ತಮ್ಮಲ್ಲಿ ಕೇಳುವುದು ಒಂದೇ ಭಿಕ್ಷೆ. ಒಬ್ಬನ ಪರಿಚಯವನ್ನು ಹೇಳಬೇಕು. ಇನ್ನೇನು ಹೆಚ್ಚು ಭಿಕ್ಷೆಯಿಲ್ಲ.

ಬ್ರಹ್ಮಚಾರಿ—ಯಾರ ಪರಿಚಯ ?

ಮಾತಂಗಿನೀ—ತಾವು ರಾಜಜಾಮಾತರನ್ನು ಬಲ್ಲಿರಾ ?

ಬ್ರಹ್ಮಚಾರಿ—ಇಲ್ಲ—ಆದರೆ ಆ ಪರಿಚಯದಿಂದ ನಿನಗೇನು ಪ್ರಯೋಜನ ?

ಮಾತಂಗಿನೀ—ರಾಜಜಾಮಾತರು ಇದ್ದ ಸ್ಥಳ ಯಾವದು ? ತಮಗೆ ಅದು ಗೊತ್ತೆ ?

ಬ್ರಹ್ಮಚಾರಿ—ಗೊತ್ತು—ತಕ್ಷಪುರದಲ್ಲಿ.

ಮಾತಂಗಿನೀ—ರಾಜಜಾಮಾತರ ಹೆಸರೇನು ? ಗೊತ್ತೆ ?

ಬ್ರಹ್ಮಚಾರಿ—ಗೊತ್ತು—ವಿಜಯರಾಜ—ಇನ್ನು ಮುಂದೆ ಯಾವ ಪ್ರಶ್ನೆಗೂ ಉತ್ತರವನ್ನು ಕೊಡೆನು. ಈ ಮಾತುಗಳಿಂದ ನಿನಗೇನುಪ್ರಯೋಜನ ? ಅದನ್ನು ಮೊದಲು ಹೇಳು.

ಮಾತಂಗಿನೀ—ನಾನು ವಿಜಯರಾಜನನ್ನು ಹುಡುಕಿಕೊಂಡು ಹೋಗುವೆನು. ಆದುದರಿಂದ ತಮ್ಮನ್ನು ಕೇಳುವುದಕ್ಕೆ ಬಂದೆ.

ಬ್ರಹ್ಮಚಾರಿ—ವಿಜಯರಾಜನಿಂದ ನಿನಗೆ ಆಗಬೇಕಾದುದೇನು ?

ಮಾತಂಗಿನೀ—ವಿಜಯರಾಜನು ನನ್ನ ತಾಯಿಗೆ ಬಹಳಕಾಲದಿಂದ ಸಾಲಗಾರನಾಗಿದ್ದಾನೆ. ಆ ಸಾಲವನ್ನು ಬರಮಾಡಿಕೊಳ್ಳಲು ಹೋಗುವೆನು.

ಬ್ರಹ್ಮಚಾರಿ—ನೀನು ಯಾರು ?

ಮಾತಂಗಿನೀ—ನಾನು ವಿಧವೆ—ಅನಾಥಳು.

ಬ್ರಹ್ಮಚಾರಿ—ಆದರೆ ನೀನು ಯುವತಿಯಾಗಿದ್ದೀಯೆ.

ಮಾತಂಗಿನೀ—ವೃದ್ಧಬ್ರಹ್ಮಚಾರಿಗಳಾದ ತಾವು ಅವನ್ನೆಲ್ಲಾ ನೋಡ ಕೂಡದು. ಅದು ಉಚಿತವಲ್ಲ.

ಬ್ರಹ್ಮಚಾರಿ—ಈ ಅಂಧಕಾರದಲ್ಲಿ ಯುವತಿಯಾದ ನೀನು ಒಬ್ಬಳೇ ಈ ಪ್ರಾಂತರಕ್ಕೆ ಬರುವುದು ಹೆಚ್ಚು ಅನುಚಿತವಾದುದು.

ಮಾತಂಗಿನೀ—ವಿಪದ್ಗ್ರಸ್ತರು ಅದನ್ನೆಲ್ಲಾ ವಿಚಾರಮಾಡುವುದಿಲ್ಲ. ಇತರರೂ ಆ ವಿಚಾರಮಾಡುವುದು ಅನ್ಯಾಯ.

ಬ್ರಹ್ಮಚಾರಿ—ಪುನಃ ಕೇಳುವೆನು, ಹೇಳು—ನೀನು ಯಾರು?

ಮಾತಂಗಿನೀ—ಈಗ ತಾವು ಯಾರನ್ನು ನೋಡುತ್ತೀರೋ ಅವಳೇ ನಾನು. ಇದಕ್ಕಿಂತಲೂ ಹೆಚ್ಚು ನನ್ನ ಪರಿಚಯವನ್ನು ಕೊಡಲಾರೆನು.

ಬ್ರಹ್ಮಚಾರಿ—ನಿಮ್ಮ ತಾಯಿಯು ವಿಜಯರಾಜನನ್ನು ಋಣಬದ್ಧನನ್ನಾಗಿ ಮಾಡಿರುತ್ತ ಅವಳು ಎಲ್ಲರಿಗೂ ಚೆನ್ನಾಗಿ ಗೊತ್ತಿರಬೇಕು. ನಿಮ್ಮ ತಾಯಿಯ ಪರಿಚಯವನ್ನು ಹೇಳುವುದಕ್ಕೆ ಆಕ್ಷೇಪಣೆಯೇನು?

ಮಾತಂಗಿನೀ—ನನ್ನನ್ನು ಯಾವ ಪರಿಚಯವನ್ನೂ ಕುರಿತು ಕೇಳಬೇಡಿರಿ. ನಾನು ತಮ್ಮಲ್ಲಿ ಭಕ್ತಿಯುಳ್ಳವಳಾಗಿದ್ದೇನೆ. ಅದುಕಾರಣ ತಮ್ಮಲ್ಲಿಗೆ ಬಂದಿರುವೆನು. ತಾವು ನನಗೆ ಸಹಾಯಮಾಡಬಲ್ಲಿರಿ. ಹಾಗೆ ಸಹಾಯವನ್ನು ಮಾಡುವುದು ತಮಗೆ ಧರ್ಮ. ತಕ್ಷಪುರಕ್ಕೆ ಹೋಗುವುದಕ್ಕೆ ಹಾದಿ ಯಾವದು? ಹೇಳೋಣಾಗಲಿ.

ಬ್ರಹ್ಮಚಾರಿ—ವಿಜಯರಾಜನು ಸತ್ತುಹೋಗಿ ಬಹಳ ಕಾಲವಾಯಿತು. ನೀನು ತಕ್ಷಪುರಕ್ಕೆ ಹೋಗುವುದು ವ್ಯರ್ಥ.

ಮಾತಂಗಿನೀ—ವಿಜಯರಾಜನಿಗೆ ಮತ್ತಾರು ಇರುವರು?

ಬ್ರಹ್ಮಚಾರಿ—ಒಬ್ಬ ಸಹೋದರನು ಇರುವನು.

ಮಾತಂಗಿನೀ—ತಾವು ಅವನನ್ನು ಬಲ್ಲಿರಾ? ಅವನು ಎಂತಹ ಮನುಷ್ಯ?

ಬ್ರಹ್ಮಚಾರಿ—ನಾನು ಅವನನ್ನು ಬಲ್ಲೆ. ಅವನು ಎಂತಹ ಮನುಷ್ಯನೋ ಅದನ್ನು ಹೇಳಲಾರೆ. ಈಗ ಅವನು ಯೌವನಪುರುಷ. ಯೌವನ ಪುರುಷರ ಅಥವಾ ಯುವತಿಯರ ಚರಿತ್ರೆಯನ್ನು ನಾನು ಅನುಭವದಿಂದ ಹೇಳಲಾರೆನು.

ಮಾತಂಗಿನೀ—ಅವನು ಮಾಡಿರುವ ಒಂದೆರಡು ಕೆಲಸಕಾರ್ಯಗಳನ್ನು ತಾವು ನೋಡಿರಬೇಕು. ಅದನ್ನು ಕುರಿತು ಹೇಳಿದರೆ ನಾನು ಅನುಭವ ಮಾಡಿಕೊಳ್ಳುವೆನು.

ಬ್ರಹ್ಮಚಾರಿ—ನಾನು ತಕ್ಷಪುರಕ್ಕೆ ಹೋಗಿ ಬಹಳಕಾಲವಾಯಿತು. ನಾನು ಹೋಗಿದ್ದಾಗ ನೋಡಿದ್ದುದರಲ್ಲಿ ಅವನು ಧನದ ಮದದಿಂದ ಉನ್ಮತ್ತನಾಗಿದ್ದನು. ಅವನ ದಾಂಭೀಕತೆಯು ಅತಿಶಯವಾಗಿ ತೋರಿತು. ರಾಜರನ್ನಾಗಲಿ, ಪ್ರಜೆಗಳನ್ನಾಗಲಿ, ಪಂಡಿತರನ್ನಾಗಲಿ, ಯಾರನ್ನೇ ಆಗಲಿ ಅವನು ಪುರಸ್ಕರಿಸುವುದಿಲ್ಲ. ತನ್ನ ಜನ್ಮದಾತನಾದ ಜನಕನನ್ನೇ ಲಕ್ಷ್ಯಮಾಡುವುದಿಲ್ಲ. ಒಂದುದಿನ ತಂದೆಯು ಕುಳಿತಿದ್ದ ಕಡೆಗೆ ಹೋಗಿ ಅವನನ್ನು ಕಾಲಿನಿಂದ ಒದ್ದನು. ತಂದೆಯನ್ನು ಚಾಕರಿಯಿಂದ ಕಿತ್ತುಹಾಕಿದನು.

ಮಾತಂಗಿನೀ—ತಂದೆಯನ್ನು ಚಾಕರಿಯಿಂದ ತಪ್ಪಿಸಿದ್ದು ಹೇಗೆ? ತಂದೆಯೇ ರಾಜನಾಗಿದ್ದನಷ್ಟೆ? ರಾಜನನ್ನು ಚಾಕರಿಯಿಂದ ತಪ್ಪಿಸಿದ್ದು ಹೇಗೆ?

ಬ್ರಹ್ಮಚಾರಿ—ಅವನ ಜನಕತಂದೆಯು ರಾಜನಾಗಿರಲಿಲ್ಲ. ಅವನು ರಾಜನ ದಿವಾನನಾಗಿದ್ದನು. ತನ್ನ ಮಗನನ್ನೇ ರಾಜನಿಗೆ ದತ್ತುಕೊಟ್ಟನು. ದತ್ತು ಮಗನಾದಮೇಲೆ ಜನಕತಂದೆಯ ವಿಚಾರದಲ್ಲಿ ಕೃತಘ್ನನಾದನು. ಅವನಿಗೆ ರಾಜ್ಯಬಂದಕೂಡಲೆ ಜನಕತಂದೆಯನ್ನು ದಿವಾನಗಿರಿಯಿಂದ ತಪ್ಪಿಸಿದನು.

ಮಾತಂಗಿನೀ—ಏತಕ್ಕೆ ಹಾಗೆಮಾಡಿದ? ಅದೇನಾದರೂ ಗೊತ್ತುಂಟೆ?

ಬ್ರಹ್ಮಚಾರಿ—ಅದು ನನಗೆ ಚೆನ್ನಾಗಿ ಗೊತ್ತಿಲ್ಲ. ಕಾಲಮಹಾತ್ಮ್ಯ ದಿಂದ ಇದೆಲ್ಲಾ ನಡೆಯುವುದು.

ಮಾತಂಗಿನೀ—ಈಗ ದಿವಾನನು ಯಾರು ?

ಬ್ರಹ್ಮಚಾರಿ—ಅದನ್ನು ಹೇಳಲಾರೆ. ನನಗೆ ತಿಳಿಯದು. ಆದರೆ ನಾನು ಕೇಳಿರುವುದರಲ್ಲಿ ಈಗಿನ ರಾಜನು ವಿಜಯರಾಜನ ಕಾಲದಲ್ಲಿ ಇದ್ದ ನೌಕರಮಾನೇರನ್ನೆಲ್ಲಾ ಕರೆಯಿಸಿ ಅವರಿಗೆ ಮೊದಲಿದ್ದ ಕೆಲಸಗಳನ್ನು ಅವ ರವರಿಗೆ ಕೊಟ್ಟನು. ತನ್ನ ಜನಕತಂದೆಯು ಇಟ್ಟಿದ್ದ ಜನರನ್ನೆಲ್ಲಾ ಕಿತ್ತು ಹಾಕಿರುವನು.

ಮಾತಂಗಿನೀ—ಇದೆರಡು ಒಳ್ಳೇ ಶುಭಸಮಾಚಾರ--ಈಗ ತಕ್ಷಪು ರಕ್ಕೆ ಹೋಗುವ ದಾರಿಯನ್ನು ಹೇಳಿ ತೋರಿಸೋಣಾಗಲಿ. ನಾನು ಹೋಗಿ ನನ್ನ ತಾಯಿಯ ಸಾಲವನ್ನು ಬರಮಾಡಿಕೊಳ್ಳುವೆನು.

ಬ್ರಹ್ಮಚಾರಿ—ಈ ಸಮಾಚಾರಗಳಿಂದ ನೀನು ತಿಳಿದುಕೊಂಡ ದುದೇನು ? 12362

ಮಾತಂಗಿನೀ—ನಾನು ತಿಳಿದುದೇನೆಂದರೆ :—ವಿಜಯರಾಜನ ತಮ್ಮನು ಬುದ್ಧಿವಂತನೆಂತಲೂ, ಧರ್ಮಶೀಲನೆಂತಲೂ ತಿಳಿದೆನು. ಜನಕನ ಕಠತೆ ಯನ್ನು ಚೆನ್ನಾಗಿ ತಿಳಿದುಕೊಂಡವನಾಗಿರುವನು.

ಬ್ರಹ್ಮಚಾರಿ—ಅದೇನೂ ನನಗೆ ಗೊತ್ತಾಗಲಿಲ್ಲ—ಒಳ್ಳೇದು, ನೀನು ತಕ್ಷಪುರಕ್ಕೆ ಹೋಗುವಿಯಾ? ನಿನ್ನಸಂಗಡ ಮತ್ತಾರು ಹೋಗುವರು ?

ಮಾತಂಗಿನೀ—ತಾವು ಬರಬೇಕು.

ಬ್ರಹ್ಮಚಾರಿಯ ಕಣ್ಣುಗಳು ವಿಸ್ಫಾರಿತವಾಗಿ ಅವನು ಮಾತಂಗಿನಿ ಯನ್ನು ನೋಡುತ್ತಿದ್ದನು. ಆದರೆ ಅಂಧಕಾರದಲ್ಲಿ ಚೆನ್ನಾಗಿ ಕಾಣಿಸಲಿಲ್ಲ. ಮಾತಂಗಿನಿಯು ಮುಂದೆ ಮತ್ತಾವ ಉತ್ತರವನ್ನು ನಿರೀಕ್ಷದೆ ಒಂದು ಮು ಹೂರ್ತದಲ್ಲಿ ಮಂದಿರಕ್ಕೆ ಹೋಗಿ ಕಮಂಡಲುವನ್ನು ತಂದು ಬ್ರಹ್ಮಚಾ

ರಿಯ ಕೈಯಲ್ಲಿ ಕೊಟ್ಟಳು. ಬ್ರಹ್ಮಚಾರಿಯು, ಇದೇನೆಂದು ಕೇಳಿದನು.

ಮಾತಂಗಿನೀ—ದಯಮಾಡಿಸೋಣಾಗಲಿ.

ಬ್ರಹ್ಮಚಾರಿಯು ಅವಾಕ್ಕಾಗಿ ಮಾತಂಗಿನಿಯನ್ನು ನೋಡುತ್ತ ನಿಂತನು. ಮಾತಂಗಿನಿಯು, ಏನು ಯೋಚಿಸೋಣವಾಗಿದೆ? ತಾವು ಬಂದೇ ಬರಬೇಕು. ನನ್ನ ಸಂಗಡ ಬರುವುದಕ್ಕೆ ನನಗೆ ಯಾರೂ ಇಲ್ಲವೆಂದು ಮೊದಲೇ ಹೇಳಿರುವೆನು. ನಾನು ಯುವತಿ—ಇತರರು ನನ್ನ ಸಂಗಡ ಬಂದರೆ ಚೆನ್ನಾಗಿರುವುದಿಲ್ಲ. ಆದುಕಾರಣ ತಾವೇ ಬರಬೇಕು. ತಾವು ಇಲ್ಲಿರುವುದರಿಂದ ತಮಗೆ ಆಗುವ ಲಾಭವೇನು? ಯಾರಿಗೆ ಉಪಕಾರವಾಡಬಲ್ಲಿರಿ? ನನ್ನ ಜತೇಲಿ ಬಂದರೆ ನನಗೆ ಉಪಕಾರವಾಗುವುದು. ಆದುದರಿಂದ ದಯಮಾಡಿಸೋಣಾಗಲಿ ಎಂದಳು.

ಬ್ರಹ್ಮಚಾರಿ—ನಿನ್ನ ಹೆಸರೇನು?

ಮಾತಂಗಿನೀ—ನನ್ನ ಹೆಸರು ಮಾತಂಗಿನೀ.

ಬ್ರಹ್ಮಚಾರಿ—ನಿನಗೆ ಬಹಳ ಧೈರ್ಯ ಮತ್ತು ಸಾಹಸ.

ಮಾತಂಗಿನೀ— ದೊಡ್ಡ ಸಾಹಸವಿಲ್ಲದಿದ್ದರೆ ದೊಡ್ಡ ಸಹಾಯವನ್ನು ಹೊಂದುತ್ತಿರಲಿಲ್ಲ.

ಬ್ರಹ್ಮಚಾರಿ—ನಿನ್ನಂತಹ ಹೆಂಗಸನ್ನು ನಾನು ಯಾವಾಗಲೂ ಎಲ್ಲಿಯೂ ನೋಡಲಿಲ್ಲ. ನೀನು ತಕ್ಷಪುರಕ್ಕೆ ಹೋಗಿ ಏನು ಮಾಡುವಿಯೋ ಆದನ್ನು ನೋಡುವುದಕ್ಕೆ ಆಶೆಯುಳ್ಳವನಾಗಿದ್ದೇನೆ.

ಮಾತಂಗಿನೀ—ಹಾಗಾದರೆ ದಯಮಾಡಿಸಿ.

ಬ್ರಹ್ಮಚಾರಿ—ಇಂದು ಬೇಡ.

ಮಾತಂಗಿನೀ—ಇಂದೇ ಹೊರಡಬೇಕು. ವಿಳಂಬವಾದರೆ ತಾವು ಹೊರಡಲಾರಿರಿ. ಇಂದು ಹೊರಟರೆ ಸ್ವಲ್ಪದೂರ ಹೋಗಿ ಅಲ್ಲಿ ಎಲ್ಲಾದರೂ ವಿಶ್ರಮಿಸಿಕೊಳ್ಳಬಹುದು.

ಬ್ರಹ್ಮಚಾರಿಯು ನಕ್ಕು, ಒಳ್ಳೆಯದು, ನಡೆ, ಇದರಮೇಲೆ ಇನ್ನೇನಾಗುವುದೋ ನೋಡೋಣ.

ಅನಂತರ ಇಬ್ಬರೂ ತಕ್ಷಪುರಾಭಿಮುಖವಾಗಿ ಯಾತ್ರೆ ಮಾಡಿದರು.



## ಇಪ್ಪತ್ತೊಂದನೆಯ ಪರಿಚ್ಛೇದ.

ಯಾವದಿನ ಅಪರಾಹ್ಣದಲ್ಲಿ ಮಾತಂಗಿನಿಯು ಬ್ರಹ್ಮಚಾರಿಯನ್ನು ನೋಡುವುದಕ್ಕೆ ಹೋಗುತ್ತಿದ್ದಳೋ, ಆ ಅಪರಾಹ್ಣದಲ್ಲಿ ಪುಟ್ಟೊತಾಯಿಯ ನೆರೆಯುವಳಾದ ಪದ್ಮಳು, ಕೇಶವಿನ್ಯಾಸವಾದಮೇಲೆ ಕೆಂಪುಸೀರೆಯನ್ನುಟ್ಟುಕೊಂಡು ಮುಖದಲ್ಲಿ ಕುಂಕುಮವನ್ನು ಹಚ್ಚಿಕೊಂಡು ಪುಷ್ಕರಿಣಿಯ ಕಟ್ಟೆಯಮೇಲೆ ನಿಂತಿದ್ದಳು. ಗವಾಕ್ಷದಲ್ಲಿ ನಿಂತು ನೋಡುತ್ತಿದ್ದ ಪುಟ್ಟೊತಾಯಿಯನ್ನು ಕಂಡು ಪದ್ಮಳು, ಎಲೈ ಕೆಟ್ಟಮೋರೆಯುವಳೆ! ಬಂದು ಮಾತು ಹೇಳುವೆನು, ಬಂದು ಕೇಳಹೋಗು ಎಂದಳು. ಈ ಆಹ್ವಾನದಿಂದ ಪುಟ್ಟೊ ತಾಯಿಯು ಪರಮಾಪ್ಯಾಯಿತಳಾಗಿ ನಗುಮುಖಿಯಾಗಿ ಪದ್ಮಳು ಇದ್ದಲ್ಲಿಗೆ ಹೋದಳು. ಬಹಳದಿನಗಳಮೇಲೆ ಪದ್ಮಳ ಸಂದರ್ಶನವಾಯಿತು. ಪುಟ್ಟೊ ತಾಯಿಯು ಮನಸ್ಸಿನಲ್ಲಿ, ಪದ್ಮೆಯು ನನ್ನನ್ನು ಕಂಡರೆ ಎಷ್ಟೋ ಚೆನ್ನಾಗಿದ್ದಳು. ಒಳ್ಳೆಯ ಮಾತನಾಡುವುಳು. ಅದಕ್ಕೋಸ್ಕರ ಇಂದು ಒಬ್ಬಳೇ ಬಂದು ಕರೆದಳು.–ನನಗೆ ಇಷ್ಟು ವಸ್ತ್ರಾಭರಣಗಳಿವೆ, ನನಗೆ ಏತಕ್ಕೆ ಇಷ್ಟು, ಇದರಲ್ಲಿ ಕೆಲವನ್ನು ಪದ್ಮೆಗೆ ಕೊಟ್ಟರೆ ಅವಳು ಬಹಳ ಚೆನ್ನಾಗಿ ಕಾಣುವುಳು. ಈಗ ಅವಳನ್ನು ಕರೆತಂದು ಇದರಲ್ಲಿ ಅವಳಿಗೆ ಕೆಲವನ್ನು ಕೊಡುವೆನು, ಏಕಾಂತವಾಗಿ ಕೊಡಲೇತಕ್ಕೆ?

ನಾನು ಕೊಟ್ಟರೆ ಯಾರುತಾನೇ ಕೋಪಿಸಿಕೊಂಡಾರು. ಅವರು (ಗಂಡ) ದರಿದ್ರರಾಗಿದ್ದರು. ಆದರೆ ಈಗ ಐಶ್ವರ್ಯದಕಡೆ ತಿರಿಗಿಕೂಡ ನೋಡುವುದಿಲ್ಲ. ಹೀಗಿರುವಾಗ ಅವರುತಾನೇ ತಮ್ಮ ತಂಗಿಗೆ ಕೊಟ್ಟದ್ದಕ್ಕೆ ಏತಕ್ಕೆ ಕೋಪ ಮಾಡುವರು? ವಶೀಕರಿಣಿಯು ಏನು ಮಾಡಬಲ್ಲಳು? ಅದರಿಂದ ನಷ್ಟ ವೇನು? ರಾಣಿಗೆ ಹೋಗಿ ಹೇಳುವಳು. ಹೇಳಿದರೆ ಹೇಳಕೊಳ್ಳಲಿ. ಹೇಳು ವೆನೆಂದರೆ ಬೇಡವೆಂದು ಅವಳ ಗಲ್ಲವನ್ನು ಪಿಡಿದು ಬೇಡಿಕೊಳ್ಳುವೆ ನೆಂದು ಮುಂತಾಗಿ ಭಾವಿಸಿಕೊಂಡಳು.

ಹೀಗೆ ಯೋಚಿಸಿಕೊಳ್ಳುತ್ತಾ ಪುಟ್ಟುವಿನ ತಾಯಿಯು ಪುಷ್ಕರಿಣಿಯ ಹತ್ತಿರ ಹೋದಳು. ಪದ್ಮೆಯು, ಏನೇ, ಹಾಳಾದವಳೆ! ಮುದಿರಾಜನನ್ನು ಮೆಚ್ಚಿಸಿದೆ, ಹೇಗೆ? ಎಂದಳು.

ಪುಟ್ಟೂ ತಾಯಿ—ನಾನು ಮೆಚ್ಚಿಸಲಿಲ್ಲ, ಅಕ್ಕ! ಪುಟ್ಟು ಮೆಚ್ಚುವ ಹಾಗೆ ಮಾಡಿದಳು.

ಪದ್ಮೆ—ಅದು ಹೇಗೆ? ಊರಿನವರೆಲ್ಲರೂ ಮಗುವಿನ ನೆವದಮೇಲೆ ಮೈ ಬೆಚ್ಚಗೆ ಮಾಡಿಕೊಂಡಳೆಂದು ಹೇಳುತ್ತಾರೆ. ಕಳ್ಳನಿಗೆ ಬಂದು ಪಿಳ್ಳೆ ನೆವ ಎಂದು ಹೇಳುತ್ತಾರೆ. ಅಯ್ಯೋ! ಹಾಳಾದವಳೆ! ನೀನು ಸಾಯುವು ದಕ್ಕೆ ಬೇರೆ ಸ್ಥಳವಿರಲಿಲ್ಲವೆ? ಹಾಗಿಲ್ಲದಿದ್ದರೆ, ಈ ಧನ ದೌಲತ್ತೆಲ್ಲಾ ಎಲ್ಲಿಂದ ನಿನಗೆ ಬರುತಲಿತ್ತು? ನಿನ್ನ ಬಡವೆ ವಸ್ತುಗಳನ್ನು ಸುಟ್ಟರು. ನಿನ್ನ ಸೀರೆ ಸುಟ್ಟರು. ನಿನ್ನ ತೊಡಿಗೆ ಉಡುಗೆಗಳಗೆಲ್ಲಾ ಬೆಂಕಿ ಹಾಕಿದರು. ನಿನ್ನ ಅದೃಷ್ಟಕ್ಕೆ ಊರಿನವರೆಲ್ಲಾ ಬಡಿದುಕೊಂಡರೂ ಸಾಲದು.

ಪುಟ್ಟೂ ತಾಯಿ—ಏನು ಅಕ್ಕ! ನಾನೇನು ಮಾಡಿದೆ?

ಪದ್ಮೆ—ಆಹಾ! ಏನೂ ಅರಿಯೆಯಲ್ಲವೆ? ಬೆಕ್ಕು ಕಣ್ಣು ಮುಚ್ಚಿ ಕೊಂಡು ಹಾಲು ಕುಡಿದರೆ ಯಾರೂ ನೋಡುವುದಿಲ್ಲವೊ! ರಾಜನು ನಿನ್ನ ನ್ನು ಇಷ್ಟು ಪ್ರೀತಿಸಬೇಕಾದುದು ಏತಕ್ಕೆ? ಇಷ್ಟು ಬಡವೆವಸ್ತ್ರಗಳ

ನ್ನು ಏತಕ್ಕೆ ಕೊಟ್ಟ? ಮಿಕ್ಕವರಿಗೆ ಯಾರಿಗೂ ಕೊಡಲಿಲ್ಲವೇತಕ್ಕೆ?

ಪುಟ್ಟ್ಬ ತಾಯಿ–ನಾನು ಪುಟ್ಟುವಿನ ತಾಯಿಯೆಂದು ರಾಜನು ಇದನ್ನೆಲ್ಲಾ ಕೊಟ್ಟ. ಅವನು ಪುಟ್ಟುವನ್ನು ಬಹಳ ಪ್ರೀತಿಸುತ್ತಾನೆ.

ಪದ್ಮೆ–ಬಿಳ್ಳೆಯದು–ರಾಜನು ಮತ್ತಾರ ಪುಟ್ಟುವನ್ನೂ ಪ್ರೀತಿಸುವದಿಲ್ಲವೇತಕ್ಕೆ? ಹೆಣ್ಣುಮಕ್ಕಳು ಎಷ್ಟೋ ಅವೆ. ಇದನ್ನೆಲ್ಲಾ ಮುಚ್ಚಿಟ್ಟುಕೊಂಡರೆ ಆದೀತೆ? ಗೊತ್ತಾಗದೆ ಉಳಿಯುವುದೆ?

ಪುಟ್ಟ್ಬ ತಾಯಿ–ಅಕ್ಕ! ಹಾಗಾದರೆ ನೀನೇ ಹೇಳು, ರಾಜನು ನನ್ನನ್ನು ಏತಕ್ಕೆ ಪ್ರೀತಿಸಿದನು?

ಪದ್ಮೆ–ನಾನು ಸತ್ತೆ! ನಿನಗೆ ಏನೇನೂ ಗೊತ್ತಿಲ್ಲ! ಪಾಪ, ಮಗು!

ಪುಟ್ಟ್ಬ ತಾಯಿ–ನಾನು ಸತ್ಯವಾಗಿ ಹೇಳುತ್ತೇನೆ–ನನಗೇನೂಗೊತ್ತಿಲ್ಲ,

ಪದ್ಮೆ–ಅಣ್ಣ ಬಂದು ನಿನ್ನ ಕುತ್ತಿಗೆಗೆ ಚಾರಿಯನ್ನು ಹಾಕಿದಾಗ, ನನಗೆ ಏನೂ ಗೊತ್ತಿಲ್ಲವೆಂದು ಹೇಳು.

ಪುಟ್ಟ್ಬ ತಾಯಿ–ಹಾಗಾದರೆ ಏನಾಗಿದೆ, ಹೇಳಬಾರದೆ? ನಿನ್ನ ಕಾಲು ಹಿಡಿದುಕೊಳ್ಳುತ್ತೇನೆ–ಅಕ್ಕ! ನನಗೆ ಹೇಳು. ಸತ್ಯವಾಗಿಯೂ ನಾನೇನೂ ಅರಿಯೆ. ಈಗ ನನ್ನ ಹೊಟ್ಟೆಯಲ್ಲಿ ಏನಾಗಿದೆಯೆಂದರೆ—

ಪದ್ಮೆ–ಹಾಗಾದರೆ ಹೇಳುತ್ತೇನೆ, ಕೇಳು. ಗುಟ್ಟಾಗಿ ಹೇಳುತ್ತೇನೆ. ಹೇಳದಿದ್ದರೆ ನಿನಗೆ ಗೊತ್ತಾಗುವುದಿಲ್ಲ.

ಹೀಗೆಂದು ಹೇಳಿ, ಪದ್ಮೆಯು ಪುಟ್ಟುವಿನ ತಾಯಿಯ ಕಿವಿಯಲ್ಲಿ ಬಂದೆರಡು ಮಾತುಗಳನ್ನು ಉಸಿರಿದಳು.

ಪುಟ್ಟುವಿನ ತಾಯಿಯು ಕೇಳಿ ಅವಾಕ್ಕಾದಳು. ಪದ್ಮೆಯನ್ನು ದೃಷ್ಟಿಸಿ ನೋಡುತ್ತ ನಿಂತಳು. ಪದ್ಮೆಯು ಹೊರಟುಹೋಗುವಾಗ, ಈಗ ತಿಳಿದುಕೊ, ಒಡವೆಗಳನ್ನು ತೊಡುವುದು ಎಷ್ಟು ಸುಖವಾದುದೆಂದು ಗೊತ್ತಾಯಿತೆ? ಎಂದಳು

ಪದ್ಮೆಯು ಹೊರಟುಹೋದಳು. ಮಾಧವೀಲತೆಯ ಮಾತೆಯು ಬಹಳಹೊತ್ತು ಪುಷ್ಕರಿಣಿಯ ಹತ್ತಿರವೇ ನಿಂತಿದ್ದಳು. ಒಂದು ಜಲಪುಷ್ಪದ ಮೇಲೆ ಅವಳ ದೃಷ್ಟಿಯು ಬಿದ್ದಿತ್ತು. ಆದರೆ ಅದನ್ನು ನೋಡುತಲಿದ್ದಳೋ ಅಥವಾ ಇಲ್ಲವೋ, ಸಂದೇಹ. ಸಾಯಂಕಾಲದಲ್ಲಿ ವಶೀಕರಿಣಿಯು ಬಂದು ಕರೆದಳು. ಮಾಧವಿಯ ಮಾತೆಯು ಏನೂ ಹೇಳದೆ ಅವಳ ಜತೆಯಲ್ಲಿ ಮನೆಗೆ ಹೋದಳು. ಬಾಗಿಲನ್ನು ಹಾಕಿಕೊಂಡು ಒಬ್ಬಳೇ ಪದ್ಮೆ ಹೇಳಿದ ಮಾತನ್ನು ಕುರಿತು ಆಲೋಚಿಸುತಲಿದ್ದಳು. ಮೊದಲು ಮರಣವೇ ಒಳ್ಳೆಯದೆಂದು ಸ್ಥಿರಮಾಡಿಕೊಂಡಳು. ಆದರೆ ತಾನು ಸತ್ತರೆ ಪುಟ್ಟನಿಗೆ ಗತಿಯಿಲ್ಲದೆ ಹೋಗುವುದೆಂದು ಜ್ಞಾಪಿಸಿಕೊಂಡು ಮರಣೇಚ್ಛೆಯನ್ನು ತ್ಯಜಿಸಿ ಬೆಳಗ್ಗೆ ಅರುಣೋದಯಕ್ಕೆ ಮುಂಚೆ ಪುಟ್ಟನನ್ನು ಎತ್ತಿಕೊಂಡು ಹೊರಟುಹೋಗಬೇಕೆಂದು ಸ್ಥಿರಮಾಡಿಕೊಂಡಳು.

ಆ ರಾತ್ರಿ ಪುಟ್ಟುವಿನತಾಯಿಯು ಬಹಳಹೊತ್ತು ಮಲಗಿದ್ದ ತನ್ನ ಪತಿಯ ಪಾದಸೇವೆಯನ್ನು ಮಾಡಿದಳು. ಅನಂತರ ಆಭರಣಗಳನ್ನೆಲ್ಲಾ ತನ್ನ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಿ ಬೀಗದ ಕೈಯನ್ನು ರಾಮಸೇವಕನ ಜನಿವಾರಕ್ಕೆ ಕಟ್ಟಿದಳು. ತನ್ನ ಸಂಗಡ ಏನು ತೆಗೆದುಕೊಂಡು ಹೋಗಬೇಕೋ ಅದನ್ನು ಆಲೋಚಿಸಿ, ಕಡೆಗೆ ಪುಟ್ಟುವಿನ ಜಡೆಹುವ್ವನ್ನು ಮಾತ್ರ ತೆಗೆದುಕೊಂಡು ಅದನ್ನು ತನ್ನ ಸೀರೆಯ ಸೆರಗಿನಲ್ಲಿ ಭದ್ರವಾಗಿ ಕಟ್ಟಿಕೊಂಡಳು. ಗಂಡನ ಹಾವಿಗೆ ಮಂಚದ ಹತ್ತಿರ ಇದ್ದುದನ್ನು ಚನ್ನಾಗಿ ಒರಸಿ ಯಥಾಸ್ಥಾನದಲ್ಲಿಟ್ಟಳು. ಅನಂತರ ದೀಪವನ್ನು ನೊಂದಿಸಿ ಶಯನ ಮಾಡಿದಳು. ನಿದ್ರೆ ಬರಲಿಲ್ಲ. ಬಿರುಗಾಳಿಯಿಂದ ಪೀಡಿತವಾದ ತೃಣದಹಾಗೆ ಪುಟ್ಟುವಿನ ತಾಯಿಯ ಮನಸ್ಸು ಥರಥರ ಕಂಪಿತವಾಗುತಲಿತ್ತು. ಬಿರುಗಾಳಿಯ ವೇಗದಿಂದ ಮಹಾತರುಗಳು ಉನ್ಮೂಲಿತವಾದರೂ ಸಾಮಾನ್ಯವಾದ ತೃಣದ ಮೇಲೆ ಚಂಡಮಾರುತದ ವೇಗವು ನಿಷ್ಪ್ರಯೋಜನ. ಅದರಿಂದ ತೃಣವು ಉನ್ಮೂಲಿತವಾ

ಗುವುದಿಲ್ಲ. ಸಾಯುವುದಿಲ್ಲ. ಅನವರತ ಧೂಳಿಯಲ್ಲಿ ಲುಂಠಿತವಾಗುತಲಿ ರುವುದು. ಪುಟ್ಟುವಿನ ತಾಯಿಯ ದಶೆಯೂ ಹಾಗಾಗಿತ್ತು.

## ಇಪ್ಪತ್ತೆರಡನೆಯ ಪರಿಚ್ಛೇದ.

ರಾತ್ರಿ ಮುಗಿಯುತ್ತ ಬಂತು. ಪ್ರಯಾಣಮಾಡುವ ಹೊತ್ತಾಯಿ ತೆಂದು ತಿಳಿದು ಪುಟ್ಟುವಿನ ತಾಯಿಯು ಹಾಸಿಗೆಯನ್ನು ಬಿಟ್ಟೆದ್ದಳು. ಗಂಡ ನಿಗೆ ಪ್ರಣಾಮ ಮಾಡುವುದಕ್ಕೋಸ್ಕರ ಮೆಲ್ಲಮೆಲ್ಲಗೆ ಅವನ ಮಂಚದ ಹತ್ತಿರ ಹೋದಳು. ಮೆಲ್ಲಮೆಲ್ಲಗೆ ರಾಮಸೇವಕನ ಪಾದಗಳ ಮೇಲೆ ತಲೆ ಯನ್ನಿಟ್ಟಳು. ಆಗ ಕಣ್ಣೀರು ತುಂಬಿತು. ಅವಳು ನಿಶ್ಶಬ್ದವಾಗಿ ಅಳ ಲಾರಂಭಿಸಿದಳು. ಅನಂತರ ಗಂಡನ ಪಾದಗಳ ಕಡೆ ನಿಂತು ಕಣ್ಣೀರೊರೆ ಸಿಕೊಂಡಳು. ಈ ಜನ್ಮದಲ್ಲಿ ಕಡೆಗೆ ನೋಡಿ ಬಿಟ್ಟು ಹೋಗಬೇಕಾದರೆ ಒಂದು ಸಲ ಗಂಡನನ್ನು ಕಣ್ಣು ತುಂಬ ನೋಡಿ ಹೋಗದಿರುವುದಕ್ಕಾದೀತೆ? ಆದುದರಿಂದ ಪುಟ್ಟುವಿನ ತಾಯಿಯು ದೀಪವನ್ನು ಹಚ್ಚಿಸಿದಳು. ಆ ದೀ ಪದ ಬೆಳಕಿನಲ್ಲಿ ನೋಡಿದಳು. ಆಗ ನಿದ್ದೆ ಹೋಗುತಲಿದ್ದ ಸ್ವಾಮಿಯ ಮುಖವು ಮತ್ತಷ್ಟು ಸ್ನೇಹಪೂರ್ಣವಾದುದಾಗಿ ಕಂಡು ಬಂದು ಅವಳ ಕಣ್ಣುಗಳಲ್ಲಿ ನೀರಿನ ವೇಗವು ಹೆಚ್ಚಾಯಿತು. ರಾಮಸೇವಕನನ್ನು ಪುಟ್ಟು ವಿನ ತಾಯಿಯು ನಿದ್ರಿತನಾಗಿದ್ದಾಗ ನಿತ್ಯವೂ ನೋಡುತ್ತಿದ್ದಳು. ಆದರೆ ಅವನ ಮೂರ್ತಿಯು ಯಾವಾಗಲೂ ಹೀಗಿರಲಿಲ್ಲ. ಕಣ್ಣೊರೆಸಿಕೊಂಡು ಪುಟ್ಟುವಿನ ತಾಯಿಯು ರಾಮಸೇವಕನ ಮುಖವನ್ನು ದೃಷ್ಟಿಸಿ ನೋಡು ತ್ತಿದ್ದಳು. ಬಾಲ್ಯಕಾಲದಿಂದಲೂ ಪುಟ್ಟುವಿನ ತಾಯಿಯನ್ನು ರಾಮಸೇವ ಕನು ಎಷ್ಟು ಆದರ ಮಾಡುತಲಿದ್ದನೋ ಎಷ್ಟು ಪ್ರೀತಿಸುತಲಿದ್ದನೋ ಆ ಆದರ, ಆ ಸ್ನೇಹ, ಆ ಮಮತೆ, ಅವೆಲ್ಲಾ ಇಂದು ಏಕತ್ರಿತವಾಗಿರುವ ಹಾಗೆ ಕಂಡು ಬಂತು. ಪುಟ್ಟುವಿನ ತಾಯಿಯು ಸಜಲನಯನೆಯಾಗಿ ಆ

ಪ್ರೇಮಮಯವಾದ ಮುಖವನ್ನು ನೋಡುತ್ತಿದ್ದಳು. ಪುನಃ ನೋಡಿ ದಳು. ನಿದ್ರಿತನಾದ ಸ್ವಾಮಿಯು ನಿಸ್ಸಹಾಯಕನಾಗಿ ಮಲಗಿದ್ದಾನೆ. ಪುಟ್ಟು ವಿನ ತಾಯಿಯು ಹೊರಟು ಹೋಗಲಾರದೆ ಹೋದಳು. ದೀಪವನ್ನು ಅಳ ಸಿದಳು. ಅಲ್ಲಿಂದ ಹೋಗಿ ಸ್ವಸ್ಥಾನದಲ್ಲಿ ಮಲಗಿದಳು. ಪ್ರದೀಪನಿರ್ವಾ ಣದೊಂದಿಗೆ ಗೃಹಮಾಯೆಯು ಸ್ವಲ್ಪಮಟ್ಟಿಗೆ ಅಂಧಕಾರಾವೃತವಾಯಿತು. ಅನಂತರ ಕ್ರಮವಾಗಿ ಪದ್ಮೆಯ ಜ್ಞಾಪಕ ಬಂತು. ಸ್ಮರಣ ಮಾತ್ರದಲ್ಲಿ ಕಳಂಕಾಪವಾದವು ವೈದ್ಯುತಾಗ್ನಿಯ ಹಾಗೆ ಪುಟ್ಟುವಿನ ತಾಯಿಯ ಹೃದ ಯವನ್ನು ಸುಡಲಾರಂಭಿಸಿತು. ಇನ್ನು ಶಯನ ಮಾಡಲಾರದೆ ಹೋದಳು. ಬೆಳಗಾಗುತ್ತಲೇ ಸ್ವಾಮಿಯು ಈ ಕಳಂಕಾಪವಾದವನ್ನು ಆವಶ್ಯಕವಾಗಿ ಕೇಳುವನೆಂದು ಮನಸ್ಸಿಗೆ ಹೊಳೆಯುತ್ತಲೇ ಮನೆಯಲ್ಲಿರಲಾರದೆ ಹೋದ ಳು. ಪುಟ್ಟುವಿನ ತಾಯಿಯು ಪುಟ್ಟುವನ್ನು ಕಂಕುಳಲ್ಲೆತ್ತಿಕೊಂಡು ತತ್ಕ್ಷ ಣದಲ್ಲಿ ಹೊರಗೆ ಹೊರಟಳು. ದೇವರ ಮನೆಯ ಬಾಗಿಲಲ್ಲಿ ನಿಂತುಕೊಂಡು ಗೃಹದೇವತೆಯಾದ ಸಾಲಗ್ರಾಮವನ್ನುದ್ದೇಶಿಸಿ ಪ್ರಣಾಮವನ್ನು ಮಾಡಿ ಮನಸ್ಸಿನಲ್ಲಿ, ನೋಡು, ದೇವರೆ! ವೃದ್ಧಳಾದ ಅತ್ತೆಯು ಮನೆಯಲ್ಲಿರುವಳು. ಆಕೆಗೆ ಏನೂ ಆಲಸ್ಯವಾಗದಹಾಗೆ ನೋಡಿಕೊ. ಮತ್ತು ನಿನಗೆ ನಿತ್ಯವೂ ಯಾರು ಪೂಜೆಯನ್ನು ಮಾಡುವರೋ ಅವರಿಗೆ ಯಾವ ವಿಪತ್ತೂ ಉಂಟಾ ಗದಹಾಗೆ ನೋಡಿಕೊ, ಎಂದು ಹೇಳಿ ಪುನಃ ನಮಸ್ಕಾರವನ್ನು ಮಾಡಿದಳು. ಅನಂತರ, ವೃದ್ಧಳಾದ ಅತ್ತೆಯು ಮಲಗಿದ್ದ ಕೊಠಡಿಯ ಬಾಗಿಲಿಗೆ ಹೋಗಿ, ತಾಯಿ! ಆಶೀರ್ವಾದ ಮಾಡು, ಮಾರ್ಗದಲ್ಲಿ ಮಧ್ಯೆ ಪುಟ್ಟುವಿಗೆ ಏನೊಂ ದು ವಿಪತ್ತುಂಟಾಗದಿರಲೆಂದು ಆಶೀರ್ವಾದವನ್ನು ಮಾಡು, ಎಂದು ಹೇಳಿ ಕೊಂಡು ಸೆರಗಿನಿಂದ ಕಣ್ಣೀರನ್ನೊರಸಿಕೊಳ್ಳುತ್ತ ಬಂದೆರಡು ಹೆಜ್ಜೆಗಳ ನ್ನಿಟ್ಟಳು. ಹೋಗುಹೋಗುತ್ತ ಸ್ವಾಮಿಯ ಕೊಠಡಿಯ ಬಾಗಿಲಿನಕಡೆ ತಿರುಗಿ ನೋಡಿದಳು. ನೋಡುತ್ತಲೇ ಸ್ವಾಮಿಯ ನಿಸ್ಸಹಾಯಕವಾದ ಮೂ

ರ್ತಿಯು ಮನಸ್ಸಿಗೆ ಹೊಳೆಯಿತು. ಇನ್ನೊಂದುಸಲ ಅವನನ್ನು ನೋಡುವ
ದಕ್ಕೆ ತಿರುಗಿದಳು. ಆದರೆ ಬಾಗಿಲಲ್ಲಿ ಬಂದು ನಿಂತಳು. ಸ್ವಲ್ಪ ಹೊತ್ತಿನಮೇಲ
ತಲೆಯನ್ನು ಬಗ್ಗಿಸಿ ನಿದ್ರಿತನಾಗಿದ್ದ ಸ್ವಾಮಿಯನ್ನುದ್ದೇಶಿಸಿ ಪುನಃ ಪ್ರಣಾ
ಮವನ್ನು ಮಾಡಿ ಕಣ್ಣೀರೊರೆಸಿಕೊಳ್ಳುತ್ತ ಗವಾಕ್ಷದಿಂದ ಇಳಿದು ಹೊರ
ಗೆ ಬಂದಳು. ನೀರು ತರುವುದಕ್ಕೋಸ್ಕರ ನಿತ್ಯವೂ ಸರೋವರಕ್ಕೆ ಹೋಗಿ
ಬರುವ ಅಭ್ಯಾಸದ ಬಲದಿಂದ ಆ ದಿಕ್ಕಿನಲ್ಲಿಯೇ ಹೊರಟಳು. ನೀಲಾಕಾಶ
ದಲ್ಲಿ ನೂರಾರು ನಕ್ಷತ್ರಗಳು ಜ್ವಲಿಸುತಲಿದ್ದವು. ಸ್ನಿಗ್ಧವಾದ ತಂಗಾಳಿಯು
ಮಂದಮಂದವಾಗಿ ಬೀಸುತಲಿತ್ತು. ಆದರೆ ಮೈಗೆ ಸೋಕುತ್ತಿರಲಿಲ್ಲ. ಕ್ಷೀಣ
ವಾದ ಚಂದ್ರಾಲೋಕದಲ್ಲಿ ವೃಕ್ಷಗಳೆಲ್ಲಾ ನಿಶ್ಶಬ್ದವಾಗಿ ನಿಂತಿದ್ದವು. ಮನೆ
ಗಳಲ್ಲಿ ಬೆಳಕು ಇಲ್ಲ. ಮಾರ್ಗದಲ್ಲಿ ನಾಯಿಗಳು ಅಲ್ಲಲ್ಲಿ ಮಲಗಿ ನಿದ್ರೆ
ಹೋಗುತಲಿದ್ದವು. ಪುಟ್ಟುವಿನ ತಾಯಿಯು ಹಗುರವಾದ ಪಾದವಿಕ್ಷೇಪ
ದಿಂದ ಹೋಗುತ್ತಿದ್ದಳಾಗಿ ನಾಯಿಗಳಿಗೆ ನಿದ್ರಾಭಂಗವಾಗಲಿಲ್ಲ. ಅವಳು
ಕಡೆಗೆ ಹೋಗಿ ಪುಷ್ಕರಿಣಿಯ ಹತ್ತಿರ ನಿಂತಳು. ಆಗಲೂ ಇನ್ನೂ ಬೆಳ
ಕು ಹರಿದಿರಲಿಲ್ಲ. ಅವಳು ಅಲ್ಲಿ ನಿಂತುಕೊಂಡು ಕ್ರಮಕ್ರಮವಾಗಿ ತನ್ನ
ಅವಸ್ಥೆಯನ್ನು ತಿಳಿದುಕೊಂಡಳು. ಸ್ವಾಮಿಗೆ ಹೇಳದೆ ರಾತ್ರಿಕಾಲದಲ್ಲಿ
ಮನೆಯಿಂದ ಹೊರಗಾದಳು. ರಾಮಸೇವಕನಿಗೆ ಎಚ್ಚರವಾಗಿ ಅದು
ಆಗಲೇ ತಿಳಿದಿರಬಹುದು. ಇಷ್ಟುಹೊತ್ತಿಗೆ ಹುಡುಕುವುದಕ್ಕೆ ಹೊರಗೆ
ಹೊರಟು ಇರಬಹುದು. ಅವನಿಗೆ ಆಗಲೇ ತನ್ನ ಹೆಂಡತಿಯು ಪತಿವ್ರತೆಯ
ಲ್ಲವೆಂದು ತಿಳಿದಿರಬಹುದು. ಹೀಗೆಲ್ಲಾ ಆಗಿರಬಹುದೆಂದು ಮನಸ್ಸಿಗೆ ಹೊ
ಳೆಯುತ್ತಲೇ ಪುಟ್ಟುವಿನ ತಾಯಿಯು ನಡುಗಿದಳು. ಲಜ್ಜೆಯಿಂದ ಅಧೋ
ವದನೆಯಾದಳು. ಬಹಳಹೊತ್ತಿನಮೇಲೆ ತಲೆಯನ್ನೆತ್ತಿ ನೋಡಲಾಗಿ ಮ್ಲಾ
ನನಾದ ಚಂದ್ರನು ಅವಳನ್ನೇ ದೃಷ್ಟಿಸಿ ನೋಡುವಹಾಗಿತ್ತು. ಆಗವಳಿಗೆ
ಮನೆಯ ಜ್ಞಾಪಕವು ಬಂತು. ಅದರೊಂದಿಗೆ ತನಗೆ ಮನೆಯ ಸುಗೃ

ಳೆಲ್ಲಾ ತಪ್ಪಿತೆಂದು ಸ್ಮರಣೆಯಾಯಿತು. ಇನ್ನು ಆ ಸುಖವು ಅವಳ ಅದೃಷ್ಟಕ್ಕೆ ಇಲ್ಲವಾಯಿತು. ಈ ಸಮಯದಲ್ಲಿ ಹತ್ತಿರದಲ್ಲಿದ್ದ ಅಶ್ವತ್ಥವೃಕ್ಷದಿಂದ ಪಕ್ಷಿಗಳು ಕಲಕಲಧ್ವನಿ ಮಾಡಲಾರಂಭಿಸಿದವು. ಪುಟ್ಟುವಿನ ತಾಯಿಯು ಅತ್ತ ಕಡೆ ನೋಡಲಾಗಿ ಪೂರ್ವದಿಕ್ಕು ಪರಿಷ್ಕಾರವಾಗಿತ್ತು. ಜನರು ತಿರುಗಾಡುವ ಹೊತ್ತಾಗಿತ್ತು. ಆತಏವ ಕೂಡಲೆ ಆ ಸ್ಥಳವನ್ನು ಬಿಟ್ಟು ಪ್ರಾಂತರದೊಳಗೆ ಪ್ರವೇಶಿಸಿದಳು. ಸ್ವಲ್ಪದೂರ ಹೋಗುವುದರೊಳಗಾಗಿ ಸೂರ್ಯೋದಯವಾಯಿತು. ಪುಟ್ಟುವಿನ ತಾಯಿಯು ಮತ್ತಷ್ಟು ದೂರ ಹೋಗಿ ಹಿಂದಿರುಗಿ ನೋಡಿದಳು. ಸಿಂಹಶತಗ್ರಾಮವು ಕಣ್ಣುಮರೆಯಾಗಿತ್ತು. ಶ್ರೀರಾಮಚಂದ್ರದೇವಸ್ಥಾನದ ಗೋಪುರವು ಕಾಣಿಸುತಲಿತ್ತು. ಆ ಗೋಪುರದ ಮೇಲಿನ ಬೆಳ್ಳಿಯ ಕಳಶವು ಸೂರ್ಯಕಿರಣದಲ್ಲಿ ವಜ್ರದಹಾಗೆ ಪ್ರಕಾಶವಾಗಿತ್ತು. ಪುಟ್ಟುವಿನ ತಾಯಿಯು ಅಲ್ಲಿ ನಿಂತು ಶ್ರೀರಾಮಚಂದ್ರದೇವರಿಗೆ ಪ್ರಣಾಮವನ್ನು ಮಾಡಿದಳು. ಪುಟ್ಟುವು ಕಾಲನ್ನು ಅಲ್ಲಾಡಿಸುವುಳು. ಒಂದೊಂದುಸಲ ಕೈಯೆತ್ತಿ ಹಕ್ಕಿಗಳನ್ನು ಕರೆಯುವಳು. ಒಂದೊಂದುಸಲ ತಾಯಿಯ ಮುಖವನ್ನು ಕೈಹಾಕಿ ತಿರುಗಿಸುವಳು. ಆದರೆ ತಾಯಿಯು ಮೊದಲಿನಹಾಗೆ ಅವಳಸಂಗಡ ಮಾತನಾಡಳು. ಅನ್ಯಮನಸ್ಕಳಾಗಿ ಹಾದಿಯನ್ನು ನಡೆಯುವಳು. ಎಲ್ಲಿಗೆ ಹೋಗಬೇಕೆನ್ನುವುದು ಗೊತ್ತಿಲ್ಲ. ಮೂಗಿನ ನೇರಕ್ಕೆ ಹೊರಟವಳು ಸ್ವಲ್ಪದೂರ ಹೋಗಿ ತೌರಮನೆಗೆ ಹೋಗಬೇಕೆಂದು ಯೋಚಿಸಿದಳು. ಆದರೆ ತನ್ನ ಕಳಂಕವು ಸ್ಮರಣೆಗೆ ಬರುತಲೆ ಅತ್ತ ಕಡೆ ಹೋಗುವುದಕ್ಕೆ ಪ್ರವೃತ್ತಿಯುಂಟಾಗಲಿಲ್ಲ. ಆದುದರಿಂದ ದಾರಿ ಹೋದಕಡೆ ಹೋಗುತ್ತಿದ್ದಳು. ಯಾರನ್ನೂ ದಾರಿಯೆಲ್ಲಿಗೆ ಹೋಗುವುದೆಂದು ವಿಚಾರಿಸಲಿಲ್ಲ. ನಿರ್ದಿಷ್ಟವಾದ ಸ್ಥಳಕ್ಕೆ ಹೋಗದವರಿಗೆ ದಾರಿಯನ್ನು ವಿಚಾರಿಸಬೇಕಾದ ಆವಶ್ಯಕವಿಲ್ಲ. ಪುಟ್ಟುವಿನ ತಾಯಿಯು ಯಾರನ್ನು ಕುರಿತು ವಿಚಾರಿಸದಿದ್ದರೂ ಜನರು ಅವಳನ್ನು ಕೇ

ಳುವುದಕ್ಕಾರಂಭಿಸಿದರು. ಮೊದಲು ಒಬ್ಬ ಹರಕುಬಟ್ಟೆಯನ್ನುಟ್ಟಿದ್ದ ವೃದ್ಧಳು ಪುಟ್ಟುವಿನ ತಾಯಿಯನ್ನು ಕುರಿತು, ಹುಡುಗಿ! ಎಲ್ಲಿಗೆ ಹೋಗುತ್ತಿ? ಎಂದು ಪ್ರಶ್ನೆಮಾಡಿದಳು. ಪುಟ್ಟುವಿನ ತಾಯಿಯು ಸ್ವಲ್ಪ ಹಿಂದುಮುಂದು ನೋಡಿ, ನಾನು ತೌರುಮನೆಗೆ ಹೋಗುವೆನೆಂದಳು. ಈ ಪ್ರತ್ಯುತ್ತರದಿಂದ ವೃದ್ಧಳು ಪರಿತೃಪ್ತಳಾಗಿ ಕಾಡುಬೆರಣಿಯನ್ನು ಆರಿಸಿಕೊಳ್ಳುತ್ತ ತನ್ನೊಳುತಾನೇ, ಹಾಗಾದರೆ ಹೋಗು ಮಗು, ಹೋಗದೆ ಉಂಟೆ? ತೌರಮನೆಗೆ ಹೋಗಬೇಡವೆ! ಎಂದಂದುಕೊಂಡಳು. ವೃದ್ಧಳು ತನ್ನೊಳುತಾನೇ ಮಾತನಾಡಿಕೊಳ್ಳುತ್ತ ಅಲ್ಲಲ್ಲಿ ಹೋಗುವಾಗ ಸಿಕ್ಕಿದ ಬೆರಣಿಯನ್ನು ಆರಿಸಿ ತೆಗೆದು ಗೂಡೆಗೆ ಹಾಕಿಕೊಳ್ಳುವಳು. ವೃದ್ಧಳಗೆ ತನ್ನ ಮಾತನ್ನು ಕೇಳುವುದಕ್ಕೆ ಯಾರೂ ಬೇಕಾಗಿರಲಿಲ್ಲ. ಪುಟ್ಟುವಿನ ತಾಯಿಯು ಹೊರಟುಹೋದಳು. ವೃದ್ಧಳು ಹೇಳತೊಡಗಿದಳು :—ಸಾಯುವ ತನಕ ಅತ್ತೆಯ ಮನೆಯಲ್ಲಿದ್ದು ತೀರಬೇಕೆ? (ಬೆರಣಿ ಸಿಕ್ಕಿತು, ತೆಗದುಹಾಕಿಕೊಂಡಳು) ಹೋಗೆ, ತಾಯಿ! ಜನ್ಮಜನ್ಮಕ್ಕೂ ತೌರಮನೆಗೆ ಹೋಗುತ್ತಿರು; ತಂದೆತಾಯಿಗಳಿಗಿಂತ ಅತ್ತೆ ಹೆಚ್ಚೆ? ಮಾವನು ಹೆಚ್ಚೆ? (ಬೆರಣಿ ಸಿಕ್ಕಿತು; ತೆಗದು ಹಾಕಿಕೊಂಡಳು.) ಈಗ ನಾನೊಬ್ಬಳೇ ಬಿದ್ದಿದ್ದೇನೆ. ಅನ್ನಕ್ಕೆ ಹೊಡೆದುಕೊಳ್ಳುತ್ತೇನೆ. ನೆರೆಹೊರೆ ರಂಡೇರು ಬಂದು ಒಂದುಮಾತೂ ಕೇಳುವುದಿಲ್ಲ. ಅವರೆಲ್ಲ ತಮ್ಮ ತಮ್ಮ ಮನೆಯಲ್ಲಿ ಕಾಲುನೀಡಿಕೊಂಡು ಮಲಗಿಕೊಂಡಿದ್ದಾರಲ್ಲ! ಒಬ್ಬಳಾದರೂ ಬಂದು ಕೇಳಬೇಡವೆ? (ಬೆರಣಿ ಸಿಕ್ಕಿತು; ತೆಗದು ಹಾಕಿಕೊಂಡಳು.) ಎಲ್ಲರಿಗೂ ಒಂದೇಸಮನಾಗಿ ನಡೆದೀತೆ? ನನಗೂ ಎಲ್ಲಾ ಸಂಪತ್ತೂ ಇತ್ತು. ನನಗೂ ಆಳೂಕಾಳು ಇದ್ದರು. ದನಕರಗಳಿದ್ದವು. ಕುರಿ ಮೇಕೆಗಳಿದ್ದವು. (ಬೆರಣಿ ಸಿಕ್ಕಿತು; ತೆಗೆದು ಹಾಕಿಕೊಂಡಳು.) ಈಗ ದನಾಕಾದೇನೆ, ಕುರಿಯನ್ನು ಕಾದೇನೆ! ಮುದಿಯಾದೆ, ಮುಪ್ಪುಬಂತು. ನನ್ನ ಅದೃಷ್ಟ ಹೀಗಾಯಿತು!

ಚೆನ್ನಾಗಿರುವವರು ಸುಖವೆಲ್ಲಾ ತಮ್ಮಪಾಲಿಗೆ ಬಂದುದೆಂದಂದುಕೊಳ್ಳು ತ್ತಾರೆ. (ಬೆರಣಿ ಸಿಕ್ಕಿತು ; ತೆಗದುಹಾಕಿಕೊಂಡಳು.) ಆ ರಂಡೇರಿಗೆ ಕಣ್ಣು ಮುಚ್ಚಿಹೋಗಿದೆ. (ಬೆರಣಿ ಸಿಕ್ಕಿತು ; ತೆಗೆದುಹಾಕಿಕೊಂಡಳು.) ಹೀಗೆಲ್ಲಾ ಹೇಳಿಕೊಂಡು ವೃದ್ಧಳು ಹೊಲದಲ್ಲೆಲ್ಲಾ ತಿರುಗಾಡುತ್ತ ಬೆರಣಿ ಯನ್ನು ಆರಿಸುತ್ತಿದ್ದಳು. ಬೇರೆ ಸಮಯವಾಗಿದ್ದರೆ ಪುಟ್ಟುವಿನ ತಾಯಿ ಯು ನಿಂತು ವೃದ್ಧಳು ಹೇಳಿಕೊಳ್ಳುತ್ತಿದ್ದುದನ್ನು ಕೇಳುತ್ತಿದ್ದಳು.

ಪುಟ್ಟುವಿನ ತಾಯಿಯು ಪ್ರಾಂತರವನ್ನು ಪಾರಾಗಿ ಹೋಗಿ ರಾಮ ಪುರವೆಂಬ ಒಂದು ಅಪರಿಚಿತ ಗ್ರಾಮದ ಹತ್ತಿರ ಹೋದಳು. ಆಗ ಹತ್ತು ಗಂಟೆ ಸಮಯವಾಗಿತ್ತು. ಊರಿನ ಹೊರಗೆ ಇದ್ದ ಕೆರೆಗೆ ಊರಿನವರು ಸ್ನಾನಾದಿಗಳಿಗೆ ಬಂದು ಹೋಗುತಲಿದ್ದರು. ಪುಟ್ಟುವಿನ ತಾಯಿಯೂ ಸ್ನಾನಮಾಡಬೇಕೆಂದು ಯೋಚಿಸಿ ಸ್ವಲ್ಪದೂರ ಹೋಗಿ ನೋಡಲಾಗಿ ಮಾ ರ್ಗದ ಪಾರ್ಶ್ವದಲ್ಲಿ ಮರದ ನೆರಳಿನಲ್ಲಿ ಇಬ್ಬರು ಹೆಂಗಸರು ನಿಂತುಕೊಂಡು ಅವಳನ್ನು ನೋಡುತ್ತಿದ್ದರು—ಅವರಿಬ್ಬರೂ ಯುವತಿಯರು. ಅವರನ್ನು ಕಂಡು ಪುಟ್ಟುವಿನ ತಾಯಿಯು, ಅವರು ತನ್ನನ್ನು ಅಪಹಾಸ್ಯಮಾಡಿ ಬೈ ದಾರೆಂದು ಭಯಪಟ್ಟಳು. ಬೇರೆ ಹಾದಿಯಿದ್ದರೆ ಅವಳು ಆ ಹಾದಿಯಲ್ಲಿ ಹೋಗುತ್ತಿದ್ದಳು. ಈಗ ಅನನ್ಯಗತಿಯಾಗಿ ಯುವತಿಯರು ಇದ್ದಕಡೆಗೆ ಸಂಕೋಚದಿಂದ ಹೋದಳು. ಹೋಗುತ್ತ ಭಯಪಟ್ಟು ಅವರನ್ನೇ ನೋ ಡುವಳು. ಈ ಸಮಯದಲ್ಲಿ ಒಬ್ಬ ಸ್ಥೂಲಾಂಗಿಯಾದ ವೃದ್ಧಳು ಹಿಂದ ಲಿಂದ ಯುವತಿಯರನ್ನು ಕುರಿತು, ಇನ್ನೂ ಏತಕ್ಕೆ ನಿಂತಿದ್ದೀರಿ? ಹೊತ್ತಾ ಗಲೇ ಏರಿತು ಎಂದಳು. ಯುವತಿಯರು ಅಂಜಿ ಕೆಳಗೆ ನೆಲದಮೇಲಿಟ್ಟಿದ್ದ ಕೊಡಗಳನ್ನೆತ್ತಿ ಕಂಕುಳಲ್ಲಿರಿಕಿಕೊಂಡು ಹಿಂದಿರಿಗಿದರು. ಪುಟ್ಟುವಿನ ತಾ ಯಿಯನ್ನು ನೋಡಿ ವೃದ್ಧಳು ಹತ್ತಿರ ಬಂದು, ನೀನು ಯಾರೆ? ತಾಯಿ! ಎಂದು ಕೇಳಿದಳು. ಪುಟ್ಟುವಿನ ತಾಯಿಯು ತಲೆಯನ್ನು ಬಗ್ಗಿಸಿಕೊಂಡು

ಮರದ ನೆರಳಿನಲ್ಲಿ ನಿಂತು ಏನೂ ಹೇಳಲಿಲ್ಲ. ವೃದ್ಧಳು ಪುನಃ, ಮಗುವು ನಿನ್ನದೆ, ತಾಯಿ? ಎಂದಳು. ಪುಟ್ಟುವಿನ ತಾಯಿಯು ತಲೆಯನ್ನಲ್ಲಾಡಿಸಿ ಒಪ್ಪಿಕೊಂಡಳು. ಆಗ ಯುವತಿಯೊಬ್ಬಳು ಮುಂದಾಗಿ ಬಂದು, ಪುಟ್ಟುವಿನ ಗಲ್ಲವನ್ನು ಪಿಡಿದು ಮುದ್ದಿಟ್ಟುಕೊಂಡಳು.

ವೃದ್ಧಳು—ತಾಯಿ! ನೀವು ಯಾರಮ್ಮ?

ಪುಟ್ಟುವಿನ ತಾಯಿ—ನಾವು ಬ್ರಾಹ್ಮಣರು.

ವೃದ್ಧಳು—ಎಲ್ಲಿಗೆ ಹೋಗುತ್ತಿ?

ಪುಟ್ಟುವಿನ ತಾಯಿಯು ಮಾತನಾಡಲಿಲ್ಲ.

ವೃದ್ಧಳು—ನಿನ್ನ ಸಂಗಡ ಯಾರೂ ಇಲ್ಲ?

ಪುಟ್ಟುವಿನ ತಾಯಿಯು ಮಾತನಾಡಲಿಲ್ಲ.

ವೃದ್ಧಳು—ನಿಮ್ಮ ಅತ್ತೆಯ ಮನೆ ಯಾವ ಊರು? ನಿಮ್ಮ ತೌರ ಮನೆ ಯಾವ ಊರು?

ಆದರೂ ಪುಟ್ಟುವಿನ ತಾಯಿಯು ಮಾತನಾಡಲಿಲ್ಲ.

ವೃದ್ಧಳು—ಹಾಗಾದರೆ ಗೊತ್ತಾಯಿತು.

ಹೀಗೆಂದು ಹೇಳಿ ವೃದ್ಧಳು ತನ್ನ ಮಗಳನ್ನೂ ಸೊಸೆಯನ್ನೂ ಕರೆದುಕೊಂಡು ಹೊರಟುಹೋದಳು. ಅವಳ ಮಗಳು ಪುಟ್ಟುವಿನ ತಾಯಿಯನ್ನು ಹಿಂದಿರಿಗಿ ನೋಡಿದ್ದುದನ್ನು ಕಂಡು ವೃದ್ಧಳು, ನಡೆಯಿರೆ, ಗರತಿಯರು ಅಂತಹ ಜನರನ್ನೆಲ್ಲಾ ತಿರಿಗಿ ತಿರಿಗಿ ನೋಡುವುದು ಸರಿಯಲ್ಲವೆಂದಳು.

ಮಗಳು, ಮಗುವು ಬಹಳ ಚಲುವಾಗಿದೆ ಎಂದಳು. ವೃದ್ಧಳು ವಿರಕ್ತಳಾಗಿ, ಅಂತಹ ಚಲುವೆಯನ್ನು ಸುಟ್ಟರು! ಗೃಹಸ್ಥರ ಮನೆಯ ಗರತಿಯರಲ್ಲದವರು ಎಂತಹ ಸುಂದರಿಯರಾದಾರು? ಎಂದಳು.

ಈ ಮಾತನ್ನು ಕೇಳುತ್ತಲೇ ಪುಟ್ಟುವಿನ ತಾಯಿಯ ಮುಖವು ಅರ

ಕ್ತವಾಗಿ ಅವಳು ಇನ್ನು ಮುಂದೆ ಹೋಗಲಾರದವಳಾದಳು. ಸ್ವಲ್ಪಹೊತ್ತು ದಾರಿಯಲ್ಲಿಯೇ ನಿಂತಿದ್ದಳು. ಆ ಹೆಂಗಸರು ಹೊರಟುಹೋದಮೇಲೆ ಸತ್ತಿರವಿದ್ದ ಒಂದು ನಿರ್ಜನವಾದ ಮಾವಿನ ತೋಪಿನೊಳಗೆ ಪ್ರವೇಶಮಾಡಿ ಒಂದು ಮರದ ಬುಡದಲ್ಲಿ ಕುಳಿತುಕೊಂಡಳು. ಮಾಧವಿಯು ಮಣ್ಣಿನಲ್ಲಿ ಆಡುತ್ತಿದ್ದಳು. ಅವಳ ತಾಯಿಯು ಮರಕ್ಕೆ ತಲೆಯನ್ನಿಟ್ಟುಕೊಂಡು ಅತ್ತಳು. ಬಹಳ ಹೊತ್ತಿನ ಮೇಲೆ ಕಣ್ಣೀರೊರಿಸಿಕೊಂಡು, ತನ್ನೊಳು ತಾನೇ, ಈಗ ಗೊತ್ತಾಯಿತು, ಎಲ್ಲಾ ನನ್ನದೋಷ—ಹಾಳು ಲಜ್ಜೆಗೆ ಹೆದರಿ ನನಗೆ ನಾನೇ ನನ್ನ ಸರ್ವನಾಶವನ್ನು ತಂದುಕೊಂಡೆನೆಂದಂದುಕೊಂಡಳು.

ವಾಸ್ತವಿಕವಾಗಿ ಆ ಮಾತು ನಿಜ. ಕೇವಲ ಲಜ್ಜೆಯ ಭಯದಿಂದ ಮಾಧವೀಲತೆಯ ತಾಯಿಯು ಗೃಹತ್ಯಾಗವನ್ನು ಮಾಡಿದಳು. ಕಳಂಕದ ವಾರ್ತೆಯನ್ನು ಬೆಳಗ್ಗೆ ಗಂಡನು ಕೇಳುವನೆಂಬ ಲಜ್ಜೆಯಿಂದ ಓಡಿಬಂದಳು. ಕಳಂಕದ ವಾರ್ತೆಯು ಹಾಗಿರಲಿ, ಈಗ ಸಂದೇಹಪಡುವುದಕ್ಕೂ ಅವಕಾಶವಿಲ್ಲದೆ ಎಲ್ಲಾ ಖಂಡಿತವಾಗಿ ಪರಿಷ್ಕಾರವಾಗಿಹೋಯಿತು. ಇಷ್ಟು ಹೊತ್ತಿಗೆ ಆಗಲೇ ರಾಮಸೇವಕನು ತನ್ನ ಹೆಂಡತಿಯು ವ್ಯಭಿಚಾರಿಯೆಂದು ಖಂಡಿತವಾಗಿ ತಿಳಿದುಕೊಂಡಿರುವನು. ಆದುದರಿಂದಲೇ, ಮಾಧವೀಲತೆಯ ತಾಯಿಯು, ಎಲ್ಲಾ ನನ್ನ ದೋಷವೆಂದು ಹೇಳಿಕೊಂಡಳು. ಇನ್ನು ಉಪಾಯವಿಲ್ಲ. ಇನ್ನು ಮನೆಗೆ ಹೋಗುವುದಕ್ಕೆ ಮಾರ್ಗವಿಲ್ಲ—ಅಲ್ಲಲ್ಲಿ ಮಾರ್ಗದಲ್ಲಿ ಮರದಕೆಳಗೆ ವಾಸ, ಭಿಕ್ಷೆಯಿಂದ ಜೀವನ, ಇದು ಮಾಧವೀಲತೆಯ ತಾಯಿಯ ಹಣೆಯಲ್ಲಿ ಬರೆಯಿತು. ಅವಳು ದಾರ್ಶನಿಕಳಲ್ಲ—ಅದೃಷ್ಟ ವಿಚಾರವನ್ನು ಕುರಿತು ಚರ್ಚೆಮಾಡಳು. ಅದೃಷ್ಟದ ಆಯತ್ತಾತೀತವಾಗಿರುವುದಕ್ಕೆ ಅಷ್ಟು ಬುದ್ಧಿಯೂ ಇಲ್ಲ—ಅದೃಷ್ಟವು ಎಷ್ಟು ಪೀಡಿಸಿದರೂ ಅದನ್ನು ಗಣನೆಗೆ ತಾರದೆ ಅದರಿಂದ ಕಷ್ಟವನ್ನು ಅನುಭವಿಸದೆ ಪರ್ವತದಹಾಗೆ ಅಚಲವಾಗಿರುವುದಕ್ಕೆ ಅವಳಿಗೆ ಅಷ್ಟು ಮನೋದಾರ್ಢ್ಯ

ವಿಲ್ಲ. ಮಾಧವೀಲತೆಯ ತಾಯಿಯು ಸಾಮಾನ್ಯಳಾದ ಹೆಂಗಸು. ಅದೃಷ್ಟದ ಭಯದಿಂದ ಭೀತಳು. ಕಷ್ಟದ ಸ್ಪರ್ಶಮಾತ್ರದಿಂದ ಪರಾಜಿತಳಾಗುವಳು. ಕಣ್ಣೀರು ಒಂದೇ ಅವಳಿಗೆ ಏಕಮಾತ್ರ ಸಹಾಯವಾಗಿತ್ತು. ತಾಯಿತಂದೆಗಳದುರಿಗೆ ಕಣ್ಣೀರು ಸಹಾಯಮಾಡಿದರೂ ಮಾಡಬಹುದು. ಆದರೆ ಅದೃಷ್ಟದ ಇದುರಿಗೆ ಕಣ್ಣೀರು ಏನುಮಾಡಬಲ್ಲದು? ಅಶ್ರುವರ್ಷಣದಿಂದ ಫಲವೇನೂ ಇಲ್ಲ. ಆದರೂ ಅದೃಷ್ಟದ ಪೀಡನದಿಂದ ಸಾಮಾನ್ಯಜನರೆಲ್ಲರೂ ಅಳುವರು. ಮಾಧವೀಲತೆಯ ತಾಯಿಯೂ ಸಾಮಾನ್ಯಜನರ ಹಾಗೆ ಅತ್ತಳು. ಸಾಧಾರಣವಾಗಿ ಎಲ್ಲರೂ ಕಣ್ಣೀರೊರಿಸಿಕೊಂಡು ಅದೃಷ್ಟವು ತೋರಿಸುವ ಹಾದಿಯಲ್ಲಿ ಹೋಗುವರು. ಮಾಧವೀಲತೆಯ ತಾಯಿಯೂ ಕಣ್ಣೀರೊರಿಸಿಕೊಂಡು ಅದೃಷ್ಟಪ್ರದರ್ಶಿತವಾದ ಮಾರ್ಗದಲ್ಲಿ ಹೋಗುವಳು, ಅಂದರೆ, ಭಿಕ್ಷೆ ಮಾಡಬೇಕೆಂದು ಸ್ಥಿರಮಾಡಿಕೊಂಡಳು. ನನ್ನ ಹಣೆಯ ಬರಹವನ್ನು ಯಾರು ತಪ್ಪಿಸಬಲ್ಲರೆಂದು ಹೇಳಿಕೊಂಡು ಪುಟ್ಟುವಿನ ತಾಯಿಯು ಎದ್ದಳು. ಪುಟ್ಟುವಿನ ಧೂಳಧೂಸರಿತವಾದ ಮೈಯಿಂದ ಮಣ್ಣನ್ನು ಒರಿಸಿ ಅವಳನ್ನು ಎತ್ತಿಕೊಂಡು ಗ್ರಾಮಾಭಿಮುಖವಾಗಿ ಹೋದಳು.



## ಇಪ್ಪತ್ತಮೂರನೆಯ ಪರಿಚ್ಛೇದ.

ಅಂದಿನ ದಿನವೇ ರಾಜನು ಅಂತಃಪುರದಿಂದ ಹೊರಗೆ ಬರುವಾಗ ಒಂದು ಸ್ಥಳದಲ್ಲಿ ನಿಂತನು. ಅಲ್ಲಿ ಒಬ್ಬ ದಾಸಿಯನ್ನು ಕುರಿತು, ಜ್ಯೋತ್ಸ್ನಾವತಿಯನ್ನು ನೋಡಬೇಕೆಂದನು. ದಾಸಿಯು ಕೂಡಲೆ ರಾಜಭಗಿನಿಯ ಮಹಲಿಗೆ ಹೋದಳು. ರಾಜನು ಯಷ್ಟಿಯಿಂದ ಭೂಮಿಯಮೇಲೆ ಬಿದ್ದಿದ್ದ

ಬಿಲ್ವಪತ್ರೆಯನ್ನು ಅಲ್ಲಾಡಿಸುತ್ತ ತನ್ನೊಳು ತಾನೇ ಮಾತನಾಡಿಕೊಳ್ಳು ತ್ತಿದ್ದನು. ರಾಜಭಗಿನಿಯೂ ಬಂದು ಪ್ರಣಾಮವನ್ನು ಮಾಡಿ ನತಶಿರಳಾಗಿ ಬಂದು ಪಾರ್ಶ್ವದಲ್ಲಿ ನಿಂತುಕೊಂಡಳು. ರಾಜನು, ಇದೇನು ಅನ್ಯಾಯ! ಹೇಳೆಂದನು. ಜ್ಯೋತ್ಸ್ನಾವತಿಗೆ ಭಯವುಂಟಾಗಿ ರಾಜನು ರಾಣಿಗೆ ಪ್ರತಿ ನಿಧಿಯಾಗಿ ತಾನೇ ಸ್ವಂತವಾಗಿ ಬಂದು ತಿರಸ್ಕರ ಮಾಡುವನೆಂದು ತಿಳಿದು ಕೊಂಡಳು.

ಸ್ವಲ್ಪ ಹೊತ್ತಿನಮೇಲೆ ರಾಜನು ತಲೆಯನ್ನಲ್ಲಾಡಿಸುತ್ತ ಬಹಳ ಅನ್ಯಾಯ, ಬಹಳ ಅಸಂಗತ, ಇಲ್ಲಿ ಬಿಲ್ವಪತ್ರವನ್ನು ಬಿಸಾಟುಹೋಗಿ ದ್ದಾರೆ. ಈ ಬಿಲ್ವಪತ್ರದಿಂದ ನಾನು ಪೂಜೆ ಮಾಡುತ್ತೇನೆಂದು ಹೇಳಿದನು. ಇಷ್ಟುಹೇಳುತಲೇ ಜ್ಯೋತ್ಸ್ನಾವತಿಯು ಅದನ್ನು ತೆಗೆದುಕೊಂಡಳು. ರಾಜನು, ಬಳ್ಳಿಯ ಸ್ಥಳದಲ್ಲಿ ಬಿಲ್ವಪತ್ರವನ್ನು ಬಿಸಾಟು ಇದ್ದರು—ನಿನ್ನ ನ್ನು ಒಂದು ಮಾತು ಕೇಳಬೇಕೆಂದಿದ್ದೇನೆ. ಹೇಳುವಿಯಾ? ಎಂದು ಕೇಳಿ ಸ್ವಲ್ಪಹೊತ್ತು ಸುಮ್ಮನಿದ್ದನು. ಜ್ಯೋತ್ಸ್ನಾವತಿಯು ಏನೊಂದುಮಾತೂ ಹೇಳದಿರುವುದನ್ನು ಕಂಡು, ಏನು ಹೇಳುತ್ತಿ? ನಾನೇನೋ ಆ ಸಮಯ ದಲ್ಲಿರಲಿಲ್ಲ ಎಂದನು.

ಜ್ಯೋತ್ಸ್ನಾವತಿಯು ಮೆಲ್ಲಮೆಲ್ಲಗೆ, ಯಾವ ಸಮಯವೆಂದಳು.

ರಾಜಾ—ರಾಣಿಯು ಪ್ರಸವಿಸಿದ ಸಮಯ.

ಜ್ಯೋತ್ಸ್ನಾವತಿ—ಅಪ್ಪಣೆಯಾಗಲಿ—ನಾನು ಆ ಸಮಯದಲ್ಲಿದ್ದೆನು.

ರಾಜಾ—ರಾಣಿಯು ಶಿಸುವನ್ನು ಪ್ರಸವಿಸಿದಳಲ್ಲವೆ?

ಜ್ಯೋತ್ಸ್ನಾವತಿ—ಮೊದಲು ಒಂದು ಮೃತವಾದ ಕನ್ಯೆಯು ಭೂಮಿ ಷ್ಠವಾದಹಾಗೆ ನೋಡಿದೆ. ಅನಂತರ,—

ರಾಜನು ಮುಂದೆ ಯಾವ ಮಾತನ್ನೂ ಕೇಳದೆ ಹೊರಗೆ ಹೊರಟು ಹೋದನು, ಜ್ಯೋತ್ಸ್ನಾವತಿಯು ಮುಂದೆ ಹೇಳದಳು. ಈ ವಿಷಯ

12362



ದಲ್ಲಿ ಇನ್ನೂ ಹೆಚ್ಚು ಹೇಳತಕ್ಕದ್ದುಂಟು—ರಾಣಿಯು ಯಮಳ ಸಂತಾನಗಳನ್ನು ಪ್ರಸವಿಸಿದಳು ಎಂದು ಹೇಳಿದಳು. ರಾಜನು ಆ ಮಾತಿಗೆ ಕಿವಿಗೊಡಲಿಲ್ಲ. ಸಭೆಗೆ ಹೋಗಿ ಪ್ರಕಾಶ್ಯವಾಗಿ ಭಟ್ಟಾಚಾರ್ಯರು ಹೇಳಿರುವ ಮಾತು ನಿಜವಾಗಿಸುದು. ರಾಜಕುಮಾರನು ನನ್ನ ಮಗನಲ್ಲ. ರಾಣಿಯು ಒಂದು ಮೃತವಾದ ಕನ್ಯೆಯನ್ನು ಪ್ರಸವಿಸಿದ್ದಳು. ನಾನು ವಿಚಾರ ಮಾಡಿ ಇದರ ನಿಜತ್ವವನ್ನು ಕಂಡು ಹಿಡಿದಿರುವೆನು. ಇಂದು ಭಟ್ಟಾಚಾರ್ಯರು ಬರುವ ಸಮಾಚಾರವಿತ್ತು—ಈಗಲೇ ಬರಲಿ. ಮಗುವನ್ನು ಪೋಷ್ಯಪುತ್ರನನ್ನಾಗಿ ತೆಗೆದುಕೊಳ್ಳಬೇಕೆಂದಿದ್ದೇನೆ ಎಂದು ಹೇಳಿದನು.

ಈ ಮಾತನ್ನು ಕೇಳುತಲೇ ಸಭಾಸದರೆಲ್ಲರೂ ವ್ಯಾಕುಲರಾದರು. ದಿವಾನನು ಹುಬ್ಬು ಗಂಟುಹಾಕಿಕೊಂಡು, ಒಂದು ತಡವೆ ರಾಜನಕಡೆ ನೋಡಿದನು. ಆದರೆ ಮಾತೇನೂ ಹೇಳಲಿಲ್ಲ. 12362

ಆಗ ಪಿತವನು ಅರಮನೆಗೆ ಸ್ವಲ್ಪ ದೂರದಲ್ಲಿ ಒಂದು ಮರದ ಬುಡದಲ್ಲಿ ಕುಳಿತುಕೊಂಡು ರಾಜ ಸಭೆಗೆ ಯಾರುಯಾರು ಹೋಗುವರೆಂಬುದನ್ನು ನೋಡುತಲಿದ್ದನು. ಏನೋ ಯೋಚಿಸಿಕೊಂಡು ಅಲ್ಲಿಂದೆದ್ದು ಬೇರೆ ಕಡೆಗೆ ಹೋದನು. ಸ್ವಲ್ಪದೂರ ಹೋಗಲಾಗಿ ಅಲ್ಲಿ ಒಂದು ಕಪ್ಪುಗೂಳಿಯು ಅವನ ಹಾದಿಗೆ ಅಡ್ಡವಾಗಿ ಬಂದು ನಿಂತಿತ್ತು. ಪಿತವನು ಗೂಳಿಯನ್ನು ಕುರಿತು, ಭೈರವ! ಹೇಗೆ ಇದ್ದೀಯೆ? ಎಂದು ಕೇಳಿದನು. ಗೂಳಿಯು ಮುಖವನ್ನೆತ್ತಿ ತಲೆಯನ್ನಲ್ಲಾಡಿಸಿತು. ಸ್ವಲ್ಪ ಮುಂದಾಗಿ ಪಿತವನ ಸ್ಕಂಧದ ಮೇಲೆ ಕತ್ತನ್ನು ನೀಡಿತು. ಪಿತವನು ಕೈಯಿಂದ ಅದರ ಕುತ್ತಿಗೆಯ ನೆವೆಯನ್ನು ತೀಡುತ್ತ, ಭೈರವ! ನಿನ್ನ ಹೊಟ್ಟೆಯ ಸಮಾಚಾರವನ್ನು ಹೇಳು. ನೀನೂ ನನ್ನಹಾಗೆ ಉದರಪರಾಯಣ. ನೆನ್ನೆ ಏನು ತಿಂದೆ? ಅಥವಾ ಏನೂ ಸಿಕ್ಕದೆ ತರುತಲದಲ್ಲಿ ಕೂತು ಕೇವಲ ಮೆಲಕು ಹಾಕುತ್ತ ದಂತಘರ್ಷಣೆ ಮಾಡುತಲಿದ್ದೆಯೊ? ಯಾರೂ ಕರೆಯದೆ ಹೋಗದಿರುವುದ

ಬಹಳ ತಪ್ಪು. ಜನರು ನಿನ್ನನ್ನು ಏತಕ್ಕೆ ಕರೆಯುವರು? ನೀನು ಯಾರು? ನಿನ್ನಿಂದ ಜನರಿಗೆ ಏನಾಗಬೇಕು? ನಿನ್ನ ವಿರಾಟಮೂರ್ತಿಯನ್ನು ನೋಡಿ ಯಾರು ಮೆಚ್ಚುವರು? ನಿನ್ನ ಕೋಮಲತೆಯನ್ನು ಯಾರು ನಿಂತು ನೋಡುವರು? ನಿನ್ನ ಈ ಪ್ರಸ್ತರ ಸ್ತೂಪದಲ್ಲಿ ನವಪಲ್ಲವದ ಕೋಮಲತೆಯನ್ನು ಕಂಡು ಯಾರು ನಿನ್ನನ್ನು ಪ್ರಶಂಸೆ ಮಾಡುವರು? ನೀನು ನನ್ನ ಕಾಳಮೇಘ—ಸ್ವಲ್ಪ ನಿಂತಿರು. ನಾನು ಹೋಗಿ ಸ್ನಾನ ಮಾಡಿಕೊಂಡು ಬರುವೆನು, ಎಂದು ಹೇಳಿ ಪಿತಮನು ತನ್ನ ಜೋಳಗೆಯನ್ನು ಭೈರವನ ಕೊಂಬಿಗೆ ನೇತುಹಾಕಿ, ಉಟ್ಟಿದ್ದ ಬಟ್ಟೆಯನ್ನು ಅದರ ಬೆನ್ನಿನಮೇಲೆ ಹಾಕಿ ಹತ್ತಿರವಿದ್ದ ಒಂದು ಪುಷ್ಕರಿಣಿಗೆ ಹೋಗಿ ನೀರಿನೊಳಗಿಳದನು. ಈ ಸಮಯದಲ್ಲಿ ಅನೇಕ ಹುಡುಗರು ಬಂದು ಸೇರಿದವು. ಹುಡುಗರು ದೂರದಲ್ಲಿ ನಿಂತು ಭೈರವನನ್ನು ಹಾಸ್ಯಮಾಡುತಲಿದ್ದವು. ಭೈರವನು ಮದುವೆಗಂಡಿನಹಾಗೆ ಗಂಭೀರ ಭಾವದಿಂದ ನಿಂತು ಹುಡುಗರ ಮಾತನ್ನು ಗಮನಿಡಿಲಿಲ್ಲ. ಪಿತಮನು ಬರುತಲೆ ಅವನ ಒದ್ದೆಯಾದ ಮೈಯನ್ನು ನೋಡಿ ಗೂಳಿಯು ಅವನ ಮೈಯನ್ನು ನೆಕ್ಕಲಾರಂಭಿಸಿತು. ಹುಡುಗರು ನಕ್ಕು, ಗೂಳಿಯು ನಿನ್ನನ್ನು ಕರುವೆಂದು ಭಾವಿಸಿ, ಆದರ ಮಾಡುತ್ತದೆ ಎಂದರು. ಪಿತಮನು ನಕ್ಕು, ನನ್ನನ್ನು ಮತ್ತಾರು ಆದರಿಸುವರೆಂದು ಹೇಳಿದನು. ಹುಡುಗರು, ನಾವು ಆದರಿಸುವೆವೆಂದು ಒಟ್ಟಾಗಿ ಹೇಳಿದರು. ಹೀಗೆಂದು ಹೇಳಿ ಹುಡುಗರೆಲ್ಲರೂ ಪಿತಮನನ್ನು ಸುತ್ತಿಕೊಂಡು, ಕೆಲವರು ಕೈಯನ್ನು, ಕೆಲವರು ಕಾಲನ್ನು, ಕೆಲವರು ಬೆನ್ನನ್ನು ಚುಂಬನ ಮಾಡಲಾರಂಭಿಸಿದರು. ಭೈರವನು ಅದನ್ನು ನೋಡಿ ಸ್ವಲ್ಪ ಅಸಂತುಷ್ಟನಾಗಿ ಮೆಲ್ಲಮೆಲ್ಲಗೆ ಹೊರಟುಹೋದನು.

ಈ ಸಮಯದಲ್ಲಿ ನಾಲ್ಕಾರು ಮಂದಿ ನೆರೆಯಲ್ಲಿದ್ದವರು ಅಲ್ಲಿ ಬಂದು ನಿಂತಿದ್ದರು. ಅವರು ದೂರದಲ್ಲಿ ದಶರಥ ಭಟ್ಟಾಚಾರ್ಯನನ್ನು ಕಂಡು ರಾಜ

ಪುತ್ರನ ವಿಚಾರವಾಗಿ ಮಾತನಾಡಲಾರಂಭಿಸಿ, ಕ್ರಮವಾಗಿ ಒಬ್ಬನು ಪಿತಮ ನನ್ನು ಕುರಿತು, ಪಿತನು! ರಾಜಕುಮಾರನು ನಿಜವಾಗಿಯೂ ದಶರಥಪುತ್ರನೆ? ಎಂದು ಕೇಳಿದನು. ಪಿತನುನು, ದಶರಥನ ಪುತ್ರನು ವನಕ್ಕೆ ಹೋಗಿ ಬಹಳ ಕಾಲವಾಯಿತೆಂದನು.

ಪ್ರಥಮವಕ್ತಾ—ಪಿತಮ! ನನಗೇನೂ ಗೊತ್ತಿಲ್ಲ. ನೀನು ಅರಮನೆಗೆ ಹೋಗಿ ಅಲ್ಲಿರು. ಅಲ್ಲಿ ನಡೆಯುವುದನ್ನು ಕೇಳು. ಈ ರಾಮನು ದಶರಥನ ಪುತ್ರನೆ? ಅಥವಾ ಆ ಮಾತು ಸುಳ್ಳೆ? ತಿಳಿದು ಹೇಳು.

ಪಿತಮ—ಆ ಮಾತನ್ನು ಭುವನೇಶ್ವರನು ಹೇಳಬಲ್ಲನು. ಆ ರಾತ್ರಿ ಭುವನೇಶ್ವರನು ದಶರಥನಿಗೆ ಚೂಡಾಧನನ ಮಾತನ್ನು ಕೇಳಬೇಡವೆಂದು ಹೇಳಿದನು.

ಈ ರೀತಿಯಾಗಿ ಹೇಳಿ ಪಿತಮನು ಹೊರಟುಹೋದನು.

ಇತ್ತಲಾಗಿ ಹುಡುಗರು, ಭುವನೇಶ್ವರನು ಸತ್ಯವನ್ನು ನುಡಿಯೆ, ನವಕುಮಾರನು ದಶರಥಪುತ್ರನುಂಟೆ? ಎಂದು ಹಾಡುಕಟ್ಟಿ ಹಾಡಿದವು—ಎಲ್ಲರೂ ನಕ್ಕು, ಸರಿ! ಸರಿ! ಎಂದರು. ಅದರಮೇಲೆ ಹುಡುಗರೆಲ್ಲರೂ ಕುಣಿದಾಡುತ್ತ ಗಟ್ಟಿಯಾಗಿ ಕೂಗಿಕೊಂಡು ಹಾಡಿದವು; ಏನೆಂದರೆ:—ಭುವನೇಶ್ವರನು ಸತ್ಯವನುಡಿಯೆ, ನವಕುವರನು ದಶರಥಪುತ್ರನುಂಟೆ? ಎಂದು.

ದಶರಥನು ಇದನ್ನು ದೂರದಿಂದ ಕೇಳಿ ತನ್ನ ಜತೆಯಲ್ಲಿದ್ದವರ ಮುಖವನ್ನು ನೋಡಿದನು. ಹುಡುಗರು ಹಾಡುತ್ತ ಅತ್ತಕಡೆಗೇ ಹೋದರು. ದಶರಥನು ಅವರನ್ನು ಮನಸ್ಸಿನಲ್ಲಿ ಬೈದನು. ಹುಡುಗರು ದಶರಥನನ್ನು ಮತ್ತಷ್ಟು ಹೆಚ್ಚು ರೇಗಿಸುವುದಕ್ಕೆ ಆನಂದದಿಂದ ಇನ್ನೂ ಗಟ್ಟಿಯಾಗಿ ಹಾಡಲಾರಂಭಿಸಿದರು. ಕಡೆಗೆ ದಶರಥನು ಕೈಗೆ ಕಲ್ಲು ತೆಗೆದುಕೊಂಡನು. ಜತೆಯಲ್ಲಿದ್ದವರು ಅವನನ್ನು ಅಡ್ಡಿಮಾಡಿದರು. ಅವನು

ಕೇಳಲಿಲ್ಲ. ಅವರು ಅವನನ್ನು ಬಿಟ್ಟು ಮಿಕ್ಕವರು ಹುಡುಗಾಟವನ್ನು ನೋಡುತ್ತ ನಿಂದಿದ್ದ ಸ್ಥಳಕ್ಕೆ ಹೋಗಿಬಿಟ್ಟರು.

ಪಿತಮನು ಹೇಳಿ ಹೋದ ಮಾತಿನಿಂದ ಎಲ್ಲರೂ ದಶರಥನ ದಾವೆಯು ಸುಳ್ಳೆಂದು ಸ್ಥಿರಮಾಡಿಕೊಂಡರು. ಮೊದಲು ದಶರಥನು ರಾಜಕುಮಾರನು ತನ್ನ ಮಗನೆಂದು ಹೇಳಿದಾಗ ಇದ್ದವರೆಲ್ಲರೂ ಅದರಿಂದ ಆಗ ಆಹ್ಲಾದಿತರಾಗಿದ್ದರು. ಅವರೆಲ್ಲರೂ ರಾಜನ ಚರಿತ್ರೆಯ ಸಂಬಂಧವಾಗಿ ಸಂದೇಹಪಡುವುದಕ್ಕೋಸ್ಕರ, ಏನೇನೋ ಮಾತುಗಳು, ಏನೇನೋ ಪರಾಮರ್ಶೆಗಳು, ಮುಸಲತ್ತು, ನಿಂದೆ ಮಾತುಗಳನ್ನು ಹೇಳಿಕೊಂಡರು. ಇತರರನ್ನು ನಿಂದಿಸುವುದು ಈಗಿನ ಕಾಲದಲ್ಲಿ ಪರಮ ಸುಖವಾದುದು. ದಶರಥನು ಮೊದಲು ಮಾಡಿದ ದಾವೆಯಲ್ಲಿ ಆ ಸುಖಾನುಭವವು ಪೂರೈಸಿಹೋಯಿತು. ಇನ್ನು ಅದರಲ್ಲಿ ರಸವಿಲ್ಲ. ಆ ನಿಂದಾ ಪ್ರವಾಹವು ಹಿಂದಿರುಗುವುದಕ್ಕೆ ಕಾಲಬಂತು. ಅದುಕಾರಣ, ನೆರೆಯುವರಿಗೆ ದಶರಥನ ದಾವೆಯು ಸುಳ್ಳೆಂದು ಅನುಮಾನಿಸುವುದಕ್ಕೆ ಕಾರಣ ದೊರೆತಾಗ ಅವರೆಲ್ಲರೂ ಚರಿತಾರ್ಥರಾದರು. ಒಬ್ಬನು, ಸರಿಯಾದ ಮಾತು, ಹೀಗೆ ಎಲ್ಲಾದರೂ ಸಂಭವಿಸಬಹುದೆ ? ರಾಜನಾದವನು ಏತಕ್ಕೆ ಕಂಡವರ ಮಕ್ಕಳನ್ನು ಕಳವು ಮಾಡುವುದಕ್ಕೆ ಬರುವನು ? ಅವನಿಗೆ ಮಕ್ಕಳಾಗದಿದ್ದರೆ ಅವನು ಅನಾಯಾಸವಾಗಿ ದತ್ತು ತೆಗೆದುಕೊಳ್ಳಬಲ್ಲನು. ಅವನಿಗೆ ಏನು ಅಷ್ಟು ದರಿದ್ರ ಬಂದಿರುವುದು ? ದೇಶದಲ್ಲಿ ಇಷ್ಟು ಹುಡುಗರು ಇರುವಾಗ ಈ ದರಿದ್ರನಾದ ದಶರಥನ ಪುತ್ರನನ್ನು ಏತಕ್ಕೆ ತೆಗೆದುಕೊಂಡಾನು ? ನಮ್ಮ ಹುಡುಗರ ಮಾತು ಬೇರೆ. ದಶರಥನು ಹೇಳುವುದು ಶುದ್ಧ ಸುಳ್ಳೆಂದು ಕಾಣುತ್ತದೆ. ದುಡ್ಡು ಹೊಡೆದುಕೊಂಡು ಹೋಗುವುದಕ್ಕೋಸ್ಕರ ದಶರಥನು ಈ ತಂತ್ರವನ್ನು ಹುಡುಕಿದ ಹಾಗೆ ಕಾಣುವುದೆಂದನು.

ಮತ್ತೊಬ್ಬ—ಅದಕ್ಕೆ ಸಂದೇಹವಿಲ್ಲ. ಹಾಗಿಲ್ಲದಿದ್ದರೆ ಪಿತಮ ಈ

ಮಾತನ್ನು ಹೇಳಲಿಕ್ಕಿಲ್ಲ. ಪಿತಮನು ಹುಚ್ಚನಲ್ಲ. ಅವನು ಸಿದ್ಧಪುರುಷ. ಸುಮ್ಮನೆ ಹುಡುಗಾಟವಾಡುತ್ತ ತಿರುಗುತ್ತಾನೆ. ಅವನು ಎಷ್ಟು ಹುಚ್ಚನ ಹಾಗೆ ನಟಿಸಿದರೂ ಅವನು ಹುಚ್ಚನಲ್ಲ. ಪಿತಮನಿಗೆ ಎಲ್ಲಾ ಗೊತ್ತು. ಭುವನೇಶ್ವರ ದೇವಸ್ಥಾನದಲ್ಲಿ ರಾತ್ರಿ ನಡೆದುದೆಲ್ಲಾ ಅವನಿಗೆ ಗೊತ್ತು.

ಮೂರನೆಯವನು—ಪಿತಮನು ಏನು ಹೇಳಿದ. ನಮಗದು ಗೊತ್ತಾಗಲಿಲ್ಲ.

ಮೊದಲನೆಯವನು—ಗೊತ್ತಾಗಲಿಲ್ಲವೆ? ಚೂಡಾಧನಬಾಬುವು ದಶರಥನಿಗೆ ಸ್ವಲ್ಪ ಹಣದ ಆಶೆಯನ್ನು ತೋರಿಸಿ ಈ ಕೆಲಸಕ್ಕೆ ತಂದು ನಿಲ್ಲಿಸಿದ್ದಾನೆ. ರಾಜಕುಮಾರನು ದಶರಥನ ಪುತ್ರನೆಂದು ಪ್ರವಾದವನ್ನು ಹುಟ್ಟಿಸಿಬಿಟ್ಟರೆ, ರಾಜನು ಹೋದಮೇಲೆ ತಾನೇ ರಾಜನಾಗಬಹುದೆಂದು ಚೂಡಾಧನನು ಹೀಗೆ ಮಾಡಿಸಿದ್ದಾನೆಂದು ಪಿತಮನು ಹೇಳಿರುವನು,

ನಾಲ್ಕನೆಯವನು—ಅವನು ಹಲ್ಲು ಗಿರಿಯುವ ಹಾಳು ಕೃತಘ್ನನಲ್ಲವೆ?

ಈ ಸಮಯದಲ್ಲಿ ದಶರಥನ ಸಂಗಡ ಇದ್ದು ಅವನನ್ನು ಬಿಟ್ಟುಬಂದವರು ಅಲ್ಲಿಗೆ ಬಂದು ಸೇರಿದರು. ಅವರು, ಇದೇನು ಸಮಾಚಾರ? ಹುಡುಗರು ಏನು ಹೇಳುತ್ತಾರೆ? ಎಂದು ಕೇಳಿದರು.

ಮೊದಲನೆಯವನು—ನಿಜವಾದುದನ್ನೇ ಹೇಳುತ್ತಾರೆ.

ನಾಲ್ಕನೆಯವನು—ದಶರಥನನ್ನು ಸಂಗಡ ಕರೆದುಕೊಂಡು ಅರಮನೆಗೆ ಹೋದರೆ ಅಲ್ಲಿ ಏನಾಗುವುದೊ ಅದನ್ನೆಲ್ಲಾ ನೋಡಿ ಕೇಳಬಹುದು. ಚೂಡಾಧನನನ್ನು ಹಿಡಿದು ಹಾಕಿದ್ದಾರೆ. ದಶರಥನನ್ನು ಹಿಡಿಯುವುದಕ್ಕೆ ಸಿಪಾಯಿಗಳು ಈಗಲೇ ಹೊರಟಿದ್ದಾರೆ. ಇಗೊ! ಅವನೇ ತಾನಾಗಿಯೇ ಸಿಕ್ಕಿ ಬೀಳುವುದಕ್ಕೆ ಬರುವನು. ಆ ರಾತ್ರಿ ಭುವನೇಶ್ವರ ಮಂದಿರದಲ್ಲಿ ನಡೆದ ಮಸಲತ್ತೆಲ್ಲಾ ಹೊರಗೆ ಬಿತ್ತು.

ದಶರಥನೂ ಬಂದು ಸೇರಿದನು. ಅವನ ಜೊತೆಗಾರರು, ದಶರಥ! ಈ ದೊಡ್ಡ ಮನುಷ್ಯರೆಲ್ಲರೂ ಏನು ಹೇಳುತ್ತಾರೆ? ಕೇಳು. ನೀನು ಒಂದು ದಿನ ರಾತ್ರಿ ಭುವನೇಶ್ವರ ಮಂದಿರಕ್ಕೆ ಹೋಗಿ ಅಲ್ಲಿ ಚೂಡಾಧನ ಬಾಬುವು ಹೇಳಿಕೊಟ್ಟ ಮಸಲತ್ತಿನ ಪ್ರಕಾರ ಈ ಸುಳ್ಳು ಪ್ರವಾದವನ್ನು ಹುಟ್ಟಿಸಿದೆಯೋ, ಏನು? ಹಾಗಿದ್ದರೆ ಹೇಳು—ಇದು ಹೇಗೋ, ಆಗಲೆ ರಾಜಸಭೆಗೆ ಮುಟ್ಟಿದೆ ಎಂದರು.

ದಶರಥನು ನಾಲ್ಕುದಿಕ್ಕೂ ನೋಡಿದನು. ಎಲ್ಲರ ಮುಖವನ್ನೂ ನೋಡಿದನು. ಕಡೆಗೆ ಓಡಿಹೋದನು. ಈ ಸಮಯದಲ್ಲಿ ಒಬ್ಬನು, ಎಲವೊ ಹೇಡಿ! ಅಗೊ, ಸಿಪಾಯಿಗಳು ಆಗಲೆ ಬೆನ್ನತ್ತಿದರು ಎಂದು ಕೂಗಿದನು.

ಈ ಸಮಯದಲ್ಲಿ ಒಬ್ಬ ಹುಡುಗನು, ಸಿಪಾಯಿ ಬರುತ್ತಾನೆಂದು ಪುನಃ ಕೂಗಿದನು. ದಶರಥನು ಪುನಃ ಹಿಂದಿರುಗೆ ನೋಡಲಿಲ್ಲ—ಪಲಾಯನ ವಾದನು.

## ಇಪ್ಪತ್ತು ನಾಲ್ಕನೆಯ ಪರಿಚ್ಛೇದ.

ದಶರಥನು ಪಲಾಯನವಾಗಿ ಹೋದಮೇಲೆ ಅಲ್ಲಿದ್ದ ಜನರೆಲ್ಲರೂ ಒಗ್ಗಟ್ಟಾಗಿ ರಾಜಸಭೆಗೆ ಹೋದರು. ಯಾವ ಅಧ್ಯಾಪಕನು ಮೊದಲು ದಶರಥನ ಪಕ್ಷವಾಗಿ ದಿವಾನನಿಗೆ ಪೂರ್ವ ವೃತ್ತಾಂತವನ್ನು ಅರುಹಿದ್ದನೋ ಅವನು ಮುಂದಾಗಿ ಬಂದು ನಿಂತು ಕೈಮುಗಿದುಕೊಂಡು ರಾಜನಿಗೆ ಅರಿಕೆ ಮಾಡಿದನೇನೆಂದರೆ:—ಮಹಾರಾಜರೆ! ಅಪರಾಧವು ನಮ್ಮದು—ದಶರಥವಾಚಸ್ಪತಿಯು ಶೋಕವಿಹ್ವಲನಾಗಿ ಕೇವಲ ಇತರರ ಬೋಧನೆಯಿಂದ ರಾಜಕುಮಾರನು ತನ್ನ ಮಗುವೆಂದು ಹೇಳಿದನು. ಭುವನೇಶ್ವರ ಮಂದಿರದಲ್ಲಿ

ನಡೆದ ಮಸಲತ್ತೆಲ್ಲಾ ಇಂದು ಹೊರಬಿದ್ದಿತು. ಆ ದುರಾಲೋಚನಗಳೆಲ್ಲಾ ಮೊದಲು ನಮಗೆ ತಿಳಿದಿರಲಿಲ್ಲ. ತಿಳಿದಿದ್ದರೆ ದಶರಥನೊಂದಿಗೆ ನಾವು ಎಂದಿಗೂ ಬರುತ್ತಿರಲಿಲ್ಲ. ದಶರಥನು ಈಗ ಪಲಾಯನವಾಗಿ ಹೋಗಿದ್ದಾನೆ. ಅವನು ಶುದ್ಧವಾಗಿ ಇತರರ ಹೇಳಿಕೆಗೆ ಬಳಪಟ್ಟು ಈ ಕೆಟ್ಟ ಕೆಲಸವನ್ನು ಮಾಡಿದ್ದಾನೆ. ಅದುಕಾರಣ ನಮ್ಮ ವಿನಯ ಪೂರ್ವಕವಾದ ಪ್ರಾರ್ಥನೆಯೇನೆಂದರೆ, ತಾವು ಆ ದರಿದ್ರ ಬ್ರಾಹ್ಮಣನನ್ನು ಕ್ಷಮಿಸಬೇಕು. ಅವನ ಅಪರಾಧವು ಅಷ್ಟು ಗುರುತರವಾದುದಲ್ಲ. ಯಾರು ಅವನನ್ನು ಕೈಗೆ ಹಾಕಿಕೊಂಡರೋ ಅವನೇ ಮುಖ್ಯವಾದ ಅಪರಾಧಿಯಾಗಿರುವನು ಎಂದು ವಿಜ್ಞಾಪಿಸಿದನು.

ರಾಜನು ಮಾತನಾಡುವುದಕ್ಕೆ ಮುಂಚಿತವಾಗಿ ದಿವಾನನು, ಯಾರು ಪ್ರಧಾನ ಅಪರಾಧಿಯೋ ಅವನನ್ನು ನಾವು ಬಲ್ಲೆವು. ಈಗ ತಾವು ದಯಮಾಡಿಸಬಹುದೆಂದು ಹೇಳಿದನು.

ಭಟ್ಟಾಚಾರ್ಯರು ಅಪ್ಪಣೆಯನ್ನು ತೆಗೆದುಕೊಂಡಮೇಲೆ ರಾಜನು, ಹಾಗಾದರೆ ಮೃತವಾದ ಕನ್ಯೆಯ ವಿಚಾರವೇನು? ನನಗೆ ಚೆನ್ನಾಗಿ ಗೊತ್ತಾಗಲಿಲ್ಲ ಎಂದನು.

ದಿವಾನ—ಈಗಲೇ ಗೊತ್ತಾಗುತ್ತದೆ. ನಾನು ದಾದಿ ರಾಮಿಯನ್ನು ಕರೆಯಿಸಿದ್ದೇನೆ. ರಾಜರ ಅರಮನೆಯ ದಾದಿಯರನ್ನು ರಾಜಸಭೆಗೆ ಕರೆಯಿಸಿ ಆ ವಿಚಾರವಾಗಿ ಒಂದೆರಡು ಮಾತನ್ನು ಕೇಳಬೇಕೆಂದು ಇದ್ದೇನೆ.

ರಾಜಾ—ಆವಶ್ಯಕವಿಲ್ಲ. ನಾನೇ ಸ್ವಂತವಾಗಿ ಅವರನ್ನು ವಿಚಾರಿಸಿಕೊಂಡು ಬರುವೆನು.

ರಾಜನು ಎದ್ದು ಹೊರಟುಹೋದಮೇಲೆ ಚೂಡಾಧನ ಬಾಬುವು ವಿಮರ್ಷಭಾವವನ್ನು ತಾಳಿ ಸ್ವಲ್ಪ ನಕ್ಕು, ಪಿತಮನು ವಿಲಕ್ಷಣವಾದ ಧೂರ್ತ

ನು, ಒಂದು ಮಾತನ್ನು ಹುಟ್ಟಿಸಿ ದಶರಥವಾಚಸ್ಪತಿಯನ್ನು ಭಯಪಡಿಸಿದ್ದಾನೆ. ಹುಚ್ಚ ಪಿತಮನು ದಶರಥನನ್ನು ಮಾರ್ಗದಿಂದ ಓಡಿಸಿದ್ದಾನೆಂದು ಹೇಳಿದನು.

ದಿವಾನ—ಸಂಭವವಿರಬಹುದು. ಪಿತಮನು ಧೂರ್ತನಾಗದಿದ್ದರೆ ಭುವನೇಶ್ವರಮಂದಿರದಲ್ಲಿ ಯಾರುಯಾರು ಸೇರಿದ್ದರೋ ಅವರ ಹೆಸರುಗಳನ್ನೆಲ್ಲಾ ರಾಜಸಭೆಯಲ್ಲಿ ಹೇಳಬಿಡುತಲಿದ್ದನು.

ಚೂಡಾಧನ—ಎಲ್ಲಿ ತಮ್ಮಂತಹವರು ದಿವಾನರಾಗಿಗಿರುವರೋ ಅಲ್ಲಿ ಹುಚ್ಚರಿಗೂ ವಿಜ್ಞತೆಯುಂಟುಗುವುದು.

ದಿವಾನ—ಎಲ್ಲಿ ತಮ್ಮಂತಹ ದೊಡ್ಡ ಮನುಷ್ಯರು ಇರುವರೋ ಅಲ್ಲಿ ವಿಜ್ಞತೆಯು ಆವಶ್ಯಕವಾದುದು. ಇಲ್ಲದಿದ್ದರೆ ಅವಮರ್ಯಾದೆಯಾಗುವುದು.

ಈ ಸಮಯದಲ್ಲಿ ಒಬ್ಬ ನಕೀಬನು ಬಂದು ಉಚ್ಚಸ್ವರದಿಂದ, ಸಭೆಯು ಬರಖಾಸ್ತಾಗಿದೆ. ರಾಜಾಬಹದ್ದುರವರು ಅಸ್ವಸ್ಥರಾಗಿದ್ದಾರೆಂದು ಕೂಗಿ ಹೇಳಿದನು.

ಸಭೆಯು ಭಂಗವಾದಮೇಲೆ ರಾಜನು ಒಳಗಿನಿಂದ ಬಂದು ಒಂದು ನಿರ್ಜನವಾದ ಕೊಠಡಿಯಲ್ಲಿ ವಿಮರ್ಷಭಾವದಿಂದ ಕುಳಿತುಕೊಂಡನು. ಆ ಕೂಡಲೆ ಕೊಠಡಿಯ ಬಾಗಿಲು ಹಾಕಲ್ಪಟ್ಟಿತು. ರಾಣಿಯು ಮಹಲಿಗೆ ಹೋಗಿ ರಾಜನಿಗೆ ಬಹಳ ಕಷ್ಟಕ್ಕೆ ಬಂತು. ರಾಣಿಯನ್ನು ಮೃತಕನ್ಯಾವಿಚಾರವಾಗಿ ವಿಚಾರಿಸಲು, ಅವಳು ಫಣಿನಿಯಹಾಗೆ ತಲೆಯನ್ನೆತ್ತಿ ರಾಜನನ್ನು ತೀವ್ರವಾದ ದೃಷ್ಟಿಯಿಂದ ನೋಡಿದಳು. ರಾಜನು ಸ್ವಲ್ಪ ಅಪ್ರತಿಭನಾಗಿ, ಇಂದು ಬೆಳಗ್ಗೆ ಜ್ಯೋತ್ಸ್ನವತಿಯು, ನೀನು ಒಂದು ಮೃತಕನ್ಯೆಯನ್ನು ಪ್ರಸವಿಸಿದುದಾಗಿ ಹೇಳಿದಳಾದುದರಿಂದ ನಿನ್ನನ್ನು ಕೇಳಿದೆ ಎಂದನು. ಈ ಮಾತನ್ನು ಕೇಳಿದಕೂಡಲೆ ರಾಣಿಯು ಅತಿ ಕ್ರುದ್ಧಭಾವದಿಂದ, ಜ್ಯೋ

ತ್ಸ್ನವತಿಯು ನನಗೆ ಪರಮ ಶತ್ರು. ಅವಳು ಮೊದಲು ರಾಜಕುಮಾರನು ನನ್ನ ಮಗನಲ್ಲವೆಂದು ಪ್ರವಾದವನ್ನು ಹುಟ್ಟಿಸಿದ್ದಳು. ಅದರಮೇಲೆಯೇ ಭಟ್ಟಾಚಾರ್ಯರು ಬಂದರು. ತಮ್ಮ ತಂಗಿಯು ತನ್ನ ಸ್ವಂತ ಸಂಸಾರವನ್ನು ಸ್ಮಶಾನವನ್ನಾಗಿ ಮಾಡುವುದಕ್ಕೆ ಕುಳಿತಿದ್ದಾಳೆ. ಅವಳು ದುಶ್ಚರಿತ್ರಳೆಂದು ಅವಳನ್ನು ಅತ್ತೆಯ ಮನೆಯಿಂದ ಹೊರಡಿಸಿದ್ದಾರೆ. ಈಗ ನಾನು ಹೊರಡಿಸುವೆನು. ತಾವು ಅವಳನ್ನು ಮನೆಯಿಂದ ಹೊರಡಿಸದಿದ್ದರೆ ನಾನು ಸಂಸಾರವನ್ನು ಬಿಟ್ಟುಹೋಗುವೆನು. ತಾವು ತಂಗಿಯನ್ನಿಟ್ಟುಕೊಂಡು ರಾಜ್ಯವನ್ನಾಳಬಹುದೆಂದು ಹೇಳಿದಳು.

ರಾಜಾ—ಸ್ಥಿರಳಾಗು. ನಾನು ಹೇಳಿದ್ದುದು ತಪ್ಪಾಯಿತು. ಮರೆತು ಜ್ಯೋತ್ಸ್ನವತಿಯ ಹೆಸರನ್ನು ಎತ್ತಿದೆನು.

ರಾಣಿ—ನನಗೆ ಇನ್ನು ಆ ಸ್ತುತಿವಾಕ್ಯಗಳನ್ನು ಕೇಳಲು ಇಷ್ಟವಿಲ್ಲ. ಈಗಲೆ ಪಲ್ಲಕ್ಕಿಯನ್ನು ತರುವಹಾಗೆ ಅಪ್ಪಣೆ ಮಾಡೋಣಾಗಲಿ. ಅದರಲ್ಲಿ ಜ್ಯೋತ್ಸ್ನವತಿಯು ಹತ್ತಿದರೆ ಹತ್ತಲಿ, ಇಲ್ಲವಾದರೆ ನಾನು ಹತ್ತುವೆನು.

ರಾಜಾ—ಜ್ಯೋತ್ಸ್ನವತಿಯು ಪಲ್ಲಕ್ಕಿಯನ್ನು ಹತ್ತಿ ಎಲ್ಲಿಗೆ ಹೋದಾಳು? ಅವಳಿಗೆ ಇನ್ನೆಲ್ಲಿ ಸ್ಥಳವಿರುವುದು. ಈಗವಳು ಅನಾಥಳು. ಅವಳಮೇಲೆ ದಯೆಯನ್ನು ತೋರಿಸು. ಅವಳ ಅಪರಾಧವನ್ನು ಮನ್ನಿಸು.

ರಾಣಿ—ನಿಮ್ಮ ಜ್ಯೋತ್ಸ್ನವತಿಗೆ ಹೋಗುವುದಕ್ಕೆ ಸ್ಥಳವು ಇರುವುದೊ ಇಲ್ಲವೋ ಅದನ್ನು ವಿಚಾರಿಸಲು ನನಗೆ ಅಗತ್ಯವಿಲ್ಲ. ನನ್ನ ಮನೆಯಲ್ಲಿ ಏನೋ ಅವಳು ಇರಕೂಡದು, ಅದು ಖಂಡಿತ.

ಹೀಗೆಂದು ಹೇಳಿ ರಾಣಿಯು ಬೇಗನೆ ಎದ್ದು ಜ್ಯೋತ್ಸ್ನವತಿಯ ಮಹಲಿಗೆ ಹೋದಳು. ರಾಜನು ಕರ್ತವ್ಯಾಕರ್ತವ್ಯವನ್ನರಿಯದೆ, ಹೊರಗೆ

ಹೋಗಿ ಬಂದು ಕೊಠಡಿಯಲ್ಲಿ ಕುಳಿತುಕೊಂಡನು.

ಅಪರಾಹ್ನದಲ್ಲಿ ಒಬ್ಬ ದಾಸಿಯು ಬಂದು ಬಾಗಿಲನ್ನು ಓರೆಮಾಡಿ ಒಳಕ್ಕೆ ಮುಖವನ್ನಿಟ್ಟು, ರಾಜಭಗಿನಿಯು ಅರಮನೆಯನ್ನು ಬಿಟ್ಟು ಹೊರಟು ಹೋದರು ಎಂದು ಹೇಳಿದಳು. ರಾಜನು, ಎಲ್ಲಿಗೆ ಹೋದರೆಂದು ಕೇಳಿದನು. ದಾಸಿಯು, ಗೊತ್ತಿಲ್ಲವೆಂದಳು. ರಾಜನು ಉತ್ತರೀಯದಿಂದ ಮುಖವನ್ನು ಮುಚ್ಚಿಕೊಂಡನು. ದಾಸಿಯು ಹೊರಟುಹೋದಳು.

ಮಾರನೆಯ ದಿನ ರಾಜಸಭೆಯಲ್ಲಿ ಎಲ್ಲರೂ ವಿಮರ್ಷಭಾವದಿಂದ ಕುಳಿತಿದ್ದರು. ರಾಜನು ಅನ್ಯಮನಸ್ಕನಾಗಿ ಏನೋ ಯೋಚಿಸಿಕೊಂಡು ಕುಳಿತಿದ್ದಾಗ ಕೆಲವುಮಂದಿ ಪಲ್ಲಕ್ಕಿ ಬೋಯಿಗಳು ಬಂದು, ರಾಜಭಗಿನಿಯು ನೆನ್ನೆ ಸಾಯಂಕಾಲಕ್ಕೆ ಮೊದಲು ಪಲ್ಲಕ್ಕಿಯನ್ನು ಬಿಟ್ಟು, ಕಾಲುಹಾದಿಯಲ್ಲಿ ನಡೆದುಕೊಂಡು ಹೋದರು. ನಾವು ಎಷ್ಟು ಅರಿಕೆಮಾಡಿಕೊಂಡರೂ ಕೇಳದೆ, ನನಗೆ ಪಲ್ಲಕ್ಕಿ ಬೇಡವೆಂದು ಹೇಳಿ ಹೊರಟುಹೋದರೆಂದು ಅರಿಕೆಮಾಡಿದರು.

ಕೇಳಿದಕೂಡಲೆ ರಾಜನು ಎದ್ದನು. ಈ ಸಮಯದಲ್ಲಿ ದಿವಾನನ ಬಳಿಗೆ ಒಬ್ಬ ಭೃತ್ಯನು ಬಂದು, ದಾದಿ ರಾಮಿಯು ಬಂದಿದ್ದಾಳೆಂದು ಹೇಳಿದನು. ರಾಮಿಯೂ ಪ್ರಣಾಮವನ್ನು ಮಾಡಿ ಕೈಮುಗಿದುಕೊಂಡು ನಿಂತಳು. ರಾಜನು ಬೇರೆ ಕೊಠಡಿಗೆ ಹೋಗುತ್ತಿದ್ದನು. ಆಗ ದಿವಾನನು, ರಾಮಿಯನ್ನು, ಕುರಿತು ರಾಣಿಯವರು ಯಾವ ಶಿಶುವನ್ನು ಪ್ರಸವಿಸಿದರೆಂದು ಕೇಳಿದನು.

ರಾಮಿ——ಮೊದಲು ಒಂದು ಕನ್ಯೆ.

ರಾಜನು ಈ ಮಾತನ್ನು ಕೇಳಿದರೂ ಕೇಳದವನಹಾಗೆ ಹೋಗುತ್ತಿದ್ದನು. ಆಗ ದಿವಾನನು ಕೈಮುಗಿದುಕೊಂಡು ನಿಂತು, ಈ ಸಮಯದಲ್ಲಿ ಸ್ವಲ್ಪ ದಯಮಾಡಬೇಕು. ಇದೇ ನನ್ನ ಕಡೆ ಪ್ರಾರ್ಥನೆ ಎಂದನು. ರಾಜನು ನಿಂತನು. ರಾಮಿಯ ಕಡೆಗೆ ತಿರುಗಿಕೊಂಡು, ಹಾಗಾದರೆ, ರಾಜ

ಕುಮಾರನು ರಾಣಿಯ ಗರ್ಭದಲ್ಲಿ ಹುಟ್ಟಲಿಲ್ಲವೆ? ಎಂದನು.

ರಾಮಿ——ರಾಜಕುಮಾರನೂ ರಾಣಿಯ ಪುತ್ರನೇ ಹೌದು. ಮೊದಲು ಹೆಣ್ಣು ಹುಟ್ಟಿತು. ಅನಂತರ ರಾಜಕುಮಾರನು ಭೂಮಿಷ್ಠನಾದನು. ರಾಣಿಯವರು ಆಗ ಅಜ್ಞಾನಾವಸ್ಥೆಯಲ್ಲಿದ್ದರು. ನಾವು ಹೆಣ್ಣುಶಿಶುವು ಮೃತವಾಗಿದೆಯೆಂದು ತಿಳಿದು, ಅದನ ಮಣ್ಣುಮಾಡುವುದಕ್ಕೆ ತೆಗೆದುಕೊಂಡು ಹೋದೆವು. ಆ ಸಮಯದಲ್ಲಿ ಎಲ್ಲಿಂದಲೋ ಹುಚ್ಚಪಿತಮನುಓಡಿಬಂದು ಆ ಶಿಶುವನ್ನು ಕಿತ್ತುಕೊಂಡು ಓಡಿಹೋದನು. ಅನಂತರ ತಿಳಿದುದರಲ್ಲಿ ಅದೇ ಸಮಯದಲ್ಲಿ ಒಬ್ಬ ಬ್ರಾಹ್ಮಣನಿಗೆ ಒಂದು ಹೆಣ್ಣುಶಿಶುವು ಭೂಮಿಷ್ಟವಾಗಿ ಸತ್ತುಹೋಗಿತ್ತು. ಆ ಬ್ರಾಹ್ಮಣನ ಹೆಂಡತಿಯು ಆ ಮೃತವಾದ ಕನ್ಯೆಯನ್ನು ಮಗ್ಗಲಲ್ಲಿ ಹಾಕಿಕೊಂಡು ಮಲಗಿದ್ದಳು. ಪಿತಮನು ಆ ಮೃತಕನ್ಯೆಯನ್ನು ತೆಗೆದು ಅದಕ್ಕೆ ಪ್ರತಿಯಾಗಿ ಮಹಾರಾಜರ ಕನ್ಯೆಯನ್ನು ಅವಳಮಗ್ಗಲಲ್ಲಿ ಮಲಗಿಸಿಬಿಟ್ಟನು. ಆ ಬ್ರಾಹ್ಮಣಿಯು ಹತ್ತಿರ ತಮ್ಮ ಮೃತವಾದ ಕನ್ಯೆಯು ಈಗಲೂ ಜೀವಿಸಿಕೊಂಡಿರುವುದು. ನಾವು ಭಯದಿಂದ ಈ ಮಾತನ್ನು ಇದುವರೆಗೂ ತಿಳಿಸಲಿಲ್ಲ.

ರಾಜಾ——ಈಗ ನಮ್ಮ ಮಗಳೆಲ್ಲಿದ್ದಾಳೆ?

ರಾಮಿ——ಈಗ ಎಲ್ಲಿದ್ದಾಳೆಯೋ ಅದನ್ನು ಹೇಳಲಾರೆ. ನೆನ್ನೆ ಮೊನ್ನೆಯಿಂದ ಅವಳು ಕಾಣಿಸುವುದಿಲ್ಲ.

ರಾಜಾ——ಏತಕ್ಕೆ?

ರಾಮಿ——ನೆರೆಹೊರೆಯವರೆಲ್ಲರೂ ಬಹಳ ಹೀನಾಯಮಾಡಿ ಮಾತನಾಡಿಕೊಂಡರು. ಅದರಮೇಲೆ ಅವಳು ಮಗುವನ್ನೆತ್ತಿಕೊಂಡು ದೇಶತ್ಯಾಗಿಯಾಗಿ ಹೋಗಿದ್ದಾಳೆ.

ರಾಜಾ——ಯಾರಮನೆಯಲ್ಲಿ ನಮ್ಮ ಮಗಳಿದ್ದಳು?

ರಾಮಿ——ರಾಮಸೇವಕನ ಮನೆಯಲ್ಲಿ.

ರಾಜಾ——ಹಾಗಾದರೆ ಮೂಧವೀಲತೆಯೇ ನಮ್ಮ ಮಗಳು ?

ರಾಮಿ——ನಿಶ್ಚಯವಾಗಿಯೂ ಹೌದು.

ರಾಜಾ——ಈಗ ನಾವು ನಮ್ಮ ಮಗುವೆಂದು ಪೋಷಿಸುವ ಮಗುವ್ಯಾ ?

ರಾಮಿ——ಅವನೂ ತಮ್ಮ ಪುತ್ರ. ಮೊದಲು ಹೆಣ್ಣು ಶಿಶುವು ಹುಟ್ಟಿತು, ಅನಂತರ ಈ ರಾಜಕುಮಾರನು ಹುಟ್ಟಿದನು. ಇಬ್ಬರೂ ಅವಳಿಜವಳಿ ಮಕ್ಕಳು.

ರಾಜಾ——ನೀನು ನನಗೆ ಉಂಟಾಗಿದ್ದ ಬಹಳ ಕಷ್ಟವನ್ನು ನಿವಾರಣೆ ಮಾಡಿದೆ. ನನಗೆ ಬೇರೆ ಮನೋವ್ಯಥೆಗಳು ಇಲ್ಲದಿದ್ದರೆ ನಿನಗೆ ವಿಶೇಷ ಪಾರಿತೋಷಕವನ್ನು ಕೊಡುತ್ತಿದ್ದೆನು. ಆದರೂ ಈಗ ನಾನು ನಿನಗೆ ಕೊಡುವಷ್ಟು ಮತ್ತಾರಿಗೂ ಕೊಟ್ಟಿಲ್ಲ.

ರಾಮಿ——ಈ ದಾಸಿಯ ಅಪರಾಧವು ಕ್ಷಮಿಸಲ್ಪಟ್ಟಿದುದೇ ಪರಮಲಾಭ—ಪಾರಿತೋಷಕವು ಹೆಚ್ಚು.



## ಇಪ್ಪತ್ತೆರಡನೆಯ ಪರಿಚ್ಛೇದ.

ಒಂದು ದಿವಸ ಪ್ರಾತಃಕಾಲದಲ್ಲಿ ತಕ್ಷಪುರದ ರಾಜದ್ವಾರದಲ್ಲಿ ಇಬ್ಬರು ಬ್ರಹ್ಮಚಾರಿಗಳು ಬಂದು ನಿಂತರು. ದ್ವಾರಪಾಲಕರು ಪ್ರಣಾಮಪೂರ್ವಕವಾಗಿ ಅವರನ್ನು ಅಡ್ಡಿಮಾಡದೆ ಒಳಕ್ಕೆ ಬಿಟ್ಟರು. ಬ್ರಹ್ಮಚಾರಿಗಳು ಸದರ ಮಹಲಿಗೆ ಹೋಗಿ ಅಲ್ಲಿಂದ ಹೋಗಿ ಖಾಸಮಹಲಿನ ಬಾಗಿಲನಲ್ಲಿ ನಿಂತರು. ಅಲ್ಲಿ ಭೋಜಪುರೀ ಜಯಪುರೀ ದ್ವಾರಪಾಲಕರಿಗೆ ಪ್ರತಿಯಾಗಿ ಕೆಲವು ಶಾಂತರಾದ ವಂಗದೇಶದವರು ಕೂತು ಬಾಗಿಲನ್ನು ಕಾಯುತ್ತಿದ್ದರು. ಅವರು

ಜಾತಿಯಲ್ಲಿ ಭಾಟರು. ಅದುಕಾರಣ ಅವರ ಮಾತುಕಥೆಯೆಲ್ಲಾ ನಮ್ರವಾಗಿತ್ತು. ಅವರ ತಲೆಯಮೇಲಿನ ರುಮ್ಮಾಲು ತಿರುಚಿ ಸುತ್ತಿತ್ತು. ಮೊಳಕಾಲುವರೆಗೆ ಪರಕಾಳೆಬಟ್ಟೆಯನ್ನುಟ್ಟಿದ್ದರು. ಕೈಯಲ್ಲಿ ಒಂದು ಆಯುಧವೂ ಇಲ್ಲ. ಅವರು ಬ್ರಹ್ಮಚಾರಿಗಳನ್ನು ನೋಡಿಕೂಡಲೆ ವ್ಯಸ್ತರಾಗಿ ಅಭಿವಾದನಮಾಡಿ ಅವರಿಗೆ ಕೂಡುವುದಕ್ಕೆ ಆಸನವನ್ನು ಕೊಟ್ಟರು. ಬ್ರಹ್ಮಚಾರಿಗಳು ಆಸನ ಗ್ರಹಣಮಾಡಿ ಕೂಡಲೆ ರಾಜನ ದರ್ಶವನ್ನಪೇಕ್ಷಿಸಿದರು. ಒಬ್ಬನು, ಇಬ್ಬರು ದರ್ಶನ ಪ್ರಾರ್ಥಿಗಳೂ ಒಟ್ಟಿಗೆಹೋಗಿ ರಾಜನ ದರ್ಶನ ಮಾಡುವುದು ನಿಷೇಧವಾಗಿರುವುದು. ಒಬ್ಬೊಬ್ಬರೇ ಹೋಗಿ ನೋಡಬೇಕೆಂದು ಇಷ್ಟವಿದ್ದರೆ ತಮ್ಮಲ್ಲಿ ಯಾರಾದರೂ ಒಬ್ಬರು ಬರಬಹುದೆಂದು ಹೇಳಿದನು. ಬ್ರಹ್ಮಚಾರಿಗಳು ಅದಕ್ಕೊಪ್ಪಿಕೊಂಡು, ಅವರಲ್ಲೊಬ್ಬನು ಭಾಟನಜತೆಯಲ್ಲಿಹೋದನು. ಅಲ್ಲಿ ಒಂದು ಬಾಗಿಲಲ್ಲಿ ಒಬ್ಬ ವೃದ್ಧಬ್ರಾಹ್ಮಣನಿದ್ದನು. ಅವನ ಹೆಸರು ರಾಘವಶರ್ಮ. ಅವನು ಪಟ್ಟೆಧೋತ್ರವನ್ನುಟ್ಟಿದ್ದನು. ಭುಜದಮೇಲೆ ಉತ್ತರೀಯವನ್ನು ಹೊದ್ದಿದ್ದನು. ಹಣೆಯಲ್ಲಿ ರಕ್ತಚಂದನದ ದೊಡ್ಡಬಟ್ಟು—ವಾಮಪಾರ್ಶ್ವದಲ್ಲಿ ಸಾಮುದ್ರಿಕ, ಸ್ವರೋದಯ ಮತ್ತು ಮೂರುನಾಲ್ಕು ತಂತ್ರಪುಸ್ತಕಗಳು ಬಿದ್ದಿದ್ದವು. ಬಲಗಡೆ ನಶ್ಯದಡಬ್ಬಿ, ಮರಳುಗಡಿಯಾರ, ಮಸೀದೌತಿ, ಲೇಖಣಿ, ಕೆಲವು ದಸ್ತುಕಾಗದ ಬಿದ್ದಿದ್ದವು. ಭಾಟನು ಅವನ ಬಳಿಗೆ ಬಂದು ಕೈಮುಗಿದುಕೊಂಡು, ಈಗ ತಾನೇ ಇಬ್ಬರು ಬ್ರಹ್ಮಚಾರಿಗಳು ದಯಮಾಡಿ ರಾಜದರ್ಶನಾಕಾಂಕ್ಷಿಗಳಾಗಿ ಬಂದರು. ಅವರಿಬ್ಬರೂ ಏಕಕಾಲದಲ್ಲಿ ಬರುವುದನ್ನು ನಿಷೇಧಿಸಿದೆನು. ಅವರಲ್ಲಿ ವೃದ್ಧರಾದ ಬ್ರಹ್ಮಚಾರಿಯು ಅಲ್ಲಿಯೇ ನಿಂತಿರುವುದಾಗಿ ಒಪ್ಪಿದುದರಿಂದ ಯೌವನಸ್ಥರಾದವರನ್ನು ಸಂಗಡ ಕರೆತಂದಿದ್ದೇನೆ. ಅಪ್ಪಣೆ ಪ್ರಕಾರ ನಡೆದುಕೊಳ್ಳುವೆನೆಂದು ವಿಜ್ಞಾಪಿಸಿ ಭಾಟನು ಹೊರಟುಹೋದನು. ಆಗ ದ್ವಾರರಕ್ಷಕನಾದ ಬ್ರಾಹ್ಮಣನು ಯುವಕನಾದ ಬ್ರಹ್ಮಚಾರಿಯನ್ನು

ತೀವ್ರದೃಷ್ಟಿಯಿಂದ ನೋಡಿ ನಗಲಾರಂಭಿಸಿದನು. ಕೂಡಲೆ ನಗುವನ್ನು ಅಡಗಿಸಿಕೊಂಡು, ಯಾರು ನಿಮಗೆ ರಾಜದರ್ಶನಮಾಡಬೇಕೆಂದು ಹೇಳಿದರು ? ಎಂದು ಕೇಳಿದನು.

ಬ್ರಹ್ಮಚಾರಿ—ಈ ಪ್ರಶ್ನೆಗೆ ಉತ್ತರವನ್ನು ಕೊಡುವುದಕ್ಕೆ ಮೊದಲು ತಾವು ಯಾರೆಂದು ಕೇಳುವೆನು, ಅಪ್ಪಣೆ ಯಾಗಲಿ. ನನ್ನನ್ನು ಜತೆಯಲ್ಲಿ ಕರೆತಂದು ಬಿಟ್ಟವನು ನನ್ನ ವಿಚಾರವನ್ನು ತಮಗೆ ಹೇಳಿದ್ದಾನೆ. ಆದರೆ ತಾವು ಯಾರೆಂದು ಅವನು ಹೇಳಲಿಲ್ಲ. ತಾವು ಸ್ವಯಂ ರಾಜರೋ ? ಅಥವಾ ಅವರ ಕರ್ಮಚಾರಿಗಳೋ ? ಅದನ್ನು ತಿಳಿದಹೊರತು ತಮ್ಮ ಪ್ರಶ್ನೆಗೆ ಉತ್ತರವನ್ನು ಹೇಳಲಾರೆನು.

ರಾಘವ—(ನಕ್ಕು)—ನಾನು ರಾಜನಲ್ಲ. ಆದರೆ ರಾಜನಿಂದ ಬಹಳ ದೂರವಿಲ್ಲ. ನಾನು ರಾಜಕರ್ಮಚಾರಿಯೆಂದು ಹೇಳಬಲ್ಲೆ. ನಾನು ದ್ವಾರಪಾಲಕನು.

ಬ್ರಹ್ಮಚಾರಿ—ದ್ವಾರಪಾಲಕರ ಅಸ್ತ್ರಶಸ್ತ್ರಗಳೆಲ್ಲಿ ?

ರಾಘವ—ಇದೋ ನನ್ನ ಎಡಗಡೆಯಲ್ಲಿ.

ಬ್ರಹ್ಮಚಾರಿ—ಪುಸ್ತಕಗಳೊ ? ಅಥವಾ ಪುಸ್ತಕ ಇರುವ ಮಣೆಯೊ ?

ರಾಘವ—ಎರಡೂ ಹೌದು. ಯಾವದು ಯಾವಾಗ ಅವಶ್ಯಕವೋ ಆಗ ಅದು.

ಬ್ರಹ್ಮಚಾರಿ—ಬಲಿಷ್ಠರಾದವರ ಮುಂದೆ ಇವೆರಡೂ ಪ್ರಯೋಜನವಿಲ್ಲ.

ರಾಘವ—ಸಂಪೂರ್ಣವಾಗಿ ಪ್ರಯೋಜನ ಉಂಟು. ತಮ್ಮಂತಹ ಛದ್ಮವೇಷಧಾರಿಗಳ ಮುಂದೆ ಬೇರೆ ಅಸ್ತ್ರಗಳಿಂದ ಪ್ರಯೋಜನವೇನು ?

ಬ್ರಹ್ಮಚಾರಿ—ಮನುಷ್ಯಮಾತ್ರ ಛದ್ಮವೇಷಧಾರಿ. ಆತ್ಮನಿಗೆ ಈ ದೇಹವೇ ಛದ್ಮವೇಷ. ದೇಹಕ್ಕೆ ಮಿಥ್ಯಾವೇಷವು ಈ ವಸ್ತ್ರಗಳು,

ರಾಘವ—ಇಷ್ಟು ಮಾತು ಕಲಿತುದೆಲ್ಲಿ?

ಬ್ರಹ್ಮಚಾರಿ—ತಮಗೆ ಮೊದಲು ಪರಿಚಯವಿತ್ತೆ? ನನ್ನ ಬಾಯಿಯಿಂದ ಈಮಾತು ಹೊರಡುವುದು ಅಸಂಭವವೆ?

ರಾಘವ—ಸಂಪೂರ್ಣ ಅಸಂಭವ.

ಬ್ರಹ್ಮಚಾರಿ—ಏತಕ್ಕೆ?

ರಾಘವ—ಅದನ್ನು ರಾಜರ ಬಾಯಿಯಿಂದ ಕೇಳುವಿರಿ.

ಇದುವರೆಗೂ ರಾಘವಶರ್ಮನು ಬ್ರಹ್ಮಚಾರಿಗೆ ಆಸನವನ್ನು ಕೊಟ್ಟಿರಲಿಲ್ಲವಾಗಿ ಬ್ರಹ್ಮಚಾರಿಯು ನಿಂತಿದ್ದನು. ಈಗ ಒಂದು ಕೃಷ್ಣಾಜಿನವನ್ನು ತೋರಿಸಿ ಆಸನಗ್ರಹಣಮಾಡಿರೆಂದು ಹೇಳಿದನು. ಆದರೂ ಬ್ರಹ್ಮಚಾರಿಯು ಕೂಡದೆ ನಿಂತಿದ್ದನು. ರಾಘವನು ಒಂದು ಕಾಗದದಲ್ಲಿ ಏನೋ ಬರೆದು ಅದನ್ನು ಒಂದು ಭಂಗಾರದ ಭರಣಿಯಲ್ಲಿಟ್ಟು ಒಬ್ಬ ಭೃತ್ಯನ ಕೈಯಲ್ಲಿ ಭರಣಿಯನ್ನು ಕೊಟ್ಟು ಕಳುಹಿಸಿದನು. ಭೃತ್ಯನು ಭರಣಿಯನ್ನು ತೆಗೆದುಕೊಂಡು ಹೋದನು. ರಾಘವನು ಇನ್ನೇನೋ ಬರೆಯಲಾರಂಭಿಸಿದನು. ಆಗ ಭೃತ್ಯನು ಭರಣಿಯನ್ನು ತಂದು ರಾಘವನಿಗೆ ಕೊಟ್ಟು ಹೊರಟು ಹೋದನು. ರಾಘವನು ಭರಣಿಯನ್ನು ತೆಗದು ನೋಡಿ, ಬ್ರಹ್ಮಚಾರಿಯನ್ನು ಕುರಿತು, ರಾಜದರ್ಶನಕ್ಕೆ ಅಪ್ಪಣೆಯಾಗಿದೆ. ತಾವು ದಯಮಾಡಬಹುದೆಂದು ಹೇಳಿದನು.

ಬ್ರಹ್ಮಚಾರಿ—ಯಾರ ಸಂಗಡ ಹೋಗಲಿ?

ರಾಘವ—ಇನ್ನು ಜತೆಗೆ ಯಾರು ಬಂದಾರು? ಬ್ರಹ್ಮಚಾರಿಯಾಗಿ ಜತೆಗೆ ಹುಡುಕುತ್ತೀರಾ?

ಬ್ರಹ್ಮಚಾರಿ—ರಾಜದ್ವಾರಕ್ಕೆ ಹೋಗುವುದಕ್ಕೂ ಸ್ಮಶಾನಕ್ಕೆ ಹೋಗುವುದಕ್ಕೂ ಸಂಗಡ ಜನರು ಬೇಕು. ಎರಡೂ ಭಯಂಕರವಾದ ಸ್ಥಳಗಳು.

ರಾಘವ—ಜತೆಗೆ ಜನರನ್ನು ತಾವೇ ನೋಡಿಕೊಳ್ಳಬೇಕು.

ಬ್ರಹ್ಮಚಾರಿ—ಈಗ ಇನ್ನೆಲ್ಲಿ ಜನರನ್ನು ಹೊಂದಿಸಿಕೊಳ್ಳಲಿ? ಒಬ್ಬ ನನ್ನು ಸಂಗಡ ಕರೆತಂದಿದ್ದೆ. ಆತನನ್ನು ನಿಮ್ಮ ಬಾಗಿಲಲ್ಲಿ ಅಡ್ಡಿಮಾಡಿ ಬಿಟ್ಟರು. ನಾನು ರಾಜನನ್ನು ಯಾವಾಗಲೂ ನೋಡಿಲ್ಲ. ಅವರು ಯಾವ ಕೋಠಡಿಯಲ್ಲಿರುವರೋ ಅದೂ ಗೊತ್ತಿಲ್ಲ. ಸಂಗಡ ಯಾರೂ ಬಾರದಿದ್ದರೆ ಯಾರನ್ನು ರಾಜರೆಂದು ನನ್ನ ಏಕಾಂತಗಳನ್ನು ಹೇಳಿಕೊಳ್ಳಲಿ?

ರಾಘವ—ಹೋಗುವುದಕ್ಕೆ ದಾರಿಯನ್ನು ತೋರಿಸುವೆನು. ಆದರೆ ಜತೆಯಲ್ಲಿ ಯಾರನ್ನೂ ಕಳುಹಿಸಲಾರೆನು ಎಂದು ಹೇಳಿ ರಾಘವನು ಎದ್ದು ಒಂದು ಬಾಗಿಲನ್ನು ತೆರೆದನು—ಬಾಗಿಲನ್ನು ತೆರೆದು ಪುನಃ ಬ್ರಹ್ಮಚಾರಿಯನ್ನು ಕುರಿತು, ಈ ಮಾರ್ಗವಾಗಿ ಹೋಗಿರಿ, ಇದುರಿಗೆ ಮೆಟ್ಟಿಲುಗಳಿವೆ. ಮೆಟ್ಟಿಲುಗಳನ್ನು ಹತ್ತಿಹೋದರೆ ಅಲ್ಲಿ ಒಂದು ಬಿಳಿಯ ಶಿಲೆಯಿಂದ ಕಟ್ಟಿದ ಪಡಸಾಲೆಯುಂಟು. ಆ ಪಡಸಾಲೆ ಆಚೆ ಇರುವ ಕೋಠಡಿಯಲ್ಲಿ ಮಹಾರಾಜರು ಒಬ್ಬರೇ ಕುಳಿತಿರುವರು. ಮೇಲೆ ಬೇರೆ ಕೋಠಡಿಗಳಿಲ್ಲ. ಬೇರೆ ಪುರುಷರೂ ಇಲ್ಲವೆಂದು ಹೇಳಿ, ರಾಘವನು ಪುನಃ ಮೊದಲಿನಹಾಗೆ ನಕ್ಕನು. ಬ್ರಹ್ಮಚಾರಿಯೂ ಆ ನಗುವನ್ನು ಲಕ್ಷ್ಯಮಾಡದೆ ದರ್ಪದಿಂದ ಮೆಟ್ಟಿಲುಗಳನ್ನು ಹತ್ತಲಾರಂಭಿಸಿದನು. ರಾಘವನು ಹಿಂದಿರುಗಿ ಹೋಗಿ ಸ್ವಸ್ಥಾನದಲ್ಲಿ ಕುಳಿತುಕೊಂಡನು.



# ಇಪ್ಪತ್ತಾರನೆಯ ಪರಿಚ್ಛೇದ.

ಬ್ರಹ್ಮಚಾರಿಯು ಪಡಸಾಲೆಗೆ ಹೋಗಿ ಅಲ್ಲಿ ಭಯದಿಂದ ಕುಂದಿ ನಿಂತುಕೊಂಡನು. ಪಡಸಾಲೆಯ ಒಂದುಕಡೆಯಲ್ಲಿ ಎರಡು ಹುಲಿಗಳು ಚೆಲ್ಲಾಟವಾಡುತಲಿದ್ದವು. ಒಂದನ್ನು ಒಂದು ಹಿಡಿಯುವುದಕ್ಕೆ ಓಡುವುದು, ಒಂದರಹಿಂದೆ ಒಂದು ಓಡುತಲಿತ್ತು. ಒಂದೊಂದುಸಲ ಒಂದರಮೇಲೆ ಒಂದು ಹತ್ತಿಕೊಳ್ಳುವುದು. ಪುನಃ ಒಂದು ಓಡಿಹೋಗುವುದು. ಪುನಃ ಎರಡೂ ಕಲೆತು ಕಚ್ಚಾಡುವುವು. ಒಂದರಭುಜದಮೇಲೆ ಮತ್ತೊಂದು ಮುಂದಿನಕಾಲುಗಳನ್ನು ಇಟ್ಟು ನಿಲ್ಲುವುದು. ಎರಡೂ ಹಾಗೆಮಾಡಿ ಹಿಂದಿನಕಾಲಿನಮೇಲೆ ನಿಲ್ಲುವುವು. ಪುನಃ ಎರಡೂ ಒಂದರಹಿಂದೆ ಮತ್ತೊಂದು ಓಡುವುದು. ಹೀಗೆಲ್ಲಾ ಆಡುತಲಿದ್ದವು. ಬ್ರಹ್ಮಚಾರಿಗೆ ಇನ್ನೂ ಇಪ್ಪತ್ತು ವರುಷ. ಅವನಿಗೆ ಹುಲಿಗಳನ್ನು ನೋಡಿದಕೂಡಲೆ ಭಯವಾಯಿತು. ಆದರೆ ಕೂಡಲೆ ಈ ಹುಲಿಗಳಿಂದ ಏನೂ ಭಯವಿರಲಾರದು. ಹಾಗಿದ್ದರೆ ಹೀಗೆ ಅವುಗಳನ್ನು ಬಿಚ್ಚಿಬಿಟ್ಟಿರಲಾರರೆಂದು ತಿಳಿದು ಯೋಚಿಸಿಕೊಂಡು ಧೈರ್ಯವಾಗಿ ಮುಂದಾದನು. ವ್ಯಾಘ್ರಗಳು ಅವನನ್ನು ಒಂದುಸಲವಾದರೂ ನೋಡಲಿಲ್ಲ. ಬ್ರಹ್ಮಚಾರಿಯು ನಿರ್ದಿಷ್ಟವಾದ ಕೋಠಡಿಯೊಳಗೆ ಪ್ರವೇಶಮಾಡಿ ನೋಡಲಾಗಿ, ಒಬ್ಬ ಗೌರಾಂಗ ಯೌವನ ಪುರುಷನು ಒಬ್ಬನೇ ಕುಳಿತುಕೊಂಡು, ಏನೋ ಲೆಕ್ಕಗಳನ್ನು ಗುಣಿಸುತಲಿದ್ದನು. ಅವನ ನಾಲ್ಕುಕಡೆಗಳಲ್ಲಿಯೂ ಸಂಸ್ಕೃತ ಪುಸ್ತಕಗಳು, ಆರಬ್ಬೀ ಫಾರಸಿ ಗ್ರಂಥಗಳು ಬಿದ್ದಿದ್ದವು. ಬೇರೆ ಆಸನಗಳೊಂದಿಗೆ ಒಂದು ಕೃಷ್ಣಾಜಿನವೂ, ಒಂದು ವ್ಯಾಘ್ರಚರ್ಮವೂ ಹಾಸಿದ್ದವು. ಬ್ರಹ್ಮಚಾರಿಯು ವ್ಯಾಘ್ರಚರ್ಮದ ಹತ್ತಿರ ಹೋಗಿ ನಿಂತನು. ಆದರೆ ಕೂಡದೆ ಸ್ವಲ್ಪ ಹಿಂದುಮುಂದು ನೋಡುತ್ತಿದ್ದನು. ಯುವಕನು ಬ್ರಹ್ಮಚಾರಿಗೆ ಆಸನಗ್ರಹಣಮಾಡುವಹಾಗೆ ಹೇಳದೆ ತಲೆಯನ್ನು ಎತ್ತದೆ

ನೀವು ಯಾರ ಹತ್ತಿರ ಬಂದಿರಿ? ಎಂದು ಕೇಳಿದನು.

ಬ್ರಹ್ಮಚಾರಿ—ನಾನು ಮಹಾರಾಜಾ ಮಹೇಶಚಂದ್ರರನ್ನು ನೋಡುವುದಕ್ಕೆ ಬಂದೆನು.

ಯುವಕ—ಏನು ಅಭಿಪ್ರಾಯದಿಂದ? ಹೇಳಿ, ನಾನೇ ಮಹೇಶಚಂದ್ರ.

ಬ್ರಹ್ಮಚಾರಿಯು ಏನೊಂದುತ್ತರವನ್ನೂ ಕೊಡದಿರುವುದನ್ನು ಕಂಡು ಮಹೇಶಚಂದ್ರನು ಹಠಾತ್ತಾಗಿ ತಲೆಯನ್ನೆತ್ತಿ ಬ್ರಹ್ಮಚಾರಿಯ ಕಣ್ಣುಗಳನ್ನು ನೋಡಿದನು. ನೋಡಿದಕೂಡಲೆ ಬ್ರಹ್ಮಚಾರಿಯು ರಪ್ಪೆಯಿಂದ ಮುಚ್ಚಿಕೊಂಡು ನತಶಿರನಾಗಿ ನಿಂತುಕೊಂಡಿದ್ದನು. ಆಗ ಮಹೇಶಚಂದ್ರನು ಮೃದುವಾದ ಸ್ವರದಿಂದ, ಕೂಡಬಹುದೆಂದು ಹೇಳಿದನು.

ಬ್ರಹ್ಮಚಾರಿಯು ವ್ಯಾಘ್ರಚರ್ಮದಮೇಲೆ ಎಡಗಾಲನ್ನಿಟ್ಟು ನಿಂತುಕೊಂಡನು. ಮಹೇಶಚಂದ್ರನು, ವ್ಯಾಘ್ರಚರ್ಮದಮೇಲೆ ಬೇಡ, ಮೃಗಚರ್ಮದಮೇಲೆ ಕೂಡಬೇಕು. ವ್ಯಾಘ್ರಚರ್ಮದಮೇಲೆ ತಮಗೆ ಅಧಿಕಾರವಿಲ್ಲವೆಂದು ಹೇಳಿದನು. ಬ್ರಹ್ಮಚಾರಿಯು ಮೃಗಚರ್ಮದ ಕಡೆಗೆ ಸರಿದು ನಿಂತುಕೊಂಡನು. ಮಹೇಶಚಂದ್ರನು ಏನೋ ತಿಳಿದುಕೊಂಡವನಾಗಿ ಮುಖವನ್ನು ತಿರುಗಿಸಿಕೊಂಡು ಪುನಃ ಅಂಕಿಯನ್ನು ಗುಣಿಸುವದಕ್ಕಾರಂಭಿಸಿದನು. ಈ ಅವಕಾಶದಲ್ಲಿ ಬ್ರಹ್ಮಚಾರಿಯು ಮೆಲ್ಲಮೆಲ್ಲಗೆ ಮೃಗಚರ್ಮದಮೇಲೆ ಕುಳಿತುಕೊಂಡನು. ಅನಂತರ ಮಹಾರಾಜಾ ಮಹೇಶಚಂದ್ರನು ತಲೆಯನ್ನು ಎತ್ತಿ ನೋಡಲಾಗಿ ಬ್ರಹ್ಮಚಾರಿಯು ಮೊದಲಿನಹಾಗೆ ನಮ್ರನಾಗಿ ಲಜ್ಜಾವನತಮುಖನಾಗಿರಲಿಲ್ಲ. ಅವನು, ನಾನು ಬಹಳ ದೂರದಿಂದ ಬಂದಿರುವೆನೆಂದು ಹೇಳಿದನು.

ಮಹೇಶಚಂದ್ರ—ಅದು ಗೊತ್ತಾಯಿತು. ನನ್ನ ಅಧಿಕಾರದಲ್ಲಿರುವ ಹ್ಮಬ್ರಚಾರಿಗಳನ್ನೆಲ್ಲಾ ಬಲ್ಲೆನು. ಆದರೆ ಅವರಾರೂ ತಮ್ಮಹಾಗಿಲ್ಲ.

ಬ್ರಹ್ಮಚಾರಿ—ಏತಕ್ಕೆ ? ಯಾವ ಅಂಶದಲ್ಲಿ ಇಲ್ಲ?

ಮಹೇಶ—ಸರ್ವಾಂಶದಲ್ಲಿಯೂ ಇಲ್ಲ. ಅದು ಹೇಗಾದರೂ ಆಗಲಿ. ಈಗ ಯಾವ ಅಭಿಪ್ರಾಯದಿಂದ ಬರೋಣಾಗಿದೆ? ಕೇಳುತ್ತೇನೆ, ಹೇಳಿರಿ.

ಬ್ರಹ್ಮಚಾರಿ—ಒಂದು ವಿಚಾರದಲ್ಲಿ ತಮ್ಮ ಇತ್ಯರ್ಥವನ್ನು ತಿಳಿಯುವುದಕ್ಕೋಸ್ಕರ ಬಂದಿರುವೆನು. ತಂದೆಯು ಪಾಪಕ್ಕೋಸ್ಕರ ಮಾಡಬೇಕಾದ ಪ್ರಾಯಶ್ಚಿತ್ತವು ಪುತ್ರನಲ್ಲಿ ಉಳಿದಿರುವುದೆ ಅಥವಾ ಇಲ್ಲವೆ?

ಮಹೇಶ—ಇದು ಸ್ಮೃತಿಯಲ್ಲಿ ನೋಡಿ ಹೇಳತಕ್ಕ ಅಂಶ. ಸ್ಮೃತಿಗಳನ್ನು ತಿಳಿದವರಲ್ಲಿ ಕೇಳಿದ್ದರೆ ಚೆನ್ನಾಗಿತ್ತು.

ಬ್ರಹ್ಮಚಾರಿ—ರಾಜರು ಸರ್ವಶಾಸ್ತ್ರದರ್ಶಿಗಳೆಂದು ನಾನು ತಿಳಿದಿದ್ದೆ.

ಮಹೇಶ—ಆದರೂ ಶಾಸ್ತ್ರವ್ಯವಸಾಯಿಗಳನ್ನು ಕೇಳುವುದುಚಿತ. ಆದರೂ ವೃತ್ತಾಂತವನ್ನು ಸ್ವಲ್ಪ ವಿಸ್ತಾರವಾಗಿ ತಿಳಿಯಹೇಳಿರಿ.

ಬ್ರಹ್ಮಚಾರಿ—ಸಂಕ್ಷೇಪವಾಗಿ ಏನೆಂದರೆ ;—ಒಂದು ಚಾತಕಪಕ್ಷಿಯು ಒಂದು ಚಾತಕಿಪಕ್ಷಿಯೊಡನೆ ಒಂದು ಮರದಲ್ಲಿ ವಾಸವಾಗಿತ್ತು. ದೈವಯೋಗದಿಂದ ಒಬ್ಬ ವ್ಯಾಧನು ಅಲ್ಲಿಗೆ ಬಂದನು. ನವಾಬರೂ ರಾಜರೂ ಒಂದೆರಡು ಖೂನಿಗಳನ್ನು ದುಡ್ಡು ಕೊಟ್ಟರೆ ಮಾಫು ಮಾಡುವರು. ಆದರೆ ಸರ್ವಕಾಲದಲ್ಲಿ ಸರ್ವದೇಶದಲ್ಲಿ ವ್ಯಾಧರು ಮಾಡುವ ಸಹಸ್ರಾರು ಖೂನಿಗಳು ಮಾಫೇ ಆಗಿರುವುದು. ಅದುಕಾರಣ ಒಬ್ಬ ವ್ಯಾಧನು ಬಂದು ಚಾತಕಪಕ್ಷಿಯನ್ನು ಖೂನಿಮಾಡಿದನು. ಇದರಿಂದ ಕಾತರವಾದ ಚಾತಕಿಯು ಮತ್ತೊಂದುಕಡೆಗೆ ಹಾರಿಹೋಯಿತು. ಒಳ್ಳೆಯಸ್ಥಳವನ್ನು ಹುಡುಕಿ ಅಲ್ಲಿ ವಾಸಮಾಡುತಲಿತ್ತು. ಆದರೆ ಅದೃಷ್ಟವಶದಿಂದ ಚಾತಕಿಗೆ ಅ ಸ್ಥಳವೂ ತಪ್ಪುವುದಕ್ಕೆ ಬಂದಿರುವುದು. ಇದೆಲ್ಲಾ ವ್ಯಾಧನ ನಿಮಿತ್ತವಾಗಿ ಉಂಟಾಗಿದೆ. ವ್ಯಾಧನು ಈಗ ಇಲ್ಲ. ವ್ಯಾಧನ ಪುತ್ರನು ಇರುವನು. ಆದುಕಾರಣ ವ್ಯಾಧನು ಮಾಡಿದ ಪಾಪಕೆ ಪುತ್ರನು ಪ್ರಾಯಶ್ಚಿತ್ತ ಮಾಡಿಕೊಳ್ಳುವದು ಉಚಿತವೆ ಅಥವಾ ಅಲ್ಲವೆ?

ಮಹೇಶ—ತಾವೇನೋ ಆ ಜಾತಿಕಿ ?

ಬ್ರಹ್ಮಚಾರಿ—ಇಲ್ಲ.

ಮಹೇಶ—ಹಾಗಾದರೆ ತಾವು ಸಿಂಹಶತಗ್ರಾಮದಿಂದ ಬಂದಿರುವಿರೊ ?

ಬ್ರಹ್ಮಚಾರಿ—ತಾವು ಮಾಡಿರುವ ಊಹೆ ಸರಿಯಾದುದು.

ಮಹೇಶ—ಹಾಗಾದರ ಜ್ಯೋತ್ಸ್ನಾವತಿಯ ವಾಸಸ್ಥಾನವು ತಪ್ಪಿ ಹೋಯಿತೆ ?

ಬ್ರಹ್ಮಚಾರಿ—ತಪ್ಪಿಲ್ಲ—ಆದರೆ ನಾನು ಅಲ್ಲಿಂದ ಬಿಟ್ಟು ಹೊರಟ ದಿನ ಆಕೆಯ ವಾಸಸ್ಥಾನವನ್ನು ತಪ್ಪಿಸುವ ಪ್ರಯತ್ನವು ಜರಗುತಲಿತ್ತು.

ಮಹೇಶ—ನಾನು ಯಾನಾಗಲೂ ಅವರ ಸಮಾಚಾರವನ್ನು ಬರಮಾಡಿಕೊಳ್ಳುತ್ತಿದ್ದೆನು. ಆದರೆ ಈ ಸಮಾಚಾರವು ಬಂದಿಲ್ಲ. ಇದು ಎಷ್ಟು ದಿನದ ಮಾತು ?

ಬ್ರಹ್ಮಚಾರಿ—ಮೊನ್ನೆಯ ದಿನದ ಮಾತು.

ಮಹೇಶ—ನಿಮ್ಮ ಹೆಸರು ಮಾತಂಗಿನಿಯೆ ?

ಬ್ರಹ್ಮಚಾರಿ—ತಮಗೆ ಹೇಗೆ ಗೊತ್ತಾಯಿತು ?

ಮಹೇಶಚಂದ್ರ— ಅದನ್ನೆಲ್ಲಾ ಹೇಳುವುದಕ್ಕಾಗುವುದಿಲ್ಲ. ನೀವು ಜಾಗ್ರತೆಯಾಗಿ ಸಿಂಹಶತಗ್ರಾಮಕ್ಕೆ ಹಿಂರುಗಿ ಹೋಗಬೇಕು. ಹೋಗಿ ಆ ಮಹಾತಾಯಿಗೆ ಆಕೆಯ ಸ್ವಂತರಾಜ್ಯಕ್ಕೆ ಬರಬಹುದು. ಈ ರಾಜ್ಯವು ಆಕೆಯದು. ನನಗೆ ಇದರಲ್ಲಿ ಏನೂ ಸ್ವತ್ವವಿಲ್ಲ. ನಾನು ಸ್ವಲ್ಪವೂ ರಾಜ್ಯವನ್ನು ಭೋಗಿಸಿಲ್ಲ. ಅಪವ್ಯಯಮಾಡಿಲ್ಲ. ಆಕೆಯ ಕರ್ಮಚಾರಿಯಾಗಿ ಏನು ಮಾಡಬಹುದೋ ಅಷ್ಟುಮಟ್ಟಿಗೆ ಮಾಡಿರುವೆನು. ಮತ್ತು ಆಕೆಯನ್ನು ಕರೆತರಲು ನಾನು ಹೆಂಡತಿಯ ಸಮೇತನಾಗಿ ನಾಳೆಯೇ ಹೊರಡುವೆನು. ಹೀಗೆಲ್ಲಾ ವಿಜ್ಞಾಪಿಸಿದೆನೆಂದು ಹೇಳು ಆದರೆ ಆಕೆ ಮೇ ನಿನ್ನನ್ನು ನನ್ನ ಬಳಿಗೆ ಕಳುಹಿಸಿದಳೆ ?

ಮಾತಂಗಿನೀ—ಆಕೆಯು ಕಳುಹಿಸಲಿಲ್ಲ—ನಾನು ಇಲ್ಲಿಗೆ ಬರುವುದು ಕೂಡ ಆಕೆಗೆ ತಿಳಿಯದು. ನಾನು ಆಕೆಗೆ ಹೇಳದೆ ಹೊರಟುಬಂದೆನು.

ಮಹೇಶ——ಈಗ ಏನೇನು ನಡೆದಿದೆಯೋ ಅದನ್ನೆಲ್ಲಾ ವಿಸ್ತಾರವಾಗಿ ಹೇಳು.

ಮಾತಂಗಿನಿಯು ನಡೆದುದನ್ನೆಲ್ಲಾ ಸಂಕ್ಷೇಪವಾಗಿ ಹೇಳಿದಳು. ಕೂಡಲೆ ಮಹೇಶಚಂದ್ರನು ಅದನ್ನೆಲ್ಲಾ ಕೇಳುತಲೆ ಗಟ್ಟಿಯಾಗಿ ಬಂದು ಬಂಗಾರದ ಘಂಟೆಯನ್ನು ಅಲ್ಲಾಡಿಸಿ ಹೊರಗೆ ಬಂದು ಪಡಸಾಲೆಯಮೇಲೆ ನಿಂತುಕೊಂಡನು. ಅವನೊಡನೆ ಮಾತಂಗಿನಿಯೂ ಹಿಂದೆ ಹಿಂದೆ ಬಂದಳು. ಅವನು ಮಾತಂಗಿನಿಯನ್ನು ಕುರಿತು, ಇನ್ನು ಸ್ವಲ್ಪವೂ ಸಾವಕಾಶಮಾಡ ಬೇಡ. ನೀನು ಕುದುರೆ ಸವಾರಿಮಾಡಬಲ್ಲೆಯಾ ? ಎಂದು ಕೇಳಿದನು.

ಮಾತಂಗಿನೀ——(ಲಜ್ಜಿತಭಾವದಿಂದ) ಇಲ್ಲ.

ಮಹೇಶ——ಹಾಗಾದರೆ ನನ್ನ ಜತೇಲಿ ಪಲ್ಲಕ್ಕಿಯಲ್ಲಿಬಾ.

ಮಾತಂಗಿನಿಯು ಒಪ್ಪಿಕೊಳ್ಳಲಿಲ್ಲ.

ಮಹೇಶಚಂದ್ರನು ಸ್ವಲ್ಪಯೋಚಿಸಿ, ಒಳ್ಳೆಯದು, ಹಾಗಾದರೆ ನಾಳೆ ನನ್ನ ಸಂಗಡ ಹೊರಡುವೆ ಯೆಂದು ಹೇಳಿದನು.

ಈ ಸಮಯದಲ್ಲಿ ದೂರದಲ್ಲಿ ಒಬ್ಬ ವೃದ್ಧನಾದ ಸೋಟಾದವನು ಬಂದು ಕೈಮುಗಿದು ಕೊಂಡು ನಿಂತನು. ಮಹೇಶಚಂದ್ರನು ಅವನನ್ನು ಕುರಿತು, ಶೀಘ್ರನಾಗಿ ಜಮೇದಾರನನ್ನು ಕರೆಯೆಂದು ಹೇಳಿದನು.



## ಇಪ್ಪತ್ತೇಳನೆಯ ಪರಿಚ್ಛೇದ.

---

ಅದೇ ದಿನ ಅಪರಾಹ್ಣದಲ್ಲಿ ಹುಚ್ಚಪಿತಮನು ಸಿಂಹಶತಗ್ರಾಮವನ್ನು ಬಿಟ್ಟು ಹೊರಟುಹೋದನು. ಎಲ್ಲಿಗೆ ಹೋದನೋ, ಏತಕ್ಕೆ ಹೋದನೋ

ಅದನ್ನು ಕುರಿತು ಯಾರೂ ವಿಚಾರಿಸಲಿಲ್ಲ. ಇಬ್ಬರು ಅಸ್ತ್ರಧಾರಿಗಳಾದ ಮನುಷ್ಯರು ಮಾತ್ರ ಸಾಯಂಕಾಲದಮೇಲೆ ಹೊರಟು ಪಿತಮನನ್ನು ಹುಡುಕುತ್ತ ಹೊರಟರು. ಪಿತಮನು ಹೋದ ದಿಕ್ಕು ಅವರಿಗೆ ಮೊದಲೇ ಗೊತ್ತು. ಅದುಕಾರಣ ಅವರು ಪ್ರಾಂತರದ ಮಾರ್ಗವಾಗಿ ಅತ್ತಕಡೆಯೇ ಹೊರಟರು. ಸ್ವಲ್ಪದೂರ ಹೋಗಿ ಅವರಲ್ಲೊಬ್ಬನು ಏನೋ ಜನರ ಗದ್ದಲವಾಗುವಹಾಗಿದೆಯೆಂದನು. ಅನಂತರ ಇಬ್ಬರೂ ನಿಶ್ಶಬ್ದವಾಗಿ ಹೋಗುತಲಿದ್ದರು. ಒಂದೆರಡು ನಿಮಿಷದಲ್ಲಿ ಇಬ್ಬರು ಪ್ರಯಾಣಿಕರು ಬಂದರು. ಅವರು ಹೋಗುತ್ತ ತಮ್ಮೊಳುತಾವೇ, ಪಿತಮ ಎಷ್ಟು ಚೆನ್ನಾಗಿ ವೇಣುವನ್ನು ನುಡಿಸುತ್ತಾನೆ! ಎಂದಾಡುಕೊಂಡರು. ಇದನ್ನು ಕೇಳುತ್ತಲೇ ಅಸ್ತ್ರಧಾರಿಗಳು ಪ್ರಯಾಣಿಕರನ್ನು ಕುರಿತು, ಯಾರು ವೇಣುವನ್ನು ನುಡಿಸುವವರೆಂದು ಕೇಳಿದರು.

ಉತ್ತರ—ಹುಚ್ಚ ಪಿತಮನು ಈ ಸರೋವರದ ಪಕ್ಕದಲ್ಲಿ ವೇಣುವನ್ನು ನುಡಿಸುತ್ತಾನೆ. ನಾವು ಅಲ್ಲಲ್ಲಿ ನಿಂತು ಕೇಳುತಲಿದ್ದೆವು.

ಅಸ್ತ್ರಧಾರಿಗಳು—ಯಾವ ಸರೋವರ ? ಅದು ಇಲ್ಲಿಗೆ ಎಷ್ಟು ದೂರ ?

ಉತ್ತರ—ಇಲ್ಲಿಂದ ಪೂರ್ವಕ್ಕೆ ಒಂದು ಹರಿದಾರಿ. ಈ ಮಾರ್ಗದಲ್ಲಿಯೇ ಆ ಸರೋವರವಿದೆ.

ಪ್ರಶ್ನಕಾರಿಗಳು ಮತ್ತೇನೂ ಹೇಳಲಿಲ್ಲ. ಕಾಲು ಜಾಗ್ರತೆಮಾಡಿ ಪೂರ್ವಾಭಿಮುಖವಾಗಿ ಹೋದರು. ಸ್ವಲ್ಪದೂರ ಹೋಗುತ್ತಿರುವಲ್ಲಿ ವೇಣುವಿನ ಧ್ವನಿಯು ಸ್ವಲ್ಪ ಕಿವಿಗೆ ಬಿತ್ತು. ಒಂದುಸಲ ಗಾಳಿಯೊಂದಿಗೆ ಸ್ವರವು ಚೆನ್ನಾಗಿ ಕೇಳಿಸುವಹಾಗಿತ್ತು. ಪುನಃ ಆ ಧ್ವನಿಯು ಹಿಂದಕ್ಕೆ ಸರಿದಹಾಗಿರುವುದು. ಇನ್ನಷ್ಟುದೂರ ಮುಂದಾದಮೇಲೂ ಆ ಧ್ವನಿಯು ಮತ್ತಷ್ಟು

ಸ್ಪಷ್ಟೀಭೂತವಾಯಿತು. ಏನೋ ಮೆಲ್ಲಮೆಲ್ಲಗೆ ಆಲಸ್ಯದಿಂದ ಅಳುವ ಹಾಗೆ ಕೇಳಿಸಿತು. ಅಸ್ತ್ರಧಾರಿಗಳಲ್ಲೊಬ್ಬನು, ಪಿತಮನು ಸಾಯುವಕಾಲದ ಗೋಳಿನಹಾಗೆ ಅಳುತ್ತಾನೆಂದನು. ಮತ್ತೊಬ್ಬನು ಏನೊಂದುತ್ತರವನ್ನೂ ಕೊಡಲಿಲ್ಲ. ಆ ಇಬ್ಬರು ಅಸ್ತ್ರಧಾರಿಗಳಲ್ಲಿ ಒಬ್ಬನಿಗೆ ಇಪ್ಪತ್ತೆಂಟುವರುಷ. ಅವನೇ ಇಷ್ಟುಹೊತ್ತು ಹೆಚ್ಚಾಗಿ ಮಾತನಾಡುತಲಿದ್ದವನು. ಇನ್ನೊಬ್ಬನಿಗೆ ಪ್ರಾಯಃ ಐವತ್ತು ವರುಷ. ಚೂಡಾಧನಬಾಬುವಿನ ಮನೆಯಲ್ಲಿ ರಾತ್ರಿ ಕಾಲದಲ್ಲಿ ಇಬ್ಬರು ಬಂದು ಮಾತನಾಡುತಲಿದ್ದರಷ್ಟೆ. ಅವರೇ ಈಗ ಜತೆಯಾಗಿ ಪಿತಮನನ್ನು ಹುಡುಕಿಕೊಂಡು ಹೋಗುತ್ತಿದ್ದವರು.

ಹೋಗೋಗುತ್ತ ಕಾಳೀದಾಸನು, ಇಂದಿನ ಕಾರ್ಯದ ಭಾರವು ನನ್ನ ಮೇಲೆ ಇರಲಿ : ಒಬ್ಬ ರೋಗಿಯಾದ ಹುಚ್ಚನು ನಿನ್ನ ಕತ್ತಿಯ ಪೆಟ್ಟಿಗೆ ಯೋಗ್ಯನಲ್ಲವೆಂದನು. ಜನಾರ್ದನನು ಏನೂ ಉತ್ತರವನ್ನು ಕೊಡಲಿಲ್ಲ. ಸ್ವಲ್ಪಹೊತ್ತಿನಲ್ಲಿಯೇ ಸಂಗೀತವು ನಿಂತುಹೋಯಿತು. ಕಾಳೀದಾಸನು ಹುಚ್ಚನು ಓಡಿಹೋದನೋ ಏನೋ? ಎಂದನು. ಅದಕ್ಕೂ ಜನಾರ್ದನನು ಉತ್ತರ ಹೇಳಲಿಲ್ಲ. ಕ್ರಮವಾಗಿ ಇಬ್ಬರೂ ಸರೋವರದ ಹತ್ತಿರ ಹೋದರು. ಅಲ್ಲಿ ಯಾರೂ ಇರಲಿಲ್ಲ. ಸರೋವರದ ತಡದಲ್ಲಿ ದೊಡ್ಡ ದೊಡ್ಡ ವಕುಳ ವೃಕ್ಷಗಳು ನಿಸ್ತಬ್ಧಭಾವದಿಂದ ಚಂದ್ರಕಿರಣವನ್ನು ಉಪಭೋಗ ಮಾಡುತಲಿದ್ದವು. ಹತ್ತಿರ ಒಂದು ಚಿಕ್ಕದಾದ ಮಂದಿರ. ವೃಕ್ಷಛಾಯೆಯಿಂದ ಕೃಷ್ಣವರ್ಣವು ಕಣ್ಗೊಳಿಸುತಲಿತ್ತು. ಸರೋವರವು ಅತಿ ಪ್ರಶಸ್ತವಾದುದು. ಪದ್ಮಪತ್ರಗಳಿಂದ ಪರಿಪೂರ್ಣವಾಗಿತ್ತು. ಒಂದೆರಡು ರಾತ್ರಿಚರ ಪಕ್ಷಿಗಳು ನೀರಿನಮೇಲೆ ತೇಲಾಡುತಲಿದ್ದವು—ಕಣ್ಣಿಗೆ ಕಾಣಿಸದು—ಮಧ್ಯೆ ಮಧ್ಯೆ ಚೀತ್ಕಾರಮಾಡಿ ತಮ್ಮ ಅಸ್ತಿತ್ವದ ಪರಿಚಯವನ್ನು ತೋರ್ಪಡಿಸುತಲಿದ್ದವು. ಆದರೂ ಸರೋವರವು ಸ್ಥಿರಭಾವದಿಂದಿತ್ತು. ನಿದ್ದೆಗೈದಿದೆಯೋ ಎಂಬಹಾಗಿತ್ತು. ಅಸ್ತ್ರಧಾರಿಗಳು ಬಂದು ವಕುಳವೃಕ್ಷದ ಕೆಳಗೆ ನಿಂತು

ಕೊಂಡರು. ಯಾರನ್ನೂ ಕಾಣಲಿಲ್ಲ. ಕಾಳೀದಾಸನು ಮಂದಿರದೊಳಗೆ ಓಡಿಹೋಗಿ ಹಿಂದಿರುಗಿ ಬಂದು, ಅಲ್ಲಿ ಯಾರೂ ಇಲ್ಲ, ಓಡಿಹೋದಹಾಗೆ ಕಾಣುತ್ತದೆ. ನಾವು ಬರುವೆವೆಂದು ಹುಚ್ಚನು ತಿಳದಿರುವಹಾಗೆ ಕಾಣುತ್ತದೆ ಎಂದು ಹೇಳಿದನು.

ಜನಾರ್ದನ—ಪಿತಮನಿಗೆ ನಾವು ಅವನ ಶಿರಚ್ಛೇದನ ಮಾಡುವುದಕ್ಕೆ ಬರುವೆವೆಂದು ಹೇಗೆ ಗೊತ್ತು ?

ಕಾಳೀದಾಸ—ಹಾಗೆ ಗೊತ್ತು ಇಲ್ಲದಿದ್ದರೆ ಸಿಂಹಶತಗ್ರಾಮದಿಂದ ಓಡಿಬಂದನು ಹೇಗೆ ?

ಜನಾರ್ದನ—ಪಿತಮನು ಇಲ್ಲಿಯೇ ಎಲ್ಲಿಯೋ ಇರುವಹಾಗೆ ಕಾಣುತ್ತದೆ !

" ನಿಜವಾದ ಮಾತು, ನಾನು ಇಲ್ಲಿಯೇ ಇದ್ದೇನೆ " ಎಂಬೀ ಮಾತನ್ನು ಪಿತಮನು ಬಂದು ಮರದಿಂದ ಕೂಗಿ ಹೇಳಿದನು.

ಒಂದು ಪುರಾತನವಾದ ಮಾಧವೀಲತೆಯು ಒಂದು ವಕುಳ ವೃಕ್ಷಕ್ಕೆ ಸಾಂದ್ರವಾಗಿ ಶಾಖೆಪ್ರಶಾಖೆಗಳಿಂದ ಹಬ್ಬಿಕೊಂಡಿತ್ತು. ಅದರಲ್ಲಿ ಒಬ್ಬ ಮನುಷ್ಯನು ಅನಾಯಾಸವಾಗಿ ಮಲಗುವಹಾಗೆ ವಿಸ್ತಾರವಾಗಿತ್ತು. ಪಿತಮನು ಆ ಸ್ಥಳದಲ್ಲಿ ಸ್ವಚ್ಛಂದವಾಗಿ ಶಯನಮಾಡಿದ್ದನು. ವೇಣುವನ್ನು ತಿರಿಗಿಸುತ್ತ ಹಿಂದುಮುಂದು ಮಾಡುತ್ತ ಅನ್ಯಮನಸ್ಕನಾಗಿ ಏನೋ ಚಿಂತಿಸುತಲಿದ್ದ ಸಮಯದಲ್ಲಿ ಜನಾರ್ದನನ ಮಾತನ್ನು ಕೇಳಿ ಎದ್ದುಕೂತು, ನಾನು ಇಲ್ಲಿಯೇ ಇದ್ದೇನೆ, ಇಳಿದುಬರಲೆ, ಏನು ? ಎಂದು ಕೇಳಿದನು.

ಜನಾರ್ದನ—ನಾವು ಯಾವ ಉದ್ದೇಶದಿಂದ ಬಂದಿದ್ದೇವೋ ಅದನ್ನು ನೀನು ಕೇಳಿದರೆ ಇಳಿದುಬರಲಾರೆ.

ಪಿತಮ—ಅದು ಚೆನ್ನಾಗಿ ಬಲ್ಲೆ. ಮತ್ತು ನೀನು ಜನಾರ್ದನನೆಂದೂ ಬಲ್ಲೆನು. ಚೂಡಾಧನ ಬಾಬುವು ನಿಮ್ಮನ್ನು ಈ ಸತ್ಕಾರ್ಯಕ್ಕೆ ಕಳುಹಿಸಿದ್ದಾನೆಂದು ಮೊದಲೇ ಗೊತ್ತು.

ಜನಾರ್ದನನು ಅವಾಕ್ಕಾಗಿ ನಿಂತನು. ಕೈಯಲ್ಲಿದ್ದ ಕತ್ತಿಯ ಅಲುಗನ್ನು ಅಲುಗಾಡಿಸುತ್ತ ಮನಸ್ಸಿನಲ್ಲಿ, ನನ್ನ ಹೆಸರು ಜನಾರ್ದನನೆಂಬುವುದು ಈ ಹುಚ್ಚನಿಗೆ ಹೇಗೆ ಗೊತ್ತು? ಸಿಂಹಶತಗ್ರಾಮದಲ್ಲಿ ನನ್ನನ್ನು ಯಾರೂ ಅರಿಯರು. ನಾನು ಹಗಲುಹೊತ್ತು ಹೊರಟವನಲ್ಲ. ನನಗೆ ಯಾರ ಗುರುತೂ ಇಲ್ಲ. ಹೀಗಿರುವಲ್ಲಿ ಇವನು ನನ್ನ ಗುರುತನ್ನ ಹೇಗೆ ಕಂಡುಹಿಡಿದಿರಬಹುದು. ಒಂದುವೇಳೆ ಗುರುತಿಸಿದರೂ ತನ್ನ ಮರಣಕ್ಕೆ ತಾನೇ ಸಿಕ್ಕು ಬಿಳುವನೇತಕ್ಕೆ? ಅತಏವ, ಪಿತಮನು ಹುಚ್ಚನಾಗಿರಬೇಕು, ಅಥವಾ ಮಹಾ ವೀರನಾಗಿರಬೇಕು. ಎರಡೂ ಸಂಭವ. ಏತಕ್ಕೆಂದರೆ, ಉಭಯ ಪ್ರಕಾರ ವ್ಯಕ್ತಿಗಳ ಪ್ರಕೃತಿಯು ಕೆಲವು ಅಂಶಗಳಲ್ಲಿ ಸಮಾನವಾಗಿರುವುದು. ಅದು ಹೇಗಾದರೂ ಆಗಲಿ, ಪಿತಮನನ್ನು ಕಣ್ಣಿನಿಂದ ನೋಡಿದರೆ ಹೇಳಬಹುದೆಂದಂದುಕೊಂಡು, ಪಿತಮನಿಗೆ ಪ್ರತ್ಯುತ್ತರವಾಗಿ, ಸತ್ಕಾರ್ಯವಾಗಲಿ, ಅಸತ್ಕಾರ್ಯವಾಗಲಿ, ಯಾವಾಗ ನಾನು ಆ ಕಾರ್ಯದಲ್ಲಿ ಪ್ರತಿಯಾಗಿದ್ದೇನೋ ಆಗ ಅದನ್ನು ಮಾಡಿ ಪೂರೈಸಲೇಬೇಕಾಗಿದೆ ಎಂದನು.

ಪಿತಮ—ನನ್ನ ಆಕ್ಷೇಪಣೆ ಇಲ್ಲ-ಇಷ್ಟುಮಾತ್ರ ಕೇಳುತ್ತೇನೆ, ಏನೆಂದರೆ;-ಅಸ್ತ್ರದಿಂದಲೋ?

ಕಾಳೀದಾಸ—ಈ ಕತ್ತಿಯಿಂದ.

ಪಿತಮ—ದೋಣ್ಣೆಯಾಗಿದ್ದರೆ ಚೆನ್ನಾಗಿತ್ತು. ನನಗೆ ಆ ಆಶೆಯು ಬಹಳ ದಿವಸದಿಂದ ಇತ್ತು. ಕತ್ತಿಯಿಂದಾದರೂ ಹತಿ ಏನೂ ಇಲ್ಲ.

ಹೀಗೆ ಹೇಳಿ ಪಿತಮನು ಮರದಿಂದ ಇಳಿಯಲಾರಂಭಿಸಿದನು. ಜನಾರ್ದನನು, ಇವನು ನಿಜವಾಗಿಯೂ ಹುಚ್ಚನೆಂದನು.—ಅಷ್ಟರೊಳಗೆ ಪಿತಮನು ನಗುಮುಖನಾಗಿ ಜನಾರ್ದನನಿದುರಿಗೆ ಬಂದು ನಿಂತನು. ಈ ಸಮಯದಲ್ಲಿ ಕಾಳೀದಾಸನು ಹಿಂದಿನಿಂದ ಕತ್ತಿಯನ್ನು ಮೇಲಕ್ಕೆತ್ತಿದನು. ಜನಾರ್ದನನು ಹಾರಿ ಆ ಕತ್ತಿಯನ್ನು ಕಿತ್ತುಕೊಂಡನು. ಕಾಳೀದಾಸನು ಚೀತ್ಕಾ

ರಮಾಡುತ್ತ ಜನಾರ್ದನನನ್ನು ಬೈದನು. ಬೈದು, ನೀನು ಕೃತಘ್ನ, ಯಾರ ಉಪ್ಪು ತಿಂದಿದ್ದೀಯೋ ಅವನ ಕೆಲಸಕ್ಕೆ ವ್ಯಾಘಾತವನ್ನುಂಟುಮಾಡುತ್ತಿ ಎಂದನು.

ಜನಾರ್ದನ- ನಾನು ಯಾರ ಉಪ್ಪು ತಿಂದುದು? ಚೂಡಾಧನನ ಉಪ್ಪೆ? ಸುಳ್ಳುಮಾತು! ನಾನು ಅವನಿಗೆ ಸಹಾಯಕನು. ನನ್ನ ಸಹಾಯದಿಂದ ಅವನು ರಾಜನಾಗಬೇಕೆಂದು ಇಷ್ಟವುಳ್ಳವನಾಗಿದ್ದಾನೆ. ಅವನನ್ನು ರಾಜನನ್ನಾಗಿ ಮಾಡುವುದೂ ಮಾಡದಿರುವುದೂ ನನ್ನ ಇಷ್ಟದಲ್ಲಿದೆ. ಮಾಡಿದರೆ ಮಾಡಿದೆ. ಮಾಡದಿದ್ದರೆ ಬಿಟ್ಟೆ.

ಕಾಳೀದಾಸ—ಬಳ್ಳೆಯದು—ಹಾಗಾದರೆ ನಾನು ಹೋಗುತ್ತೇನೆ. ಈ ಮಾತನ್ನೇ ಚೂಡಾಧನಬಾಬುವಿಗೆ ಹೇಳುತ್ತೇನೆ.

ಜನಾರ್ದನ—ಅಗತ್ಯವಾಗಿ ಇದೇಮಾತನ್ನೇ ಹೇಳು. ಚೂಡಾಧನನು ಬಂದು ನನ್ನ ಕಾಲನ್ನು ಹಿಡಿದುಕೊಳ್ಳಬೇಕೇ ಹೊರತು ನಾನು ಅವನ ಕಾಲನ್ನು ಹಿಡಿಯಬೇಕಾದುದಿಲ್ಲ.

ಕಾಳೀದಾಸನು ದರ್ಪದಿಂದ ಹೊರಟುಹೋದನು.

ಜನಾರ್ದನನು ಪಿತಮನನ್ನು ಕುರಿತು, ನಿನಗೆ ಸಾಯುವುದಕ್ಕೆ ಭಯವಿಲ್ಲವೇತಕ್ಕೆ ? ಎಂದು ಕೇಳಿದನು.

ಪಿತಮ—ಗೊತ್ತಿಲ್ಲ.

ಜನಾರ್ದನ—ಈಗ ನಾನು ನಿನ್ನನ್ನು ಪ್ರಾಣದಿಂದ ರಕ್ಷಿಸಿದ್ದೇನೆ. ಹೀಗಿರುವಾಗ ನೀನು ನನ್ನ ಅನುಗತನಾಗಿ ನಾನು ಹೇಳುವಹಾಗೆ ಮಾಡುವೆ ಎಂದು ತೋರುತ್ತದೆ.

ಪಿತಮ—ನನ್ನನ್ನು ಹತ್ಯಮಾಡಬೇಕೆಂದು ತೋರುತ್ತದೆ. ಇಲ್ಲದಿದ್ದರೆ ನಿನಗೆ ಎರಡು ದುಡ್ಡು ಲಾಭವಾಗುವುದು ಹೋಗುತ್ತದೆ.

ಜನಾರ್ದನನು ಬಹಳ ಕೋಪಗೊಂಡು, ನಾನು ಎರಡು ದುಡ್ಡಿನ ಆಶೆಗೆ ನರಹತ್ಯೆ ಮಾಡಲೆ ? ಎಂದನು.

ಪಿತನು—ಎರಡು ಇಲ್ಲದಿದ್ದರೆ ನಾಲ್ಕು ದುಡ್ಡು—ಇಲ್ಲದಿದ್ದರೆ ಇನ್ನು ಸ್ವಲ್ಪ ಹೆಚ್ಚು. ಈ ವ್ರತದಲ್ಲಿ ದುಡ್ಡು ಹೊರತು ನಿನಗೆ ಬೇರೆ ಉದ್ದೇಶವಿಲ್ಲ. ಚೂಡಾಧನ ಬಾಬುವು ರಾಜನಾಗುವನು. ನೀನು ಮೂರುನಾಲ್ಕು ದುಡ್ಡನ್ನು ಪಾರಿತೋಷಕವಾಗಿ ಹೊಂದುವೆ. ಯಾರಾರಿಗೆ ಎಷ್ಟೆಷ್ಟು ಅದೃಷ್ಟವೋ ಅಷ್ಟೇ—ನಾನು ಪ್ರಾಣವನ್ನು ಬಿಟ್ಟು ನಿನಗೆ ನಾಲ್ಕು ದುಡ್ಡು ಕೊಡಿಸುವೆನು. ನೀನು ನನ್ನನ್ನು ಹತ್ಯೆಮಾಡಿ ಇನ್ನೊಬ್ಬನಿಗೆ ರಾಜ್ಯವನ್ನು ಕೊಡಿಸುವೆ. ಹೀಗೆ ಭಾಗಮಾಡಿಕೊಳ್ಳಿರಿ.

ಜನಾರ್ದನನು, ಗೊತ್ತಾಯಿತು, ನಿನಗೆ ಭಯ, ನೀನು ಏನೇನೋ ಹೇಳಿ ನನ್ನನ್ನು ಈ ಕಾರ್ಯದಿಂದ ನಿವೃತ್ತಿಮಾಡುವದಕ್ಕೆ ಪ್ರಯತ್ನಪಡುತ್ತಿ. ಅದು ವ್ಯರ್ಥ. ಮರಣವೇ ನಿನಗೆ ಅವಶ್ಯಕವಾಗಿದೆ. ಆತಏವ ನಿನ್ನ ಇಷ್ಟದೇವತೆಯನ್ನು ಸ್ಮರಿಸಿಕೊ, ಎಂದನು.

ಪಿತನು—ನಾನು ಎಲ್ಲಾ ಸಮಯದಲ್ಲಿಯೂ ಸಿದ್ಧನಾಗಿದ್ದೇನೆ. ನೀನು ಕತ್ತಿಯನ್ನೆತ್ತು—ನೀನು ಹೇಗೆ ಕಾಣುವಿಯೊ? ನೋಡಬೇಕು—

'ಇದೋ, ಇದನ್ನು ನೋಡು' ಎಂದು ಜನಾರ್ದನನು ರಭಸದಿಂದ ಹದನಾದ ಕತ್ತಿಯನ್ನೆತ್ತಿದನು. ಚಂದ್ರಕಿರಣದಲ್ಲಿ ಅದರ ಅಲುಗು ಮಿಂಚಿನಹಾಗೆ ಫಳಫಳಿಸಿತು. ಆದರೆ ಕತ್ತಿಯು ಕೆಳಗೆ ಇಳಿಯಲಿಲ್ಲ. ಹಿಂದಿನಿಂದ ಕಾಳೀದಾಸನು ಜನಾರ್ದನನ ಕೈಯನ್ನು ಹಿಡಿದುಕೊಂಡನು.

ಕಾಳೀದಾಸನು ಜನಾರ್ದನನ ಸಂಗಡ ವಾಚಾಟವನ್ನು ಮಾಡಿಕೊಂಡು ಸಿಂಹಶತಗ್ರಾಮಾಭಿಮುಖವಾಗಿ ಹೋಗುತ್ತ ಮನಸ್ಸಿನಲ್ಲಿ, ಜನಾರ್ದನನು ತಾನೇ ಈ ಕೆಲಸದಲ್ಲಿ ಕೃತಕಾರ್ಯನಾಗಬೇಕೆಂದು ನನ್ನನ್ನು ಬಿಡಿಸಿದ್ದಾನೆ. ನಾನು ಅವನನ್ನು ಈ ಕೆಲಸದಿಂದ ತಪ್ಪಿಸಬೇಕೆಂದಂದುಕೊಂಡು ಹಿಂದಿರುಗಿ ಬಂದು ನೋಡಲಾಗಿ ಆವನು ಯೋಚಿಸಿದ್ದಹಾಗೆಯೇ ನಡೆಯುತಲಿತ್ತು. ಅದನ್ನು ಕಂಡು ಆವನು ಹಾರಿ ಕತ್ತಿಯನ್ನೆತ್ತಿದ್ದ ಜನಾರ್ದನನ ಕೈಯನ್ನು ಹಿಡಿದುಕೊಂಡನು.

ಆಗ ಅವರಿಬ್ಬರಿಗೂ ವಿಷಮ ವಿರೋಧ ಉಂಟಾಯಿತು. ಬರೆ ಮಾತಿನಿಂದ ಅಲ್ಲ. ಅಸ್ತ್ರಗಳ ಸಂಚಾಲನವಾಯಿತು. ಪಿತಮನು ಈ ಅವಕಾಶದಲ್ಲಿ ಹೊರಟುಹೋದನು. ಅವನನ್ನು ಅವರಿಬ್ಬರಲ್ಲಿ ಯಾರೂ ನೋಡಲಿಲ್ಲ. ಅವರವರ ವಿರೋಧವು ಶಾಂತವಾದಮೇಲೆ ಇಬ್ಬರೂ ವ್ಯಸ್ತರಾಗಿ ಪಿತಮನನ್ನು ಹುಡುಕಲಾರಂಭಿಸಿದರು.

ಕಾಳೀದಾಸನು ಮರವನ್ನು ಹತ್ತಿನೋಡಿ ಪಿತಮನು ಮರದಮೇಲೆ ಇಲ್ಲವೆಂದನು. ಜನಾರ್ದನನು ಅದನ್ನು ನಂಬಲಿಲ್ಲವಾಗಿ ಅವನೂ ಮರವನ್ನೇರಿ ನೋಡಿದನು. ಅಲ್ಲಿ ಯಾರೂ ಇರಲಿಲ್ಲವಾದುದರಿಂದ ಇಬ್ಬರೂ ಬಟ್ಟೆಗೆ ಮರದಿಂದಿಳದರು. ಪಿತಮನನ್ನು ಕೂಗಿದರು. ಕಾಳೀದಾಸನು ಗಟ್ಟಿಯಾಗಿ ನಕ್ಕನು. ಜನಾರ್ದನನ್ನು ಅಪಹಾಸ್ಯ ಮಾಡುವುದಕ್ಕೆ ಚೀತ್ಕಾರ ಮಾಡುತ್ತ, ಪಿತಮ! ಎಲ್ಲಿದ್ದೀಯೋ, ಬೇಗನಬಾರೊ, ಸಾಯುವುದಕ್ಕೆ ಇನ್ನು ಸಾವಕಾಶಮಾಡಬೇಡವೊ, ನಾವು ಕತ್ತಿಯನ್ನು ಹಿಡಿದು ನಿಂತುಕೊಂಡಿದ್ದೇವೊ, ಎಂದು ಕೂಗುಹಾಕಿದನು.

ಜನಾರ್ದನ—ಹುಡುಗಾಟವಲ್ಲ–ಪಿತಮನು ಎಲ್ಲಿ ಬಾತುಕೊಂಡಿದ್ದಾನೆ?

ಕಾಳೀದಾಸ—ಮತ್ತಾವುದೋ ಮರದಮೇಲೆ ಹೋಗಿರಬೇಕು.

ಹೀಗೆಂದು ಹೇಳಿ ಕಾಳೀದಾಸನು ಇನ್ನೊಂದು ಮರದಮೇಲೆ ಹತ್ತಿದನು. ಅಲ್ಲಿ ಪಿತಮನು ಇಲ್ಲದುದನ್ನು ಕಂಡು ಮೂರನೆಯ ಮರವನ್ನು ಹತ್ತಿದನು. ಹೀಗೆ ಅವರಿಬ್ಬರೂ ಕ್ರಮಾನ್ವಯವಾಗಿ ಅನೇಕ ವಕುಳ, ಆಮ್ರ, ತಿಂತ್ರಣೀ ಮುಂತಾದ ವೃಕ್ಷಗಳನ್ನೇರಿಳದು ಹುಡುಕಿದರು. ಈ ಸಮಯದಲ್ಲಿ ಪಿತಮನು ಮೆಲ್ಲಮೆಲ್ಲಗೆ ಬಂದು ಪ್ರಾಂತರವನ್ನು ಪಾರಾಗಿ ಹೋಗಿ ಅಲ್ಲಿ ಮತ್ತೊಂದು ಸರೋವರದ ಬಳಿಗೆ ಹೋಗಿದ್ದನು. ಪೂರ್ವಕಾಲದಲ್ಲಿ ಈ ದೇಶದಲ್ಲಿ ಅನೇಕ ಕೆರೆ, ಸರೋವರಗಳಿದ್ದವು. ಈಗ ಹಿಂದೂ ಧರ್ಮದೊಂದಿಗೆ ಅವೆಲ್ಲಾ ಲೋಪವಾದವು. ಇಂಗ್ಲೀಷುಸರ್ಕಾರದವರು

ತಕಾವಿ ಅಡ್ವಾನಸು (Tuccavi Advnce) ಹಣವನ್ನು ಕೊಟ್ಟು ಹಿಂದೂ ಧರ್ಮದಲ್ಲಿ ಉಕ್ತವಾಗಿರುವುದನ್ನು ಆಚರಿಸುತಲಿದ್ದಾರೆ. ಪಿತನುನು ಆ ಸರೋವರದ ಸಮೀಪದಲ್ಲಿದ್ದ ಒಂದು ವಟವೃಕ್ಷದ ಕೆಳಗೆ ಶಯನ ಮಾಡಿದನು. ಕೂಡಲೆ ನಿದ್ರೆಯೂ ಬಂತು.



## ಇಪ್ಪತ್ತೆಂಟನೆಯ ಪರಿಚ್ಛೇದ.

ಯಾವರಾತ್ರಿ ಪುಟ್ಟುವಿನ ತಾಯಿಯು ಗೃಹತ್ಯಾಗಿಯಾಗಿ ಹೊರಟು ಹೋದಳೋ ಆ ರಾತ್ರಿಯ ಪ್ರಥಮ ಭಾಗದಲ್ಲಿ ದಾಸಿ ವಶೀಕರಿಣಿಯು ಮಲಗಿಕೊಂಡು ಎಲೆ ಅಡಿಕೆಯನ್ನು ನಮಲುತ್ತ ಮತ್ತೊಬ್ಬ ದಾಸಿಯನ್ನು ಕುರಿತು, ಎಲೇ ಮೇನಕೇ ತಾಯಿ! ಇನ್ನು ಇಲ್ಲಿ ನಾನು ಚಾಕರಿ ಮಾಡಲಾರೆನೆಂದಳು.

ಮೇನಕೆಯ ತಾಯಿ—ಏತಕ್ಕೆ ?

ವಶೀಕರಣಿ—ಇಲ್ಲೇನೂ ಸುಖವಿಲ್ಲ. ನಾವು ಯಾರಲ್ಲಿದ್ದೆವೋ, ಅವಳಿಗೆ ಸೊಗಸು ಇಲ್ಲ. ಮೋಹವಿಲ್ಲ—ಏನೇನೂ ಇಲ್ಲ. ಈಹೊತ್ತು ಒಂದು ಹಸಿ ಗಂಧದ ಬಿಲ್ಲೆಯನ್ನು ತೇದು ಮೈಗೆ ಹಚ್ಚಿದರೆ ಅವಳಿಗೆ ಅದಾಗಲಿಲ್ಲ. ಆ ಬಿಲ್ಲೆಯನ್ನು ದುರ್ಗಂಧವೆಂದು ಹೇಳಿದಳು. ಇಂತಹ ಸೊಗಸುಗಾತಿಯ ಕಾಲಿಗೆ ನಮಸ್ಕಾರ! ನಾನು ಬೆಳಗ್ಗೆ ಅಷ್ಟುಹೊತ್ತಿಗೇನೇ ಹೊರಟುಹೋಗುತ್ತೇನೆ.

ಮೇನಕೆಯ ತಾಯಿ—ಬೆಳಗ್ಗೆ ಏತಕ್ಕೆ? ಈಗಲೇ ಹೋಗಕೂಡದೇತಕ್ಕೆ ?

ವಶೀಕರಣಿ—ರಾತ್ರಿ, ಕಗ್ಗತ್ತಲು, ಈಗ ನನ್ನ ಜತೇಲಿ ಯಾರು ಬಂದಾರು ?

ಮೇನಕೆಯ ತಾಯಿ—ಯಮನೇ ಬರುತ್ತಾನೆ.

ವಶೀಕರಿಣಿ—ಯಮನಿಗೂ ಮುದಿಗೊಡ್ಡುಗಳಿಗೂ ಸ್ನೇಹ. ನಿನ್ನಂತಹ ಮುದಿಗೊಡ್ಡು ಸಿಕ್ಕಿದರೆ ಯಮನಿಗೆ ಬಹಳ ಸಂತೋಷ. ನನ್ನಲ್ಲಿಗೆ ಯಮನು ಏತಕ್ಕೆ ಬಂದಾನು ?

ಮೇನಕೆಯ ತಾಯಿಯು ಬೆಳಿಗ್ಗೆ ಎದ್ದು ನೋಡುವಾಗ ವಶೀಕರಿಣಿಯು ನಿಜವಾಗಿಯೂ ಹೊರಟುಹೋಗಿದ್ದಳು. ಸ್ವಲ್ಪದೂರದಲ್ಲಿಯೇ ಪುಟ್ಟುವಿನ ತಾಯಿಯು ಮನೆಯಲ್ಲಿಲ್ಲದಿರುವುದನ್ನು ತಿಳಿದು ಮೇನಕೆಯ ತಾಯಿಯು ರಾಮಸೇವಕನ ತಾಯಿಯ ಬಳಿಗೆ ಹೋಗಿ, ಹಾಳುಮೋರೆ ವಶೀಕರಿಣಿಯೊಂದಿಗೆ ಯಜಮಾನಿಯವರು ಎಲ್ಲಿಗೆ ಹೋಗಿದ್ದಾರೆಂದು ಕೇಳಿದಳು. ವೃದ್ಧಳಾದ ರಾಮಸೇವಕನ ತಾಯಿ—ಏನುಗೊತ್ತೇ, ತಾಯಿ! ವಶೀಕರಿಣಿಯು ಸಂಗಡ ಹೋಗಿದ್ದಾಳೊ? ಇನ್ನು ಯೋಚನೆ ಏನು? ಕೂಡಲೆ ಬಂದಾರು.

ಮೇನಕೆಯ ತಾಯಿ — ಹಾಳು ಸುಟ್ಟುಮೋರೆ ವಶೀಕರಿಣಿ !

ಪುಟ್ಟುವಿನ ತಾಯಿಯು ಕುಲತ್ಯಾಗಿನಿಯಾಗಿದ್ದಾಳೆಂದು ಬಂದು ಮುಹೂರ್ತದಲ್ಲಿ ಎಲ್ಲೆಲ್ಲಿಯೂ ಹರಡಿಕೊಂಡಿತು. ಪುರುಷರ ಗುಂಪಿನಲ್ಲಿ ಮಹಾ ಕೋಲಾಹಲಕ್ಕಿಟ್ಟಿತು. ಎಲ್ಲರೂ ಪರಸ್ಪರ, ರಾಮಸೇವಕನ ಹೆಂಡತಿಯು ಹಾದರಗಿತ್ತಿಯೆಂದು ನಾನು ಮೊದಲೇ ಹೇಳಿದ್ದೆನೆಂದು ಹೇಳುತ್ತಿದ್ದರು.

ಪ್ರಥಮ ಕೋಲಾಹಲವು ಮಂದೀಭೂತವಾದಮೇಲೆ ಎಲ್ಲರೂ ರಾಜನನ್ನು ಉದ್ದೇಶಿಸಿ ತಿರಸ್ಕಾರಮಾಡಲಾರಂಭಿಸಿದರು. ಎಲ್ಲರಿಗೂ ರಾಜನು ವಶೀಕರಿಣಿಯನ್ನು ಈ ಕೆಲಸಕ್ಕೋಸ್ಕರವೇ ಕಳುಹಿಸಿದ್ದೆನೆಂದು ಸ್ಥಿರವಾದ ನಂಬುಗೆಯುಳ್ಳವರಾದರು. ಅದುಕಾರಣ ರಾಜನಮೇಲೆ ಎಲ್ಲರ ಕ್ರೋಧವೂ ಹೆಚ್ಚಾಯಿತು. ರಾಮಸೇವಕನ ಹೆಂಡತಿಯನ್ನು ರಾಜನು ಎಲ್ಲಿಯೋ ಮರೆ

ಮಾಡಿ ಇಟ್ಟಿರಬೇಕು. ಆ ಸ್ಥಳವನ್ನು ಗೊತ್ತು ಹಚ್ಚಿಸಬೇಕೆಂದು ಎಲ್ಲರೂ ಸ್ಥಿರಮಾಡಿಕೊಂಡರು.

ಪುಟ್ಟುವಿನ ತಾಯಿಯನ್ನು ಹುಡುಕುವುದಕ್ಕೆ ಯುವಕರೆಲ್ಲರೂ ತಮಗೆತಾವೇ ಸಿದ್ಧರಾದರು. ಅವರಲ್ಲಿ ಕೆಲವರು (ಪಾಠಶಾಲೆಗಳ ವಿದ್ಯಾರ್ಥಿಗಳೇ ಹೆಚ್ಚು) ಸ್ಮೃತಿ ಶಾಸ್ತ್ರ ಪುಸ್ತಕ ಇಡುವ ಮಣೆಗಳನ್ನು ಕೈಲಿ ಹಿಡಿದುಕೊಂಡು ಹೊರಟರು. ಎಲ್ಲಿ ಬಾಗಿಲು ಹಾಕಿದ್ದರೂ ಅಲ್ಲಿ ನಿಂತು ಬಾಗಿಲನ್ನು ತಟ್ಟುವರು.

ಕಡೆಗೆ ಬಂದುದಿನ ಎಲ್ಲರೂ ಸೇರಿ ರಾಮಸೇವಕನನ್ನು ಕುರಿತು, ನೀನು ಬಂದು ತಡವೆ ಸ್ವಂತವಾಗಿ ರಾಜನ ಹತ್ತಿರಕ್ಕೆ ಹೋಗಿ ಮಾಧವೀಲತೆಯು ಎಲ್ಲಿದ್ದಾಳೆಂದು ಕೇಳು ಎಂದು ಹೇಳುವರು. ರಾಮಸೇವಕನು ಅದಕ್ಕೆ ಏನೊಂದು ಪ್ರತ್ಯುತ್ತರವನ್ನೂ ಕೊಡಲಿಲ್ಲ. ಆಗವನು ಯಜ್ಞೋಪವೀತದ ಸಿಕ್ಕುಬಿಡಿಸುತಲಿದ್ದನು. ನತಶಿರನಾಗಿ ಅದೇ ಕೆಲಸವನ್ನು ಮಾಡುತಲಿದ್ದನು. ರಾಮಸೇವಕನು ರಾಜಾನುಗ್ರಹದಿಂದ ಐಶ್ವರ್ಯವಂತನಾದ ಮೊದಲ್ಗೊಂಡು ಯಾರೂ ಅವನ ಮುಖಾವಲೋಕನವನ್ನೂ ಮಾಡುತ್ತಿರಲಿಲ್ಲ. ಯಾರೂ ಅವನ ಮನೆಗೆ ಹೋಗುತ್ತಿರಲಿಲ್ಲ. ಆಗ ಅವನು ಸಮಾಜದಲ್ಲಿ ತಿರಸ್ಕೃತನಾಗಿ ಸಮಾಜಚ್ಯುತನಾಗಿದ್ದನು. ಈಗ ಊರಿನವರು ಬರುವುದಕ್ಕಾರಂಭವಾಯಿತು. ರಾಮಸೇವಕನು ಅವರ ಮಾತಿಗೆ ಉತ್ತರವನ್ನು ಕೊಡುತ್ತಿರಲಿಲ್ಲ. ಅವರಿಗೆ ಅಸಮ್ಮಾನವನ್ನೂ ಮಾಡುತ್ತಿರಲಿಲ್ಲ. ಅವನ ಹೆಂಡತಿಯು ಸಮಾಚಾರವನ್ನೆತ್ತಿದರೆ ಅವನು ಅಲ್ಲಿಂದೆದ್ದು ಹೋಗಿ ಬೇರೆಕಡೆಯಲ್ಲಿ ಕೂತುಕೊಂಡು ತಂಬಾಕುವನ್ನು ತೀಡುತಲಿರುವನು.

ದಾಸಿಗಳ ಬಾಯಿಯಿಂದ ರಾಣಿಯು ವಶೀಕರಿಣಿಯೊಂದಿಗೆ ಪುಟ್ಟುವಿನ ತಾಯಿ ಹೋದಳೆಂದು ಕೇಳುತಲೇ, ಪುಟ್ಟುವಿನ ತಾಯಿಯು ಕುಲತ್ಯಾಗಿನಿ

ಯಾದಳೆಂದೂ ಹಾಗಿಲ್ಲದಿದ್ದರೆ ವಶೀಕರಿಣಿಯೊಂದಿಗೆ ಏತಕ್ಕೆ ಹೋಗುತಲಿದ್ದ ಳೆಂದೂ ಹೇಳಿಕೊಂಡಳು. ಬಂದೆರಡು ದಿನಗಳಮೇಲೆ ದಾಸಿಗಳ ಮುಖ ಭಂಗಿ ಮುಂತಾದವುಗಳಿಂದ, ಈ ಸಂಬಂಧದಲ್ಲಿ ರಾಜನೂ ಕಳಂಕಿತನಾಗಿ ದ್ದಾನೆಂಬ ಜನರಲ್ಲಿ ಪ್ರವಾದವಿದೆಯೆಂದು ರಾಣಿಯು ತಿಳಿದುಕೊಂಡವಳಾಗಿ ಚಮತ್ಕೃತಳಾದಳು. ಈ ವಿಚಾರದಲ್ಲಿ ಯಾರನ್ನೂ ಏನೊಂದು ಸಮಾಚಾ ರವನ್ನೂ ವಿಚಾರಿಸಿಕೊಳ್ಳದೆ ತನ್ನೊಳುತಾನೇ ಈ ಪ್ರವಾದಕ್ಕೆ ಕಾರಣ ವನ್ನು ಯೋಚಿಸಿಕೊಂಡಳು. ಕಾರಣವು ಕೇವಲ ಅಮೂಲಕವಾದುದಾಗಿ ತೋರಲಿಲ್ಲ. ಪೂರ್ವವೃತ್ತಾಂತವು ಮನಸ್ಸಿಗೆ ಜ್ಞಾಪಕಕ್ಕೆ ಬಂತು. ರಾಜನು ಮಾಧವೀಲತೆಯನ್ನು ಏತಕ್ಕೆ ಇಷ್ಟು ಪ್ರೀತಿಸಬೇಕು? ಅವಳಿಗೋಸ್ಕರ ಇಷ್ಟು ಹಣವನ್ನು ವೆಚ್ಚಮಾಡಲೇತಕ್ಕೆ? ಅವಳ ತಾಯಿಗೆ ಇಷ್ಟು ಆಭ ರಣಗಳನ್ನು ಕೊಡುವುದರ ತಾತ್ಪರ್ಯವೇನು? ಮಾಧವೀಲತೆಯ ಆಕಾರ ರೂಪುಗಳೆಲ್ಲಾ ರಾಜನ ರೂಪು ಆಕಾರದಹಾಗೆ ಏತಕ್ಕೆ ಇರಬೇಕು? ನೋಡಿ ದಮಾತ್ರದಿಂದ ಮಾಧವೀಲತೆಯು ರಾಜನ ಕನ್ಯೆಯೆಂದು ಏತಕ್ಕೆ ಬೋಧೆ ಯಾಗಬೇಕು? ಎಂದು ಹೀಗೆಲ್ಲಾ ತನ್ನೊಳು ತಾನೇ ಕೇಳಿಕೊಂಡು ರಾಣಿ ಯು ದೀರ್ಘನಿಶ್ವಾಸವನ್ನು ಬಿಟ್ಟು, ಗೊತ್ತಾಯಿತೆಂದಂದುಕೊಂಡಳು.

ಜ್ಯೋತ್ಸ್ನಾವತಿಯ ವಿಷಯದಲ್ಲಿ ರಾಜನಮೇಲೆ ರಾಣಿಯ ಮನಸ್ಸು ಮೊದಲೇ ಭಾರವಾಗಿತ್ತು. ಈಗ ಅದು ಮತ್ತಷ್ಟು ಗುರುತರವಾಯಿತು. ಅವಳು ಮೊದಲು, ಜ್ಯೋತ್ಸ್ನಾವತಿಯನ್ನು ಹುಡುಕುವುದಕ್ಕೆ ರಾಜನು ತಾನೇ ಏತಕ್ಕೆ ಹೋಗಬೇಕಾಗಿತ್ತು? ಜನರನ್ನು ಕಳುಹಿಸಿದ್ದರೆ ಸಾಕಾ ಗಿತ್ತು. ರಾಜನು ಹೋದುದು ತನ್ನನ್ನು ಮುಖತಗ್ಗಿಸುವುದಕ್ಕೋಸ್ಕರ ಹೋಗಿದ್ದಾನೆಂದು ತಿಳಿದುಕೊಂಡಿದ್ದಳು. ಈಗ ರಾಣಿಯು ಜ್ಯೋತ್ಸ್ನಾ ವತಿಯನ್ನು ಹುಡುಕುವುದಕ್ಕೆ ಹೋದುದು ನೆಪಮಾತ್ರ. ಮಾಧವೀಲತೆಯ ತಾಯಿಯನ್ನು ನೋಡಿಕೊಂಡು ಬರುವುದು ಮೂಲ ಉದ್ದೇಶವೆಂದು ತಿಳಿದು

ಕೊಂಡು, ಸರ್ಪಿಯಹಾಗೆ ದೀರ್ಘನಿಶ್ವಾಸನ್ನು ಬಿಟ್ಟು, ಗೊತ್ತಾಯಿತೆಂದಂದುಕೊಂಡಳು.

ರಾಣಿಯು ನಾನಾಸಂಗತಿಗಳನ್ನು ಯೋಚಿಸಿಕೊಳ್ಳುತ್ತಾ ದರ್ಪದಿಂದೆದ್ದು ಬೇರೆ ಕೊಠಡಿಗೆ ಹೋಗಿ ತನ್ನ ವಿಶ್ವಾಸಕ್ಕೆ ಪಾತ್ರರಾದ ಪರಿಚಾರಕಿಯರನ್ನು ಕರೆದಳು. ದಾದಿ ರಾಮಿಯು ಮಾಧವೀಲತಾ ಸಂಬಂಧವಾಗಿ ರಾಜಸಭೆಯಲ್ಲಿ ಹೇಳದುದನೆಲ್ಲಾ ಪರಿಚಾರಕರು ಕೇಳಿ ತಿಳಿದಿದ್ದರು. ಆದರೆ ರಾಣಿಗೆ ಆ ವೃತ್ತಾಂತವು ಇನ್ನೂ ತಿಳಿಯಲಿಲ್ಲವೆಂದು ಪರಿಚಾರಕರಿಗೆ ತಿಳಿಯದು. ರಾಣಿಯು ಅತಿ ತೀವ್ರ ದೃಷ್ಟಿಯಿಂದ ಅವರನ್ನು ಕುರಿತು, ನಿಮ್ಮಲ್ಲಿ ಯಾರು ಮಾಧವೀಲತೆಯನ್ನು ಪತ್ತೆ ಮಾಡಿಕೊಂಡುಬರುವಿರೋ ಅವರಿಗೆ ನನ್ನ ಸ್ತ್ರೀ ಧನದಲ್ಲಿ ಅರ್ಧವನ್ನು ಕೊಡುವೆನೆಂದು ಹೇಳಿದಳು. ರಾಣಿಯ ಚಾಂಚಲ್ಯವು ತನ್ನ ಸ್ವಂತ ಮಗಳ ವಿಚಾರವಾಗಿ ಇಷ್ಟು ಆತರವನ್ನು ಹುಟ್ಟಿಸಿರಬೇಕೆಂದು ತಿಳಿದುಕೊಂಡು ಪರಿಚಾರಕರು ನಿರುದ್ವೇಗರಾಗಿ ಮಾಧವೀಲತೆಯನ್ನು ಹುಡುಕುವುದಕ್ಕೆ ಜನರು ಆಗಲೇ ಹೋಗಿದ್ದಾರೆ, ಒಂದೆರಡು ದಿನದಲ್ಲಿ ಆ ಸಮಾಚಾರವು ಬರುವುದೆಂದು ಹೇಳಿದರು. ರಾಣಿಯು ವಿರಕ್ತಳಾಗಿ, ಆ ಹುಡುಕುವುದು ನನಗೆ ಬೇಕಾಗಿಲ್ಲ. ನನ್ನ ಸ್ವಂತ ಜನರೇ ಹೋಗಿ ಹುಡುಕಿಕೊಂಡು ಬರಬೇಕೆಂದು ಹೇಳುತ್ತಿರುವಾಗ ರಾಣಿಯ ದೃಷ್ಟಿಯು ಮೊದಲಿಗಿಂತಲೂ ಹೆಚ್ಚು ಪ್ರಖರವಾಯಿತು. ಇದನ್ನು ಕಂಡು ದಾಸಿಯರು, ಅಪ್ಪಣೆಪ್ರಕಾರವೆಂದು ಹೇಳಿ ಹೊರಟುಹೋದರು.

ಮರುದಿನ ರಾಜಾ ಇಂದ್ರಭೂಪನು ಹುಡುಕುವುವಕ್ಕೆ ಹೋಗಿದ್ದವನು ಹಿಂದಿರುಗಿಬಂದನು. ಪಲ್ಲಕ್ಕಿಯಲ್ಲಿ ಕುಳಿತುಕೊಂಡು ತಪ್ಪಿಸಿಕೊಂಡು ಹೋದವರನ್ನು ಹುಡುಕಿಕೊಂಡುಹೋದರೆ ಫಲವಿಲ್ಲ. ಆದರೂ ಅವನು ನಾಲ್ಕುಕಡೆಯಲ್ಲಿಯೂ ನೋಡಿಕೊಂಡು ಬಂದನು. ಆದರೆ ರಾಜಭಗಿನಿಯು ಮಾರ್ಗದಲ್ಲಿ ಎಲ್ಲಲ್ಲಿಯೂ ಕುಳಿತಿದ್ದಹಾಗೆ ಕಾಣಿಸಲಿಲ್ಲ. ಅದುಕಾರಣ ರಾಜಾ ಇಂದ್ರ

ಭೂಪನು ಅವಳನ್ನು ಕಾಣಲೂ ಇಲ್ಲ. ರಾಜನು ಹೋಗಿ ಕೂತುಕಡೆಯ ಲ್ಲೆಲ್ಲಾ ಬ್ರಾಹ್ಮಣರೂ ಪಂಡಿತರೂ ಬಂದು ಅವನ ಸುತ್ತುಮುತ್ತು ಕೂತು ಶಾಸ್ತ್ರಾಲಾಪನನ್ನು ಮಾಡುವರು. ಆದುದರಿಂದ ರಾಜಭಗಿನಿಯನ್ನು ಹುಡುಕುವುದಕ್ಕೆ ಅವನಿಗೆ ಅವಕಾಶವೂ ಇರಲಿಲ್ಲ. ಕಡೆಗೆ ಹತಾಶ್ವಾಸ ನಾಗಿ ಹಿಂದಿರುಗಿ ಬಂದನು.

ರಾಜನು ರಾಜಭವನಕ್ಕೆ ಬರುತಲೆ ಮಂತ್ರಿಗಳೊಂದಿಗೆ ಬಂದೆರಡು ಮಾತುಗಳನ್ನಾಡಿ ಅಂತಃಪುರಕ್ಕೆ ಹೋದನು. ರಾಣಿಯು ಆತನ ಆಗಮನ ವಾರ್ತೆಯನ್ನು ಕೇಳಿ ಸ್ವಲ್ಪ ಮಂದಗಮನಳಾಗಿ ಹತ್ತಿರ ಬಂದುನಿಂತಳು. ಬೀಸಣಿಗೆಯನ್ನು ತರಲು ಒಬ್ಬ ದಾಸಿಗೆ ಅಪ್ಪಣೆ ಮಾಡಿ ರಾಜನ ಶಾರೀರಕ ಕುಶಲವಾರ್ತೆಯನ್ನು ತುಸ ಉದಾಸೀನ ಭಾವದಿಂದ ಕೇಳಿ, ಅದಕ್ಕೆ ಉತ್ತ ರವನ್ನು ಕೇಳುವುದಕ್ಕೆ ತಾಳದೆ, ಯಾವದಕ್ಕೋಸ್ಕರ ಮಹಾರಾಜರ ಸವಾರಿ ಯು ದಯಮಾಡಿತ್ತೋ ಅದು ಮಂಗಳವೋ? ಎಂದು ಕೇಳಿದಳು.

ರಾಜಾ—ಮಂಗಳವೆಂದು ಹೇಗೆ ಹೇಳಲಿ? ಜ್ಯೋತ್ಸ್ನಾವತಿಗೋ ಸ್ಕರ ಗ್ರಾಮಗ್ರಾಮದಲ್ಲಿಯೂ ಹುಡುಕಿದ್ದಾಯಿತು. ಎಲ್ಲಿಯೂ ಅವಳನ್ನು ನೋಡಲಿಲ್ಲ. ಇನ್ನೇನು ಮಾಡಲಿ? ನಾನು ಊರೂರು ಅಲಿಯುತಲಿದ್ದರೆ ರಾಜಕಾರ್ಯವು ನಡೆಯುವುದು ನಿಂತುಹೋಗುತ್ತದೆ. ಆದುದರಿಂದ ಹಿಂದಿ ರುಗಿ ಬಂದುಬಿಟ್ಟೆ. ರಾಜನ ಮಗಳಾಗಿ ಈ ಕಷ್ಟಕ್ಕೊಳಗಾದಳಲ್ಲಾ ಎಂದು ಬಹಳ ದುಃಖವಾಗುತ್ತದೆ.

ರಾಣಿ—ರಾಜಕನ್ಯೆ ಯಾರು? ಮಾಧವೀಲತೆಯೆ?

ರಾಜಾ—ಇಲ್ಲ—ನಾನು ಜ್ಯೋತ್ಸ್ನಾವತಿಯ ಮಾತನ್ನು ಹೇಳುತ್ತೇನೆ ಅವಳು—

ರಾಣಿ—ತಮ್ಮ ಮಾಧವೀಲತೆಯ ತಾಯಿಯು ಇಲ್ಲಿಂದ ಎಲ್ಲಿಗೋ ಹೋಗಿಬಿಟ್ಟಳಂತೆ?

ರಾಜಾ—ಅದೂ ಕೇಳದೆ. ನಾನು ಇಲ್ಲಿಂದ ಹೊರಡುವುದಕ್ಕೆ ಮೊದಲೇ ಕೇಳ ಹೊರಟೆ.

ರಾಣಿ—ನೋಡಿರೋಣಾಯಿತೆ? ಅದಕ್ಕೋಸ್ಕರ ಇಷ್ಟು ಸಾವಕಾಶ ವಾಯಿತೊ?

ರಾಜಾ—ಆ ವಿಚಾರದಲ್ಲಿ ಈಗ ನಾನೇನೂ ಅಷ್ಟು ವ್ಯಸ್ತನಾಗಿಲ್ಲ. ಈಗ ನನಗೆ ಜ್ಯೋತ್ಸ್ನಾವತಿಗೋಸ್ಕರ ಬಹಳ ಯೋಚನೆಯುಂಟಾಗಿದೆ. ಅವಳು ಸಿಕ್ಕುವ ಬಗೆ ಹೇಗೆ?

ರಾಣಿ—ತಾವು ಮಾಧವೀಲತೆಗೋಸ್ಕರ ವ್ಯಸ್ತರಾಗಿಲ್ಲವೆಂಬುದು ಸ್ವಲ್ಪ ಗೊತ್ತಾಯಿತು.

ಹೀಗೆಂದು ಹೇಳಿ ರಾಣಿಯು ಹಠಾತ್ತಾಗಿ ಬೇರೆ ಕೊಠಡಿಗೆ ಹೊರಟು ಹೋದಳು. ಹೋಗುವಾಗ ದಾಸಿಯನ್ನು ಕುರಿತು, ನೀನು ಗಾಳಿಹಾಕು ತ್ತಿರು, ನಾನು ಬರುವುದಕ್ಕೆ ಸಾವಕಾಶವಾಗುತ್ತದೆಂದು ಹೇಳಿ ಹೊರಟು ಹೋದಳು.

ಇಬ್ಬರೂ ಪರಸ್ಪರ ಹೇಳಿದ ಕಡೆ ಮಾತುಗಳನ್ನು ವಿಪರೀತವಾಗಿ ತಿಳಿ ದುಕೊಂಡರು. ರಾಜನು ಮನಸ್ಸಿನಲ್ಲಿ, ಮಾಧವೀಲತೆಯು ವಿಚಾರದಲ್ಲಿ ನಾನು ವ್ಯಸ್ತನಾಗಿಲ್ಲವೆಂದು ಹೇಳಿದುದು ರಾಣಿಗೆ ಸರಿಯಾಗಲಿಲ್ಲ. ಅವಳಿಗೆ ಅಭಿ ಮಾನ. ಏತಕ್ಕೆಂದರೆ, ಅವಳೇ ಅವಳ ಗರ್ಭಧಾರಿಣಿ. ಸ್ನೇಹ ಮಮತೆ ಎಲ್ಲಿತಾನೇ ಹೋದೀತು? ಎಂದಂದುಕೊಂಡನು. ಇತ್ತಲಾಗಿ ರಾಣಿಯು ಮನಸ್ಸಿನಲ್ಲಿ, ಮಾಧವೀಲತೆಯ ತಾಯಿಯನ್ನು ಎಲ್ಲಿಯೋ ಒಂದು ನಿರುಪ ದ್ರವಾದ ಏಕಾಂತವಾದ ಸ್ಥಳದಲ್ಲಿಟ್ಟುಬಿಟ್ಟು ಬಂದಿರಬೇಕು. ಹಾಗಿಲ್ಲದಿ ದ್ದರೆ ರಾಜನು ಏತಕ್ಕೆ ಮಾಧವೀಲತೆಗೋಸ್ಕರ ಅಷ್ಟು ವ್ಯಸ್ತನಾಗಿಲ್ಲವೆಂದು ಹೇಳುತಲಿದ್ದನು. ಅದೇ ನಿಜವಾಗಿರಬೇಕೆಂದಂದುಕೊಂಡಳು.

ಇಂದು ಮೊದಲ್ಗೊಂಡು ರಾಣಿಗೂ ರಾಜನಿಗೂ ವಿಶೇಷವಾಗಿ ಭೇಟಿಯಾಗುತ್ತಿರಲಿಲ್ಲ. ಪರಸ್ಪರ ನೋಡಿದರೂ ರಾಜನು ವಿಶೇಷವಾಗಿ ಮಾತನಾಡುತ್ತಿರಲಿಲ್ಲ. ಅವನಿಗೂ ಮನಸ್ಸು ವ್ಯಸ್ತ್ಯಸ್ತವಾಗಿತ್ತು. ಅವನೂ ಮನಸ್ಸಿನಲ್ಲಿ, ನಿರಪರಾಧಿಯಾದ ಜ್ಯೋತಿಷ್ಮತಿಯನ್ನು ರಾಣಿಯು ಅನ್ಯಾಯವಾಗಿ ಮನೆಯಿಂದ ಹೊರಡಿಸಿದಳೆಂದು ತಿಳಿದನು. ರಾಣಿಗೋಸ್ಕರ ಪ್ರಕಾರಾಂತರವಾಗಿ ತಂಗಿಯನ್ನು ತಾನೇ ಮನೆಯಿಂದ ಹೊರಡಿಸಿದಹಾಗಾಯಿತೆಂದು ತಿಳಿದನು. ಈ ಅಕಾರ್ಯವನ್ನು ರಾಣಿಯ ಭಯಕ್ಕೋಸ್ಕರ ತಾನು ಮಾಡಬೇಕಾಯಿತೆಂದೂ, ರಾಣಿಯೇ ಈ ಅನರ್ಥಕ್ಕೆ ಮೂಲವೆಂದೂ ತಿಳಿದುಕೊಂಡನು.

ಕ್ರಮೇಣ ಅವರಿಗೆ ಮನಸ್ಸು ಒಡೆದುಹೋಯಿತು. ಅವನು ಒಂದೆರಡು ತಡವೆ ರಾಣಿಯ ಸಂಗಡ ಮಾತನಾಡುವುದಕ್ಕೆ ತಾನೇ ಮುಂದಾದನು. ಆದರೆ ಅವಳು ಆ ಪ್ರಯತ್ನಕ್ಕೆ ಅವಕಾಶ ಕೊಡಲಿಲ್ಲವೆಂದು ರಾಜನು ತಾನು ಅಪಮಾನಿತನಾದೆನೆಂದು ಭಾವಿಸಿಕೊಂಡನು. ಎಲ್ಲಿ ಗಂಡಹೆಂಡಂದರಿಗೆ ಅಸದ್ಭಾವವಿರುವುದೋ ಅಲ್ಲಿ ಮಂಗಳವಿಲ್ಲ. ಇದನ್ನು ರಾಜನು ರಾಣಿಗೆ ಒಂದು ದಿನ ತಿಳಿಯಹೇಳಬೇಕೆಂದು ಮನಸ್ಸಿನಲ್ಲಿ ಸ್ಥಿರಮಾಡಿಕೊಂಡನು.

---

## ಇಪ್ಪತ್ತೊಂಬತ್ತನೆಯ ಪರಿಚ್ಛೇದ.

ದಿವಾನಮಹಾಶಯನು ಮಾಧವೀಲತೆಯನ್ನು ಹುಡುಕುವ ಭಾರವನ್ನು ವಹಿಸಿ, ಅವನು ಪ್ರತಿ ಗ್ರಾಮದಲ್ಲಿಯೂ ಗ್ರಾಮನೌಕರನನ್ನೂ ಗುಮಾಸ್ತೆ ಶ್ಯಾನುಭೋಗರನ್ನೂ ವಿಶೇಷವಾಗಿ ದರಿದ್ರರನ್ನೂ ಭಿಕ್ಷುಕ

ರನ್ನೂ ದೇವಸ್ಥಾನ ಪೂಜಾರಿಗಳನ್ನೂ ಕರೆಯಿಸಿ ಕೇಳುತಲಿದ್ದನು ಈ ಪ್ರಕಾರ ಗ್ರಾಮಗ್ರಾಮದಲ್ಲಿಯೂ ವಿಚಾರಿಸುತ್ತಿರಲಾಗಿ, ಒಂದು ಸ್ಥಳದಲ್ಲಿ ಒಬ್ಬ ವೃದ್ಧಳಾದ ಭಿಕ್ಷುಕಳು, ತಾವು ಯಾರನ್ನು ಹುಡುಕುತಲಿದ್ದೀರೋ ನಾನವಳನ್ನು ನೋಡಿದ್ದೆನೆಂದು ಬೋಧೆಯಾಗುತ್ತದೆ. ಅವಳು ಕಂಕುಳಲ್ಲಿ ಒಂದು ವರುಷದ ಹೆಣ್ಣುಮಗುವನ್ನು ಎತ್ತಿಕೊಂಡಿದ್ದಳೆಂದು ಹೇಳಿದಳು.

ದಿವಾನ—ಎಲ್ಲಿ ನೋಡಿದ್ದೆ?

ವೃದ್ಧಳು—ಈ ಗ್ರಾಮದ ಪ್ರಾಂತರ ಭಾಗದಲ್ಲಿರುವ ಒಂದು ಅರಳೀಮರದ ಬುಡದಲ್ಲಿ ಕುಳಿತುಕೊಂಡು ಅಳುತ್ತಿದ್ದಳು. ನಾನವಳ ಸಂಗಡ ಮಾತನಾಡಿದೆ. ಅವಳು ಅತ್ತು ಅತ್ತು ಕಣ್ಣೀರಿನಿಂದ ಸೀರೆಯ ಸೆರಗೆಲ್ಲಾ ತೋಯಿದುಹೋಗಿತ್ತು. ಆದರೂ ಅವಳು ಒಂದು ಮಾತಿಗೂ ಪ್ರತ್ಯುತ್ತರವನ್ನು ಹೇಳಲಿಲ್ಲ. ನಾನು ಅವಳ ಮಗುವಿಗೆ ಸ್ವಲ್ಪ ಹಾಲನ್ನು ತರುವುದಕ್ಕೆ ಹೋದೆ. ಆದರೆ ಪುನಃ ಬಂದು ನೋಡುವುದರೊಳಗಾಗಿ ಅವಳು ಅಲ್ಲಿ ಇರಲಿಲ್ಲ. ಇದು ನಾಲ್ಕೈದು ದಿನದಮುಂಚೆ ನಡೆಯಿತು.

ದಿವಾನನು ಆ ಮರದ ಕೆಳಗೆ ಹೋಗಿ ನೋಡಿ ಅವಳು ಪೂರ್ವಾಭಿಮುಖವಾಗಿ ಹೋಗಿರಬೇಕೆಂದು ಪಲ್ಲಕ್ಕಿಯನ್ನೇರಿ ಆ ದಿಕ್ಕಿನಲ್ಲಿ ಹೊರಟನು. ಅಪರಾಹ್ಣದಲ್ಲಿ ಪ್ರತಾಪನಗರದ ಹತ್ತಿರಹತ್ತಿರ ಹೋದನು. ದೂರದಿಂದ ನೋಡಲಾಗಿ ನಗರವು ಬಹುತರವಾಗಿ ದೇವಮಂದಿರದಿಂದ ಸುಶೋಭಿತವಾಗಿತ್ತು. ಅಲ್ಲಿದ್ದ ಮೂರು ಅಂತಸ್ತಿನ ಮಹಡಿಮನೆಗಳು ಶ್ವೇತವಾದ ಕಪೋತಗಳಿಂದ ಸಮಾಕೀರ್ಣವಾಗಿದ್ದವು. ಜನರ ಕೋಲಾಹಲವು ಬಹಳ ದೂರ ವ್ಯಾಪಿಸಿತ್ತು. ಆ ಗ್ರಾಮದಲ್ಲಿಯೇ ಮಾಧವೀಲತೆಯು ತಾಯಿಯು ಮಾಧವೀಲತೆಯು ಸಮೇತಳಾಗಿದ್ದಳು. ದೂರಸಂಬಂಧವುಳ್ಳ ಒಬ್ಬ ವೃದ್ಧಳು ಮಾಧವೀಲತೆಯ ತಾಯಿಗೆ ಭಿಕ್ಷವನ್ನು ನೀಡುವಾಗ ಅವಳನ್ನು ಗುರ್ತಿಸಿದಳು. ಮತ್ತು ಅವಳನ್ನು ತನ್ನ ಮನೆಯಲ್ಲಿಟ್ಟುಕೊಂಡಿದ್ದಳು.

ದಿವಾನನು ನಗರವನ್ನು ಪ್ರವೇಶಮಾಡಿದಾಗ ಪುಟ್ಟುವಿನ ತಾಯಿಯು ಬಂದು ಪುಷ್ಕರಿಣಿಯಲ್ಲಿ ನಿಂತುಕೊಂಡು ಅವನ ಪಲ್ಲಕ್ಕಿಯನ್ನು ನೋಡುತಲಿದ್ದಳು. ನೋಡುತ್ತಿದ್ದಹಾಗೆ ಮನಸ್ಸಿನಲ್ಲಿ, ಈ ಪಲ್ಲಕ್ಕಿಯು ನಮ್ಮ ರಾಜರದಾಗಿದ್ದರೆ, ಪುಟ್ಟುವನ್ನು ಅವನ ಪಾದಗಳಮೇಲೆ ಹಾಕಿಬಿಟ್ಟು ನಾನು ನಿರ್ವಿಘ್ನವಾಗಿ ಪ್ರಾಣತ್ಯಾಗವನ್ನು ಮಾಡಬಹುದು. ರಾಜನು ಅವಶ್ಯಕವಾಗಿ ಪುಟ್ಟುವನ್ನು ಕಾಪಾಡುವನು, ಅವನವಳನ್ನು ಬಹಳಪ್ರೀತಿಸುತ್ತಾನೆ. ನಮ್ಮ ಪುಟ್ಟು ಎಷ್ಟು ಒಳ್ಳೇ ಹುಡುಗಿ ! ಇಂತಹ ಬಿಸಿಲಿನಲ್ಲಿಯೂ ನಾನವಳನ್ನೆತ್ತಿಕೊಂಡು ತಿರುಗುತ್ತೇನೆ. ಆದರೂ ಅವಳು ಅಳುವುದಿಲ್ಲ. ಅದರಿಂದ ಅವಳು ಆನಂದವುಳ್ಳವಳಾಗಿಯೇ ಇದ್ದಾಳೆ. ಕಾಗೆಯನ್ನು ಕೂಗುತ್ತಾಳೆ—ಕೈನೀಡಿ, ಚಂದಮಾಮಾ ! ಬಾ ಎಂದು ಕೂಗುತ್ತಾಳೆ ಎಂದು ಮುಂತಾಗಿ ಮಾಧವೀಲತೆಯ ತಾಯಿಯು ಭಾವಿಸಿಕೊಂಡಿದ್ದಳು. ಆದರೆ ಪುಟ್ಟುವು ಆಗ ಅವಳ ಕಂಕುಳಲ್ಲಿರಲಿಲ್ಲ. ಅವಳ ಹತ್ತಿರದಲ್ಲೇ ಪಲ್ಲಕ್ಕಿಯು ಹೋಯಿತು. ಅದರಲ್ಲಿ ದಿವಾನನು ಇದ್ದನು. ಆದರೆ ಅವನಾಗಲಿ, ಅವನ ಆಳುಗಳಲ್ಲಿ ಯಾರೇ ಆಗಲಿ ಅವಳನ್ನು ಲಕ್ಷ್ಯಮಾಡಿ ನೋಡಲಿಲ್ಲ. ಅವಳಿಗೂ ತನ್ನನ್ನು ಹುಡುಕಿಕೊಂಡು ರಾಜನ ದಿವಾನನೇ ಸ್ವಂತವಾಗಿ ಹೊರಟಿದ್ದಾನೆಂದು ತಿಳಿಯದು. ದಿವಾನನು ನಗರಕ್ಕೆ ಪ್ರವೇಶಮಾಡಿ ಒಬ್ಬ ಮುಖ್ಯಸ್ಥನಾದ ದೊಡ್ಡಮನುಷ್ಯನ ಮನೆಯಲ್ಲಿಳಿದುಕೊಂಡನು. ಎಲ್ಲರೂ ಅವನನ್ನು ನೋಡುವುದಕ್ಕೆ ಬಂದರು. ಎಲ್ಲರಸಂಗಡಲೂ ಅವನು ಮಾಧವೀಲತೆಯ ಪ್ರಸ್ತಾಪವನ್ನು ಮಾಡಿದನು. ಆದರೆ ಯಾರೂ ಏನೊಂದು ಸುದ್ದಿಯನ್ನೂ ಕೊಡಲಾರದೆ ಹೋದರು. ಪೂಜಾರಿಗಳಾಗಲಿ ಭಿಕಾರಿಗಳಾಗಲಿ ಯಾರೂ ನೋಡುವುದಕ್ಕೆ ಬರಲಿಲ್ಲ. ದಿವಾನನಿಗೆ ಸಮಾಚಾರವೇನೂ ಸಿಕ್ಕದೆ, ಯಾವಗ್ರಾಮದಲ್ಲಿ ವೃದ್ಧಳಿಂದ ಪುಟ್ಟುವಿನ ತಾಯಿಯ ಸಮಾಚಾರವನ್ನು ಕೇಳಿದ್ದನೋ ಆ ಗ್ರಾಮಕ್ಕೆ ಹಿಂದಿರಿಗಿ ಹೋಗಬೇಕಾದುದುಚಿ

ತವೆಂದು ಯೋಚಿಸಿದನು. ಅದುಕಾರಣ ಬೆಳಗ್ಗೆ ಎದ್ದು ಅಲ್ಲಿಗೆ ಪುನಃ ಹೋದನು.

ಮಾರ್ಗದಲ್ಲಿ ಅವನು ಪಿತಮಹುಚ್ಚನನ್ನು ನೋಡಿದನು. ಪಿತಮನು ಏನೂ ಮಾತನಾಡದಿರುವುದನ್ನು ಕಂಡು ದಿವಾನನೇ ಅವನನ್ನು ಕರೆದು ಎಲ್ಲಿಗೆ ಹೋಗುತ್ತಿ ? ಎಂದು ಕೇಳಿದನು.

ಪಿತಮ—ಈದಿಕ್ಕಿನಲ್ಲಿಯೇ ಹೋಗುತ್ತೇನೆ.

ದಿವಾನ—ಇತ್ತ ಕಡೆ ಎಲ್ಲಿಗೆ ?

ಪಿತಮ—ಅದು ಗೊತ್ತಿಲ್ಲ. ನೀವು ಎಲ್ಲಿಗೆ ಹೋಗಿದ್ದಿರಿ ?

ದಿವಾನ—ರಾಜಕನ್ಯೆ ಮಾಧವೀಲತೆಯನ್ನು ಹುಡುಕಿಕೊಂಡು ಹೋಗಿದ್ದೆನು. ಆದರೆ ವ್ಯರ್ಥವಾಯಿತು.

ಪಿತಮ—ಒಳ್ಳೆಯದೇ ಆಯಿತು.

ದಿವಾನ—ಏತಕ್ಕೆ ?

ಪಿತಮ—ನೀವು ರಾಜರ ಮಂಗಳಾಕಾಂಕ್ಷಿಗಳಾಗಿದ್ದರೆ ಮಾಧವೀಲತೆಯ ಹೆಸರನ್ನೆತ್ತಬೇಡಿರಿ. ಮಾಧವೀಲತಾ ರಾಕ್ಷಸೀ, ಅಥವಾ ಇನ್ನೇನೋ— ಯಾರು ಅವಳ ಸಂಪರ್ಕವನ್ನು ಮಾಡುವರೋ ಅವರು ಕಷ್ಟವನ್ನು ಹೊಂದುವರು, ಅಥವಾ ನಷ್ಟವಾಗುವರು. ಅದುಕಾರಣ ನೀವು ಓಡಿ ಹೋಗಿ. ಮಾಧವೀಲತೆಯು ಸ್ವಂತ ದುರದೃಷ್ಟದಿಂದ ಮನುಷ್ಯರೂಪದಲ್ಲಿ ಹುಟ್ಟಿದ್ದಾಳೆ. ಅದುಕಾರಣ ನೀವು ಓಡಿಹೋಗಿ. ನೀವು ಛಿನ್ನಮಸ್ತಳನ್ನು (ದುರ್ಗೆಯ ಒಂದು ಅವತಾರ) ನೋಡಿದ್ದೀರಾ ? ನಾನು ಅವಳ ಪಾರ್ಶ್ವದಲ್ಲಿ ಮಾಧವಿಯನ್ನು ನೋಡಿದ್ದೇನೆ.

ಛಿನ್ನಮಸ್ತಳ ರೂಪವನ್ನು ಯಾರು ಕಲ್ಪನೆಮಾಡಿದ್ದಾರೆ, ಗೊತ್ತುಂಟೆ ? ಕೇವಲ ಅದೃಷ್ಟವಾದಿಗಳೇ ಈ ಕಲ್ಪನೆಮಾಡಿದ್ದಾರೆ. ಕಲ್ಪನೆಯಲ್ಲ. ಅದು ನಿಜವಾಗಿಯೂ ಅದೃಷ್ಟದಮೂರ್ತಿ. ಅದೃಷ್ಟವೆಂಬುದೂ ಪ್ರಕೃತಿ

ಯೆಂಬುದೂ ಎರಡೂ ಒಂದೆ. ನನ್ನ ಸಂಗಡ ತರ್ಕಮಾಡಬೇಡಿರಿ. ನಾನು ಕಣ್ಣಾರೆ ಈ ಮೂರ್ತಿಯನ್ನು ನೋಡಿದ್ದೇನೆ. ಒಂದುದಿನ ಮಹಡಿಯ ಮೇಲೆ ಮಲಗಿದ್ದೆನು. ರಾತ್ರಿ ಎರಡೂವರೆ ಪ್ರಹರದಸಮಯದಲ್ಲಿ ಏನೋ ಒಂದುವಿಧವಾದ ಪೈಶಾಚಿಕ ಶಬ್ದದಿಂದ ನಿದ್ರಾಭಂಗವಾಯಿತು. ಹಾಸಿಗೆ ಯಲ್ಲಿ ಮಲಗಿದ್ದಹಾಗೆ ಕಿಟಕಿಯ ಕೆಳಗೆ ಬಂದು ಸ್ಥಳದಲ್ಲಿ ಹದ್ದುಗಳೂ ರಣಹದ್ದುಗಳೂ ಹಾರಿ ಎದ್ದು ಆಕಾಶಮಾರ್ಗಕ್ಕೆ ಹೋಗುತ್ತಿದ್ದವು. ಅವು ಗಳ ರೆಕ್ಕೆ ಬಡತದ ಶಬ್ದದಿಂದ ಹೃತ್ಕಂಪವಾಯಿತು. ಪಕ್ಷಿಗಳೆಲ್ಲವೂ ಆಕಾ ಶಮಾರ್ಗದಲ್ಲಿ ಒಂದೇ ದಿಕ್ಕಿನಲ್ಲಿ ಹೋಗುತ್ತಿದ್ದುದನ್ನು ನೋಡಿ ಅತ್ತಕಡೆ ದೃಷ್ಟಿಸಿ ನೋಡಲಾಗಿ ಸ್ವರ್ಗ ಮರ್ತ್ಯ ಲೋಕಗಳನ್ನು ಸ್ಪರ್ಶಮಾಡುತ್ತ ಒಂದೇ ಆಕಾರವುಳ್ಳ ಒಂದು ರುದ್ರರೂಪಿಣಿಯಾದ ಯುವತಿಯನ್ನು ಕಂ ಡೆನು. ತನ್ನ ತಲೆಯನ್ನು ತಾನೇ ಛೇದನಮಾಡಿಕೊಂಡು ನಿಂತಿದ್ದಳು. ಅವಳ ಮುಕ್ತವಾದ ಕೇಶವು ಅಗ್ನಿಯ ತರಂಗವಾಗಿ ಆಕಾಶದವರೆಗೂ ವ್ಯಾ ಪಿಸಿ ಕ್ರೀಡಿಸುತಲಿತ್ತು. ಆ ಮೂರ್ತಿಯು ಎಡಗೈಯಲ್ಲಿದ್ದ ಛಿನ್ನಮಸ್ತ ಕವು ಉನ್ನತಮುಖವಾಗಿ ರಕ್ತಧಾರೆಯು ಚಿಮ್ಮುತ್ತ ಬೀಳುತ್ತ ಇರುವು ದನ್ನು ನೋಡುತ್ತ ನಗುತ್ತ ಮತ್ತು ಅದನ್ನೇ ಪಾನಮಾಡುತಲಿತ್ತು. ಮೇ ಲಕ್ಕೆ ಚಿಮ್ಮಿದ ರಕ್ತದ ಕಾಂತಿಯಿಂದ ಅಂಧಕಾರವೂ ರಕ್ತವರ್ಣವಾಯಿತು. ಆಕಾಶ, ವೃಕ್ಷ, ಜಲ, ತೃಣ ಎಲ್ಲವೂ ರಕ್ತವರ್ಣವುಳ್ಳದ್ದಾದವು. ಸ್ವರ್ಗ, ಮರ್ತ್ಯ, ಆಕಾಶ ಇವುಗಳಲ್ಲಿ ನಾಲ್ಕು ದಿಕ್ಕೂ ವ್ಯಾಪಿಸಿ ಗಂಭೀರವಾದ 'ಓಂ' ಎಂಬ ಶಬ್ದವು ಸ್ಥಿರಭಾವದಿಂದ ಶಬ್ದವಾಗುತಲಿತ್ತು. ಮುವ್ವ ತ್ತುಮೂರುಕೋಟಿ ದೇವತೆಗಳೂ ಕೈಮುಗಿದುಕೊಂಡು ಸ್ತವಮಾಡುತ್ತ, ಹೆ ಜಗನ್ಮಾತೆ! ಏತಕ್ಕೆ ತಾಯಿ? ನಿನ್ನ ಗುಪ್ತವಾದ ಮೂರ್ತಿಯನ್ನು ಪ್ರಕಾಶಗೊಳಿಸಿದೆ? ಪುನಃ ಈ ಮೂರ್ತಿ ಏತಕ್ಕೆ? ನಾವು ಬಹಳ ಭಯ ಪಟ್ಟವರಾಗಿದ್ದೇವೆ ಎಂದು ಸ್ತೋತ್ರಮಾಡಿದರು. ಮಹಾದೇವನು ಬಂದು,

ಹೇ ಪ್ರಕೃತಿ ದೇವಿ ! ನೀನೇ ಸತ್ಯ, ನಿನ್ನ ಈ ರೂಪವೇ ಸತ್ಯವಾದುದು. ನಿನ್ನೀರೂಪವು ನನಗೆ ಮನೋಮೋಹಿನಿಯಾಗಿದೆ ಎಂದನು. ಮಹಾದೇವನ ಈ ಮಾತನ್ನು ಕೇಳಿ, ರುದ್ರರೂಪಿಣಿಯು ಸ್ವಲ್ಪ ನಕ್ಕು, ಕ್ರಮವಾಗಿ ಆಕಾಶದೊಂದಿಗೆ ಸೇರಿಹೋದಳು. ಎಲ್ಲಿಯೂ ಕಾಣಿಸಲಿಲ್ಲ. ನಾನು ನಿಂತು ಹಾಗೆಯೇ ಯೋಚಿಸುತಲಿದ್ದೆನು. ಪ್ರಕೃತಿದೇವಿಯು ಛಿನ್ನಮಸ್ತಳೆ ! ಎಂದು ಯೋಚಿಸಿಕೊಂಡಿದ್ದೆನು. ಇದೇ ಪ್ರಕೃತಿಯು ಯಥಾರ್ಥವಾದ ಮೂರ್ತಿಯೆ ? ಅದಕ್ಕೋಸ್ಕರವೇ ಜಂತುಗಳು ತಮ್ಮ ಮರಿಗಳನ್ನು ತಾವೇ ತಿನ್ನುತ್ತವೆಯೊ ? ಅದಕ್ಕೋಸ್ಕರವೇ ರಾಣಿಯು ತನ್ನ ಮಗಳನ್ನು ತಾನೇ ನಷ್ಟಮಾಡಲೆಳಸುವಳೊ ? ಹಾಗಾದರೆ ಹೆ ಪ್ರಕೃತಿದೇವಿ! ನನ್ನನ್ನು ಏತಕ್ಕೆ ಮೋಸಗೊಳಿಸುತ್ತಿ ? ನಿನ್ನ ಯಥಾರ್ಥವಾದ ಮೂರ್ತಿಯನ್ನು ಮರೆಮಾಚಿಕೊಂಡು ನಿನ್ನ ಮೋಹಿನೀಮೂರ್ತಿಯನ್ನು ತೋರಿಸುತ್ತಿ ? ಏತಕ್ಕೆ ಪುಷ್ಪವನ್ನು ಅರಳಿಸುತ್ತಿ ? ಏತಕ್ಕೆ ಕೋಮಲವಾದ ಲತಾವಲ್ಲಿಯನ್ನು ತೂಗಲಾಡಿಸುತ್ತಿ ? ಪಕ್ಷಿಯನ್ನು ಏತಕ್ಕೆ ಹಾರಿಸುತ್ತಿ ? ಏತಕ್ಕೆ ಜ್ಯೋತ್ಸ್ನೆಯನ್ನು ಲೇಪನಮಾಡಿಕೊಂಡಿರುತ್ತಿ ? ಏತಕ್ಕೆ ಅನಂತನಕ್ಷತ್ರನಾಥನನ್ನು ಕಿರೀಟವಾಗಿ ಧಾರಣಮಾಡುತ್ತಿ ? ನಾನು ಇನ್ನು ಮೋಸಹೋಗುವುದಿಲ್ಲ.

ದಿವಾನ—ನೀನು ಮಾಧವೀಲತೆಯನ್ನು ಹುಡುಕುಬಲ್ಲಿಯಾ ?

ಪಿತಮನು ಛಿನ್ನಮಸ್ತಳ ಮೂರ್ತಿಯನ್ನು ಆಲೋಚನೆಮಾಡುತ್ತ ಅದೇ ಧ್ಯಾನದಲ್ಲಿದ್ದನಾದುದರಿಂದ ದಿವಾನನು ಇದುರಿಗೆ ನಿಂತಿರುವುದನ್ನು ಕೂಡ ಮರೆತುಹೋದನು. ದಿವಾನನ ಮಾತಿಗೆ ಉತ್ತರವನ್ನು ಕೊಡದೆ ಪಿತಮನು ಮೆಲ್ಲಮೆಲ್ಲಗೆ ಆಸ್ಥಳದಿಂದ ಹೊರಟುಹೋದನು. ಪಿತಮನು ಅನ್ಯಮನಸ್ಕನಾಗಿಯೋ ಅಥವಾ ಸಮನಸ್ಕನಾಗಿಯೋ ಮಾಧವೀಲತೆಯು ತಾಯಿಯು ವಾಸಮಾಡುತಲಿದ್ದ ಪ್ರತಾಪಪುರಗ್ರಾಮಕ್ಕೆ ಹೋದನು. ಸ್ವಲ್ಪದೂರ

ಹೋಗಿ ಪ್ರಾಂತರ ಮಧ್ಯದಲ್ಲಿ ನಿಂತು ನೋಡಲಾಗಿ ಅಲ್ಲಿ ಒಂದು ಸ್ಥಳವು ನಗರದಹಾಗೆ ಜನಸಮಾಕುಲವಾಗಿತ್ತು. ಕೆಲವರು ಕೂಗುತ್ತಿದ್ದರು. ಕೆಲವರು ಓಡುತಲಿದ್ದರು. ಕೆಲವರು ತಿರಸ್ಕಾರನಮಾಡುತಲಿದ್ದರು. ಕೆಲವರು ಚಂದ್ರಾತಪವನ್ನು ಎತ್ತುತ್ತಿದ್ದರು. ಕೆಲವರು ಕುದುರೆಗಳನ್ನು ಹಿಡಿದುಕೊಂಡು ನಡೆಸುತಲಿದ್ದರು. ಕೆಲವರು ಒಲೆಗೋಸ್ಕರ ಅಗಿಯುತ್ತಿದ್ದರು. ಕೆಲವರು ಭಂಗಿಯನ್ನು ಅರೆಯುತ್ತಿದ್ದರು. ಕೆಲವರು ಮರದ ನೆರಳಿನಲ್ಲಿ ಕುಳಿತುಕೊಂಡು ಖಂಜನಿಯನ್ನು ಬಾರಿಸುತ್ತ ಹಾಡುತಲಿದ್ದರು. ಕೋಲಾಹಲಕ್ಕೆ ಪಾರವೇ ಇರಲಿಲ್ಲ. ಒಬ್ಬ ಯುವಕನು ಗಂಭೀರಭಾವದಿಂದ ಒಂದು ವೃಕ್ಷಮೂಲದಲ್ಲಿ ನಿಂತಿದ್ದನು. ಅವನು ಹಠಾತ್ತಾಗಿ ಒಂದು ಘಂಟೆಯನ್ನು ಅಲ್ಲಾಡಿಸಿದನು. ಘಂಟೆಯ ಶಬ್ದವಾದಕೂಡಲೆ ಕೋಲಾಹಲದ ಗದ್ದಲವೆಲ್ಲಾ ಅಡಗಿಹೋಯಿತು. ಆಗ ಎಲ್ಲರೂ ಪೂರ್ವದಿಕ್ಕು ನೋಡುತ್ತ ನಿಂತರು. ಆ ದಿಕ್ಕಿನಲ್ಲಿ ಧೂಳಿಯು ಎದ್ದಿತ್ತು. ಸ್ವಲ್ಪದರಲ್ಲಿಯೇ ಅನೇಕ ಕುದುರೆಗಳ ಪದಧ್ವನಿಯು ಕೇಳಿಸಿತು. ಕೂಡಲೆ ಆ ಶಿಬಿರದಲ್ಲಿದ್ದವರೆಲ್ಲರೂ ತಮ್ಮ ತಮ್ಮ ಕೆಲಸದಲ್ಲಿ ಪ್ರವೃತ್ತರಾದರು. ಒಂದು ಗಳಿಗೆಯೊಳಗೆ ಕೆಲವು ಯುವಕರಾದ ಅಶ್ವಾರೋಹಿಗಳು ಬಂದರು. ಅವರೆಲ್ಲರೂ ಕುದುರೆಗಳಿಂದಿಳಿದು ಬಹಳ ಮರ್ಯಾದೆಯಿಂದ ಒಬ್ಬನ ಸುತ್ತಲೂ ಬಂದು ಶಿಬಿರವನ್ನು ಪ್ರವೇಶಮಾಡಿದರು. ಅವನೇ ತಕ್ಷಪುರದ ರಾಜಾ. ನಮ್ಮ ಪೂರ್ವಪರಿಚಿತನಾದ ಮಹೇಶಚಂದ್ರನಾಗಿದ್ದನು. ಆದರೆ ಪಿತಮನಿಗೆ ಅದು ತಿಳಿಯಲಿಲ್ಲ. ಯಾರು ಎಲ್ಲಿಗೆ ಹೋಗುತ್ತಾರೆಂಬುದನ್ನು ಅವನು ನೋಡಲಿಲ್ಲ. ಅನ್ಯಮನಸ್ಕನಾಗಿ ಸ್ವಲ್ಪ ನೋಡಿ ಮುಂದೆ ಹೊರಟುಹೋದನು. ಆಗಲೂ ಪಿತಮನ ಮನಸ್ಸಿನಲ್ಲಿ ಛಿನ್ನಮಸ್ತಳ ರೂಪವು ಜಾಗರಿತವಾಗಿತ್ತು.

ರಾಜಾ ಮಹೇಶಚಂದ್ರನು ಶಿಬಿರಪ್ರವೇಶವಾದನಂತರ ಸಮವಯಸ್ಕರನ್ನು ಕಳುಹಿಸಿಬಿಟ್ಟು ರಾಘವಶರ್ಮನನ್ನು ಕರೆಯಿಸಿದನು. ರಾಘವನು

ಬಂದು ಯಥಾವಿಧಿಯಾಗಿ ಆಶೀರ್ವಾದವನ್ನು ಮಾಡಿ ನಗುತ ನಗುತ ಬಂದು ಅರಿಸಿನ ಹಚ್ಚಿದ ಕಾಗದವನ್ನು ರಾಜನ ಕೈಯಲ್ಲಿ ಕೊಟ್ಟನು. ಮಹೇಶಚಂದ್ರನು ಅದನ್ನೋದಿ ನಗುತ ನಗುತ, ನೀನು ಪೂರ್ವಾಹ್ಣದಲ್ಲಿಯೇ ಬಂದು ನಿಶ್ಚಿಂತನಾಗಿರದೆ ನನಗೋಸ್ಕರ ಅನೇಕ ಕೆಲಸವನ್ನು ಮಾಡಿರುವಹಾಗೆ ಕಾಣುತ್ತದೆ. ಇಂದು ಇನ್ನು ನನಗೆ ಅವಕಾಶವಿಲ್ಲವೆಂದು ಕಾಣುತ್ತದೆ. ಇಂದ್ರಭೂಪನ ದಿವಾನನು ಪ್ರತಾಪಪುರಕ್ಕೆ ಬಂದಿದ್ದರೂ ಮಾಧವೀಲತೆಯ ಸಮಾಚಾರವನ್ನು ಪಡೆಯಲಿಲ್ಲ. ನೀನು ಬಂದಕೂಡಲೆ ಅದರ ಸಮಾಚಾರವನ್ನೆಲ್ಲಾ ಸಂಪಾದಿಸಿರುತ್ತಿ. ನೀನು ಆ ದಿವಾನನಿಗಿಂತಲೂ ಉಪಯುಕ್ತನಾದವನೆಂದು ತಿಳಿದರೆ ರಾಜಾ ಇಂದ್ರಭೂಪನು ನಿನ್ನನ್ನು ಬಿಡಲಾರನೆಂದನು.

ರಾಘವ-ಅವನ ದಿವಾನನನ್ನು ಈಗ ಅಲ್ಲಿನ ರಾಣಿಯವರು ನಿಯಮಿಸಿಕೊಂಡಿದ್ದಾರೆ. ಅವನು ಕಾಶಿಗೆ ಹೊರಟುಹೋದನಾಗಿ ನನಗೇನೂ ವಿರಾಮವಿಲ್ಲ. ಈಗ ಅಪ್ಪಣೆಯಾದರೆ ನಾನು ಹೋಗುತ್ತೇನೆ. ಕೆಲಸ ಬಹಳವಿದೆ.

ರಾಜಾ ಮಹೇಶಚಂದ್ರನು ನಕ್ಕು ರಾಘವಶರ್ಮನಿಗೆ ಅಪ್ಪಣೆಯಂ ಕೊಟ್ಟನು. ಈ ಸಮಯದಲ್ಲಿ ಶಿಬಿರದ ಹತ್ತಿರ ಪಾರ್ಶ್ವದಲ್ಲಿ ಒಬ್ಬ ಸನ್ಯಾಸಿಯು ಪ್ರತಾಪಪುರಕ್ಕೆ ಹೋಗುತ್ತಿದ್ದನು. ಅವನನ್ನು ಚೆನ್ನಾಗಿ ದೃಷ್ಟಿಸಿ ನೋಡಿದ್ದರೆ ಅವನು ಛದ್ಮವೇಷಧಾರಿಯೆಂದು ಬೋಧೆಯಾಗುತಲಿತ್ತು. ಅವನು ಗ್ರಾಮಕ್ಕೆ ಹೋಗಿ ಒಂದು ದೇವಮಂದಿರದ ಹತ್ತಿರ ಹೋದನು. ಅಲ್ಲಿ ಪಿತಮನು ಕಲ್ಲಿನಮೇಲೆ ಅಂಕಿತವಾಗಿದ್ದ ಒಂದು ಶ್ಲೋಕವನ್ನು ಊರ್ಧ್ವಮುಖನಾಗಿ ಓದುವುದಕ್ಕೆ ಪ್ರಯತ್ನಪಡುತಲಿದ್ದನು. ಪಿತಮನು ಬಂದವನನ್ನು ಒಂದುಸಲ ನೋಡಿದನು. ಸನ್ಯಾಸಿಯು ಹತ್ತಿರ ಬರುತಲೆ ಪಿತಮನು ತಲೆಯನ್ನು ಬಗ್ಗಿಸದೆ, ಜನಾರ್ದನ! ಯಾವಾಗನಿಂದ ಸನ್ಯಾಸಿಯಾದೆ? ಎಂದನು. ಸನ್ಯಾಸಿಯು ಸ್ವಲ್ಪ ಚಂಚಲನಾಗಿ ಕೂಡಲೆ

ಸಾವಧಾನ ಚಿತ್ತದಿಂದ ಹಸನ್ಮುಖನಾಗಿ ಏನು ಹೇಳಬೇಕೆಂದು ಯೋಚಿಸುವುದರೊಳಗಾಗಿ, ಪಿತನುನು, ಬಂಗಾಳಿ ಅಕ್ಷರಗಳು ತಾಂತ್ರಿಕಸಂಬಂಧವಾದವುಗಳು. ಮುಸಲ್ಮಾನರ ಅಕ್ಷರಗಳು ಸಾಮರಿಕವಾದವುಗಳು. ಫಿರಂಗಿಗಳ ಅಕ್ಷರಗಳು ಸಾಂಸಾರಿಕವಾದವುಗಳು. ಹಾಗೆಯೇ ಸನ್ಯಾಸಿಗಳಲ್ಲಿಯೂ ಗೃಹಿ, ತಾಂತ್ರಿಕ, ಸಾಮರಿಕ ಎಂದುಂಟು. ನೀನು ಯಾವಜಾತಿ ಸನ್ಯಾಸಿ? ಸಾಮರಿಕ ಸನ್ಯಾಸಿಯೆಂದು ತೋರುತ್ತದೆಂದನು.

ಸನ್ಯಾಸಿ — ನಿನ್ನ ಮಾತು ನನಗೆ ಅರ್ಥವಾಗಲಿಲ್ಲ.

ಪಿತನು —ಅರ್ಥವಾಗಲಿಲ್ಲವೆ? ಫಾರಸಿ ಅಕ್ಷರ ಕೇವಲ ಕತ್ತಿ—ಸಣ್ಣ ಕತ್ತಿ, ದೊಡ್ಡಕತ್ತಿ, ಮುರಿದಕತ್ತಿ ಬಗ್ಗಿದಕತ್ತಿಯುಹಾಗಿದೆ. ಅದುದರಿಂದ ಫಾರಸಿ ಅಕ್ಷರವು ಸಾಮರಿಕವಾದುದೆಂದು ಹೇಳಿದೆನು. ಮತ್ತೊಂದು ದೇಶದ ಅಕ್ಷರ ಅಂಬಿನಹಾಗೆ ಇತ್ತು. ಅದೂ ಸಾಮರಿಕವಾದುದು. ಫಿರಂಗಿಗಳ ಅಕ್ಷರ ಮನೆಯ ಪದಾರ್ಥಗಳಹಾಗೆ. ಬೋಗಣಿ, ತಪಲೆ, ಸೌಟು ಮುಂತಾದವುಗಳ ಹಾಗಿದೆ. ಆದುದರಿಂದ ಆ ಅಕ್ಷರಗಳು ಗೃಹಿ. ನಮ್ಮ ಅಕ್ಷರಗಳು ಪೂಜ್ಯಾಂಗಗಳಿಗೆ ಅನುರೂಪವಾಗಿವೆ. ತ್ರಿಕೋಣ ಯಂತ್ರ, ಮುದ್ರಾ, ನರಕಪಾಲ ಇತ್ಯಾದಿಗಳ ಹಾಗಿವೆ. ಅದುದರಿಂದ ಅವು ತಾಂತ್ರಿಕಸಂಬಂಧವಾದವು. ಅಕ್ಷರ ಸೃಷ್ಟಿಯು ಸಮಯದಲ್ಲಿ ಯಾವಜಾತಿಗೆ ಯಾವಕಡೆ ದೃಷ್ಟಿಯು ಹೆಚ್ಚಾಗಿರುವುದೊ ಆ ಜಾತಿಯು ಹಾಗಾಗುತ್ತದೆ. ವೈಷ್ಣವರು ಅಕ್ಷರವನ್ನು ಸೃಷ್ಟಿಮಾಡುವುದಾದರೆ ತುಲಸಿ, ತಿಲಕಗಳಹಾಗೆ ಅವರ ಅಕ್ಷರಗಳ ಆಕಾರವುಳ್ಳವುಗಳಾಗುವು. ನೀನು ಅಕ್ಷರಗಳನ್ನು ಸಿದ್ಧಪಡಿಸುವವನಾದರೆ ಯಾವ ಆಕಾರದಲ್ಲಿ ಮಾಡುವೆ? ಮಾಧವೀಲತೆಯುಹಾಗೆಯೆ?

ಸನ್ಯಾಸಿ — ನಿನ್ನಹುಚ್ಚು ಶುದ್ಧವೇಷ. ನಿನ್ನನ್ನು ಯಮನ ಭವನಕ್ಕೆ ಕಳುಹಿಸದಿದ್ದರೆ ನನಗೆ ಸುಖವಿರುವುದಿಲ್ಲ.

ಹೀಗೆಂದು ಹೇಳಿ ಜನಾರ್ದನನು ಕೋಪಭರಿತನಾಗಿ ಹಿಂದಿರಿಗಿದನು. ಮಂದಿರದಲ್ಲಿ ನಿಲ್ಲಲಿಲ್ಲ. ಪಿತನುನು ಪ್ರಸನ್ನ ವದನನಾಗಿ ಶ್ಲೋಕವನ್ನು ಓದಲಾರಂಭಿಸಿದನು.

---

## ಮುವತ್ತನೆಯ ಪರಿಚ್ಛೇದ.

ಜನಾರ್ದನನ ವಿಚಾರವಾಗಿ ಪಿತಮನು ಹೇಳಿದುದು ಸುಳ್ಳಲ್ಲ. ಸಂಧ್ಯಾಕಾಲದಲ್ಲಿ ಭಿಕ್ಷದ ನೆಪದಮೇಲೆ ಜನಾರ್ದನನು ಬಂದು ಮನೆಯ ಮುಂದೆ ನಿಂತಿದ್ದನು. ಯಾರನ್ನೂ ಕರೆಯಲಿಲ್ಲ. ಅಲಕ್ಷ್ಯವಾಗಿ ಅತ್ತಿತ್ತ ನೋಡುತಲಿದ್ದನು. ಕಡೆಗೆ ಯಾವದನ್ನು ಹುಡುಕುತಲಿದ್ದನೋ ಅದನ್ನು ಕಂಡು ಆ ಮನೆಯ ಇದಿರಿಗೆ ಬಂದು ಅರಳಿಮರದ ಬುಡದಲ್ಲಿ ಕುಳಿತುಕೊಂಡನು. ಆ ಮನೆಯಲ್ಲಿ ಪುಟ್ಟುವಿನ ತಾಯಿಯು ವಾಸಮಾಡುತಲಿದ್ದಳೆಂದು ಹೇಳಬೇಕಾದ ಅವಶ್ಯಕವಿಲ್ಲ.

ಅರ್ಧರಾತ್ರಿಯಲ್ಲಿ ಮನೆಯ ಮುಂಭಾಗದಲ್ಲಿ ಗದ್ದಲವು ಹತ್ತಿತ್ತು. ಮಾಧವಿಯ ತಾಯಿಯು ಅದನ್ನು ಕೇಳಲಿಲ್ಲ. ಒಳಗಿದ್ದ ವೃದ್ಧಳೂ ಅದನ್ನು ತಿಳಿಯಲಿಲ್ಲ. ಇಬ್ಬರೂ ನಿದ್ರೆಹೋಗುತಲಿದ್ದರು. ಆ ಮನೆಯ ಮುಂಭಾಗಕ್ಕೆ ಬೆಂಕಿಯು ಹತ್ತಿತ್ತು. ಬೆಂಕಿಯನ್ನು ಹಾಕಿದವನು ನಿದ್ರೆಯ ನೆಪದಮೇಲೆ ಅರಳಿಮರದ ಬುಡದಲ್ಲಿ ಮಲಗಿದ್ದನು. ಬೆಂಕಿಯು ಉರಿಯಲಾರಂಭವಾಯಿತು. ಮೊದಲು ಗೃಹದಮೇಲಿದ್ದ ಕಪೋತಗಳು ಎಚ್ಚರವಾಗಿ ಎದ್ದು ಬೆಳಕಿನಲ್ಲಿ ಆಹ್ಲಾದದಿಂದ ಹಾರಿ ತಿರಿಗಿ ಕುಣಿದಾಡಿ ಕೂಗುತಲಿದ್ದವು. ಅನಂತರ ಹಾರಿಹೋಗಿ ಪಕ್ಕದಮನೆಯ ಗೋಡೆಯಮೇಲೆ ಸಾಲುಸಾಲಾಗಿ ಕೂಡಲಾರಂಭಿಸಿದವು. ಬೆಂಕಿಯ ಬೆಳಕಿನಲ್ಲಿ ಅವುಗಳ ಶ್ವೇತವರ್ಣವುಳ್ಳ ಶರೀರವು ಸ್ವಲ್ಪ ರಕ್ತಾಭವಾಗಿ ಕಾಣಿಸುತಲಿತ್ತು. ಆದರೆ ಬಂದು ಹೆಣ್ಣು ಹಕ್ಕಿಯು ಮಾತ್ರ ಹಾರಲಿಲ್ಲ. ಗೂಡಿನಲ್ಲಿ ಕೂತುಕೊಂಡು ಭಯದಿಂದ ಗೂಡಿನಿಂದ ಕುತ್ತಿಗೆಯನ್ನು ಹೊರಕ್ಕೆ ನೀಡುತಲಿತ್ತು. ಆ ಗೂಡಿನಲ್ಲಿ ಎರಡು ಮರಿಗಳಿದ್ದವು.

ಮನೆಯಸುತ್ತಲೂ ನೂರಾರು ಜನರ ಗುಂಪು ಸೇರಿತು. ಎಲ್ಲರೂ ವ್ಯಾಕುಲವುಳ್ಳವರಾಗಿದ್ದಾರೆ, ಎಲ್ಲರೂ ಕೂಗುತ್ತಾರೆ, ಎಲ್ಲರೂ ನೀರನ್ನು ತರಬೇಕೆಂದು ಕೂಗಿಕೊಳ್ಳುತ್ತಾರೆ. ಆದರೆ ಯಾರೂ ಸ್ವಂತವಾಗಿ ಹೋಗಿ ನೀರನ್ನು ತರರು. ಎಲ್ಲರೂ 'ಹಾ' ಎಂದು ಅಗ್ನಿಯ ಕ್ರೀಡೆಯನ್ನು ನೋಡುತಲಿದ್ದಾರೆ. ಕೆಲವರು, ಅಯ್ಯೋ! ಸರ್ವನಾಶವಾಯಿತು, ಸರ್ವನಾಶವಾಯಿತೆಂದು ಕೂಗುತ್ತಾರೆ. ಕೆಲವರು, ಹಾ! ಹಾ! ಮನೆಯೊಳಗೆ ಸ್ತ್ರೀ ಹತ್ಯವಾಯಿತೆನ್ನುತ್ತಾರೆ. ಕೆಲವರು, ನೋಡು; ಏನು ಅನ್ಯಾಯ! ಬೆಂಕಿಯು ಹೆಚ್ಚಿತು! ಎಂದು ಕೂಗುತ್ತಾರೆ. ಮುಂಬಾಗಿಲಿಗೆ ಬೆಂಕಿ ಹತ್ತಿತು! ಇನ್ನೇನು! ಎಲ್ಲಾ ಪೂರೈಸಿತು! ಒಳಗೆ ಹೋಗುವುದಕ್ಕೆ ಯಾರಿಗೆ ಸಾಧ್ಯ! ಎಂದು ಎಲ್ಲರೂ ಪರಸ್ಪರ ಅನುತಾಪಪಡುತ್ತಾರೆ.

ಈ ಸಮಯದಲ್ಲಿ ಒಬ್ಬನು ವೃದ್ಧನು ಕೂಗುತ್ತಬಂದು, ಯಾರು ಬಂದು ಪ್ರಾಣಿಯನ್ನು ಕಾಪಾಡುವರೋ ಅವರಿಗೆ ಒಂದು ನೂರು ರೂಪಾಯಿಯನ್ನು ಕೊಡುವೆನೆಂದು ಹೇಳಿದನು. ಎಲ್ಲರೂ ಈ ಮಾತನ್ನು ಕೇಳಿದರು. ಆದರೆ ಯಾರೂ ಮುಂದಾಗಲಿಲ್ಲ. ಪ್ರತ್ಯುತ್ತರವನ್ನೂ ಹೇಳಲಿಲ್ಲ. ಎಲ್ಲರೂ ಸೊಲ್ಲಡಗಿ ಸುಮ್ಮನಿದ್ದರು ಕಡೆಗೆ ಜನಾರ್ದನನು ಮೈಧೂಳು ಕೊಡವಿಕೊಂಡು ಬಂದು ವೃದ್ಧನನ್ನು ಕುರಿತು, ನೀನೋ, ಕೊಡುವವನು? ನಿಜವೊ? ಎಂದನು.

ವೃದ್ಧ—ನಿಶ್ಚಯವಾಗಿಯೂ ಕೊಡುವೆನು. ನಾನು ಪ್ರಮಾಣ ಮಾಡಿ ಹೇಳುತ್ತೇನೆ. ಈಗಲೇ ಕೊಡುವೆನು.

ಜನಾರ್ದನ—ಎಷ್ಟುರೂಪಾಯಿ?

ವೃದ್ಧ—ಒಂದುನೂರು ರೂಪಾಯಿ. ಬದುಕಿಸುವುದಾದರೆ ಮಾತಿನಿಂದ ಪ್ರಯೋಜನವಿಲ್ಲ. ಹೊತ್ತುಹೋಗುತ್ತದೆ.

ಜನಾರ್ದನ—ನಗದಾಗಿ ನೂರು ರೂಪಾಯಿತಾನೆ? ನಗದೊ?

ವೃದ್ಧ—ಹೌದು ಸುಳ್ಳಲ್ಲ.

ಜನಾರ್ದನ—ನಿನ್ನ ಹೆಸರೇನು ?

ವೃದ್ಧ—ರಾಮಕಲ್ಪ ವಿದ್ಯಾನಿಧಿ. ನಾವು ಮನೆತನದವರು. ನಾನು ಬಲರಾಮಠಾಕೂರರ ವಂಗ.

ಜನಾರ್ದನ—ಹಾಗಾದರೆ ಭೈರವಿಯು ಮಾಡಿದಹಾಗಾಗಲಿ !

ಹೀಗೆಂದು ಹೇಳಿ ಜನಾರ್ದನನು ಅತ್ತಿತ್ತನೋಡಿದನು. ದೂರದಲ್ಲಿ ಒಂದು ನೇಗಲು ಬಿದ್ದಿತ್ತು. ಅದನ್ನು ತೆಗೆದುಕೊಂಡು ದರ್ಪದಿಂದ ಅರ್ಧ ಸುಟ್ಟುಹೋಗಿದ್ದ ಬಾಗಿಲನ್ನು ನೇಗಲಿನಿಂದ ಎಳೆದನು. ಬಾಗಿಲು ಕೆಳಕ್ಕೆ ಬಿತ್ತು. ಲಕ್ಷೋಪಲಕ್ಷ ಬೆಂಕಿಯ ಕಿಡಿಗಳು ಆಕಾಶಮಾರ್ಗಕ್ಕೆ ಎದ್ದಿತು. ಎಲ್ಲರೂ ಆಶ್ಚರ್ಯದಿಂದ ಅತ್ತಕಡೆ ಓಡಿದರು. ಆಗ ಜನಾರ್ದನನು ಒಂದು ಉದ್ದವಾದ ದೋಣ್ಣೆಯನ್ನು ತೆಗೆದುಕೊಂಡು ಬಂದನು. ಎಲ್ಲರನ್ನೂ ದೂರ ಸರಿಯುವಹಾಗೆ ಹೇಳಿದನು. ಎಲ್ಲರೂ ದೂರ ಸರಿದು ನಿಂತುಕೊಂಡರು. ಇನ್ನೂ ದೂರ ಹೋಗಿರೆಂದನು. ಜನರು ಮತ್ತಷ್ಟುದೂರ ಸರಿದರು. ಆಗ ಜನಾರ್ದನನು ದೋಣ್ಣೆಯನ್ನು ಕೈಲಿ ಹಿಡಿದುಕೊಂಡು ದೂರಕ್ಕೆ ಹೋಗಿ ಓಡಿಬಂದು ದೋಣ್ಣೆಯನ್ನೂರಿ ಅದರಮೇಲೆ ಭಾರಬಿಟ್ಟು ಒಂದು ಹಾರಿನಲ್ಲಿ ಸುಟ್ಟುಹೋಗಿದ್ದ ಬಾಗಿಲು ಪಾರಾಗಿ ಮನೆಯೊಳಗೆ ಹೊಕ್ಕನು. ಎಲ್ಲರೂ ಅವಾಕ್ಕಾಗಿ ನಿಂತುಕೊಂಡಿದ್ದರು.

ಎಲ್ಲರೂ ಹೊರಗಿನಿಂದ ದೋಣ್ಣೆಯ ತುದಿಯನ್ನು ನೋಡಲಾರಂಭಿಸಿದರು. ದೋಣ್ಣೆಯ ತುದಿಯಭಾಗವು ತಿರುಗುತ್ತಲಿತ್ತು. ಎಲ್ಲರೂ, ಇಷ್ಟು ಹೊತ್ತಿಗೆ ಸನ್ಯಾಸಿಯು ಒಳಗೆ ಅಂಗಳಕ್ಕೆ ಹೋಗಿರಬಹುದೆಂದಂದುಕೊಂಡರು. ಸ್ವಲ್ಪದರಲ್ಲಿಯೇ ದೋಣ್ಣೆಯ ಅಗ್ರಭಾಗವು ಹಠಾತ್ತಾಗಿ ಅಲ್ಲಾಡಿ ಕೆಳಗೆ ಬಿತ್ತು. ಎಲ್ಲರೂ ನಿಸ್ಪಂದರಾದರು. ದೋಣ್ಣೆಯು ಮೇಲಕ್ಕೆ ಏಳಲಿಲ್ಲ. ಆಗ ಎಲ್ಲರೂ, ಸನ್ಯಾಸಿಯು ಸುಟ್ಟು ಹೋಗಿರಬೇಕೆಂದರು.

ಆಗ ಜನಾರ್ದನನ ನಗುವು ಕೇಳಿಸಿಬಂತು. ಜನಾರ್ದನನು, ಕಪೋತಿ! ನೀನು ಇನ್ನೂ ಇಲ್ಲಿಯೆ ಕುಳಿತಿದ್ದೀಯಾ? ಎಂದನು.

ಬೆಂಕಿಯತಾಪದಿಂದ ಕಪೋತಪಕ್ಷಿಯು ಕಾತರವಾಗಿತ್ತು. ಅದರ ಕಂಠವು ಕಂಪಿತವಾಗುತಲಿತ್ತು. ಅದರ ಬಾಯಿ ಬಿಟ್ಟಿತ್ತು. ಅದು ನಾಲ್ಕು ದಿಕ್ಕನ್ನೂ ನೋಡುತ್ತದೆ. ಇಲ್ಲಿ ಹಾರಿ ಕೂಡುತ್ತದೆ. ಅಲ್ಲಿ ಹಾರಿ ಕೂಡುತ್ತದೆ. ಪುನಃ ಗೂಡಿಗೆ ಬರುತ್ತದೆ—ಮರಿಗಳು ವ್ಯಾಕುಲದಿಂದ ಕೂಗಿಕೊಳ್ಳುತ್ತವೆ— ಜನಾರ್ದನನು, ಮಾಯೆ ಎಂದು ತೋರುತ್ತದೆ. ನಾನು ಉದ್ಧಾರಮಾಡುವುದಕ್ಕೆ ಬಂದಿದ್ದೇನೆ—ನಿನ್ನನ್ನುದ್ಧಾರಮಾಡಲೆ? ಎಂದು ಕೂಗಿದನು.

ಹೀಗೆಂದು ಹೇಳಿ ಜನಾರ್ದನನು ಪುನಃ ದೊಣ್ಣೆಯನ್ನು ತೆಗೆದುಕೊಂಡನು. ಅದರ ಅಗ್ರಭಾಗವನ್ನು ಬೆಂಕಿಗೆ ಹಿಡಿದನು. ತುದಿಯು ಹತ್ತಿದಮೇಲೆ ದೊಣ್ಣೆಯನ್ನು ಮೇಲಕ್ಕೆತ್ತಿದನು. ಅದರ ಅಗ್ರಭಾಗವು ಹತ್ತಿ ಅದನ್ನು ಮೇಲಕ್ಕೆ ಎತ್ತಿದುದನ್ನು ಹೊರಗಿನವರು ನೋಡಿದರು. ಅಗ್ರಭಾಗವು ಕ್ರಮವಾಗಿ ಹಕ್ಕಿಯ ಗೂಡು ಇದ್ದ ಚಂಡೀಮಂಟಪದಮೇಲಕ್ಕೆ ತಾಕಿತು. ಜನರು, ಪಾಪಿಷ್ಠನಾದ ಸನ್ಯಾಸಿಯು ಚಂಡೀಮಂಟಪಕ್ಕೂ ಬೆಂಕಿಯನ್ನು ಹತ್ತಿಸಿದನು. ಸನ್ಯಾಸಿಯನ್ನು ಹೊಡೀರೆಂದು ಕೂಗಿದರು. ಹೀಗೆ ಕೂಗುತ್ತ ಎಲ್ಲರೂ ಕಲ್ಲುಗಳನ್ನೂ ಇಟ್ಟಿಗೆ ತುಂಡುಗಳನ್ನೂ ತೆಗೆದುಕೊಂಡು ಮನೆಯೊಳಕ್ಕೆ ಬೀರಿದರು. ಸನ್ಯಾಸಿಯು ಅದನ್ನು ಲಕ್ಷ್ಯಮಾಡಲಿಲ್ಲ.

ಚಂಡೀಮಂಟಪವು ಹತ್ತಿ ಉರಿಯುವುದಕ್ಕಾರಂಭವಾಯಿತು. ಸನ್ಯಾಸಿಯು ಕೋಲಿನಿಂದ ಹಕ್ಕಿಯ ಗೂಡನ್ನು ತಿವಿದು ಕೆಳಕ್ಕೆ ಕೆಡುಹಿದನು. ಮರಿಗಳೆರಡೂ ಕೆಳಕ್ಕೆ ಬಿದ್ದುಹೋದವು. ಜನಾರ್ದನನು ಅವುಗಳ ರೆಕ್ಕೆಯನ್ನು ಹಿಡಿದುಕೊಂಡು ಬಲವಾಗಿ ತಿರಿಗಿಸಿ ಬೆಂಕಿಗೆ ಬಿಸಾಟನು ತಾಯಿ

ಯಾದ ಕಪೋತಹಕ್ಕಿಯು ನಿಶ್ಯಬ್ದವಾಗಿ ಅದನ್ನು ನೋಡುತಲಿತ್ತು. ಸನ್ಯಾಸಿಯು ಕೋಲಿನಿಂದ ಆ ತಾಯಿಯನ್ನು ಹೊಡೆದನು. ಶೋಕಾಕುಲವಾಗಿದ್ದ ಕಪೋತಿಯು ಭಯದಿಂದ ಹಾರಿ ಚಂಡೀಮಂಟಪದ ಹೊರಗೆ ಬಂದು ಮೇಲಕ್ಕೆ ಸ್ವಲ್ಪದೂರ ಹೋಯಿತು. ಸ್ವಲ್ಪದೂರ ಹೋಗಿ ಬೆಂಕಿಯ ತಾಪದಿಂದ ಬೆಂಕಿಯೊಳಗೆ ಪುನಃ ಬಿದ್ದಿತು. ಸನ್ಯಾಸಿಯು, ನಿನ್ನ ಅದೃಷ್ಟ! ನಾನೇನುಮಾಡಲೆಂದಂದುಕೊಂಡನು.

ಚಂಡೀಮಂಟಪದಲ್ಲಿ ಒಂದು ಪಟವಿತ್ತು. ಅದನ್ನು ಸನ್ಯಾಸಿಯು ಇದುವರೆಗೂ ನೋಡಿರಲಿಲ್ಲ. ಬೆಂಕಿಯ ಬೆಳಕಿನಿಂದ ಅದನ್ನು ಕಂಡು ಹಾರಿಹೋಗಿ ಪಟದಿದಿರಿಗೆ ನಿಂತನು. ಪಟವು ಕಾಳೀಮೂರ್ತಿಯ ಪಟವಾಗಿತ್ತು. ಜನಾರ್ದನನು, ತಾಯಿ! ನನ್ನ ಅಪರಾಧವಾಯಿತು; ನೀನು ಇಲ್ಲಿದ್ದೆ—ಆದುದರಿಂದ ಈ ಮಂಟಪಕ್ಕೆ ಬೆಂಕಿಯು ಹತ್ತಲಿಲ್ಲ. ಅದನ್ನರಿಯದೆ ಮನೆಗೆ ಬೆಂಕಿಯನ್ನು ಹಚ್ಚಿಸಿದೆನು. ನನ್ನ ಇಷ್ಟದೇವಿಯೆ! ನನ್ನಪರಾಧವನ್ನು ಕ್ಷಮಿಸು ಎಂದನು.

## ಮೂವತ್ತೊಂದನೆಯ ಪರಿಚ್ಛೇದ.

ಆ ಸಮಯದಲ್ಲಿ ಮಾಧವೀಲತೆಯ ತಾಯಿಯು ಭಯವಿಹ್ವಲೆಯಾಗಿ, ಮಾಧವಿಯನ್ನು ಹೇಗೆ ಬದುಕಿಸಲಿ ಎಂದು ಯೋಚಿಸಿತಲಿದ್ದಳು. ಏನೂ ಉಪಾಯ ತೋರಲಿಲ್ಲ. ನಾಲ್ಕುಕಡೆಯೂ ಬೆಂಕಿ—ಬೆಂಕಿಯಿಲ್ಲದಕಡೆಯಲ್ಲಿ ದೊಡ್ಡದಾದ ಗೋಡೆ—ಮನೆಯಲ್ಲಿದ್ದ ಮುದುಕಿಯು ಉಪಾಯತೋರದೆ ಜಪಮಾಲೆಯನ್ನು ತಿರಿಗಿಸುತ್ತಿದ್ದಳು. ಒಂದೊಂದುಸಲ, ಮಾಧವೀಲತೆಯ ತಾಯಿಗೆ, ಭಯವಿಲ್ಲ. ಕಾಳಿಯು ರಕ್ಷಿಸುವಳೆಂದು ಹೇಳುವಳು. ಸ್ವಲ್ಪ

ಹೊತ್ತಿನಲ್ಲಿ ಇದಿರಿಗೆ ಒಬ್ಬ ಭಯಂಕರವಾದ ಮೂರ್ತಿಯನ್ನು ನೋಡಿ ಮನಸ್ಸಿನಲ್ಲಿ, ಯಮದೂತನು ಮಾಧವಿಯನ್ನು ತೆಗೆದುಕೊಂಡು ಹೋಗಲು ಬಂದಿದ್ದಾನೆಂದುತ್ತಿಳಿದು, ಮಾಧವಿಯನ್ನು ಎದೆಗೆ ಅಪ್ಪಿಕೊಂಡು ಚೀತ್ಕಾರ ಮಾಡಿ ಅತ್ತಳು. ಆಗಂತುಕನು ಕೇಳಿದರೂ ಕೇಳದವನಹಾಗಿದ್ದನು. ಕೈಯನ್ನು ನೀಡಿದನು. ಮಾಧವಿಯ ತಾಯಿಯು ಮೂರ್ಛಿತಳಾದಳು. ಆ ಅವಕಾಶದಲ್ಲಿ ಆಗಂತುಕನು ಮಾಧವಿಯನ್ನು ತೆಗೆದುಕೊಂಡು ಓಡಿ ಹೋದನು. ವೃದ್ಧಳು ಹಿಂದೆ ಹಿಂದೆ ಓಡಿದಳು.

ಆಗಂತುಕನು ಯಮದೂತನೆಂದು ವೃದ್ಧಳಿಗೆ ಭ್ರಮೆಯುಂಟಾಗಲಿಲ್ಲ. ಆಗಂತುಕನು ಮೈತುಂಬಾ ಕೆಸರನ್ನು ಬಳಿದುಕೊಂಡಿದ್ದುದರಿಂದ ಅವನ ಆಕೃತಿಯು ಭಯಂಕರವಾಗಿ ಕಾಣಿಸುತಲಿತ್ತು. ವೃದ್ಧಳು ಹೊರಗೆ ಬಂದು, ಆಗಂತುಕನು ಅಗ್ನಿಯ ಭಯಕ್ಕೋಸ್ಕರ ಮೈಗೆ ಕೆಸರನ್ನು ಬಳಿದುಕೊಂಡಿದ್ದಾನೆಂದು ತಿಳಿದಳು. ಆಗಂತುಕನು ಮಾಧವಿಯನ್ನು ಬೆನ್ನಿಗೆ ಕಟ್ಟಿಕೊಂಡು ಉತ್ತರದಿಕ್ಕಿನ ದೊಡ್ಡದಾದ ಗೋಡೆಯಮೇಲೆ ಹತ್ತಿದನು. ಹತ್ತಿ ಅಲ್ಲಿ ನಿಂತುಕೊಂಡು, ಆ ಗೋಡೆಗೆ ತಗಲಿದಹಾಗಿದ್ದ ನೆರೆಮನೆಯವನ ಮೂರು ಅಂತಸ್ತಿನಮೇಲೆ ಹತ್ತುವುದಕ್ಕೋಸ್ಕರ ತಲೆಯನ್ನೆತ್ತಿ ನೋಡುತಲಿದ್ದನು. ಆ ಮಹಡಿಯ ಗೋಡೆಗೆ ಮಣ್ಣಾಗಾಗಲಿ, ಗಾರೆಯಾಗಲಿ ಹಾಕಿರಲಿಲ್ಲ. ಅದುಕಾರಣ ಇಟ್ಟಿಗೆ ಸಂದಿನಲ್ಲಿ ಕಾಲಿಟ್ಟುಕೊಂಡು ಗೋಡೆಯಮೇಲೆ ಹತ್ತಿದರೂ ಹತ್ತಬಹುದಾಗಿತ್ತು. ಆದರೆ ಅದು ಬಹಳ ಅಸಾಧ್ಯವಾದ ಕೆಲಸ. ಆದರೆ ಆಗಂತುಕನು ಇನ್ನು ಹಿಂದುಮುಂದು ನೋಡದೆ ಒಂದು ದೀರ್ಘವಾದ ನಿಶ್ವಾಸವನ್ನು ಬಿಟ್ಟು ಗೋಡೆಯನ್ನು ಹತ್ತುವುದಕ್ಕಾರಂಭಿಸಿದನು. ಆ ಭಯಂಕರವಾದ ಅಸಾಧ್ಯವಾದ ಕೆಲಸವನ್ನು ನೋಡಿ ವೃದ್ಧಳಿಗೆ ಎದೆಯು ನಡುಗಲಾರಂಭಿಸಿತು. ತನ್ನ ಸ್ವಂತ ವಿಪತ್ತನ್ನು ಮರೆತುಕೊಂಡು ನೋಡುತಿದ್ದಳು. ಪ್ರತಿಕ್ಷಣದಲ್ಲಿಯೂ ಅವನು ಕಾಲುಜಾರಿ

ಕೆಳಗೆ ಬಿದ್ದಾನೆಂಬ ಭಯ. ವೃದ್ಧಳು ಕಷ್ಟದಲ್ಲಿ ಇಷ್ಟದೇವತೆಯನ್ನು ಸ್ಮರಿಸಬೇಕು. ಆದರೆ ಅವಳಿಗೆ ಇಷ್ಟದೇವತೆಯು ಹೆಸರು ಮರೆತುಹೋಯಿತು.

ಆ ಅಪರಿಚಿತನಾದ ಮನುಷ್ಯನು ಎರಡು ಮಹಡಿಯನ್ನೂ ಹತ್ತಿ ಗೋಡೆಯಮೇಲೆ ನಿಂತುಕೊಂಡನು. ಒಂದುಸಲ ನಿಶ್ವಾಸವನ್ನು ಬಿಟ್ಟನು. ಅದರೊಂದಿಗೆ ವೃದ್ಧಳಿಗೆ ಮೈಯಲ್ಲಿ ಸ್ಪಂದನವು ಹಿಂದಿರಿಗಿ ಬಂದಹಾಗಾಯಿತು. ಅಪರಿಚಿತವ್ಯಕ್ತಿಯು ಇನ್ನೆಷ್ಟು ಹತ್ತುವುದು ಇದೆಯೆಂದು ತಲೆಯೆತ್ತಿ ನೋಡಿದನು. ಅನಂತರ ಮೊದಲಿನಹಾಗೆ ಹತ್ತಲಾರಂಭಿಸಿದನು. ಪ್ರನಃ ವೃದ್ಧಳಿಗೆ ಮುಖವೆತ್ತಿ ನೋಡುವುದಕ್ಕಾಗಲಿಲ್ಲ. ಕುತ್ತಿಗೆ ನೋವು ಹತ್ತಿತು. ತಲೆಯನ್ನು ಬಗ್ಗಿಸಿಕೊಂಡಿದ್ದು, ಒಂದೆರಡು ನಿಮಿಷದಲ್ಲಿ ತಲೆಯನ್ನೆತ್ತಿ ನೋಡಿದಳು. ಅಪರಿಚಿತ ವ್ಯಕ್ತಿಯು ಮಹಡಿಯಮೇಲೆ ಹತ್ತಿಹೋಗಿದ್ದನು. ಆಗವಳು ಆಸನ್ನವಾಗಿದ್ದ ವಿಪತ್ತಿನಿಂದುದ್ಧಾರವಾದವರಹಾಗೆ ಕ್ಲಾಂತೆಯಾಗಿ ಕುಳಿತುಕೊಂಡುಬಿಟ್ಟಳು. ಅನಂತರ ಅವಳಿಗೆ ತನ್ನ ಅವಸ್ಥೆಯು ಜ್ಞಾಪಕಕ್ಕೆ ಬಂತು. ವೃದ್ಧಳು ಕ್ರಮಕ್ರಮವಾಗಿ, ಇನ್ನು ಪ್ರಾಣ ಉಳಿಯುವುದಿಲ್ಲ. ಚಂಡೀಮಂಟಪದ ಪರ್ಯಂತವೂ ಅಗ್ನಿಯು ವ್ಯಾಪಿಸಿತು. ಇನ್ನು ಅಂತಃಪುರದಲ್ಲಿ ಬೆಂಕಿಯ ತಾಪವು ಸಹಿಸಲಾಗದು. ಇಲ್ಲಿರುವುದಕ್ಕೆ ಆಗುವುದಿಲ್ಲವೆಂದು ತಿಳಿದಳು. ಮಾಧವಿಯ ತಾಯಿಯು ಮೂರ್ಛಿತಳಾಗಿ ಬಿದ್ದಿದ್ದ ಕೋಠಡಿಯು ಇಟ್ಟಿಗೆಯಿಂದ ಕಟ್ಟಲ್ಪಟ್ಟದ್ದಾದರೂ ಅದರಬಾಗಿಲಿಗೆ ಬೆಂಕಿಯು ತಗಲುವುದಕ್ಕೆ ವಿಳಂಬವಿರಲಿಲ್ಲ. ಅಗ್ನಿಮಯವಾದ ಮನೆಯಿಂದ ಹೊರಗಾಗಲು ಯಾವರೀತಿಯಿಂದಲೂ ಉಪಾಯವಿರಲಿಲ್ಲ. ಅದುಕಾರಣ ಮರಣವು ಬದಗಿತೆಂದು ನಿಶ್ಚಯಿಸಿಕೊಂಡು ವೃದ್ಧಳು ರುದ್ರಾಕ್ಷಿ ಮಾಲೆಯನ್ನು ತೆಗೆದು ತಲೆಗೆ ಕಟ್ಟಿಕೊಳ್ಳುವುದಕ್ಕೆ ಮನೆಯೊಳಗೆ ಹೋದಳು.

ಈ ಸಮಯದಲ್ಲಿ ಮೇಲೆ ಹೇಳಿದ ಅಪರಿಚಿತ ವ್ಯಕ್ತಿಯು ಪುನಃ ಮುಚ್ಚಡಿಯ ಮೇಲಿನಿಂದ ಇಳಿದುಬಂದು ಗೃಹ ಪ್ರವೇಶ ಮಾಡಿದನು. ಅನಂತರ ಅವನು ಆ ಕೋಣೆಯಿಂದ ಹೊರಗೆ ಬಂದು ಅತ್ತಿತ್ತ ನೋಡಿದನು. ನೋಡಲಾಗಿ ಹೆಂಗಸರು ಓಡಿಹೋಗುವುದಕ್ಕೆ ಮಾರ್ಗವು ಕಾಣಿಸಲಿಲ್ಲ. ಹೊರಗಡೆ ಬಂದು ನೋಡಲಾಗಿ ನಾಲ್ಕು ಕಡೆಯಲ್ಲಿಯೂ ಬೆಂಕಿಯು ಹತ್ತಿ ಉರಿಯುತಲಿತ್ತು. ಅಲ್ಲಿಯೂ ಮಾರ್ಗವಿಲ್ಲ. ಆದರೂ ಚೆನ್ನಾಗಿ ನೋಡಬೇಕೆಂದು ಸ್ವಲ್ಪ ಮುಂದೆ ಹೋದನು. ಆಗ ಜನಾರ್ದನಶರ್ಮನು ಕಾಳಿಯ ಪಟವನ್ನು ಕೈಯಲ್ಲಿ ಹಿಡಿದುಕೊಂಡು ಚಂಡಿಯ ಮಂಟಪದಿಂದ ಹೊರಗೆಬರುತಲಿದ್ದನು. ಅವನು ಆಗಂತುಕನನ್ನು ನೋಡಿದನು. ನೋಡಿದರೂ ಗುರುತಾಗಲಿಲ್ಲ. ಆಗಂತುಕನು ಅಲಕ್ಷ್ಯದಿಂದ ನೋಡುತ ನಿಂತನು. ಜನಾರ್ದನನು ಪಡಸಾಲೆಯಿಂದ ಹೊರಗಾಗುವುದಕ್ಕೆ ಅಸಮರ್ಥನಾಗಿದ್ದನು. ಬೆಂಕಿಯ ಕಡೆ ಕಣ್ಣುಬಿಟ್ಟು ನೋಡಲಾರ. ಕಣ್ಣು ಕುಂಚಿತವಾಯಿತು. ಉತ್ತಾಪವು ಸಹಿಸಲಸದಳವಾಯಿತು. ಸನ್ಯಾಸಿಯು ಮೂರು ನಾಲ್ಕು ಹೆಜ್ಜೆ ಹೋಗಿ ಹಿಂದಿರುಗಿದನು. ಚಂಡಿಯುಮಂಟಪದಮೇಲೆ ಬೆಂಕಿಯು ತರಂಗತರಂಗವಾಗಿ ಕ್ರೀಡಿಸುತಲಿತ್ತು. ತಾಪವು ಅತ್ತಕಡೆ ಅಸಹ್ಯವಾಗಿತ್ತು.

ಅಪರಿಚಿತನು ಆಗ ಮುಂದಾಗಿ, ಓಡಿಹೋಗು, ಸಾವಕಾಶ ಮಾಡಬೇಡವೆಂದನು.

ಜನಾರ್ದನ—ನೀನು ಯಾರು? ನೀನೇನು ಅಗ್ನಿದೇವನೆ? ಹಾಗಿಲ್ಲದಿದ್ದರೆ ಈ ಜ್ವಲಂತನಾದ ಹುತಾಶನನ ಮಧ್ಯೆ ಹೇಗೆತಾನೇ ಅಮ್ಲಾನವದನನಾಗಿ ತಿರುಗಾಡುತಲಿದ್ದೆ?

ಅಪರಿಚಿತ—ನಾನು ಯಾರೇ ಆಗಲಿ, ನೀನು ಓಡಿಹೋಗು. ಇಲ್ಲದಿದ್ದರೆ ನಿನ್ನ ಪ್ರಾಣರಕ್ಷಣೆಯಾಗುವುದಿಲ್ಲ. ಈಗಲೆ ಓಡಿಹೋಗು. ಬೆಂಕಿಯು ಕಾಡುಕಿಚ್ಚಾಗಿ ಎದ್ದಿದೆ. ದೇವತೆಗಳಿಗೆ ಕೂಡ ಶಕ್ಯವಿಲ್ಲ. ಯಾರ

ಮಾತನ್ನು ಕೇಳಬೇಡ. ನಿನಗೋಸ್ಕರವೆ ಹತ್ತಿ ಬೇಯುತಲಿದೆ. ನಿನ್ನನ್ನು ತೆಗೆದುಕೊಂಡಿತು. ನಾಲ್ಕುಕಡೆಯಲ್ಲಿಯೂ ಹತ್ತಿತು. ಕಾಣುವುದಿಲ್ಲವೆ? ಸಾಧ್ಯವಾದರೆ ಓಡು.

ಜನಾರ್ದನ— ನನಗೆ ಇನ್ನು ಸಾಧ್ಯವಿಲ್ಲ. ತಲೆಯು ತಿರುಗುತ್ತದೆ. ಕಣ್ಣು ಮುಚ್ಚಿಕೊಂಡಿತು. ಕಿವಿಯು ಕೇಳಿಸುವುದಿಲ್ಲ.

ಅಪರಿಚಿತ—ಅಲ್ಲಿಂದ ಸ್ವಲ್ಪ ದೂರ ಬಾ. ಅಗ್ನಿಯು ನಿನ್ನನ್ನೇ ನೋಡಿಕೊಂಡು ಬರುವಹಾಗಿದೆ. ಅಲ್ಲಿ ನೋಡು, ಚಂಡಿಯ ಮಂಟಪವು ನಿನ್ನ ತಲೆಯಮೇಲೆ ಬೀಳುವ ಪ್ರಯತ್ನದಲ್ಲಿದೆ.

ಹೀಗೆ ಹೇಳುತಿದ್ದಹಾಗೆ ಚಂಡಿಯ ಮಂಟಪದ ಒಂದು ಭಾಗವು ಮುರಿದುಬಿತ್ತು. ಮುಂಜಾಗ್ರತೆ ಕೊಡದಿದ್ದರೆ ಜನಾರ್ದನನು ಆ ಕೂಡಲೆ ಕೊನೆಗಾಣುತಲಿದ್ದನು. ಚಂಡಿಯ ಮಂಟಪವು ಬಿದ್ದು ತಾಪವು ಮತ್ತಷ್ಟು ಹೆಚ್ಚಾಯಿತು. ಜನಾರ್ದನನು, ನಾನು ಸಾಯುತ್ತೇನೆ. ನನ್ನನ್ನು ರಕ್ಷಿಸು, ಇಲ್ಲವಾದರೆ ಹೇಳು, ಕೂಡಲೆ ಬೆಂಕಿಯ ರಾಶಿಯಲ್ಲಿ ಬಿದ್ದು ಬಿಡುವೆನು. ಅದೆ ಮೇಲಾಗಿರುವುದೆಂದು ಹೇಳಿದನು.

ಅಪರಿಚಿತ—ನೀನು ಯಾವ ಮಾರ್ಗವಾಗಿ ಒಳಕ್ಕೆ ಬಂದೆ?

ಜನಾರ್ದನ—ನಾನು ಈ ಮುಂಬಾಗಿಲಿನಿಂದ ಹಾರಿ ಒಳಕ್ಕೆ ಬಂದೆನು—ನಾನು ಇನ್ನು ತಾಪವನ್ನು ತಡೆಯಲಾರೆ. ಸಾಯುತ್ತೇನೆ.

ಹೀಗೆಂದು ಹೇಳುತಿದ್ದಹಾಗೆ ಸನ್ಯಾಸಿಯು ನೆಲಕ್ಕೆ ಬೀಳುತಿದ್ದನು. ಅಪರಿಚಿತವ್ಯಕ್ತಿಯು ಅವನನ್ನು ಹಿಡಿದುಕೊಂಡು ಮಲಗಿಸಿದನು. ಜನಾರ್ದನನ ಕಣ್ಣುಗಳು ಮುಚ್ಚಿದವು. ಮಾತು ನಿಂತುಹೋಯಿತು. ಅಪರಿಚಿತವ್ಯಕ್ತಿಯು ಜನಾರ್ದನನ್ನು ಎತ್ತಿಕೊಂಡು ನಿಮಿಷದಲ್ಲಿ ಉರಿದುಹೋಗಿದ್ದ ಬಾಗಿಲಲ್ಲಿ ಹೊರಟು, ಒಂದು ಹುಲ್ಲು ಬೆಳೆದಿದ್ದ ನೆಲದಮೇಲೆ ಮಲಗಿಸಿದನು. ಮಲಗಿಸಿ ಸ್ವಲ್ಪ ಹೊತ್ತು ಹಾಗೆಯೆ ಅವನನ್ನು ದೃಷ್ಟಿಸಿ ನೋಡಿ

ದನು. ಅನಂತರ, ಅಲ್ಲಿ ಯಾರು ಇರುವಿರಿ? ಸನ್ಯಾಸಿಗೆ ಶಿಶ್ರೂಷೆ ಮಾಡಿರೆಂದು ಕೂಗಿದನು. ಆ ಕೂಗಿದ ಕೂಗು ಆ ನೂರಾರು ಮಂದಿಗಳ ಕೋಲಾಹಲ ಧ್ವನಿಯಮೇಲೆ ಕೇಳಿಸಿತು. ಝಿಲ್ಲಿಯ ಶಿಳ್ಳಿಯಮೇಲೆ ಸಾರಸವು ಕೂಗಿ ಝಿಲ್ಲಿಯ ಭಯದಿಂದ ಕೂಗುವುದನ್ನು ನಿಲ್ಲಿಸಿದಹಾಗಾಯಿತು. ಅಪರಿಚಿತವ್ಯಕ್ತಿಯು ಪುನಃ ಆ ಸುಡುತಲಿದ್ದ ಮನೆಗೆ ಪ್ರವೇಶ ಮಾಡಿದನು. ಅಪರಿಚಿತವ್ಯಕ್ತಿಯ ಕಂಠನನ್ನು ಒಬ್ಬ ಮನುಷ್ಯನು ಗುರ್ತಿಸಿ ಸನ್ಯಾಸಿಯ ಶುಶ್ರೂಷೆಯನ್ನು ಮಾಡಲು ಹೋದನು.

ಪರಕ್ಷಣದಲ್ಲಿಯೇ ಆ ಅಪರಿಚಿತವ್ಯಕ್ತಿಯು ಪುನಃ ಮನೆಯಿಂದ ಹೊರಗೆ ಬಂದನು. ಈಸಲ ವೃದ್ಧೆಯನ್ನು ಹೊತ್ತುಕೊಂಡು ಬಂದು ಜೋಪಾನವಾಗಿ, ನೆಲದಮೇಲೆ ಮಲಗಿಸಿ, ಪುನಃ ಗೃಹ ಪ್ರವೇಶ ಮಾಡಿದನು. ವೃದ್ಧೆಯು ರಕ್ತವರ್ಣವಾಗಿಹೋಗಿದ್ದಳು. ಸ್ವಲ್ಪ ಜ್ಞಾನವಿತ್ತು. ಅವಳನ್ನು ಕುರಿತು ಜನರು, ನಿನ್ನನ್ನು ಯಾರು ರಕ್ಷಿಸಿದರೆಂದು ಕೇಳಿದರು. ವೃದ್ಧೆಯು ಪ್ರತ್ಯುತ್ತರವನ್ನು ಕೊಡಲಾರದೆ ಹೋದಳು.

ಅಪರಿಚಿತವ್ಯಕ್ತಿಯು ಈತಡವೆ ಮತ್ತೊಬ್ಬರನ್ನು ಕರೆತರುವನೆಂದು ಜನರು ಬಾಗಿಲ ಹತ್ತಿರ ಹೋಗಿ ನಿಂತರು. ಹೊರಕ್ಕೆ ಬರುವನೊ ಇಲ್ಲವೊ ಎಂದು ನೋಡುವುದಕ್ಕೋಸ್ಕರ ಎಲ್ಲರೂ ಪರಸ್ಪರ ತಳ್ಳಿಕೊಂಡು ಹಿಗ್ಗುನುಗ್ಗಾಗಿ ಮುಂದಾಗಲಾರಂಭಿಸಿದರು. ಮುಂದುಗಡೆ ಇನ್ನು ಸ್ಥಳವಿಲ್ಲ. ಆದರೂ ಪ್ರತಿಯೊಬ್ಬನೂ ತಾನು ಮುಂದಾಗಿ ನಿಲ್ಲಬೇಕೆಂದು ಎಲ್ಲರೂ ಆತುರವುಳ್ಳವರಾಗಿ ಒಬ್ಬರನೊಬ್ಬರು ತಳ್ಳಿಕೊಂಡು ಮುಂದಾಗಲಾರಂಭಿಸಿದರು. ಈ ಸಮಯದಲ್ಲಿ ಅಪರಿಚಿತವ್ಯಕ್ತಿಯು ಮಾಧವಿಯ ತಾಯಿಯನ್ನು ಎತ್ತಿಕೊಂಡು ಅತಿವೇಗದಿಂದ ಹಾರಿಕೊಂಡು ಬಂದನು. ಆದರೆ ಮುಂದುಗಡೆ ಸ್ಥಳವಿಲ್ಲವಾಗಿ ಹಾರುವ ವೇಗವನ್ನು ಕಡಮೆ ಮಾಡಿ ಉರಿದು ಬಿದ್ದಿದ್ದ ಬಾಗಿಲಮೇಲೆ ಬಿದ್ದನು. ನಾಲ್ಕು ಕಡೆಯಲ್ಲಿಯೂ ಮಹಾ ಕೋಲಾಹಲವೆದ್ದಿತು.

ಅಪರಿಚಿತವ್ಯಕ್ತಿಯು ಮಿಂಚಿನ ವೇಗದಿಂದ ಚೆಂಕಿಯಿಂದೆದ್ದನು. ಆಗಲೂ ಮಾಧವಿಯ ತಾಯಿಯನ್ನು ಎತ್ತಿಕೊಂಡಿದ್ದನು. ಆದರೆ ಅಗ್ನಿಯ ಸಂಸ್ಪರ್ಶದಿಂದ ಆ ಯುವತಿಯ ಬಟ್ಟೆಯು ಹತ್ತಿಕೊಂಡಿತ್ತು. ಬಟ್ಟೆಯನ್ನು ಕಿತ್ತುಹಾಕಿ ಅವಳನ್ನು ಬೆತ್ತಲೆ ಮಾಡಿದ ಹೊರತು ರಕ್ಷಣೆಗೆ ಉಪಾಯವಿಲ್ಲದಹಾಗಾಯಿತು. ಅದುಕಾರಣ ಅಪರಿಚಿತನು ಅವಳ ಬಟ್ಟೆಯನ್ನು ಹಿಡಿದೆಳೆದನು. ಯುವತಿಯು ಅವನ ಅಭಿಪ್ರಾಯವನ್ನು ತಿಳಿದು ಉರಿಯುತಲಿದ್ದ ಬಟ್ಟೆಯನ್ನು ಮೈಗೆ ಚೆನ್ನಾಗಿ ಸುತ್ತಿಕೊಂಡು ಅಗ್ನಿ ರಾಶಿಯಲ್ಲಿ ತಾನಾಗಿಯೇ ಹಾರಿಬಿದ್ದಳು. ಸ್ವಲ್ಪದರಲ್ಲಿಯೆ ಎಲ್ಲಾ ಸುಟ್ಟುಹೋಯಿತು. ಮಾಧವಿಯ ತಾಯಿಯು ಲಜ್ಜಾ ಭಯದಿಂದ ಗೃಹತ್ಯಾಗವನ್ನು ಮಾಡಿದ್ದಳು. ಈಗ ಲಜ್ಜೆಯ ಭಯದಿಂದ ದೇಹ ತ್ಯಾಗವನ್ನು ಮಾಡಿದಳು. ಜನರೆಲ್ಲರೂ ನಿಂತು ಶವದಹನವಾಗುವುದನ್ನು ನೋಡುತಲಿದ್ದರು. ಬಟ್ಟೆ, ಮೈ, ಮೂಳೆ ಮೊದಲಾದವುಗಳೆಲ್ಲಾ ಕ್ರಮವಾಗಿ ಸುಟ್ಟುಹೋದವು. ಅನಂತರ ಚೆಂಕಿಯ ಉರಿಯು ಅಣಗಿತು. ಕ್ರಮವಾಗಿ ಶವದ ಅಂಗಾರಮೂರ್ತಿಯು ಸ್ಪಷ್ಟವಾಗಿ ಕಾಣಿಸುತಲಿತ್ತು. ಎಡಕಾಲು ಚೆಂಕಿಯಲ್ಲಿ ಬಿದ್ದಿರಲಿಲ್ಲವಾಗಿ ಅದು ಸುಟ್ಟಿರಲಿಲ್ಲ. ಅದರ ಅಲಕ್ತ ಅರಸಿನವು ಹಾಗೆಯೆ ಇತ್ತು. ಆ ಉಗುರುಗಳಲ್ಲಿ ಅಗ್ನಿಶಿಖೆಯು ಪ್ರತಿಬಿಂಬಿತವಾಗುತಲಿತ್ತು. ಅನೇಕರು ಅದನ್ನು ನೋಡುತ್ತ ಇತರರಿಗೆ ತೋರಿಸುತಲಿದ್ದರು. ಆದರೆ ಒಬ್ಬ ಯುವಕನು ಅದನ್ನು ನೋಡಿ ಸಹಿಸಲಾರದೆ, ನಾನು ಕಾಷ್ಠವನ್ನು ಹಾಕುವೆನೆಂದು ಹೇಳಿ ಕೆಲವು ಒಣಗಿದ ಸೌದೆಯನ್ನು ತಂದು ಆ ಕೋಮಲವಾದ ಪಾದದ ಮೇಲೆ ಹಾಕಿ ಮುಚ್ಚಿದನು. ಅನಂತರ ಮತ್ತಷ್ಟು ಕಟ್ಟಿಗೆಯನ್ನು ತಂದು ನಿಷ್ಠುರವಾದ ಕಠೋರವಾದ ದೃಷ್ಟಿಯಿಂದ ಶವದ ಸರ್ವಾಂಗವನ್ನೂ ಮುಚ್ಚಿದನು. ಪುನಃ ಚೆಂಕಿಯುರಿಯಲಾರಂಭಿಸಿತು. ಶವದಾಹವು ಸಂಪೂರ್ಣವಾಯಿತು.

# ಮುವ್ವತ್ತೆರಡನೆಯ ಪರಿಚ್ಛೇದ.

ದೂರದಿಂದ ಜನಾರ್ದನನು ಅದನ್ನೆಲ್ಲಾ ಕೇಳುತ್ತಿದ್ದು ಮನಸ್ಸಿನಲ್ಲಿ, ನನ್ನ ಕಾರ್ಯವು ಈಗ ಸಿದ್ಧಿಯಾಯಿತು. ಮಾಧವೀ ಉಳಿದುಕೊಳ್ಳಲಿಲ್ಲ. ಏತಕ್ಕೆಂದರೆ, ಆ ಅಪರಿಚಿತನು ಒಬ್ಬ ವೃದ್ಧೆಯನ್ನೂ ಒಬ್ಬ ಯುವತಿಯನ್ನೂ ಮಾತ್ರ ಎತ್ತಿಕೊಂಡುಬಂದನು. ಮಾಧವಿಯನ್ನು ಕರೆತರಲಿಲ್ಲ. ಅವಳು ಸತ್ತುಹೋಗಿರಬೇಕೆಂದಂದುಕೊಂಡನು. ಈ ರೀತಿ ಯೋಚಿಸಿಕೊಂಡು ಎದ್ದುಕೂತನು.

ಈ ಸಮಯದಲ್ಲಿ ಪೂರ್ವಪರಿಚಿತನಾದ ರಾಮಕಲ್ಪ ವಿದ್ಯಾನಿಧಿಯು ಬಂದು ಜನಾರ್ದನನ್ನು ಕುರಿತು, ಆ ಕೆಸರು ಬಳಿದುಕೊಂಡು ಹೋಗಿ ನಿಮ್ಮನ್ನೆಲ್ಲಾ ಬೆಂಕಿಯಿಂದ ಬದುಕಿಸಿದವನು ಯಾರು? ಎಂದು ವಿಚಾರಿಸಿದನು.

ಜನಾರ್ದನ—ಅವನು ನನ್ನ ಆತ್ಮೀಯು.

ವೃದ್ಧ—ಅವನು ಇರುವುದೆಲ್ಲಿ? ಹೆಸರೇನು?

ಜನಾರ್ದನನು, ಅದು ಯಾವುದನ್ನೂ ಹೇಳದೆ, ಅವನೂ, ಸುಟ್ಟುಹೋದ ಹೆಂಗಸೂ ಸಿಂಹಶತಗ್ರಾಮದವರು. ಹೆಂಗಸು ಲಜ್ಜೆಯ ಭಯಕ್ಕೋಸ್ಕರ ಸತ್ತಳು. ಅವನು ಹಿಂದಕ್ಕೆ ಹೊರಟುಹೋದನು. ಹೋಗುವಾಗ ನೀನು ಕೊಡುವ ಹಣವನ್ನು ಬರಮಾಡಿಕೊಂಡು ಬರಬೇಕೆಂದು ಹೇಳಿ ಹೋಗಿದ್ದಾನೆ. ನೀವು ಹಣವನ್ನು ಕೊಟ್ಟರೆ ಜನರನ್ನು ರಕ್ಷಿಸಿದ ಪುಣ್ಯವು ನಿಮಗೆ ಬರುವುದೆಂದು ಹೇಳಿ ರಾಮಕಲ್ಪನನ್ನು ವಂಚಿಸಿ ಅವನಿಂದ ಹಣವನ್ನು ತೆಗೆದುಕೊಂಡನು.

ಮಾರುದಿನ ಹುಚ್ಚಪಿತಮನು ಬಂದು ಸರೋವರದಲ್ಲಿ ಮಣ್ಣುಗುಡ್ಡೆಯನ್ನೊರಗಿಕೊಂಡು ಅರ್ಧಶಯನಾವಸ್ಥೆಯಲ್ಲಿ ಕೈಮೇಲೆ ತಲೆಯನ್ನಿಟ್ಟುಕೊಂಡು ರಾಜಾ ಮಹೇಶಚಂದ್ರನ ಶಿಬಿರವನ್ನು ನೋಡುತಲಿದ್ದನು.

ಈ ಸಮಯದಲ್ಲಿ ಕೆಲವ್ರು ಗಂಡಾನೆ ಹೆಣ್ಣಾನೆಗಳನ್ನು ಮೈ ತೊಳಯಲು ಆ ಸರೋವರಕ್ಕೆ ತಂದರು. ಅವುಗಳಲ್ಲಿ ಒಂದು ದೊಡ್ಡದಾದ ಆನೆಯನ್ನು ಅರ್ಧನೀರಿನಲ್ಲಿ ಮಲಗಿಸಿಕೊಂಡು ಮಾಹುತರು ಆದರ ಮೈಯನ್ನುಜ್ಜುತ್ತಿದ್ದರು. ಆನೆಯು ಮಗುವಿನಹಾಗೆ ಮಲಗಿಕೊಂಡು ಮಕ್ಕಳಾಟವನ್ನು ಆಡುತಲಿತ್ತು. ಒಂದು ತಡವೆ ಮೆಲ್ಲಮೆಲ್ಲಗೆ ಜಲದ ಪ್ರುಷ್ಪವನ್ನು ಸ್ಪರ್ಶಮಾಡುವುದು—ಒಂದು ತಡವೆ ನೆಲದಲ್ಲಿ ಬೆಳೆದಿದ್ದ ಹುಲ್ಲಿನ ಗರಿಯನ್ನು ಕೀಳುವುದು_ಒಂದು ತಡವೆ ತಾಯಿಯ ಕೈಯಿಂದ ಏನಾದರೂ ಕಸರಿಕೊಂಡು ಓಡಿಹೋಗುವ ಹುಡುಗರಹಾಗೆ ನೀರಿನಿಂದ ಏಳುವುದಕ್ಕೆ ಯತ್ನಿಸುವುದು—ಮಾಹುತಿಗರು ಬೈದರೆ ಪುನಃ ಕುಳಿತುಕೊಳ್ಳುವುದು—ಆಗ ಸ್ಥೂಲಾಂಗವುಳ್ಳ ಹುಡುಗರಹಾಗೆ ಅದರ ಹೊಟ್ಟೆಯು ಎರಡು ಪಾರ್ಶ್ವದಲ್ಲಿಯೂ ಸ್ಫೀತವಾಗಿ ಕಣ್ಗೊಳಿಸುವುದು. ಪ್ರಕಾಂಡವಾದ ಹಸ್ತಿಯಲ್ಲಿ ಶಿಶುವಿನ ಕೋಮಲತೆಯು ಆತ್ಯಾಶ್ಚರ್ಯ! ಮತ್ತು ಕೆಲವು ಹೆಣ್ಣಾನೆಗಳು ಕುಲವಧೂಗಳ ಹಾಗೆ ಕಣ್ಣಿನವರೆಗೂ ನೀರಿನಲ್ಲಿ ಮುಣುಗಿಕೊಂಡು ಸ್ಥಿರವಾಗಿ ನಿಂತಿರುವುವು. ಮಧ್ಯೆ ಮಧ್ಯೆ ಸೊಂಡಿಲನ್ನು ಸ್ವಲ್ಪ ಎತ್ತಿ ನೀರನ್ನು ಮೇಲಕ್ಕೆ ಉಗಿಯುವುವು. ಪಿತಮನು ಎದ್ದು ಅತ್ತಕಡೆ ಹೋದನು. ಮೊದಲು ಹೇಳಿದ ದೊಡ್ಡಾನೆಯ ಬಳಿಗೆ ಹೋಗಿ ನಿಂತು ಅದರ ದೀರ್ಘವಾದ ಅಮಲ ಶ್ವೇತ ದಂತಗಳನ್ನು ನೋಡುತ್ತ ಅಸ್ಪಷ್ಟವಾದ ಸ್ವರದಿಂದ, ಬೃಹದ್ದಂತೇಶ್ವರ! ಎಂದು ಕೂಗಿದನು. ಆನೆಯು ಮುಖವನ್ನೆತ್ತಿ ವ್ಯಸ್ತಭಾವದಿಂದ ಪಿತಮನನ್ನು ನೋಡಿತು. ಮಾಹುತನು, ಓಡು ಎಂದು ಕೂಗಿದನು. ಪಿತಮನು ಅದನ್ನು ಕಿವಿಗೆ ಹಾಕಿಕೊಳ್ಳದೆ ಮೆಲ್ಲಮೆಲ್ಲಗೆ ಮತ್ತಷ್ಟು ಹತ್ತಿರ ಹೋದನು. ಹೀಗೆಯೆ ಮುಂದುಮುಂದಾಗಿ ಹೋಗಿ ನೀರಿನಲ್ಲಿ ನಿಂತುಕೊಂಡನು. ಮಾಹುತನು ನಿಷೇಧಿಸುತ್ತಿದ್ದಹಾಗೆ ಪಿತಮನು ಆನೆಯ ಸೊಂಡಿಲನ್ನು ಸ್ಪರ್ಶಮಾಡಿದನು. ಸ್ಪರ್ಶ ಮಾಡಿದ ಕೂಡಲೆ ಆನೆಯು

ಮೊಲವಹಾಗೆ ವ್ಯಸ್ತವಾಗಿ ಎದ್ದು ಕೂತಿತು. ಅನಂತರ ಏನೋ ತಿಳಿದು ಕೊಂಡು ಸರೋವರವು ಕಂಪಿತವಾಗುವಹಾಗೆ ಬೃಂಹಿತಧ್ವನಿಯನ್ನು ಮಾಡುತ್ತ ನೀರಿನಿಂದ ಎದ್ದು ಪಿತಮನನ್ನು ಹಿಡಿದುಕೊಂಡಿತು. ಅನಂತರ ಮಿಕ್ಕ ಗಂಡಾನೆಗಳೂ, ಹೆಣ್ಣಾನೆಗಳೂ ನೀರಿನಿಂದೆದ್ದು ಮೇಘದಹಾಗೆ ಗರ್ಜನೆ ಮಾಡುತ್ತ ಓಡಿಬಂದು ಪಿತಮನನ್ನು ಸುತ್ತಿಕೊಂಡವು. ಆ ಆನೆಗಳೆಲ್ಲಾ ಆಕಾಶ ಮುಟ್ಟುವಹಾಗೆ ಗಟ್ಟಿಯಾಗಿ ಅರಿಚಿದವು. ಪಿತಮನ ದಶೆಯೇನಾಯಿತೆಂದು ನೋಡದೆ ತಿಳಿದುಕೊಳ್ಳದೆ ಮಾಹುತರೆಲ್ಲರೂ ಕೂಗಿಕೊಂಡು ಶಿಬಿರಾಭಿಮುಖವಾಗಿ ಓಡಿಹೋಗಿ ಮಹಾ ಕೋಲಾಹಲದಿಂದ ಆನೆಗಳು ಬುಬ್ಬ ಭಿಕ್ಷುಕನನ್ನು ಹಿಡಿದು ಕೊಂದುಹಾಕಿದವೆಂದು ಗದ್ದಲವನ್ನು ಹಚ್ಚಿಸಿದರು. ಮಹಾರಾಜಾ ಮಹೇಶಚಂದ್ರನಿಗೆ ಸಮಾಚಾರವು ತಲಪಿ ಅವನೇ ಸ್ವಂತವಾಗಿ ಸರೋವರದ ಬಳಿಗೆ ಓಡಿಬಂದನು. ಸಂಗಡ ನೂರಾರು ಮಂದಿ ಜನರು ಓಡಿಬಂದರು. ರಾಜನು ಸ್ವಲ್ಪದೂರ ನಿಂತು ಆನೆಗಳನ್ನು ಆಶ್ಚರ್ಯದಿಂದ ನೋಡುತಲಿದ್ದನು. ಬುಬ್ಬ ಮಾಹುತನು, ಇನ್ನು ಹೋಗಿ ಪ್ರಯೋಜನವಿಲ್ಲ—ಕೊನೆಗಂಡಿತು ಎಂದು ಹೇಳಿದನು. ರಾಜನು ಅದನ್ನು ಕಿವಿಗೆ ಹಾಕಿಕೊಳ್ಳದೆ ಹಿಂದಿರಿಗಿ ನೋಡಿ, ಯಾರೂ ಹತ್ತಿರ ಬರಬೇಡಿರೆಂದು ಅಪ್ಪಣೆ ಮಾಡಿದನು. ತಾನು ಸ್ವಂತವಾಗಿ ಬುಬ್ಬನೇ ಆನೆಗಳಿದ್ದ ಕಡೆಗೆ ಮುಂದಾಗಿ ನಿಂತು ನೋಡಲಾಗಿ, ಒಂದೊಂದು ಆನೆಯೂ ಪಿತಮನ ಮೈಯನ್ನು ಸೊಂಡಿಲದಿಂದ ಸ್ಪರ್ಶ ಮಾಡುತಲಿದ್ದವು, ಕೆಲವು ಕಮಲದೆಲೆಗಳ ಸಮೇತವಾದ ಮೃಣಾಳಗಳನ್ನು ತೆಗೆದುಕೊಂಡು ಅವನ ಮೈಗೆ ಮುಟ್ಟಿಸುತಲಿದ್ದವು—ಕೆಲವು ಕೆಸರನ್ನು ತೆಗೆದು ಅವನ ಮೈಗೆ ಬಳಿಯುತಲಿದ್ದವು. ಮೊದಲಿನ ಆನೆಯು ಸೊಂಡಿಲನ್ನು ಅವನ ಮೈಗೆ ಸುತ್ತಿಹಾಕಿಕೊಂಡಿತ್ತು. ಪಿತಮನನ್ನು ನೋಡುವುದು—ಪಿತಮನ ಕಪೋಲದಲ್ಲಿ ನರಗಳು ಉಬ್ಬಿದ್ದವು—ಕಣ್ಣುಕೆಳಗಿನ ನಾಡಿಯು ದಪ್ಪವಾಗಿತ್ತು. ಪಿತಮನು ಆನೆಯ ಗಂಡದೇಶವನ್ನು ಕೈಯಿಂದ ಸವ

ರುತ್ತಿದ್ದನು–ರಾಜಾ ಮಹೇಶಚಂದ್ರನು ಬಂದು ಹಿಂದೆ ನಿಂತುಕೊಂಡನು. ಆನೆಗಳು ಅವನನ್ನು ಲಕ್ಷ್ಯಮಾಡಲಿಲ್ಲ–ಪಿತಮನೂ ಅವನನ್ನು ನೋಡಲಿಲ್ಲ–ಪಿತಮನು ಕೈನೀಡಿ ಆನೆಯ ಗಳದೇಶವನ್ನು ಸ್ಪರ್ಶಮಾಡಿ, ಬೃಹದ್ದಂತೇಶ್ವರ ! ಈಗ ನನ್ನನ್ನು ಬಿಟ್ಟುಬಿಡು. ನಿಮ್ಮ ರಾಜನು ನೋಡುವನು ಎಂದು ಹೇಳಿದನು. ಬೃಹದ್ದಂತೇಶ್ವರನು ಹುಂಕಾರ ಮಾಡಿ ಪಿತಮನ ಮೈಗೆ ಸುತ್ತಿದ್ದ ಸೊಂಡಿಲನ್ನು ಬಿಚ್ಚಿತು. ರಾಜಾ ಮಹೇಶಚಂದ್ರನು ಹಿಂದಿನಿಂದ, ನಾನು ನೋಡಿದೆ ಎಂದನು. ಪಿತಮನು, ಈ ಆನೆಯು ನಿಮ್ಮದೆ ? ಎಂದು ಕೇಳಿ, ಆನೆಗಳನ್ನು ಮಾರುವಿರಾ ? ಎಂದು ಕೇಳಿದನು. ಮಹೇಶಚಂದ್ರನು ಸ್ವಲ್ಪ ನಕ್ಕು, ಬನ್ನಿ, ಇಲ್ಲಿಯೇ ಕೂತು ಆನೆಗಳ ಕ್ರಯವನ್ನು ಗೊತ್ತುಮಾಡೋಣವೆಂದನು. ಪಿತಮನು, ಇಂದು ಬೇಡ, ಈಗ ನಾನು ಭಿಕ್ಷೆಗೆ ಹೋಗಬೇಕು, ಎಂದನು. ರಾಜನು ಕಾತರ ನಯನನಾಗಿ ಪಿತಮನ ಆಪಾದಮಸ್ತಕವನ್ನೂ ನೋಡಿದನು. ಪಿತಮನು ಗ್ರಾಮಾಭಿಮುಖವಾಗಿ ಹೋಗಲು ಯತ್ನಿಸುತಲಿದ್ದನು. ಆಗ ಆನೆಗಳು ಬಂದು ಅವನನ್ನು ಸುತ್ತಿಕೊಂಡವು.

ಬೃಹದ್ದಂತೇಶ್ವರನು ಇದ್ದಕಿದ್ದಹಾಗೆ ಪಿತಮನನ್ನು ಸೊಂಡಿಲಿನಿಂದ ಸುತ್ತುಹಾಕಿಕೊಂಡಿತು. ಮೆಲ್ಲಮೆಲ್ಲಗೆ ಅವನನ್ನು ಎತ್ತಿ ತನ್ನ ಎಡದಂತದಮೇಲೆ ಕುಳ್ಳಿರಿಸಿಕೊಂಡು ಸೊಂಡಿಲನ್ನು ಮೇಲಕ್ಕೆತ್ತಿತು. ಪಿತಮನು ಸೊಂಡಿಲನ್ನು ಬಲಗೈಯಿಂದ ಹಿಡಿದುಕೊಂಡು ಮ್ಲಾನಮುಖನಾಗಿ ಕುಳಿತಿದ್ದನು. ಆಗ ಆನೆಗಳೆಲ್ಲಾ ಬಗ್ಗಟ್ಟಾಗಿ ಮಹಾಸಂತೋಷದಿಂದ ಬೃಂಹಿತನಾದವನ್ನು ಮಾಡಿ ಆಕಾಶವನ್ನೆಲ್ಲಾ ತುಂಬಿದವು. ಆ ಶಬ್ದದಿಂದ ಶಿಬಿರದಲ್ಲಿದ್ದವರೆಲ್ಲರೂ ನಡುಗಿದರು. ಆಗ ಎಲ್ಲರೂ ನೋಡುತ್ತಿದ್ದಹಾಗೆ ಆನೆಗಳೆಲ್ಲಾ ದರಿದ್ರ ಪಿತಮನನ್ನು ದಂತದಮೇಲೆ ಕುಳ್ಳಿರಿಸಿಕೊಂಡು ಶಿಬಿರಾಭಿಮುಖವಾಗಿ ಬರುತಲಿದ್ದವು. ರಾಜಾ ಮಹೇಶಚಂದ್ರನು ಆನೆಯ

ಮತ್ತೊಂದು ಕೊಂಬನ್ನು ಕೈಯಿಂದ ಹಿಡಿದುಕೊಂಡು ಬರುತ್ತಿದ್ದನು.

ಈ ಸಮಯದಲ್ಲಿ ಒಬ್ಬ ಯೌವನ ಬ್ರಹ್ಮಚಾರಿಯು ಒಬ್ಬನೇ ನಿಂತು ಬಂದು ಮರಕ್ಕೆ ತಲೆಯನ್ನೊರಗಿಸಿಕೊಂಡು ಕಣ್ಣೀರೊರಸಿಕೊಳ್ಳುತ್ತಿದ್ದನು. ರಾಜಾ ಮಹೇಶಚಂದ್ರನು ಅವನ ಹತ್ತಿರ ಹೋಗಿ, ಆಶ್ಚರ್ಯವನ್ನು ನೋಡಿದೆನು ಎಂದನು. ಬ್ರಹ್ಮಚಾರಿಯು ಅಳುತ್ತ ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು, ಈ ದಾಸಿಯ ಕಾರ್ಯವು ಇಂದು ಪೂರೈಸಿತು. ಈ ಅನಾಥೆಯ ಹಣೆಯಲ್ಲಿ ಇಷ್ಟು ಸುಖವು ಬರೆದಿತ್ತು ! ಎಂದನು.

ಮಹೇಶಚಂದ್ರ—ಮಾತಂಗಿನಿ ! ನಿನ್ನ ಸಾಲವನ್ನು ಇನ್ನೂ ಪರಿಶೋಧನ ಮಾಡಲಾರೆ.

ಹೀಗೆಂದು ಹೇಳಿ ರಾಜನು ಆನೆಗಳ ಸಂಗಡ ಹೋದನು.



## ಮೂವತ್ತು ಮೂರನೆಯ ಪರಿಚ್ಛೇದ.

ಅಪರಾಹ್ಣದಲ್ಲಿ ರಾಜಾಮಹೇಶಚಂದ್ರನು ಒಬ್ಬನೆ ಅನ್ಯಮನಸ್ಕನಾಗಿ ಕುಳಿತಿದ್ದ ಸಮಯದಲ್ಲಿ ಪಿತಮನು ಊದುತಲಿದ್ದ ಕೊಳಲಿನ ಶಬ್ದವು ಅವನ ಕಿವಿಗೆ ಬಿದ್ದಿತು. ರಾಜನು ಒಬ್ಬ ಭೃತ್ಯನನ್ನು ಕರೆದು ಕೊಳಲನ್ನೂದುವವರು ಯಾರು ? ಎಂದು ಕೇಳಿದನು. ಭೃತ್ಯನು, ಆ ಭಿಕ್ಷುಕನೆಂದನು. ರಾಜನು ಎರಡು ಕೈಗಳಿಂದಲೂ ತಲೆಯನ್ನು ಹಿಡಿದುಕೊಂಡು ಕೊಳಲಿನ ಶಬ್ದವನ್ನು ಕೇಳುತ್ತಿದ್ದನು. ಭೃತ್ಯನು ಹೊರಟು ಹೋದನು. ಮಹೇಶಚಂದ್ರನು ಮನಸ್ಸಿನಲ್ಲಿ, ಪಿತಮನು ಸುಖಸಾಗರವನ್ನು ಮಥನ ಮಾಡುವಹಾಗಿದೆ, ಅದರಿಂದ ಎಷ್ಟೋ ರತ್ನಗಳನ್ನು ತೆಗೆದು

ಮಾಲೆಯನ್ನು ಕಟ್ಟಿ ಯಾರ ಕೊರಳಿಗೊ ಹಾಕಿ ಅದನ್ನು ತಾನೇ ನೋಡಿ ಆನಂದಿಸಿ ಅಶ್ರುವರ್ಷಣ ಮಾಡುವಹಾಗಿದೆ ಎಂದು ಭಾವಿಸಿಕೊಂಡು, ಪುನಃ ಭೃತ್ಯನನ್ನು ಕರೆದು, ಭಿಕ್ಷುಕನು ಕೊಳಲೂದುವುದನ್ನು ಯಾರಾದರೂ ಅಡ್ಡಿಮಾಡಿದರೆ ? ಎಂದು ಕೇಳಿದನು.

ಭೃತ್ಯ—ಅಡ್ಡಿಮಾಡುವುದರೊಳಗಾಗಿ ವೃದ್ಧರಾದ ರಾಘವಶರ್ಮರು ಅಡ್ಡಿ ಮಾಡಕೂಡದೆಂದು ಅಪ್ಪಣೆ ಮಾಡಿದರು.

ರಾಜಾ—ರಾಘವಶರ್ಮನನ್ನು ಕರೆ.

ಪರಕ್ಷಣದಲ್ಲಿಯೆ ರಾಘವಶರ್ಮನು ಬಂದನು. ರಾಜನು ಯಾರು ಕೊಳಲೂದುವವರು ? ಎಂದು ಕೇಳಿದನು.

ರಾಘವ—ಯಾವ ಭಿಕ್ಷುಕನನ್ನು ತಾವು ಬೆಳಿಗ್ಗೆ ಶಿಬಿರಕ್ಕೆ ಕರೆತಂದಿರೊ ಅವನು.

ರಾಜಾ——ಅವನನ್ನು ನೀನು ಈಗಲೂ ಭಿಕ್ಷುಕನೆಂದು ಹೇಳುವಿಯಾ ?

ರಾಘವ—ಅವನ ಭುಜದಮೇಲೆ ಇನ್ನೂ ಜೋಳಿಗೆ ಇದೆ. ಅದುಕಾರಣ ಭಿಕ್ಷುಕನೆಂದು ಹೇಳಿದೆನು.

ರಾಜಾ-ಜೋಳಿಗೆ ಇಲ್ಲದಿದ್ದರೆ ಏನು ಹೇಳುತ್ತಿದ್ದೆ ?

ರಾಘವ—ಜನರು ಅವನನ್ನು ಹುಚ್ಚುಪಿತನುನೆಂದು ಹೇಳುತ್ತಾರೆ. ಆದುದರಿಂದ ನಾನೂ ಹಾಗೆ ಹೇಳುತ್ತೇನೆ.

ರಾಜಾ—ಅವನ ಬೇರೆ ಹೆಸರನ್ನು ನೀನರಿಯೆಯೋ ?

ರಾಘವ—ಬಲ್ಲೆ—ತಮಗೂ ಗೊತ್ತಿದೆಯೆಂದು ಕಾಣುತ್ತದೆ.

ರಾಜಾ—ನನಗೆ ಮೊದಲು ಗೊತ್ತಿರಲಿಲ್ಲ—ಇಂದು ಗೊತ್ತಾಯಿತು. ವಿಜಯರಾಜನನ್ನು ಹುಡುಕುವುದಕ್ಕೆ ಎಷ್ಟು ವರುಷಗಳಿಂದ ಎಷ್ಟೋ ಜನರನ್ನು ಕಳುಹಿಸಿದ್ದೆನು. ಯಾರೂ ಸಮಾಚಾರವನ್ನು ತರದೆಹೋದರು.

ರಾಘವ—ನನಗೆ ಅಪ್ಪಣೆಯಾಗಿರಲಿಲ್ಲ. ಆಗಿದ್ದರೆ ವಿಜಯರಾಜನ ಸಮಾಚಾರವನ್ನು ಎಷ್ಟೋ ದಿವಸಗಳ ಮೊದಲೆ ಹೇಳುತ್ತಿದ್ದೆನು.

ರಾಜಾ—ನಾನು ಜನರನ್ನು ಕಳುಹಿಸುತಲಿದ್ದುದನ್ನು ಕಂಡೂಕಂಡು ನೀನೇತಕ್ಕೆ ನನಗೆ ಮೊದಲು ಹೇಳಲಿಲ್ಲ?

ರಾಘವ—ಅನೇಕ ಕಾರಣಗಳಿದ್ದವು—ಅದರಲ್ಲಿ ಮುಖ್ಯ ಕಾರಣವೇನೆಂದರೆ ;—ತಾವು ಆಗ ವಿಜಯರಾಜನನ್ನು ನೋಡಿದ್ದರೆ ನಂಬುತ್ತಿರಲಿಲ್ಲ. ಅವನಿಗೆ ಆಗ ಬಾಹ್ಯಜ್ಞಾನವಿರಲಿಲ್ಲ.

ರಾಜಾ—ಈಗ ಆ ಅವಸ್ಥೆಯಿಲ್ಲವೆಂದು ತೋರುತ್ತದೆ.

ರಾಘವ—ಈಗ ಅವನು ಹೆಸರಿನಲ್ಲಿ ಮಾತ್ರ ಹುಚ್ಚಪಿತನು. ಆದರೆ ಕಾರ್ಯದಲ್ಲಿ ಆ ಯೌವನ ವಿಜಯರಾಜನಾಗಿದ್ದಾನೆ. ನೆನ್ನೆರಾತ್ರಿ ಅವನ ಬಲವೀರ್ಯಗಳನ್ನು ನೋಡಿ ನಾನು ಅವಾಕ್ಕಾದೆನು.

ರಾಜಾ—ಅವನೇವೇ ಆ ಹೆಂಗಸನ್ನು ಬೆಂಕಿಯಿಂದುದ್ಧಾರಮಾಡಿದವನು ?

ರಾಘವ—ಅವನೇ—ಇಲ್ಲದಿದ್ದರೆ ಅದು ಯಾರಿಗೆ ಸಾಧ್ಯ ?

ರಾಜಾ—ನೀನು ಇಂದು ಹೋಗಿ ಅವನನ್ನು ಏಕಾಂತವಾಗಿ ನೋಡಿದಿಯಾ ?

ರಾಘವ—ಇಲ್ಲ—ಅಪ್ಪಣೆಯಾದರೆ ಬಂದುತಡವೆ ನೋಡಿಕೊಂಡು ಬರುವೆನು.

ರಾಜಾ—ನನಗೂ ಇಷ್ಟ—ಬಂದುತಡವೆ ಹೋಗಿ ನೋಡಬೇಕೆಂದಿದ್ದೇನೆ.

ರಾಘವ—ತಾವು ಅವನನ್ನು ಈಗ ಬಲ್ಲಿರೆಂದು ಗೊತ್ತಾಗದಿದ್ದರೆ ಬಹಳ ಒಳ್ಳೆಯದು.

ರಾಜಾ—ಏತಕ್ಕೆ ?

ರಾಘವ—ಈಗ ಪರಿಚಯವು ಅವನಿಗೆ ಸುಖವುಂಟುಮಾಡಲಾರದು. ಅವನಿಗೆ ಹೆಂಡತಿಯಿರುವುದು ಗೊತ್ತಾದಮೇಲೆ ತಿಳಿದರೆ ಒಳ್ಳೆಯದು.

ರಾಜಾ—ಅವಳನ್ನು ಹುಡುಕುವ ಭಾರವನ್ನು ನಿನ್ನಮೇಲೆ ಹಾಕಿ ನಾನು ನಿಶ್ಚಿಂತನಾಗಿದ್ದೇನೆ. ಆದರೆ ನೀನು ಇದುವರೆಗೂ ಸಮಾಚಾರವನ್ನು ತರಲಿಲ್ಲವೇತಕ್ಕೆ ?

ರಾಘವ—ನೆನ್ನೆ ನನಗೆ ಹೇಳಿದುದು. ಶೀಘ್ರವಾಗಿಯೆ ಸಮಾಚಾರವನ್ನು ತರುವೆನು.

ರಾಜನು ಎದ್ದು ಮೆಲ್ಲಮೆಲ್ಲಗೆ ಗಜಶಾಲೆಯ ಹತ್ತಿರ ಹೋಗಿ ಯಾರಿಗೂ ಕಾಣಿಸಿಕೊಳ್ಳದೆ ಒಂದು ಸ್ಥಳದಲ್ಲಿ ನಿಂತು ನೋಡುತ್ತಿದ್ದನು. ಬೃಹದ್ದಂತೇಶ್ವರನಿಗೆ ಹೊಸ ಅಲಂಕಾರವಾಗಿತ್ತು. ಅದರ ತಲೆಯಲ್ಲಿ ಖರ್ಜೂರದ ಗರಿಯಿಂದ ಮಾಡಲ್ಪಟ್ಟ ಒಂದು ಕಿರೀಟ. ಅದಕ್ಕೆ ವನಪುಷ್ಪಗಳು ವನಲತೆಯಿಂದ ಪೋಣಿಸಿತ್ತು. ಕುತ್ತಿಗೆಯಲ್ಲಿ ವನಪುಷ್ಪಗಳ ಮಾಲೆ. ಅದರ ದಂಡಾಕೃತಿಯಾದ ಸೊಂಡಿಲನ್ನು ಪಿತಮನು ಎಡಗೈಯಿಂದ ಹಿಡಿದು ನಿಂತಿದ್ದನು. ಮತ್ತು ಬಲಗೈಯನ್ನು ನೀಡಿ ಒಂದು ಆನೆಯ ಮರಿಯನ್ನು ಕರೆಯುತ್ತಿದ್ದನು. ಮರಿಯು ತಾಯಿಯ ಹೊಟ್ಟೆಯ ಕೆಳಗೆ ನಿಂತುಕೊಂಡು ಪಿತಮನನ್ನು ನೋಡುತ್ತಲಿತ್ತು. ಕೋಮಲವಾದ ಸಣ್ಣ ಸೊಂಡಿಲನ್ನು ಪಿತಮನ ಕಡೆಗೆ ನೀಡಿ ಆಘ್ರಾಣ ಮಾಡುವುದಕ್ಕೋಸ್ಕರ ಶುಂಡಾಗ್ರವನ್ನು ಅರಳಿಸುತಲಿತ್ತು, ಒಂದೊಂದು ತಡವೆ ಒಂದೆರಡು ಹೆಜ್ಜೆಗಳನಿಟ್ಟು ಮುಂದಾಗುವುದು ಪುನಃ ಹಿಂದಕ್ಕೆ ಹೋಗುವುದು. ಪಿತಮನು ನಾನಾ ಸ್ವರದಿಂದ ಅದಕ್ಕೆ ಅಭಯವನ್ನು ಕೊಡುತಲಿದ್ದನು. ಕಡೆಗೆ ಕರಿಶಾಬಕವು ಕ್ರೀಡಾಲುಬ್ಧವಾಗಿ ಪಿತಮನ ಹತ್ತಿರ ಬಂದು ಮುಖವನ್ನೆತ್ತಿ ಶುಂಡಾಗ್ರವನ್ನು ಅರಳಿಸಲಾರಂಭಿಸಿತು. ಸಾಹಸಮಾಡಿ ಒಂದು ತಡವೆ ಪಿತಮನ ಅಂಗವನ್ನು ಸ್ಪರ್ಶಮಾಡಿತು. ಸ್ಪರ್ಶಮಾಡುತಲೆ ಓಡಿಹೋಗಿ ಪುನಃ ತಾಯಿಯ ಹೊಟ್ಟೆಯ

ಕೆಳಗೆ ನಿಂತು ನಿರ್ಭಯವಾಗಿ ಅಲ್ಲಿಂದ ಪಿತಮನನ್ನು ನೋಡಲಾರಂಭಿಸಿತು. ಈ ಸಮಯದಲ್ಲಿ ವೃದ್ಧನಾದ ರಾಘವಶರ್ಮನು ಪಿತಮನ ಇದಿರಿಗೆ ಬಂದು ನಿಂತನು. ಪಿತಮನು ಎಡಗೈಯಿಂದ ಬೃಹದ್ದಂತೇಶ್ವರನ ಸೊಂಡಿಲವನ್ನು ಹಿಡಿದುಕೊಂಡು ನಿಂತು ರಾಘವನನ್ನು ನೋಡಿ ಆನೆಯ ಸೊಂಡಿಲಿನ ಕೆಳಗೆ ತಲೆಯನ್ನಿಟ್ಟುಕೊಂಡು ಅತಿ ವ್ಯಾಕುಲ ಭಾವದಿಂದ ರಾಘವನನ್ನು ನೋಡುತಲಿದ್ದನು. ಏನೂ ಹೇಳಲಿಲ್ಲ. ಹೇಳಲಾರದವನಾಗಿಯೂ ಇದ್ದನು. ಕ್ಷಣದಮೇಲೆ ನೆಲದಿಂದ ಜೋಳಿಗೆ ತೆಗೆದುಕೊಂಡು ಗಮನೋನ್ಮುಖನಾದನು. ಈ ಸಮಯದಲ್ಲಿ ರಾಜಾಮಹೇಶಚಂದ್ರನು ಮುಂದಾಗಿ ಬರಲು ಪ್ರಯತ್ನಪಟ್ಟನು. ಅದನ್ನು ಕಂಡು ರಾಘವನು ಇಂಗಿತೆಯಿಂದ ನಿಷೇಧಮಾಡಿದನು. ಹುಚ್ಚ ಪಿತಮನು ಹೊರಟುಹೋದನು.



## ಮೂವತ್ತುನಾಲ್ಕನೆಯ ಪರಿಚ್ಛೇದ.

ಪಿತಮನು ಸ್ವಲ್ಪದೂರ ಹೋಗಿ ಬಂದು ಸರೋವರದ ಸೋಪಾನದ ಮೇಲೆ ಕುಳಿತುಕೊಂಡನು. ಎತ್ತರವಾದ ಮರದೆಲೆಗಳಮೇಲೆ ಸೂರ್ಯಕಿರಣವು ಉಳಿದಿತ್ತು. ಸೂರ್ಯನು ಅಸ್ತನಾಗಿರಲಿಲ್ಲ. ಆಗ ಪಕ್ಷಿಗಳು ಕ್ರೀಡಿಸುತಲಿದ್ದವು. ಕೆಲವು ನೀರಿನಲ್ಲಿ ಈಜಾಡುತಲಿದ್ದವು. ಕೆಲವು ಮೇಲಕ್ಕೆ ಹಾರುತಲಿದ್ದವು. ಕೆಲವು ಪಂಚಮಸ್ವರದಲ್ಲಿ ಚೀತ್ಕಾರಮಾಡುತ್ತ ಆಕಾಶವನ್ನು ಶಬ್ದದಿಂದ ತುಂಬುತಲಿದ್ದವು. ಪಿತಮನ ಮುಖದಲ್ಲಿ ಏನೋ ಒಂದು ಆಹ್ಲಾದದ ಛಾಯೆಯು ಬಿದ್ದಿತ್ತು. ನಾಲ್ಕುದಿಕ್ಕನ್ನೂ ನೋಡಿಕೊಂಡು

ಪಕ್ಷಿಗಳ ಕ್ರೀಡೆಯನ್ನು ನೋಡಲಾರಂಭಿಸಿದನು. ನೋಡುತಲಿದ್ದಹಾಗೆ ಹಠಾತ್ ಅವನ ಮುಖವು ಮ್ಲಾನವಾಯಿತು. ಒಂದು ಬಕವನ್ನು ಕಾತರ ನಯನದಿಂದ ನೋಡುತ್ತಿದ್ದನು. ಬಕವು ಏನೋ ಆಲಸ್ಯದಿಂದ ಪೀಡಿತವಾಗಿತ್ತು. ಮರದಮೇಲೆ ಕೂಡಲಾರದು. ಕುತ್ತಿಗೆಯ ಭಾರವನ್ನು ಕೂಡ ಸಹಿಸಲಾರದು. ವೃಕ್ಷಮೂಲದಲ್ಲಿ ನಿಂತುಕೊಂಡಿತು. ನಿಲ್ಲಲಾರದು—ಕಣ್ಣುಗಳು ಮುಚ್ಚಿದವು—ತಲೆಯನ್ನು ಮೆಲ್ಲಮೆಲ್ಲಗೆ ತಗ್ಗಿಸಿತು. ಇನ್ನೂ ಬಗ್ಗಿಸಿತು. ಕಡೆಗೆ ಅದರ ಓಷ್ಠಾಗ್ರವು ಮಣ್ಣನ್ನು ಸ್ಪರ್ಶಮಾಡಿತು. ಆಗ ಸ್ವಲ್ಪ ಚೇತನವುಂಟಾಯಿತು. ಕಣ್ಣು ಬಿಟ್ಟಿತು. ಕುತ್ತಿಗೆಯನ್ನೆತ್ತಿತು—ಕರ್ದಮಾಕ್ತವಾದ ಚಂಚುವನ್ನು ಮೇಲಕ್ಕೆತ್ತಿತು. ಎರಡು ರೆಕ್ಕೆಗಳು ಕೆಳಗೆ ಬಿದ್ದಿದ್ದುದನ್ನು ಬೆನ್ನಿನಮೇಲೆ ಇಟ್ಟುಕೊಂಡು, ಆದರೆ ಚುಂಚವಿನ ಕೆಸರನ್ನು ಒರಿಸಿಕೊಳ್ಳಲಾರದಾಗಿತ್ತು. ಕಣ್ಣುಮುಚ್ಚಿತು. ರೆಕ್ಕೆ ಪುನಃ ಕೆಳಗೆ ಬೀಳಲಾರಂಭಿಸತು. ಪುನಃ ತಲೆ ಬಗ್ಗಿತು. ಪುನಃ ಚಂಚುವು ಕೆಸರಿಗೆ ಬಿತ್ತು. ಹೀಗಾದುದನ್ನು ಪಿತಮನು ಎರಡು ಮೂರುತಡವೆ ನೋಡಿ ಅದರಕಡೆ ಹೋದನು. ಬಕವು ಓಡಿಹೋಗುವುದಕ್ಕೆ ಪ್ರಯತ್ನಪಟ್ಟಿತು. ಆದರೆ ಕಾಲು ಅಲ್ಲಾಡಿ ಅಲ್ಲಿಯೇ ಬಿದ್ದಿತು. ಅದಕ್ಕೋಸ್ಕರ ಸಣ್ಣಸಣ್ಣ ಮೀನುಗಳನ್ನು ಹಿಡಿದುಕೊಂಡು ಬರುವುದಕ್ಕೆ ಪಿತಮನು ನೀರಿಗೆ ಇಳಿದನು. ಅನ್ಯಮನಸ್ಕನಾಗಿ ಮೀನುಗಳನ್ನು ಹುಡುಕುತ್ತಿರುವಾಗ ಒಂದು ಶಬ್ದವಾಯಿತು. ಪಿತಮನು ಹಿಂದಿರಿಗಿ ನೋಡಲಾಗಿ ಒಂದು ನರಿಯು ಬಂದು ಬಕವನ್ನು ಬಾಯಿಯಲ್ಲಿ ಹಿಡಿದುಕೊಂಡು ಓಡಿಹೋಗುತಲಿತ್ತು. ಪಿತಮನು ನೀರಿನಲ್ಲಿ ನಿಂತು ನೋಡುತಲಿದ್ದನು. ಇನ್ನೇನೂ ಹೇಳಲಿಲ್ಲ. ಮೆಲ್ಲಮೆಲ್ಲಗೆ ದಡಕ್ಕೆ ಬಂದು ತನ್ನ ಮೈಯ್ಯಿನ ನೀರನ್ನೊರಸಿಕೊಂಡನು. ಅನಂತರ ಗಂಭೀರಭಾವದಿಂದ ಪ್ರಾಂತರಾಭಿಮುಖವಾಗಿ ಹೋದನು.

ಪಿತಮನು ಪ್ರಾಂತರದಲ್ಲಿ ಹೋಗುಹೋಗುತ್ತ ದೂರದಲ್ಲಿ ಗ್ರಾಮಕ್ಕೆ ಹತ್ತಿರ ಬಂದು ಶವದಹನವಾಗುತಿದ್ದುದನ್ನು ನೋಡಿದನು. ಏನೋ ಯೋಚಿಸಿಕೊಂಡು ಆ ದಿಕ್ಕಿನಲ್ಲಿ ಹೋದನು. ಸ್ವಲ್ಪದೂರ ಹೋಗುವುದರಲ್ಲಿ ಒಬ್ಬ ವೃದ್ಧ ಹೆಂಗಸನ್ನು ಕಂಡು, ಪಿತಮನು ಅವಳನ್ನು ಯಾರು ಸತ್ತರೆಂದು ಕೇಳಿದನು.

ವೃದ್ಧಾ—ಯಾರು ಬಲ್ಲರು, ಅಣ್ಣ ! ಯಾರೋ ಅನಾಥೆಯು ಸತ್ತಿರಬೇಕು. ಯಾರಿಗೆ ಮಕ್ಕಳು ಮರಿಗಳು ಇದ್ದಾರೋ ಯಾರಿಗೆ ನೋಡಿಕೊಳ್ಳುವುದಕ್ಕೆ ಹತ್ತು ಜನ ಇದ್ದಾರೋ ಅಂತಹವರೇನು ಸತ್ತಾರೆ? ಅಂತಹವರಿಗೆ ಪಿತ್ತವೆ ? ಉಷ್ಣವೆ ? ಯಾವದು ತಾನೇ ಇದ್ದೀತು ? ಅದೆಲ್ಲಾ ನನ್ನಂತಹ ಕೆಟ್ಟ ಮೋರೆಯುವಳಿಗೇ ಸರಿ. ನನ್ನಂತಹವಳ ದುಃಖವನ್ನು ಯಾರು ಕೇಳುವರು ? ಒಂದು ದಿನ ನನ್ನಹಾಗಿದ್ದವಳು ನಮ್ಮಮನೆಗೆ ಬಂದು ಬಿದ್ದಳು. ಇನ್ನೇನು ಮಾಡಲಿ ? ಇರೆಂದು ಹೇಳಿದೆ. ಎರಡು ದಿನವಿದ್ದು ಬೇರೆ ಹೋದರೆ ಚೆನ್ನಾಗಿದೆ ಹೆಚ್ಚುಇದ್ದರೆ ಹೇಗೆ ಚೆನ್ನಾಗಿದ್ದೀತು ? ಬೇರೆ ಹೋದರೆ ಯಾರು ಇಟ್ಟುಕೊಂಡಾರು ? ಕ್ರಮವಾಗಿ ರೋಗಬಂತು. ಈಗ ಸಾಯುತ್ತ ಕೂತಿದ್ದಾಳೆ. ಅದೇ ಹೇಳುತ್ತಿದ್ದೆ. ಎಲ್ಲಿಂದಲೊ ಇತ್ತ ಕಡೆ ಒಬ್ಬ ರಾಜನು ಬಂದ, ಬಂದು ತಡವೆ ಅವನಹತ್ತಿರ ಹೋಗಿ ಅವನ ಸಂಗಡ ಬಂದಿರುವ ಪಂಡಿತನನ್ನು ಕರೆತಂದು ಅವಳನ್ನ ತೋರಿಸಬೇಕೆಂದು ಹೋದೆ. ಅಲ್ಲಿಗೆ ಹೋಗಲಿಕ್ಕಾಗಲಿಲ್ಲ. ಜವಾನರು ಬಿಡರು. ಅವಕ್ಕೋಸ್ಕರ ಮನೆಗೆ ಹೋಗುತ್ತೇನೆ. ಇನ್ನೂ ಚಿಕ್ಕವಳು. ಸಾಯುವಳೆ ?

ಪಿತಮ—ಚಿಕ್ಕವಳೆ ! ಅವಳಿಗೆ ಇನ್ನೂ ಚಿಕ್ಕವಯಸ್ಸೆ ? ನಾನು ಅವಳಿಗೆ ಹೆಚ್ಚುವಯಸ್ಸಾಗಿರಬೇಕೆಂದು ತಿಳಿದಿದ್ದೆ.

ವೃದ್ಧಳು—ಹೆಚ್ಚೇನು ? ಮಗು ! ನಾಲ್ವತ್ತೊ ಅಥವಾ ನಾಲ್ವತ್ತು ನಾಲ್ಕೊ, ಅಷ್ಟೆ—ಅದೇನು ಹೆಚ್ಚುವಯಸ್ಸು ?

ಪಿತಮ —ಅವಳು ಬಹಳ ಕೆಂಪಾಗಿದ್ದಾಳೆಯೆ ? ಅವಳು ಬಹಳ ಸುಂದರಿಯೆ ?

ವೃದ್ಧಳು — ಹೌದು, ಮಗು ! ಬಹಳ ಸುಂದರಿ.

ಪಿತಮ — ಹುಬ್ಬು ಕೂಡಿದೆಯೆ ?

ವೃದ್ಧಳು — ಹುಬ್ಬು ಕೂಡಿದೆ. ಹಾಗಾದರೆ ನೀನು ಅವಳನ್ನು ಕಂಡಿರುವಹಾಗಿದೆ—ಅಪ್ಪ, ಮಗು ! ನೀನು ಹೋಗಿ ಅವಳಕಡೆ ಜನರಿಗೆ ಸ್ವಲ್ಪ ಸಮಾಚಾರ ಕೊಟ್ಟರೆ ನಾನು ಬದುಕಿಕೊಳ್ಳುತ್ತೇನೆ. ನಾನು ಬಡವಳು—ಅವಳು ನನ್ನ ಮನೇಲಿ ಸತ್ತರೆ, ಅವಳಿಗೆ ಇನ್ನು ಗತಿಯೆಲ್ಲಿ ತೋರಿಸಲಿ ?

ಪಿತಮ—ನೀನು ಇಲ್ಲಿ ನಿಂತಿರು. ನಾನು ಹೋಗಿ ಪಂಡಿತನನ್ನು ಕರೆತರುತ್ತೇನೆ. ನಾನು ಬರುವುದು ಸಾವಕಾಶವಾಯಿತೆಂದು ಹೋಗಬೇಡ.

ವೃದ್ಧಳು—ಒಳ್ಳೇದಪ್ಪಾ ! ಹೋಗು. ನೀನು ಚಿರಜೀವಿಯಾಗಿರು. ಈ ಉಪಕಾರ ನನಗೆ ಯಾರೂ ಮಾಡಿಲ್ಲ. ನನಗೆ ಉಪಕಾರಮಾಡಿದರೆ ಈ ಜನ್ಮದಲ್ಲಿ ಮರೆಯುವವಳಲ್ಲ.

ಪಿತಮನು ಬೇಗನೆ ಹೋಗಿ ಸನ್ಯಾಸಿಯನ್ನು ಕರೆತಂದನು. ಸನ್ಯಾಸಿಯು ಬರುತ ಸ್ತ್ರೀವೇಷದಲ್ಲಿ ಮಾತಂಗಿನಿಯಾಗಿ ಬಂದಳು. ವೃದ್ಧಳು ಬಹಳ ಆಹ್ಲಾದದಿಂದ ಹೋಗುತ್ತ ಮಾತಂಗಿನಿಯೊಂದಿಗೆ ಮಾತನಾಡಲಾರಂಭಿಸಿದಳು. ಪಿತಮನಾಗಲಿ ಮಾತಂಗಿನಿಯಾಗಲಿ ಅವಳ ಮಾತಿಗೆ ಕಿವಿಕೊಡಲಿಲ್ಲ. ನಿಸ್ತಬ್ಧರಾಗಿ ಹೋಗುತ್ತಿದ್ದರು. ಅನಂತರ ಸಂಧ್ಯಾಕಾಲದಲ್ಲಿ ಎಲ್ಲರೂ ವೃದ್ಧಳ ಮನೆಗೆ ತಲ್ಪಿದರು. ಪಿತಮನೂ ಬ್ರಹ್ಮಚಾರಿಯೂ ಮನೆಯ ಮುಂದುಗಡೆ ಬಂದು ಮರದಕೆಳಗೆ ಕೂತರು. ವೃದ್ಧಳು ಒಳಗೆ ಹೋಗಿ ದೀಪವನ್ನು ಹಚ್ಚುವುದರಲ್ಲಿ ಕೂತಳು. ದೀಪವನ್ನು ಹಚ್ಚುತ್ತ ಅಂಧಕಾರದಲ್ಲಿಯೇ ವೃದ್ಧಳು ಬಂದು ಕಡೆ ಮುಖತಿರಿಗಿಸಿಕೊಂಡು ಹೇಗಿದ್ದೀಯೆ? ತಾಯಿ ! ಎಂದು ಕೂಗಿದಳು. ಯಾರೂ ಪ್ರತ್ಯುತ್ತರವನ್ನು ಕೊಡಲಿಲ್ಲ.

ಲಿಲ್ಲ. ಮಾತಂಗಿನಿಯು ಶ್ವಾಸಪ್ರಶ್ವಾಸದ ಶಬ್ದಯಾವದನ್ನೂ ಕೇಳಲಿಲ್ಲ. ಆದರೂ ಏನೂ ಹೇಳದೆ ದೀಪವು ಬರಲೆಂದು ಸುಮ್ಮನೆ ಕುಳಿತಿದ್ದಳು. ದೀಪ ಹಚ್ಚಿದ್ದಾಯಿತು. ಅನಂತರ ಮಾತಂಗಿನಿಯು ಕುಟೀರದ ಒಂದುಕಡೆ ಒಂದು ಹರಕುಹಾಸಿಗೆಯಮೇಲೆ ಯಾರೋ ಒಬ್ಬರು ಮಲಗಿದ್ದುದನ್ನು ನೋಡಿದಳು. ಹಾಸಿಗೆ ಚಿಕ್ಕದಾಗಿದ್ದುದರಿಂದ ಮಲಗಿದ್ದ ವ್ಯಕ್ತಿಯ ಕೇಶ ರಾಶಿಯು ನೆಲದಮೇಲೆ ಬಿದ್ದು ಅದರಮೇಲೆ ಒಂದೆರಡು ಜಿರಲೆಹುಳುಗಳು ಓಡಾಡುತಲಿದ್ದವು. ಮುಖದಮೇಲೆ ಒಂದು ಹರಕುಬಟ್ಟೆ ಮುಚ್ಚಿತ್ತು. ಮಾತಂಗಿನಿಯು ವೃದ್ಧೆಯ ಕೈಯಿಂದ ದೀಪವನ್ನು ತೆಗೆದುಕೊಂಡು ಮೆಲ್ಲ ಮೆಲ್ಲಗೆ ಮುಖದಮೇಲಿನ ಬಟ್ಟೆಯನ್ನು ತೆಗೆದು ನೋಡಿದಳು. ಇನ್ನು ಗುರ್ತಿಸಬೇಕಾದ ಅವಶ್ಯಕವಿರಲಿಲ್ಲ. ಈ ಭಿಕ್ಷುಕವೇಷವನ್ನು ಯಾರು ನಿನಗೆ ಕೊಟ್ಟರು, ತಾಯಿ! ಎಂದು ಮಾತಂಗಿನಿಯು ಅವಳ ಪಾದಮೂಲ ದಲ್ಲಿ ಬಿದ್ದಳು. ಅವಳ ಕೈಯಲ್ಲಿದ್ದ ದೀಪವು ನಂದಿಹೋಯಿತು. ಎಲ್ಲಾ ಅಂಧ ಕಾರಮಯವಾಯಿತು. ಮಾತಂಗಿನಿಯು, ಎಲ್ಲಾ ಪೂರೈಸಿದಹಾಗಾಯಿತೆಂದು ಹೇಳಿಕೊಂಡಳು. ವೃದ್ಧಳು, ಭಯವಿಲ್ಲ–ಅದು ನಿದ್ರೆ ಎಂದಳು. ದೀಪ ವನ್ನು ಹಚ್ಚುವಹಾಗೆ ಹೇಳಿ, ಮಾತಂಗಿನಿಯು ಹೊರಗೆ ಹೋದಳು. ಪುನಃ ಒಳಗೆ ಬಂದು ರೋಗಿಯ ಪಾರ್ಶ್ವದಲ್ಲಿ ಕುಳಿತಳು. ರೋಗಿಯ ಅಂಗಸ್ಪ ರ್ಶಮಾಡಿದಳು. ಪುನಃ ಪಿತಮನ ಹತ್ತಿರ ಹೋದಳು. ಅಲ್ಲಿ ಮರದ ಬುಡದಲ್ಲಿ ಕೂತಳು. ಪುನಃ ಬಂದಳು–ಪಿತಮನು ಒಂದು ತಡವೆಯಾದರೂ ಕುಟೀರದೊಳಗೆ ಬಂದು ರೋಗಿಯನ್ನು ನೋಡಲಿಲ್ಲ. ಮಾತಂಗಿನಿಯನ್ನು ಕೇಳಲೂ ಇಲ್ಲ. ಮರದ ಬುಡದಲ್ಲಿ ಕೂತು ರಾತ್ರಿಯನ್ನು ಕಳೆದನು.

ಮಾರನೆಯದಿನ ಎಂಟು ಒಂಭತ್ತು ಘಂಟೆಯಸಮಯದಲ್ಲಿ ಜ್ಯೋ ತ್ಸ್ನಾವತಿಯು ಒಂದುತಡವೆ ಕಣ್ಣು ತೆರೆದಳು. ಕಣ್ಣು ತೆರೆದು ಮೇಲೆ ನೋಡಿದಳು. ಸುತ್ತಲೂ ಗೋಡೆಯಮೇಲೆ ದೃಷ್ಟಿಬಿತ್ತು. ನೋಡಿ,

ಪುನಃ ಕಣ್ಣು ಮುಚ್ಚಿದಳು. ರಾತ್ರಿ ಒಂದು ಪ್ರಹರವಾಯಿತು. ಪುನಃ ಕಣ್ಣುಬಿಟ್ಟಳು—ತಾನು ಇರುವ ಸ್ಥಳವನ್ನು ಗುರುತಿಸುವದಕ್ಕೆ ಪ್ರಯತ್ನ ಪಟ್ಟಳು. ಕ್ರಮವಾಗಿ ಮಾತಂಗಿನಿಯ ಮೇಲೆ ದೃಷ್ಟಿಬಿತ್ತು. ಅವಳನ್ನು ಹಾಗೆಯೇ ನೋಡಿದಳು. ಜ್ಞಾಪಿಸಿಕೊಳ್ಳುವ ಪ್ರಯತ್ನವನ್ನು ಕಂಡು ಮಾತಂಗಿನಿಯು, ನಾನು ನಿನ್ನ ಮಾತಿ, ಎಂದಳು. ಜ್ಯೋತ್ಸ್ನಾವತಿಯು ಮೆಲ್ಲಮೆಲ್ಲಗೆ, ನಾನು ಎಲ್ಲಿದ್ದೇನೆ? ನನ್ನವರೆಲ್ಲಾ ಎಲ್ಲಿ? ಈ ಮನೆಯನ್ನು ನಾನು ಎಂದೂ ನೋಡಿರಲಿಲ್ಲವೆಂದಳು. ಮಾತಂಗಿನಿಯು, ಇದೆಲ್ಲಾ ಜ್ಞಾಪಿಸಿಕೊಳ್ಳಲು ಪ್ರಯತ್ನಪಟ್ಟರೆ ಕಷ್ಟವಾಗುವುದೆಂದು ವೃತ್ತಾಂತವನ್ನೆಲ್ಲಾ ಸಂಕ್ಷೇಪವಾಗಿ ಹೇಳಿದಳು.

ಜ್ಯೋತ್ಸ್ನಾವತಿ—ನನಗೆ ನಿದ್ರೆ—ಎಬ್ಬಿಸಬೇಡ.

ಮಾತಂಗಿನೀ—ತಾಯಿ! ನಿದ್ರೆಯಲ್ಲ. ನೀನು ಎಚ್ಚರವಾಗಿರುತ್ತಿ—

ಜ್ಯೋತ್ಸ್ನಾವತಿ—ನಾನು ಹಾಗೆ ತಿಳಿಯುವುದಿಲ್ಲ. ಸ್ವಪ್ನವೆಂದು ಕಾಣುತ್ತದೆ. ಬೆಳಗ್ಗೆ ಎದ್ದಮೇಲೆ ವೃತ್ತಾಂತವನ್ನೆಲ್ಲಾ ಎಲ್ಲರಿಗೂ ಹೇಳುವೆನು.



## ಮುವ್ವತ್ತೆರಡನೆಯ ಪರಿಚ್ಛೇದ.

---

ಎರಡು ದಿನಗಳಲ್ಲಿ ಜ್ಯೋತ್ಸ್ನಾವತಿಯು ಸಂಪೂರ್ಣವಾಗಿ ಆರೋಗ್ಯಲಾಭವನ್ನು ಹೊಂದಿ ಮೊದಲಿನಹಾಗೆ ಮಾತಂಗಿನಿಯ ಸಂಗಡ ಮಾತುಕಥೆಯನ್ನಾಡಲಾರಂಭಿಸಿದಳು. ಒಂದು ದಿನ ಮಧ್ಯಾಹ್ನದಮೇಲೆ ಮಾತಂಗಿನಿ

ಯನ್ನು ಕುರಿತು, ಈಗ ಎಲ್ಲಿಗೆ ಹೋಗಲಿ? ಹೇಳು, ನೋಡೋಣ. ಇಲ್ಲಿ ಇನ್ನೆಷ್ಟುದಿನವಿದ್ದು ತೀರೀತು ? ಅನಂತರ ನನಗೆ ಸ್ಥಾನವೆಲ್ಲಿ? ಎಂದು ಕೇಳಿದಳು.

ಮಾತಂಗಿನೀ——ಅನೇಕ ಸ್ಥಳವಿದೆ. ಎಲ್ಲಿಗೆ ಹೋಗಬೇಕಾದರೂ ಹೋಗಬಹುದು. ಇಲ್ಲಿ ಒಂದೆರಡು ದಿನವಿದ್ದು ಕಾಲಿಗೆ ಸ್ವಲ್ಪ ಬಲವು ಬಂದ ಕೂಡಲೆ ಹೋಗೋಣ.

ಜ್ಯೋತ್ಸ್ನಾವತಿ—ನಾನು ಇನ್ನು ಸಿಂಹಶತಗ್ರಾಮಕ್ಕೆ ಹೋಗುವುದಿಲ್ಲ.

ಮಾತಂಗಿನೀ—ನಾನೂ ಅಲ್ಲಿಗೆ ಹೋಗಬೇಕೆಂದು ಹೇಳುವುದಿಲ್ಲ.

ಅನಂತರ ಇಬ್ಬರೂ ಬಹಳಹೊತ್ತು ಸುಮ್ಮನಿದ್ದರು. ಕಡೆಗೆ ಜ್ಯೋತ್ಸ್ನಾವತಿಯು, ಮಾತಿ! ನಾನು ಇಲ್ಲಿರುವುದು ನಿನಗೆ ಹೇಗೆ ಗೊತ್ತಾಯಿತು? ಇದನ್ನು ಕೇಳಬೇಕೆಂದಿದ್ದೆ. ನೀನು ಅದನ್ನೆಲ್ಲಾ ಹೇಳಲಾರೆಯೆಂದು ಸುಮ್ಮನಿದ್ದೆ. ಈಗ ಹೇಳು, ಕೇಳುವೆನು, ಎಂದಳು.

ಮಾತಂಗಿನಿಯು ಎಲ್ಲಾ ವೃತ್ತಾಂತವನ್ನು ಹೇಳತೊಡಗಿದಳು. ಮೊದಲು ಅವಳು ತಕ್ಷಪುರಕ್ಕೆ ಹೊರಟ ಸಮಾಚಾರ. ಅನಂತರ ರಾಜಾ ಮಹೇಶಚಂದ್ರನ ಸಂಗಡ ನಡೆದ ಮಾತು——ಅವನು, ನೀನು ಹೋಗಿ ತಾಯಿಗೆ ಆಕೆಯ ರಾಜ್ಯಕ್ಕೆ ಆಕೆ ಬರಬಹುದು, ರಾಜ್ಯಕ್ಕೆ ತನಗೆ ಅಧಿಕಾರವಿಲ್ಲವೆಂದು ಮುಂತಾಗಿ ತಿಳಿಸೆಂದು ಹೇಳಿದನೆಂದು ಹೇಳುತ್ತಿರುವಾಗ ಜ್ಯೋತ್ಸ್ನಾವತಿಯ ಕಣ್ಣುಗಳಲ್ಲಿ ನೀರು ತುಂಬಿ, ಅವಳು ಮಹೇಶಚಂದ್ರನಿಗೆ ಆಶೀರ್ವಾದ ಮಾಡಿ, ಇನ್ನು ರಾಜ್ಯವನ್ನು ಕಟ್ಟಿಕೊಂಡು ನಾನೇನು ಮಾಡಲಿ? ಈಗ ನಾನು ಭಿಕ್ಷುಕಿ—ಚಿರಕಾಲವೂ ಭಿಕ್ಷುಕಿಯಾಗಿರುವೆನು. ಅವನು ನನಗೆ ದೇವರನಾಗಬೇಕು. ಅವನು ದೀರ್ಘಜೀವಿಯಾಗಿದ್ದುಕೊಂಡು ರಾಜ್ಯಭೋಗವನ್ನು ಮಾಡಲಿ. ಇದೇ ನನ್ನ ಆಶೀರ್ವಾದ—

ನಾನು ಇಲ್ಲಿ ರೋಗಪೀಡಿತೆಯಾಗಿದ್ದೇನೆಂದು ನಿನಗೆ ಸಮಾಚಾರವನ್ನು ಕೊಟ್ಟವರು ಯಾರು? ಎಂದಳು.

ಮಾತಂಗಿನಿಯು ಸ್ವಲ್ಪ ಸಂಕೋಚದಿಂದ ಹಿಂದುಮುಂದು ನೋಡಿ ಹುಚ್ಚ ಪಿತಮನೆಂದು ಹೇಳಿದಳು. ಈ ಹೆಸರನ್ನು ಹೇಳುತಲೆ ಜ್ಯೋತ್ಸ್ನಾವತಿಯ ಕಣ್ಣುಗಳಲ್ಲಿ ನೀರುಹರಿಯಿತು. ಕೂಡಲೆ ಕಣ್ಣೀರು ಬಣಗಿತು. ಮಾತಂಗಿನಿಯು, ಹುಚ್ಚ ಪಿತಮನು ಯಾರು? ತಾಯಿ ನಿನಗೆ ಗುರುತು ಇರುವಹಾಗಿದೆ. ಅವನು ನಿನ್ನನ್ನು ಬಲ್ಲವನಾಗಿ ಕಾಣುತ್ತಾನೆ. ನೀನು ಸಿಂಹಶತಗ್ರಾಮವನ್ನು ಬಿಟ್ಟು ಬಂದಮೇಲೆ ಅವನೂ ಆ ಊರನ್ನು ಬಿಟ್ಟು ಹೋದನು. ನೀನು ಇದ್ದೆಡೆಯಲ್ಲಿಯೇ ಪಿತಮನೂ ಇರುತ್ತಾನೆಂದಳು.

ಪ್ರನಃ ಜ್ಯೋತ್ಸ್ನಾವತಿಯ ಕಣ್ಣುಗಳಲ್ಲಿ ನೀರು ತುಂಬಿತು. ಯತ್ನ ವಿನಾ ಮುಕ್ತಾಕಾರವಾಗಿ ವರ್ಷಿಸಲಾರಂಭವಾಯಿತು. ಮಾತಂಗಿನಿಯು ಮತ್ತಷ್ಟು ವಿಸ್ಮಯಾಪನ್ನೆಯಾಗಿ, ಪಿತಮನು ಯಾರು? ಹೇಳದಿದ್ದರೆ ನಾನು ಈಗಲೆ ಹೋಗಿ ಅವನನ್ನು ಕೇಳುವೆನೆಂದಳು.

ಜ್ಯೋತ್ಸ್ನಾವತಿ—ಆತನು ಎಲ್ಲಿದ್ದಾನೆ? ಈ ಗ್ರಾಮದಲ್ಲಿಯೆ ಇದ್ದಾನೆಯೆ?

ಮಾತಂಗಿನೀ—ಅವನು ಈಮನೆಯ ಇದಿರಿಗೆ ಮರದಕೆಳಗೆ ರಾತ್ರಿ ಹಗಲು ಬಿದ್ದಿರುತ್ತಾನೆ. ನೆನ್ನೆ ಎದ್ದು ಹೊರಟುಹೋದ. ಈ ಗ್ರಾಮದಲ್ಲಿಯೆ ಇರುವಹಾಗೆ ಕಾಣುತ್ತದೆ. ಈಗಲೆ ಹೋಗಿ ಹುಡುಕಿ ಕರೆತರುವೆನು. ನೀನು ಹೇಳು, ಅವನು ಯಾರು?

ಜ್ಯೋತ್ಸ್ನಾವತಿ—ಆತನನ್ನು ನೋಡಬೇಕೆಂದು ನನಗೆ ಬಹಳ ಕುತೂಹಲವಿದೆ.

ಮಾತಂಗಿನೀ— ಯಾರು ಅವನು ಹೇಳು?

ಜ್ಯೋತ್ಸ್ನಾವತಿ—ನಾನು ಚೆನ್ನಾಗಿ ಹೇಳಲಾರೆ. ನನಗೆ ಸಂದೇಹ. ಆದರೆ ಬಾಯಿಯಿಂದ ಹೇಳುವುದಕ್ಕೆ ಧೈರ್ಯವಿಲ್ಲ.

ಮಾತಂಗಿನೀ—ಏತಕ್ಕೆ ಧೈರ್ಯವಾಗುವುದಿಲ್ಲ. ಹೋಗಿ ಅವನನ್ನು ಕರೆತರಲೆ ? ಹೇಳು. ಅವನು ನಿನ್ನ ವಿಜಯರಾಜನೆಂದು ನಾನು ಚೆನ್ನಾಗಿ ಬಲ್ಲೆ. ಆ ವಿಷಯದಲ್ಲಿ ಸಂದೇಹವಿಲ್ಲ. ನಿನ್ನ ಆ ಬೃಹದ್ದಂತೇಶ್ವರ ಎಂಬ ಆನೆಯು ಅವನನ್ನು ಗುರುತಿಸಿತು.

ಹೀಗೆಂದುಹೇಳಿ ಅದರ ಸಮಾಚಾರನ್ನು ಹೇಳತೊಡಗಿದಳು. ಜೋತ್ಸ್ನಾವತಿಯ ಕಣ್ಣುಗಳಿಂದ ನೀರುಹರಿಯುತ್ತ ವಕ್ಷಸ್ಥಳವೆಲ್ಲಾ ತೊಯಿದುಹೋಗಲಾರಂಭಿಸಿತು. ಕಡೆಗೆ ಅಸ್ಥಿರೆಯಾಗಿ, ಮಾತ ! ನನ್ನ ತಾಯಿ ! ಒಂದು ತಡವೆ ನನ್ನನ್ನು ಕರೆದುಕೊಂಡು ಹೋಗು. ನಾನು ಅವರನ್ನು ಒಂದು ತಡವೆ ನೋಡುವೆನು. ನಾನು ಏನೂ ಹೇಳಲಾರೆ. ಅವರ ಮುಂದೆ ಅಳುವುದಿಲ್ಲ ಇಷ್ಟು ಕಷ್ಟಸಟ್ಟ ಅವರ ಶರೀರವು ಹೇಗಿದೆಯೊ, ನೋಡುವೆನು. ನಾನು ಒಂದುತಡವೆ ಅವರ ಹತ್ತಿರ ನಿಂತು ಅವರನ್ನು ನೋಡುವೆನೆಂದಳು.

ಮಾತಂಗಿನೀ—ನೀನು ಬರಕೂಡದು. ನಾನು ಅವನನ್ನೇ ಕರೆತರುವೆನು. ನಿನ್ನ ಸಮಾಚಾರವನ್ನು ಅವನಿಗೇನೂ ಹೇಳುವುದಿಲ್ಲ. ಏನು ಹೇಳಬೇಕೊ ಅದನ್ನು ನೀನೇ ಹೇಳು.

ಹೀಗೆಂದು ಹೇಳಿ ಮಾತಂಗಿನಿಯು ಎದ್ದು ಹೋದಳು. ಜ್ಯೋತ್ಸ್ನಾವತಿಯು ಹೋಗಬೇಡವೆಂದಳು. ಕೂಗಿ ಕರೆದಳು. ಮಾತಂಗಿನಿಯು ಹಿಂದಿರಿಗಿ ನೋಡದೆ ವೇಗವಾಗಿ ಹೊರಟುಹೋದಳು. ಆಗ ಜ್ಯೋತ್ಸ್ನಾವತಿಯು ಅನುತಾಪಪಡುತ್ತ, ಏತಕ್ಕೆ ಅವಳನ್ನು ಹಿಂದಕ್ಕೆ ಕರೆದೆನು ? ಮಾತಂಗಿನಿಗೆ ಅದು ಕೇಳಿಸಲಿಲ್ಲವೆಂದು ತೋರುತ್ತದೆಂದಂದುಕೊಂಡಳು. ಕ್ಷಣೈಕಪರದಲ್ಲಿ, ಜ್ಯೋತ್ಸ್ನಾವತಿಯು ಅನ್ಯಮನಸ್ಕಳಾಗಿ ಹಠಾತ್ ತನ್ನ ಹರಕು ಚಿಂದಿಬಟ್ಟೆಯನ್ನು ನೋಡಿಕೊಂಡಳು. ಆದಮುಟ್ಟಿಗೂ ಹರಕುಗಳನ್ನೆಲ್ಲಾ ಮುಚ್ಚಿಕೊಂಡು ಕೂತಳು. ವಿಧವೆಯು

ಉಡುಪನ್ನು ಮರೆಮಾಡಿಕೊಳ್ಳುವುದಕ್ಕೆ ಆಗದೆ ಹೋಗಿ ಕಣ್ಣು ಬರಿಸಿಕೊಂಡಳು. ಸ್ವಲ್ಪದರಲ್ಲಿಯೆ ಪಿತಮನು ಬಂದು ಬಾಗಲಲ್ಲಿ ನಿಂತುಕೊಂಡನು ಅವನನ್ನು ಕಂಡು ಜ್ಯೋತ್ಸ್ನಾವತಿಯು ಸ್ವಲ್ಪ ಸರಿದು ಮರೆಯಾಗಿ ಹೋದಳು. ಮಾತಂಗಿನಿಯು ಪಿತಮನನ್ನು ಒಳಗೆ ಬರುವಹಾಗೆ ಕರೆದಳು. ಪಿತಮನು ತಲೆಯನ್ನಲ್ಲಾಡಿಸಿದನು. ಮಾತಂಗಿನಿಯು ನೀನು ಇಂದು ನಮ್ಮ ಅತಿಥಿ ಒಳಗೆ ಬಂದು ಊಟಮಾಡಬೇಕೆಂದಳು. ಪಿತಮನು, ಇಲ್ಲಿ ರೋಗದಿಂದ ಮಲಗಿದ್ದವರು ಹೇಗಿದ್ದಾರೆ ? ಎಂದು ಕೇಳಿದನು.

ಮಾತಂಗಿನೀ—ನೀನೇ ಬಂದು ನೋಡು—ಹೇಗೆ ಇದೆಯೋ ಗೊತ್ತಾಗುವುದು. ಪಿತಮನು ಹಿಂದಿರಿಗಿದನು. ಹಿಂದೆ ನಿಟ್ಟುಸಿರನ್ನು ಬಿಟ್ಟ ಶಬ್ದವು ಕೇಳಿಸಿತು. ಪಿತಮನು ಪುನಃ ತಿರಿಗಿದನು. ನೋಡಲಾಗಿ, ಒಬ್ಬ ಅವಕುಂಠನವತಿಯು ಕ್ರಂದನವನ್ನು ಕಷ್ಟದಿಂದ ಅಡಗಿಸಿಕೊಳ್ಳುತ್ತಿದ್ದಳು. ಬೀಳುವಹಾಗಿದ್ದಳು. ಪಿತಮನು, ನೀನು ಯಾರೆಂದು ಕೇಳಿದನು. ದಾಸಿಯನ್ನು ಗುರುತಿಸಲಾರದೆ ಹೋಗೋಣಾಯಿತೆ ? ಎಂದು ಅವಕುಂಠನವತಿಯು ಪಿತಮನ ಪಾದತಲದಲ್ಲಿ ಬಿದ್ದಳು. ಪಿತಮನು ಕಂಪಿತಸ್ವರದಿಂದ, ಜ್ಯೋತ್ಸ್ನಾವತಿ! ಎಂದು ಕೂಗಿದನು.

ಜ್ಯೋತ್ಸ್ನಾವತಿಯು ನೆಲದಮೇಲೆ ಮುಖವನ್ನಿಟ್ಟುಕೊಂಡು ಅಳುವುದಕ್ಕೆ ತೊಡಗಿದಳು. ಪಿತಮನು, ಇನ್ನೂ ಕಣ್ಣೀರು ಪೂರೈಸಲಿಲ್ಲವೆ ? ಎಂದನು.

ಜ್ಯೋತ್ಸ್ನಾವತಿಯು ಎದ್ದು ಮುಖವನ್ನೊರಿಸಿಕೊಂಡಳು. ನತಶಿರಳಾಗಿ ಸ್ವಾಮಿಯ ಮುಂದೆ ನಿಂತುಕೊಂಡಳು ಆಗ ಪಿತಮನು ಜ್ಯೋತ್ಸ್ನಾವತಿಯ ಗಲ್ಲವನ್ನು ಹಿಡಿದು ಎದೆಗೆ ತಕ್ಕೈಸಿ ಹಿಡಿದುಕೊಂಡನು. ಪಿತಮನ ಕಣ್ಣೀರು ಜ್ಯೋತ್ಸ್ನಾವತಿಯ ಕಪೋಲದ ಮೇಲೆ ಹರಿದುಹೋಯಿತು. ಇಬ್ಬರಲ್ಲಿ ಯಾರೂ ಮಾತನಾಡಲಿಲ್ಲ. ಕಡೆಗೆ ಜ್ಯೋತ್ಸ್ನಾವ

ತಿಯು, ಇನ್ನು ನನ್ನನ್ನು ತ್ಯಜಿಸುವುದಿಲ್ಲವೆಂದು ಹೇಳಿರಿ ಎಂದಳು.

ಪಿತಮ- ನಾನು ಭಿಕ್ಷುಕ. ನಿನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗಲಿ ?

ಜ್ಯೋತ್ಸ್ನಾವತಿ-ನಾನೂ ಭಿಕ್ಷುಕಿ. ನಿಮ್ಮ ಜತೆಯಲ್ಲಿ ತಿರುಗುವೆನು. ತಮಗೆ ಏನು ಸಿಕ್ಕುವುದೊ ಅದನ್ನು ಮರದ ಬುಡದಲ್ಲಿ ಕೂತು ಅಡಿಗೆ ಮಾಡುವೆನು.



## ಮೂವತ್ತಾರನೆಯ ಪರಿಚ್ಛೇದ.

---

ಕೆಲವು ದಿನಗಳಮೇಲೆ ರಾಜಾ ಮಹೇಶಚಂದ್ರನು ರಾಘವಶರ್ಮನೊಂದಿಗೆ ವೃದ್ಧಳ ಮನೆಯ ಬಾಗಿಲಲ್ಲಿ ಬಂದು ನಿಂತನು. ಆದರೆ ಪಿತಮನು ಕೆಲವು ದಿನಗಳಿಗೆ ಮುಂದೆ ಜ್ಯೋತ್ಸ್ನಾವತಿಯನ್ನು ಜತೆಯಲ್ಲಿ ಕರೆದುಕೊಂಡು ಸ್ಥಾನಾಂತರಕ್ಕೆ ಹೊರಟುಹೋಗಿದ್ದನು, ಆದುದರಿಂದ ರಾಜನು ನೋಡುವುದಕ್ಕಾಗಲಿಲ್ಲ. ಮಹೇಶಚಂದ್ರನು ಬಹಳ ಹುಡುಕಿಸಿದನು. ಪಿತಮನು ಎತ್ತ ಕಡೆ ಹೋದನೆಂದು ಯಾರೂ ಹೇಳರು. ಅದುಕಾರಣ ಮಹೇಶಚಂದ್ರನು ಶಿಬಿರಕ್ಕೆ ಹಿಂದಿರಿಗಿ ಹೋಗಿ ರಾಘವಶರ್ಮನಮೇಲೆ ಬಹಳ ಕೋಪಿಸಿಕೊಂಡನು. ರಾಘವನು ಅದರಿಂದ ದುಃಖಿತನಾಗಲಿಲ್ಲ. ತನ್ನ ಲೋಪವನ್ನು ಒಪ್ಪಿಕೊಳ್ಳಲಿಲ್ಲ. ಮನಸ್ಸಿನಲ್ಲಿಯೆ ನಕ್ಕನು.

ಮಧ್ಯಾಹ್ನದಲ್ಲಿ ಮಹೇಶಚಂದ್ರನು ಒಬ್ಬ ಪ್ರಧಾನಕರ್ಮಚಾರಿಯನ್ನು ಕರೆದು, ನಾನು ಏತಕ್ಕೋಸ್ಕರ ಬಂದೆನೊ ಅದು ಸಿದ್ಧಿಯಾಗಲಿಲ್ಲ. ನೀವೆಲ್ಲರೂ ನಾಳೆಬೆಳಗ್ಗೆ ಹಿಂದಿರಿಗಿ ಹೊರಟುಹೋಗಿರಿ. ನನಗೋಸ್ಕರ ಕಾದಿರಬೇಡಿ. ನನ್ನನ್ನು ಹುಡುಕಲೂಬೇಡಿ ಎಂದು ಹೇಳಿದನು.

ಆ ದಿನ ರಾತ್ರಿ ಎರಡನೆಯ ಜಾಮದಲ್ಲಿ ರಾಜಾ ಮಹೇಶಚಂದ್ರನು ಛದ್ಮ ವೇಷವನ್ನು ತಾಳಿ ಹೊರಗೆ ಹೊರಟನು. ಸ್ವಲ್ಪದರಲ್ಲಿ ಮತ್ತೊಬ್ಬನು ಛದ್ಮ ವೇಷವನ್ನು ತಾಳಿ ಅವನ ಹಿಂದೆ ಅನುಸರಿಸಿ ಹೋದನು. ರಾಜನಿಗೆ ಅದು ಗೊತ್ತಿಲ್ಲ. ರಾಜನು ಸ್ವಲ್ಪ ದೂರ ಹೋಗಿ ಒಂದು ವನದೊಳಗೆ ಪ್ರವೇಶ ಮಾಡಿದನು. ಆಗ ಹಿಂದಲಿಂದ ಒಬ್ಬ ಮನುಷ್ಯನು, ಯಾರು ಹೋಗುವರು ? ಎಂದು ಕೇಳಿದನು. ರಾಜನು ಉತ್ತರವನ್ನು ಕೊಡದೆ ಮೊದಲಿನ ಹಾಗೆ ಹೋಗುತಲಿದ್ದನು. ಹಿಂದಲಿಂದ ಪುನಃ ಅದೇ ಪ್ರಶ್ನೆಯು ಕೇಳಿಸಿತು. ಮಹೇಶಚಂದ್ರನು ಹಿಂದಿರಿಗಿ ನಿಂತುಕೊಂಡನು. ಪ್ರಶ್ನಕಾರಿಯು, ಸಂಗಡ ಆಯುಧವಿದೆಯೆ ? ಯಾವ ಆಯುಧವಿದೆ ? ಎಂದು ಕೇಳಿದನು. ಮಹೇಶ ಚಂದ್ರನು ಅತ್ತಕಡೆ ನೋಡದೆ ಮುಂದೆ ನಡೆದನು. ಸ್ವಲ್ಪದೂರ ಹೋಗುವುದರಲ್ಲಿ ರಾಜನಿಗೆ ಹಿಂದೆ ಯಾರೊ ಒಬ್ಬನು ಅನುಸರಿಸಿ ಬರತ್ತಾನೆಂದು ಗೊತ್ತಾಯಿತು. ಅವನು, ಯಾರು ಬರುವರೆಂದು ದೂರದಿಂದ ಕೇಳಿದನು. ಹಿಂದೆ ಬರುತಲಿದ್ದವನು, ಹತ್ತಿರಬಂದು, ನಾನು ರಾಘವಶರ್ಮನೆಂದನು.

ಮಹೇಶಚಂದ್ರ—ಇಷ್ಟು ರಾತ್ರಿಯಲ್ಲಿ ಈ ಮಾರ್ಗದಲ್ಲಿ ಏತಕ್ಕೆ ಬಂದುದು ?

ರಾಘವ—ಪಿತಮುನ ಸಮಾಚಾರವನ್ನು ಹೇಳುವದಕ್ಕೆ ಬಂದೆ.

ಮಹೇಶಚಂದ್ರ—ಅವನು ಎಲ್ಲಿ ?

ರಾಘವ—ಷಟಪಟ ಘಾಟಿಯಲ್ಲಿ ವಾಸಮಾಡುತ್ತಾನೆ.

ಮಹೇಶಚಂದ್ರ—ಅದು ಇಲ್ಲಿಗೆ ಎಷ್ಟುದೂರ ?

ರಾಘವ—ಹೆಚ್ಚುಕಡಮೆ ಇಪ್ಪತ್ತು ಹರಿದಾರಿ ಆಗಬಹುದು.

ಮಹೇಶಚಂದ್ರ—ಹೇಗೆ ಹೋಗಬೇಕು ?

ರಾಘವ—ದೋಣಿಯಲ್ಲಿ ಹೋಗಬೇಕು. ಬೆಳಗ್ಗೆ ನವಪತ್ತುಪುರದಲ್ಲಿ ನೌಕವು ಸಿದ್ಧವಾಗಿರುವುದು. ಅದಕ್ಕೆ ಏರ್ಪಾಡು ಮಾಡಿಟ್ಟು ಬಂದಿದ್ದೇನೆ.

ಹುಚ್ಚ ಪಿತಮನು ಯಾವ ಘಾಟಿಯಲ್ಲಿ ವಾಸಮಾಡುತಲಿದ್ದನೊ ಅಲ್ಲಿ ಮಹೇಶಚಂದ್ರನ ಜನಕ ತಂದೆಯು ರಾಜನಾಗಿದ್ದನು. ಮೊದಲು ದಿವಾನನಾಗಿದ್ದನು—ಅವನು ಬಹುದ್ರವ್ಯವನ್ನು ವ್ಯಯಮಾಡಿ ಆ ಪಟ್ಟಣವನ್ನು ಕಟ್ಟಿದ್ದನು. ಅಂತಹ ಪಟ್ಟಣ ಮತ್ತು ಘಾಟಿಯು ಪಶ್ಚಿಮದೇಶದಲ್ಲಿ ಎಲ್ಲಿಯೂ ಇರದು. ಘಾಟಿಗೆ, ಕೆಂಪು, ಹಳದಿ ಮುಂತಾದ ನಾನಾವರ್ಣಗಳ ನಾನಾ ಆಕೃತಿಗಳುಳ್ಳ ಇಟ್ಟಿಗೆಗಳನ್ನು ತಯಾರ್ಮಾಡಿಸಿ ಕೌಶಲದಿಂದ ಕಟ್ಟಿಸಿದ್ದನು. ದೂರದಿಂದ ನೋಡಿದರೆ ಘಾಟಿಯು ಮೇಲೆ ಒಂದು ವಿಚಿತ್ರವಾದ ರತ್ನಗಂಬಳಿಯನ್ನು ಹಾಸಿದಹಾಗೆ ಕಂಗೊಳಿಸುವುದು. ಹತ್ತಿರದಲ್ಲಿ ನಿಂತು ನೋಡಿದರೆ ಒಂದು ಚಿತ್ರಿತವಾದ ಪಟದಹಾಗೆ ಕಾಣಿಸುವುದು. ನೀರಿನ ಅಂಚಿನಿಂದ ಮೇಲಿನವರೆಗೂ ಚಿತ್ರಗಳು ತುಂಬಿದ್ದವು. ಚಿತ್ರಗಳ ಮಧ್ಯದಲ್ಲಿ ಪುಷ್ಪಸಹಿತವಾದ ವನಲತೆಗಳು ತೂಗಲಾಡುವ ಹಾಗಿರುವುವು. ಆನೆಗಳು ಆ ವನಲತೆಗಳನ್ನು ಕಿತ್ತು ಬಿಸಾಡುವಹಾಗಿರುವುವು. ಒಂದೊಂದುಕಡೆಯಲ್ಲಿ ಪ್ರಕಾಂಡವಾದ ಪದ್ಮವು ಪ್ರಸ್ಫುಟಿತವಾಗಿರುವುದು. ಒಂದುಕಡೆಯಲ್ಲಿ ಚಿಕ್ಕಚಿಕ್ಕ ಮೊಗ್ಗುಗಳು ಕುಂಠಿತಭಾವದಿಂದ ಹಂಸಗಳ ಪಾರ್ಶ್ವದಲ್ಲಿ ಔತುಕೊಂಡಿರುವುವು. ಒಂದುಕಡೆ ಜಮಖಾನೆ—ಒಂದುಕಡೆ ಪಗಡೆಹಾಸು-ಸೋಪಾನದ ಪ್ರತಿ ಮೂರು ನಾಲ್ಕು ಮೆಟ್ಲುಗಳ ಪಾರ್ಶ್ವದಲ್ಲಿಯೂ ಪ್ರಸ್ತರನಿರ್ಮಿತವಾದ ದೊಡ್ಡ ದೊಡ್ಡ ಆಕಾರವುಳ್ಳ ಪ್ರತಿಮೆಗಳು—ಒಂದು ಕಡೆಯಲ್ಲಿ, ಶ್ರೀಕೃಷ್ಣನನ್ನು ಎತ್ತಿಕೊಂಡು ಯಶೋದೆಯು ಚಂದ್ರನನ್ನು ತೋರಿಸುತ್ತ ಕರೆಯುವಳು. ಒಂದುಕಡೆಯಲ್ಲಿ, ನಾಲ್ಕುವರುಷದ ತುಂಟ ಕೃಷ್ಣನು ನಗುತ ನಗುತ, ಓಡಿಹೋಗುತಲಿರುವನು. ಮೊಸರಿನ ಗಡಿಗೆ ಒಡದುದಕ್ಕಾಗಿ ಹೊಡೆದಾರೆಂದು ಓಡಿಹೋಗುತಲಿರುವನು. ಒಂದುಕಡೆಯಲ್ಲಿ, ಕಿಶೋರವಯಸ್ಕಳಾದ ರಾಧಿಕೆಯು ಚಿಬುಕವನ್ನು ಕೈಯಲ್ಲಿ ಹಿಡಿದು ಪ್ರೌಢೆಯಾದ ಲಲಿತೆಯು ಆದರದಿಂದ ಏನೊ ಕೇಳದುದಕ್ಕೆ ರಾಧಿಕೆಯು

ಲಜ್ಜೆಯಿಂದ ಮುಖವನ್ನು ತಗ್ಗಿಸಿ ನಗುವಹಾಗಿರುವುದು. ಒಂದುಕಡೆ ಯಲ್ಲಿ, ಪ್ರೌಢೆಯಾದ ರಾಧೆಯು ಲಲಿತೆಯ ಸಂಗಡ ಹೂವುಮಾಲೆಯನ್ನು ಕಟ್ಟುತ್ತ ನಗುತ ನಗುತ ಏನೋ ಏಕಾಂತವನ್ನು ಹೇಳುತ್ತಿರುವಹಾಗಿರು ವುದು. ಹೀಗೆ ಅನೇಕ ಪ್ರತಿಮೆಗಳು ಸೋಪಾನದ ಎರಡು ಪಾರ್ಶ್ವಗಳ ಲ್ಲಿಯೂ ತುಂಬಿದ್ದವು. ಘಾಟಿಯಮೇಲೆ ಆವರಣ. ಅದರ ಎರಡು ಪಾರ್ಶ್ವ ಗಳಲ್ಲಿಯೂ ಹನ್ನೆರಡು ದೇವಮಂದಿರಗಳು. ಅದರ ಹಿಂದೆ ಅನೇಕ ಕಾಡು ಪೊದರಗಳು. ಅದರ ಆಚೆ ಸೊಗಸಾದ ಪ್ರಾಂತರ—ಹತ್ತಿರ ಗ್ರಾಮಗಳಿಲ್ಲ. ಮಹೇಶಚಂದ್ರನ ಜನಕ ತಂದೆಯು ಹೊಸದಾಗಿ ಒಂದು ಗ್ರಾಮವನ್ನು ನಿರ್ಮಾಣಮಾಡಬೇಕೆಂದಿದ್ದನು. ಆದರೆ ಅವನು ಅಷ್ಟರೊಳಗೆ ಕಾಶಿಗೆ ಯಾತ್ರೆ ಹೊರಟುಹೋದನು. ಇನ್ನೂ ಅವನು ಹಿಂದಿರಿಗಿ ಬಂದಿರಲಿಲ್ಲ.

---

## ಮುವ್ವತ್ತೇಳನೆಯ ಪರಿಚ್ಛೇದ.

ಯಾವದಿನ ಬೆಳಗ್ಗೆ ಮಹೇಶಚಂದ್ರನೂ ರಾಘವಶರ್ಮನೂ ಏಕತ್ರ ದೋಣಿಯಲ್ಲಿ ಹೋಗುತಲಿದ್ದರೋ ಆ ದಿನ, ಅಪರಾಹ್ಣದಲ್ಲಿ ಷಟಪಟ ಘಾಟಿ ಯ ಹತ್ತಿರದಲ್ಲಿದ್ದ ಪ್ರಾಂತರದಲ್ಲಿ ಒಬ್ಬ ಯುವತಿಯೂ ಒಂದು ಶಿಶುವೂ ನಗುತ್ತ ಓಡಾಡುತಲಿದ್ದರು—ಶಿಶುವು ನಡೆಯಬಲ್ಲದು. ಆದರೆ ಚನ್ನಾಗಿ ಓಡ ಲಾರದು, ಹೋಗುತಹೋಗುತ್ತ ಬಿದ್ದು ಪುನಃ ಎದ್ದು ಯುವತಿಯ ಸೆರಗನ್ನು ಹಿಡಿದುಕೊಂಡು ಹೋಗುತಲಿತ್ತು. ಪುನಃ ನಗುವುದು—ಅದರ ನಗುವಿನ ಲಹರಿಯು ನದಿಯ ದಡಕ್ಕೆ ಕೇಳಿಸುತಲಿತ್ತು. ಅಲ್ಲಿ ಆ ವಿಚಿತ್ರವಾದ ನಾನಾ ವರ್ಣಗಳಿಂದ ರಂಜಿತವಾದ ಘಾಟಿಯಮೇಲೆ ಪಿತಮನೂ ಜ್ಯೋತ್ಸ್ನವ

ತಿಯನ್ನೂ ಕುಳಿತುಕೊಂಡು ನಗುವನ್ನು ಕೇಳುತ್ತ ಮಾತನಾಡುತಲಿದ್ದರು.

ಜ್ಯೋತ್ಸ್ನವತಿ—ಮಾತಂಗಿನಿಗೂ ಮಾಧವೀಲತೆಗೂ ಬಹಳಪ್ರೇಮ ವುಂಟಾಗಿದೆ.

ಪಿತಮ—ಇಬ್ಬರಿಗೂ ಇನ್ನೂ ಚಿಕ್ಕವಯಸ್ಸು.

ಜ್ಯೋತ್ಸ್ನವತಿ—ಮನುಷ್ಯರಿಗೆ ಯಾವ ವಯಸ್ಸಿನಲ್ಲಿ ಬಳಕೆ ವಿಶ್ವಾಸ ಪ್ರೇಮಗಳುಂಟಾಗಿರುವುದಿಲ್ಲ?

ಪಿತಮ-ನನ್ನ ವಯಸ್ಸಿನಲ್ಲಿ—ಈ ಮುದಿವಯಸ್ಸಿನಲ್ಲಿ ಪ್ರೇಮವಿರು ವುದಿಲ್ಲ.

ಜ್ಯೋತ್ಸ್ನವತಿ— (ನಕ್ಕು) ಸುಳ್ಳುಮಾತು.

ಪಿತಮ—ಏತಕ್ಕೆ? ನೀನು ಮಾತಂಗಿನಿಯನ್ನು ಪ್ರೀತಿಸುವುದೆನ್ನು ವುದೂ ಸುಳ್ಳು—ನಾನೇನೂ ಮುದುಕ. ನಾನು ಯಾರನ್ನೂ ಯಾವಾ ಗಲೂ ಪ್ರೀತಿಸಿಲ್ಲವಲ್ಲ?

ಜ್ಯೋತ್ಸ್ನವತಿ—ಪ್ರೀತಿಸದೆ ಉಂಟೆ?

ಪಿತಮ—ಯಾರನ್ನು ಪ್ರೀತಿಸಿದ್ದೇನೆ?

ಜ್ಯೋತ್ಸ್ನವತಿ-ನೀವೇ ಬಲ್ಲಿರಿ. ನಿಮ್ಮಲ್ಲಿ ಜೋಳಿಗೆಯಿದೆ. ಅದ ರಲ್ಲಿ ಇನ್ನೂ ಏನೇನೊ ಇದೆ.

ಪಿತಮ—ಜೋಳಿಗೆಯ ಮಾತು ನಿಜ—ಎಲ್ಲಾದಕ್ಕಿಂತಲೂ ಜೋಳಿಗೆ ಯನ್ನು ಹೆಚ್ಚಾಗಿ ಪ್ರೀತಿಸುವೆನು. ಇದು ಎಷ್ಟೊ ವರುಷಗಳಿಂದ ನನ್ನೊಂದಿಗೆ ಇದೆ. ಒಂದು ದಿನವಾದರೂ, ಕಡೆಗೆ ಒಂದು ಮುಹೂರ್ತವಾ ದರೂ, ನನ್ನನ್ನು ಬಿಟ್ಟಿಲ್ಲ. ಹರಿದುಹೋಗಿದೆ. ಆದರೂ ಬಿಟ್ಟಿಲ್ಲ—ನಾನು ಇದನ್ನು ತಲೆಯ ಕೆಳಗೆ ಇಟ್ಟುಕೊಂಡು ರಾತ್ರಿ ಮಲಗುತಲಿದ್ದೇನೆ— ಹಗಲು ಭುಜದಮೇಲೆ ಹಾಕಿಕೊಂಡು ತಿರುಗುತಲಿದ್ದೇನೆ—ಅದು ನನ್ನ ಸಂಗಡ ಮಾತನಾಡುತಲಿರುವುದು. ನನಗೆ ಎಷ್ಟೊ ತಿಳಿಯಹೇಳುತಲಿತ್ತು.

ಜ್ಯೋತ್ಸ್ನಾವತಿ—ತಿಳಿಯಹೇಳುತಲಿತ್ತೆ ? ತೋರಿಸಬಾರದೆ ? ಈ ಅಭಾಗಿನಿಯ ಭಾಗ್ಯವನ್ನು ತಿರಿಗಿಸಲಿಲ್ಲ. ಅಭಾಗಿ—

ಪಿತಮ—ಹಾಗಲ್ಲ—ಜೋಳಿಗೆಯು ನನಗೆ ಹೇಳುತಲಿತ್ತು—ಮತ್ತಾರ ಸಂಗಡಲೂ ಮಾತನಾಡುವುದಿಲ್ಲ. ಸಾಯಬೇಕಾದರೂ ಇಲ್ಲಿಯೆ ಸಾಯುವೆನು.

ಇದರಿಂದ ಜ್ಯೋತ್ಸ್ನಾವತಿಯು, ಪಿತಮನು ಚಿರಕಾಲವೂ ಸಿಂಹಶತಗ್ರಾಮದಲ್ಲಿಯೆ ಭಿಕ್ಷವನ್ನು ಬೇಡುತ್ತ ಮತ್ತೆಲ್ಲಿಯೂ ಹೋಗಿರಲಿಲ್ಲವೆಂದು ತಿಳಿದುಕೊಂಡಳು. ಅವಳ ಹೃದಯವು ಪರಿಪೂರ್ಣವಾಗಿ ತುಂಬಿತು. ಅವಳು ತಲೆಯನ್ನು ಬಗ್ಗಿಸಿಕೊಂಡಿದ್ದಳು. ಪಿತಮನು ಏನೇನೊ ಹೇಳಿದನು. ಅದಾವುವೂ ಜ್ಯೋತ್ಸ್ನಾವತಿಯ ಕಿವಿಗೆ ಬೀಳಲಿಲ್ಲ. ಸತ್ತರೂ ಇಲ್ಲಿಯೆ ಸಾಯುವೆನೆಂದು ಹೇಳಿದ ಮಾತನ್ನು ಯೋಚಿಸುತಲಿದ್ದಳು. ಕ್ರಮವಾಗಿ ಮೂರು ನಾಲ್ಕು ತೊಟ್ಟು ಕಣ್ಣೀರು ಚಿತ್ರಿತವಾದ ಇಟ್ಟಿಗೆಯ ಮೇಲೆ ಬಿದ್ದಿತು. ಪಿತಮನು ಅದನ್ನು ಕಂಡು ಅಪ್ರತಿಭನಾಗಿ, ಪುನಃ ಇದೇನು ಅಳುವು ? ಇಷ್ಟುದಿನ ಇಬ್ಬರೂ ಅತ್ತೆವು. ಇನ್ನೂ ಕಣ್ಣೀರು ಬಣಗಲಿಲ್ಲವೆ ? ನನ್ನನ್ನು ನೋಡಿದರೆ ಅಳುವು. ನನ್ನ ಸಂಗಡ ಮಾತನಾಡಿದರೆ ಅಳುವು. ನನ್ನ ಸೇವೆಯನ್ನು ಮಾಡುವಾಗಲೂ ಅಳುವು. ಏತಕ್ಕೆ ನಿನಗೆ ದುಃಖ ? ಎಂದು ಹೇಳಿದನು.

ಜ್ಯೋತ್ಸ್ನಾವತಿ—ಇದು ನನಗೆ ದುಃಖವಲ್ಲ—ಇದು ನನಗೆ ಸುಖ. ನನ್ನ ಅದೃಷ್ಟದಲ್ಲಿ ಇಷ್ಟು ಸುಖವು ಇತ್ತು.

ಪಿತಮ—ಮರದ ಕೆಳಗೆ ಬಿದ್ದಿರುವುದು ಇಷ್ಟು ಸುಖವೆ ? ಈ ಸಮಯದಲ್ಲಿ ಮಾತಂಗಿನಿಯು ಮಾಧವಿಯನ್ನು ಎತ್ತಿಕೊಂಡು ವ್ಯಸ್ತಭಾವದಿಂದ ಬರುತ್ತಿದ್ದಳು. ಬಂದವಳು, ಪಿತಮನನ್ನು ಕುರಿತು, ಬೇಗನೆ ಬನ್ನಿ. ಮಂದಿರದಲ್ಲಿರುವವರು ಹೇಗೆಹೇಗೊ ಮಾಡುತ್ತಾರೆಂದು ಹೇಳಿದಳು.

ಮಂದಿರದಲ್ಲಿ ಒಬ್ಬ ವೃದ್ಧಬ್ರಾಹ್ಮಣನು ವಾಸಮಾಡುತಲಿದ್ದನು. ಅವನು ಅತಿ ಶೀರ್ಣಕಾಯನಾಗಿ ಗಳಿತನಾಗಿ ಚಲನಶಕ್ತಿಯೂ ಪ್ರಾಯಃ ನಿಂತುಹೋಗಿತ್ತು. ಇಲ್ಲಿಗೆ ಬಂದಮೊದಲು ಜ್ಯೋತ್ಸ್ನವತಿಯು ಅವನ ಶುಶ್ರೂಷೆಯನ್ನು ಮಾಡುತಲಿದ್ದಳು. ಪಿತಮನು ಅದನ್ನು ಸರ್ವದಾ ವಿಚಾರಿಸಿಕೊಳ್ಳುತ್ತಿದ್ದನು. ವೃದ್ಧನು, ನನ್ನ ಕಡೆದಶೆಯಲ್ಲಿ ನಾನು ಬಹಳ ಸುಖಿಯಾದೆನು, ಜನ್ಮಾಂತರದಲ್ಲಿ ನೀವಿಬ್ಬರೂ ನನ್ನ ಕನ್ಯೆ ಪುತ್ರರಾಗಿದ್ದಿರಿ–ಈ ಜನ್ಮದಲ್ಲಿ ನನಗೆ ಯಾರೂ ಇಲ್ಲ–ಇದ್ದಾರೆ, ನಾನು ಬಹಳ ಪಾಪಿ. ಆದುದರಿಂದ ಅವರಿಂದ ವಂಚಿತನಾಗಿದ್ದೇನೆಂದನು.

ಜ್ಯೋತ್ಸ್ನವತಿಯನ್ನು ವೃದ್ಧನು ತಾಯಿಯೆಂದು ಕರೆಯುವನು. ಪಿತಮನನ್ನು ಅಪ್ಪಾ ಎಂದು ಕರೆಯುವನು. ಇಬ್ಬರೂ ವೃದ್ಧನನ್ನು ತಂದೆಯಹಾಗೆ ಉಪಚರಿಸುವರು. ಇಬ್ಬರೂ, ಅವನಿಗೆ ಹೆಚ್ಚು ದಿನ ಉಪಚರಿಸಬೇಕಾಗಿಲ್ಲವೆಂದು ತಿಳಿದಿದ್ದರು. ವೃದ್ಧನಿಗೆ ಕಡೆಗಾಲವು ಸಮೀಪಿಸುತಲಿತ್ತು. ಮಾತಂಗಿನಿಯು ಮಾಧವಿಯನ್ನು ಎತ್ತಿಕೊಂಡು ಆಡುತ್ತಿರುವಾಗ ಹಠಾತ್ತಾಗಿ ಮಂದಿರದಿಂದ ಒಂದು ಶಬ್ದವು ಕೇಳಿಸಿತು. ಆಗವಳು ಹೋಗಿ ನೋಡಲಾಗಿ ವೃದ್ಧನು ಹಾಸಿಗೆಯನ್ನು ಬಿಟ್ಟು ದೂರ ಬಿದ್ದಿದ್ದನು. ಏನೋ ಹೇಳುತ್ತಿದ್ದನು. ಅದು ಅವಳಿಗೆ ಗೊತ್ತಾಗಲಿಲ್ಲ.

ಪಿತಮನು ಮಂದಿರಕ್ಕೆ ಹೋದಮೇಲೆ ಅಲ್ಲಿನ ಅವಸ್ಥೆಯು ಗೊತ್ತಾಯಿತು. ಅವನು ಕೂಡಲೆ ವೃದ್ಧನನ್ನು ಎತ್ತಿಕೊಂಡು ಘಾಟಿಗೆ ಬಂದನು. ಅಲ್ಲಿ ಒಂದು ಸ್ಥಳದಲ್ಲಿ ಮಲಗಿಸಿ ಬಾಯಿಗೆ ನೀರುಬಿಟ್ಟನು. ಜ್ಯೋತ್ಸ್ನವತಿಯು ಸೆರಗಿನಿಂದ ಗಾಳಿಯನ್ನು ಹಾಕುತ್ತಿದ್ದಳು. ಸ್ವಲ್ಪಹೊತ್ತಿನ ಮೇಲೆ ವೃದ್ಧನಿಗೆ ಚೇತನವುಂಟಾಯಿತು. ಪಿತಮನನ್ನು ನೋಡುತ್ತ ಅವನನ್ನು ಗುರುತಿಸುವುದಕ್ಕೆ ಪ್ರಯತ್ನಪಟ್ಟನು. ಕಡೆಗೆ ವೃದ್ಧನು, ತಾಯಿ! ಈ ಸಮಯದಲ್ಲಿ ನನ್ನನ್ನು ಬಿಟ್ಟುಹೋದೆಯಾ? ಎಂದನು.

ಜ್ಯೋತ್ಸ್ನಾವತಿಯು, ಇಲ್ಲ—ಇಲ್ಲಿದ್ದೇನೆ ಎಂದು ಹೇಳಿ ಮುಂದಾದಳು—ಅವಳ ತಲೆಯನ್ನು ಸ್ಪರ್ಶಮಾಡುವುದಕ್ಕೆ ವೃದ್ಧನು ಪ್ರಯತ್ನಪಟ್ಟನು. ಜ್ಯೋತ್ಸ್ನಾವತಿಯು ತಲೆಯನ್ನು ಬಗ್ಗಿಸಿದಳು. ವೃದ್ಧನ ಓಷ್ಠವು ಕಂಪಿತವಾಗಲಾರಂಭಿಸಿತು. ಮೆಲ್ಲಮೆಲ್ಲಗೆ ಏನೋ ಕೆಲವು ಮಾತುಗಳನ್ನು ಹೇಳಿದನು. ಅನಂತರ ವೃದ್ಧನು ಕಣ್ಣುಮುಚ್ಚಿಕೊಂಡನು. ಈ ಸಮಯದಲ್ಲಿ ಒಂದು ದೋಣಿಯು ಘಾಟಿಯಲ್ಲಿ ಬಂದು ನಿಂತಿತು. ಹಠಾತ್ತಾಗಿ ವೃದ್ಧನು ಕಣ್ಣು ತೆರೆದು ನಾಲ್ಕುಕಡೆಯೂ ನೋಡಿದನು. ಕಡೆಗೆ ಮೆಲ್ಲ ಮೆಲ್ಲಗೆ ಅತಿಕಷ್ಟದಿಂದ, ನಾನು ಅವರನ್ನು ಈದೇಶ, ಆದೇಶ ಎಲ್ಲಾದೇಶಗಳಲ್ಲಿಯೂ ಹುಡುಕಿದೆನು. ಹುಡುಕಬೇಕೆಂದು ಧರ್ಮಕರ್ಮಗಳನ್ನೆಲ್ಲಾ ತ್ಯಾಗಮಾಡಿ ಈ ದೇಶಕ್ಕೆ ಬಂದೆನು. ಆದರೆ ನೋಡಲಾರದೆ ಹೋದೆನು ಎಂದನು.

ಪಿತನು—ಯಾರನ್ನು ನೋಡಲಾರದೆ ಹೋದುದು? ಯಾರನ್ನು ಹುಡುಕುತಲಿದ್ದಿರಿ?

ವೃದ್ಧ—ಅವರನ್ನು.

ಪಿತನು—ಅವರು ಯಾರು? ಅವರ ಹೆಸರೇನು?

ವೃದ್ಧ—ಸಾಯುವಾಗ ಅವರನ್ನು ಒಂದು ತಡವೆ ನೋಡಿದರೆ—

'ಈಗ ಇರುವವರನ್ನೆ?' ಎಂದು ಹಿಂದಲಿಂದ ಒಬ್ಬನು ಕೂಗಿ ಹೇಳಿದನು.

ಆ ಮಾತು ವೃದ್ಧನ ಕಿವಿಗೆ ಬಿದ್ದಿತು. ವೃದ್ಧನು ನಾಲ್ಕುಕಡೆಯೂ ನೋಡಿದನು. ರಾಘವನು ವೃದ್ಧನ ಇದಿರಾಗಿ ಬಂದು ನಿಂತು, ತಾವು ಯಾರನ್ನು ಹುಡುತಲಿದ್ದರೊ ಅವನು ತನ್ನ ಹತ್ತಿರದಲ್ಲಿಯೆ ಕುಳಿತಿದ್ದಾನೆ ಎಂದನು.

ವೃದ್ಧ—ಎಲ್ಲಿ?

ರಾಘವ—ಇಲ್ಲಿ ತಮ್ಮ ಪಾರ್ಶ್ವದಲ್ಲಿರುವ ಪಿತಮನೇ—

ಪಿತಮನು ಮುಂದಾಗಿ ಬಂದು ಕುಳಿತನು. ವೃದ್ಧನು ಬಂದೇ ದೃಷ್ಟಿಯಿಂದ ಅವನನ್ನು ನೋಡಿ ಮೆಲ್ಲಮೆಲ್ಲಗೆ, ವಿಜಯರಾಜ! ಎಂದನು. ಓಷ್ಠವು ಅದುರಿತು. ಮುಂದೆ ಮಾತು ಹೊರಡಲಿಲ್ಲ.

ರಾಘವಶರ್ಮನು, ಮಹಾರಾಜ! ಈ ವೃದ್ಧನನ್ನು ಬಲ್ಲಿರಾ? ಎಂದು ಕೇಳಿದನು.

ಮಹೇಶಚಂದ್ರ—ಇಲ್ಲ. ಇವನು ಯಾರು?

ರಾಘವ—ತಮ್ಮ ಜನಕತಂದೆ—

ಮಹೇಶಚಂದ್ರನು ಕಟ್ಟಿಗೆಯಹಾಗೆ ನಿಂತನು. ಪಿತಮನು ನಡುಗಿದನು. ಕಡೆಗೆ ವೃದ್ಧನಿಗೆ ಬಾಯಿಗೆ ತೀರ್ಥವನ್ನು ಹಾಕಿದ್ದಾಯಿತು. ಅನಂತರ ಮಹಾರಾಜಾ ಮಹೇಶಚಂದ್ರನು ವೃದ್ಧನ ಕಾಲು ಹಿಡಿದುಕೊಂಡು ನದಿಯ ಜಲದಲ್ಲಿ ನಿಂತನು. ಪಿತಮನು ತಲೆಯನ್ನು ಹಿಡಿದುಕೊಂಡನು. ಎಲ್ಲರೂ ಗಗನಭೇದಿಯಾದ ಗಂಗಾನಾರಾಯಣನ ಹೆಸರನ್ನು ಕೂಗಿದರು. ಸ್ವಲ್ಪದೂರದಲ್ಲಿ ಅವಕುಂಠನವತಿ ಸ್ನೇಹಮಯಿಯಾದ ಜ್ಯೋತ್ಸ್ನಾವತಿಯು ಅತ್ತಳು. ಆಗಲೂ ವೃದ್ಧನ ದೃಷ್ಟಿಯು ಪಿತಮನ ಮೇಲಿತ್ತು. ದೃಷ್ಟಿಯು ಕ್ರಮವಾಗಿ ಕ್ಷೀಣವಾಗುತಬಂದಿತು. ವೃದ್ಧನು ದೃಷ್ಟಿಯಿರುವವರೆಗೂ ಪಿತಮನನ್ನೆ ನೋಡುತಲಿದ್ದನು. ನಾರಾಯಸ್ಮರಣೆ ಮಾಡುವುದು ನಿಂತಿತು. ಜ್ಯೋತ್ಸ್ನಾವತಿಯು ಎಲ್ಲಾ ಪೂರ್ತಿಯಾಯಿತೆಂದು ತಿಳಿದಳು, ಆಗ ಮಹೇಶಚಂದ್ರನು ಮೃತಜನಕನ ಮುಖವನ್ನು ನೋಡುತ್ತಿದ್ದನು. ಸ್ವಲ್ಪ ಹೊತ್ತಿನಮೇಲೆ ದೃಢಪ್ರತಿಜ್ಞೆಯುಳ್ಳವನಾಗಿ, ಪಿತನೆ! ನೀನು ಮಾಡಬೇಕಾಗಿ ಉಳಿದಿರುವ ಪ್ರಾಯಶ್ಚಿತ್ತವನ್ನು ನಾನು ಮಾಡಿ ಪೂರ್ತಿಗೈಯ್ಯುವೆನೆಂದನು. ಪಿತಮನು ಹೋಗಿ ಅವನ ಕೈಯನ್ನು ಹಿಡಿದುಕೊಂಡು, ಸ್ಥಿರವಾಗು, ಪ್ರಾಯಶ್ಚಿತ್ತವು ಯಥೇಷ್ಟವಾಯಿತೆಂದನು.

ಸತ್ಕಾರವಾಯಿತು. ಎರಡುಮೂರುದಿನ ಮಹೇಶಚಂದ್ರನು ಪಿತಮನೊಂದಿಗೆ ಷಟಪಟಘೋಟಿಯಲ್ಲಿ ವಾಸಮಾಡುತ್ತಿದ್ದನು. ಒಂದುದಿನ ಅನೇಕ ಮಾತುಕಥೆಯಾದಮೇಲೆ ಮಹೇಶಚಂದ್ರನು, ಅಣ್ಣ! ಈಗ ನಿನ್ನ ರಾಜ್ಯವನ್ನು ನೀನು ಗ್ರಹಣಮಾಡು. ನನಗೆ ಅಪ್ಪಣೆ ಕೊಡೆಂದನು. ಪಿತಮನು ನಕ್ಕು, ನನ್ನ ಆಶೆಯು ಅತಿಸಾಮಾನ್ಯವಾದುದು. ಎರಡು ಮುಷ್ಟಿ ಭಿಕ್ಷೆಯಿಂದ ತೃಪ್ತನಾಗುತ್ತೇನೆ. ಅಂತಹವನ ತಲೆಯಮೇಲೆ ರಾಜ್ಯಭಾರವೇತಕ್ಕೆ? ಎಂದನು.

ಮಹೇಶಚಂದ್ರ—ಒಳ್ಳೆಯದಾಗಲಿ, ಕೆಟ್ಟದು ಆಗಲಿ, ನಿನ್ನ ಸ್ವಂತ ರಾಜ್ಯವನ್ನು ನೀನು ಅನುಭವಿಸಬೇಕು. ನಾನದನ್ನು ನೋಡಿ ಸುಖಿಯಾಗುವೆನು. ರಾಜ್ಯಭೋಗದಿಂದ ನನಗೆ ಸುಖವಿಲ್ಲ.

ಪಿತಮ—ನಾನು ಬಹಳ ಕಾಲದಿಂದ ರಾಜ್ಯವನ್ನು ನಿನಗೆ ದಾನಮಾಡಿದ್ದೇನೆ. ಇಂದು ನನ್ನ ಎಲ್ಲಾ ಸರ್ವಸ್ವವನ್ನೂ ದಾನಮಾಡಿದ್ದೇನೆ. ಸೂರ್ಯದೇವನು ಸಾಕ್ಷಿ. ಸಕಲ ದೇವತೆಗಳೂ ಇದಕ್ಕೆ ಸಾಕ್ಷಿ.

ಮಹೇಶಚಂದ್ರನು ಹಾಗೆಯೆ ಸ್ವಲ್ಪ ಯೋಚಿಸಿ ಅನಂತರ, ನಾನು ಈದಾನವನ್ನು ತೆಗೆದುಕೊಳ್ಳುವೆನು. ಇಂದಿನಿಂದ ನನಗೆ ಬಂದ ಸರ್ವಸ್ವವೂ ಪರರ ಹಿತಾರ್ಥವಾಗಿಡಲ್ಪಡುವುದು. ಇದಕ್ಕೆ ಎಲ್ಲಾ ದೇವತೆಗಳೂ ಸಾಕ್ಷಿ ಎಂದನು. ಜ್ಯೋತ್ಸ್ನಾವತಿಯು ಆಹ್ಲಾದದಿಂದ ಕಣ್ಣೀರುರಿಸಿಕೊಂಡಳು.

ಮಾರನೆಯ ದಿನ ಮಹೇಶಚಂದ್ರನು ಬಹಳ ಹುಡುಕಿದನು. ಪಿತಮನಾಗಲಿ ಜ್ಯೋತ್ಸ್ನಾವತಿಯಾಗಲಿ ಯಾರೂ ಕಾಣಿಸಲಿಲ್ಲ. ಅವರಿಬ್ಬರೂ ಎಲ್ಲಿಗೊ ಹೋಗಿಬಿಟ್ಟರು. ಅದುಮೊದಲ್ಗೊಂಡು ಮಹೇಶಚಂದ್ರನು ಅವರನ್ನು ಕಾಣಲಿಲ್ಲ. ಮಾಥಮೀಲತೆಯೊಂದಿಗೆ ಮಹೇಶಚಂದ್ರನು ಮನೆಗೆ ಬಂದನು. ಮಾರ್ಗದಲ್ಲಿ, ರಾಜಾ ಇಂದ್ರಭೂಪನು ಆಶ್ರಮವನ್ನು ಬಿಟ್ಟುಹೋದನೆಂದೂ ಅವನ ದಿವಾನನು ಕಾರ್ಯಚ್ಯುತನಾಗಿ ಚೂಡಾಧನಬಾಬುವು ರಾಣಿಗೆ ವಿಶ್ವಾಸಪಾತ್ರನಾಗಿ ರಾಜಕಾರ್ಯವನ್ನು ಮಾಡುತಲಿದ್ದನೆಂದೂ ಕೇಳಿದನು.



